# ಭಾರತ ದರ್ಪಣ.

( ಶ್ರೀ ಸಿದ್ಧವನಹಳ್ಳಿ ಕೃಷ್ಣ ಶರ್ಮರ ಮುನ್ನುಡಿಯೊಂದಿಗೆ )







ಪ್ರಕಾಶಕರು.

**ಲೋಕ ಸೇವಾ ವೃಂದ, (ರಿ.)**

**ಅಳಿಕೆ.**

**P. O. ಸತ್ಯ ಸಾಯಿ ವಿಹಾರ,**

**(Via ವಿಟ್ಲ, ದ. ಕನ್ನಡ.)**

# ಭಾರತ ದರ್ಪಣ.

ಸಂಪುಟ ೧.



— ಮುಡಿಯೂಲ ನಾರಾಯಣ ಭಟ್,
ಬಿ. ಯುಸ್ಸಿ., ಬಿ. ಟಿ.,
ಅಧ್ಯಕ್ಷ, ಲೋಕ ಸೇವಾ ವೃಂದ.

ಪ್ರಕಾಶಕರು:-

ಲೋಕ ಸೇವಾ ವೃಂದ,
P. O. ಸತ್ಯ ಸಾಯಿ ವಿಹಾರ,
(ಅಳಿಕೆ ಗ್ರಾಮ, ವಯಾ ವಿಟ್ಟಲ್)
ದಕ್ಷಿಣ ಕನ್ನಡ.

# ಸಮರ್ಪಣೆ.

ಈ ಸನಾತನ ಭೂಮಿ ಭಾರತದ ಉನ್ನತಿಗಾಗಿ,
ಆತ್ಮ ವಿಕಸನಕ್ಕಾಗಿ, ಸ್ವಾತಂತ್ರ್ಯಕ್ಕಾಗಿ ಹೋರಾಡಿ,
ಹುತಾತ್ಮರಾಗಿ ಅಮರರಾದ ಮತ್ತು ನಮಗೆ
ಸದಾ ಸ್ಫೂರ್ತಿ ನೀಡುತ್ತಿರುವ
ಎಲ್ಲ ಜೀವ ಜ್ಯೋತಿಗಳ
ಅಡಿದಾವರೆಗಳಲ್ಲಿ ಈ ಗ್ರಂಥವು
ವಿನೀತವಾಗಿ
ಸಮರ್ಪಿತವಾಗಿದೆ.

# ಮುನ್ನುಡಿ

ನಮ್ಮ ಮುಖಕ್ಕೆ ನಾವು ಕನ್ನಡಿ ಹಿಡಿದುಕೊಳ್ಳುವುದು ತಲೆಬಾಚಿಕೊಳ್ಳಲಿಕ್ಕೆ, ಹಣೆಗೆ ಹಚ್ಚಿಕೊಳ್ಳಲಿಕ್ಕೆ, ಸಿಂಗಾರ ಮಾಡಿಕೊಳ್ಳಲಿಕ್ಕೆ ಮಾತ್ರವಲ್ಲ, ಮೋರೆಯಲ್ಲಿ ಕಾಣುವ ಹುಳುಕನ್ನು ತಿದ್ದಿಕೊಳ್ಳಲಿಕ್ಕೆ, ಮೋರೆಯಲ್ಲಿ ಇರುವ ಗುಳ್ಳೆ ಗಾಯಗಳಿಗೆ ಮದ್ದು ಸವರಲಿಕ್ಕೂ ಕೂಡ. ಕನ್ನಡಿ ಈ ಎರಡು ಕೆಲಸಗಳನ್ನೂ ಮಾಡಬೇಕು. ಇದ್ದದ್ದನ್ನು ತಿದ್ದಬೇಕು, ಇಲ್ಲದ ಅಂದವನ್ನು ತರಲು ಹವಣಿಸಬೇಕು. ಕನ್ನಡಿಯಿಂದ ಎರಡೂ ಕೆಲಸಗಳನ್ನು ಮಾಡಿಸಿಕೊಳ್ಳಬೇಕು.

ಇರುವುದನ್ನು ತಿಳಿದುಕೊಂಡು ಇರಬೇಕಾದ್ದನ್ನು ಬೆಳೆಸಿಕೊಳ್ಳಲು ಪ್ರಯತ್ನಿಸುವುದು ಮನುಷ್ಯ ಲಕ್ಷಣ. ಮನುಷ್ಯನಿಗೆ ಬುದ್ಧಿ ಇರುವುದು ಇದಕ್ಕೇ. ಈ ರೀತಿ ಇಂದಿನದನ್ನು ನೋಡಿಕೊಂಡು ಹಿಂದಿನದರ ಹರಿವನ್ನು ಕಂಡು ಮುಂದಿನದನ್ನು ರೂಪಿಸಿಕೊಳ್ಳುವುದೇ ಯೋಜನೆ.

ಯೋಜನೆ ಇಲ್ಲದೆ ಪ್ರಗತಿ ಇಲ್ಲ. ಕನ್ನಡಿ ಅಥವಾ ದರ್ಪಣ ಇಲ್ಲದೆ ಯೋಜನೆ ಮಾಡಲು ಸಾಧ್ಯ ಇಲ್ಲ.

ಬರೀ ಮುಖಕ್ಕೆ ಹಿಡಿಯುವ ಕನ್ನಡಿ ಆಗಬಾರದು, ಬುದ್ಧಿಯ ಕನ್ನಡಿ. ಕನ್ನಡಿಯಲ್ಲಿ ಕಂಡದ್ದಷ್ಟೇ ನಿಜ ಎಂದರೆ ಅದು ಆ ಗಳಿಗೆಗೆ ಕಂಡದ್ದು. ಅದರಲ್ಲಿ ಹಿಂದಿನದೂ ಇಲ್ಲ, ಮುಂದಿನದೂ ಇಲ್ಲ. ಮನುಷ್ಯ ಜೀವನದಲ್ಲಿ ಹಿಂದಿನದನ್ನೂ ಮುಂದಿನದನ್ನೂ ತೋರಿಸಬಲ್ಲ ಕನ್ನಡಿ ಇದೆ- ಏಕೆಂದರೆ ಮನುಷ್ಯ ಬುದ್ಧಿಜೀವಿ. ಆತನು ಬುದ್ಧಿಯಿಂದ ಭೂತ, ಭವಿಷ್ಯತ್ ವರ್ತಮಾನಗಳ ಎಳೆಗೂಡಿಸಬಲ್ಲ.

ಕನ್ನಡಿಗೆ ದರ್ಪಣ, ಆದರ್ಶ ಎಂದು ಹೆಸರು ಇದೆ. ಕನ್ನಡ ಜನತೆಗೆ ಶಬ್ದ–ಆದರ್ಶ, ಶಬ್ದಮಣಿ ದರ್ಪಣ ಎರಡೂ ಪರಿಚಯದ ಗ್ರಂಥಗಳೇ. ಶಬ್ದ

ಗಳು ನಮಗೆ ಗೊತ್ತು. ಅವನ್ನು ಹೇಗೆ ನುಡಿಸಬೇಕು, ಸರಿಯಾದ ಅರ್ಥ ಕೊಡಬೇಕಾದರೆ, ಯಾವ ತಿರುವು ಕೊಟ್ಟರೆ ಯಾವ ಅರ್ಥ ಬರುತ್ತದೆ ಎಂಬುದನ್ನು ತಿಳಿಸುತ್ತವೆ, ಅವು. ಅದರಿಂದ ನಮ್ಮ ಶಬ್ದ ಪ್ರಯೋಗ ಸುಧಾರಿಸುತ್ತದೆ. ನಮ್ಮ ಮಾತಿಗೆ ನಿರ್ದಿಷ್ಟ ಅರ್ಥ ಬರುತ್ತದೆ.

ಎಲ್ಲ ದರ್ಪಣಗಳ, ಎಲ್ಲ ಆದರ್ಶಗಳ ಕೆಲಸವೂ ಇದೇ. ಇದ್ದದ್ದನ್ನು ಲೆಕ್ಕ ಹಿಡಿದು, ಅದರ ಮೇಲೆ ಹೇಗೆ ಕಟ್ಟಿದರೆ ಮುಂದೆ ಸುಖ ಆಗುತ್ತದೆ ಎಂದು ಯೋಜನೆ ಮಾಡುವುದನ್ನು ಹೇಳಿ ಕೊಡುವುದೇ. ನಮ್ಮ ಪ್ರಗತಿಗೆ ಕನ್ನಡಿ ಮುಖ್ಯ. ಆ ಮೇಲೆ ಯೋಜನೆ ಮುಖ್ಯ. ಆ ಮೇಲೆ ಅದರ ಆಚಾರ ಮುಖ್ಯ.

ಇದೇ ನಿಜವಾದ ವಾಸ್ತವತೆ. ಯೋಜನೆ ಇಲ್ಲದ ವಾಸ್ತವತೆಯೂ ಇದೆ. ಅದು ಬುದ್ಧಿ ಇಲ್ಲದ ಪ್ರಾಣಿಗಳ ಮಟ್ಟದ್ದು.

ಶ್ರೀ ಮುಡಿಯಾಲ ನಾರಾಯಣ ಭಟ್ಟರು ಭಾರತದ ಜನಜೀವನಕ್ಕೆ ಬುದ್ಧಿಯ–ಯೋಜನೆಯ ಕನ್ನಡಿ ಹಿಡಿದಿದ್ದಾರೆ. ಅವರ ದರ್ಪಣದಲ್ಲಿ ನಮ್ಮ ಬದುಕಿನ ಹಿಂದಿನ ಔನ್ನತ್ಯ–ಇಂದಿನ ಅವನತಿ–ಮುಂದಿನ ವೈಭವದ ಯೋಜನೆ ಮೂರೂ ಇವೆ.

ಮೂಗು ಇಲ್ಲದವನಿಗೆ ಮೂಗು ಇಲ್ಲದ ಮುಖವನ್ನು ತೋರಿಸುವ, ಕಿವಿ ಹರಿದವನಿಗೆ ಹರಕು ಕಿವಿಯನ್ನು ತೋರಿಸುವ ನಿಷ್ಪಾಪ ಕೆಲಸ ಕನ್ನಡಿಯದು. ಇದ್ದದ್ದನ್ನು ಇದ್ದ ಹಾಗೇ ತೋರಿಸುವ ನಿಷ್ಪಾಪ ಶಕ್ತಿ ಇದೆ ಎಂದೇ ಕನ್ನಡಿಯನ್ನು ಎಲ್ಲರೂ ಹಿಡಿಯುತ್ತೇವೆ.

ಈ ಬಗೆಯ ನಿಷ್ಪಾಪ ದರ್ಪಣ ಹಿಡಿದಿದ್ದಾರೆ ಶ್ರೀ ಭಟ್ಟರು. ಅವರ ಮನಸ್ಸು ನಮ್ಮ ಹರಕು ಕಿವಿಯನ್ನೂ, ಮೊಂಡ ಮೂಗನ್ನೂ ನೋಡುತ್ತಿದೆ. ಈ ಹರಕು–ಈ ಮೊಂಡು ಒಂದೊಂದು ಕಿವಿ ಮೂಗಿನದು, ಒಂದು ಕಾಲದ್ದು; ಎಲ್ಲರದೂ ಅಲ್ಲ, ಎಲ್ಲ ಕಾಲದ್ದೂ ಅಲ್ಲ ಎಂಬುದನ್ನು ಅವರು ಚೆನ್ನಾಗಿ ಬಲ್ಲರು.

ನಮ್ಮ ಸಮಾಜದ ಇಂದಿನ ಕುಂದು ಕೊರತೆಗಳನ್ನು ನಿರ್ದಾಕ್ಷಿಣ್ಯದಿಂದ ಎತ್ತಿ ತೋರಿಸಿ, ಇವು ಇಲ್ಲದಿದ್ದರೆ ಹೇಗೆ ಇರುತ್ತದೆ ಎಂಬುದನ್ನು ಸೂಚಿಸಿದ್ದಾರೆ. ಈ ಕುಂದು ಕೊರತೆಗಳಿಗೆ ಕಾರಣ ನಮ್ಮ ಸಂಕಲ್ಪ ಹೀನತೆ, ಆತ್ಮ ವಿಶ್ವಾಸ, ಪೌರುಷಗಳ ಲೋಪ, ಸುಧಾರಣೆ ಎಲ್ಲವೂ ದೇವರ ಕೆಲಸ ಎಂಬ

ಕುರುಡು ನಂಬಿಗೆಯ ಕ್ರಿಯಾಶೂನ್ಯತೆ ಎಂದು ಬಹಳ ನೊಂದುಕೊಂಡು ಹೇಳಿದ್ದಾರೆ.

ಭಾರತೀಯ ಸಮಾಜ ಒಂದೇ ಅಲ್ಲ. ಎಲ್ಲ ಸಮಾಜಗಳು.......................ಕಾಲದುಷ್ಟ ಆಗುತ್ತವೆ; ಆಗಿವೆ. ಯಾವ ಸಮಾಜವೂ ತನ್ನದು ಹೆಚ್ಚು ಎಂದು ಬಡಾಯಿ ಕೊಚ್ಚಬೇಕಾಗಿಲ್ಲ. ನಿನ್ನೆ ಬಾಲ್ಯ–ಇವತ್ತು ಯೌವನ –ನಾಳೆ ಮುಪ್ಪು. ಮುಪ್ಪಿನಲ್ಲಿ ಸುಕ್ಕು ಬೀಳುತ್ತದೆ. ಆ ಸುಕ್ಕನ್ನು, ಆ ಶಿಥಿಲತೆಯನ್ನು ಕಳೆದುಕೊಳ್ಳಲಿಕ್ಕೇ ಮನುಷ್ಯನ ಪುನರ್ಜನ್ಮ.

ಕಾಲದ ಹೊಡೆತ ಸಂಸ್ಕೃತಿ, ಧರ್ಮಗಳಿಗೂ ಇದೆ. ಮನುಷ್ಯ ಸತ್ತು ಹುಟ್ಟಿದರೆ ಸಂಸ್ಕೃತಿಗಳೂ ಪುನರ್ನವ ಆಗುತ್ತವೆ. ಹಾವು ಪರೆ ಬಿಟ್ಟ ಹಾಗೆ ಎಲ್ಲ ಸಂಸ್ಕೃತಿಗಳೂ ಪರೆ ಬಿಡಬೇಕು. ಪರೆಯನ್ನು ಕಳಚಿಕೊಳ್ಳಲಾರದ ಜಂತು ಹಾವು ಅಲ್ಲ, ಹುಳ. ಸಂಸ್ಕೃತಿಯೂ ಲೋಪ ದೋಷಗಳನ್ನು ತೊರೆದು ಹೊಸ ಬಣ್ಣದಿಂದ ಬೆಳಗಬೇಕು. ಇಲ್ಲದಿದ್ದರೆ ಹುಳದ ಸಾವೇ ಅದಕ್ಕೂ.

ಶ್ರೀ ಭಟ್ಟರು ಭಾರತ ದರ್ಪಣಕ್ಕೆ ಪತ್ರಗಳ ಪ್ರಕಾರವನ್ನು ಬಳಸಿದ್ದಾರೆ. ಅದನ್ನು ಒಬ್ಬ ಅಮೇರಿಕಾದ ಕ್ರಿಶ್ಚಿಯನ್ ಪ್ರವಾಸಿ ಬರೆದಂತೆ ಬರೆದಿದ್ದಾರೆ. ಎರಡೂ ಸರಿ. ಪತ್ರಗಳಲ್ಲಿ ನಮ್ಮ ಅಂತರಂಗ ಬಯಲಿಗೆ ಬರುತ್ತದೆ. ಈ ದರ್ಪಣ ಬರೀ ಬಹಿರಂಗ ದರ್ಪಣ ಅಲ್ಲ. ಭಾರತದ ಅಂತರಂಗಕ್ಕೆ ಹಿಡಿದ ಕನ್ನಡಿ. ಆದ್ದರಿಂದ ಪತ್ರಗಳ ಸಾಹಿತ್ಯ ಪ್ರಕಾರ ಅದಕ್ಕೆ ಬಹಳ ಒಪ್ಪುತ್ತದೆ. ಒಬ್ಬ ಪರದೇಶದ ಪ್ರವಾಸಿ, ಪರ ಮತದವನು ಆದರೂ ಸರ್ವ ಮತ ಸಮಭಾವದವನು ಈ ಪತ್ರಗಳನ್ನು ತನ್ನ ದೇಶದ ಗೆಳೆಯ ಒಬ್ಬನಿಗೆ ಬರೆದಂತಿದೆ. ಇದರಲ್ಲಿ ಬರುವ ಹೋಲಿಕೆ ಭಾರತೀಯ ಆಚಾರ ಸಂಪ್ರದಾಯಗಳ ಟೀಕೆಗಳಿಗೆ ಒಂದು ವೈಜ್ಞಾನಿಕ ಅಥವಾ ನಿಷ್ಪಾಪ ಭಾವವನ್ನು ಕೊಡುತ್ತವೆ. ಅಲ್ಲದೆ ಹೊರಗಿನ ಒಬ್ಬ ಗೆಳೆಯ ಮಾಡಿದ ಈ ಆಳವಾದ ಸಹಾನುಭೂತಿಪರ ಅಭ್ಯಾಸವನ್ನು ನಾವು ಮಾಡಿಲ್ಲವಲ್ಲ ಎಂಬ ನಾಚಿಕೆಯನ್ನೂ ಹುಟ್ಟಿಸುತ್ತದೆ.

ಶ್ರೀ ಭಟ್ಟರು ಜೋನ್ ಓರ್‌ಮನ್‌ನ ಅಂಗಿತೊಟ್ಟು ನಮ್ಮ ಮುಖಕ್ಕೆ ಹಿಡಿದ ಕನ್ನಡಿ ಎಷ್ಟು ಶಕ್ತಿಶಾಲಿ, ಹೇಗೆ ನಮ್ಮ ಒಳಗಿನ ದೋಷಗಳನ್ನು ಬಯಲಿಗೆಳೆದು ತೋರಿಸುತ್ತದೆ–ಕ್ಷಕಿರಣದಂತೆ–ಎಂಬುದನ್ನು ನಾನು ಮನಗಂಡಿದ್ದೇನೆ. ಮೆಚ್ಚಿದ್ದೇನೆ. ಪಾಠಕರು ಎಲ್ಲರೂ ಮನಗಂಡಾರು, ಮೆಚ್ಚಿಯಾರು ಎಂದು ಆಶಿಸುತ್ತೇನೆ.

ಮಡಿಯಾಲ ನಾರಾಯಣ ಭಟ್ಟರು ವಯಸ್ಸಿನಲ್ಲಿ ಕಿರಿಯರು–ಸಾಧನೆಯಲ್ಲಿ ಹಿರಿಯರು. ಅವರ ತ್ಯಾಗ, ಅವರ ಅನಾಸಕ್ತಿ, ಅವರ ಲೋಕಸೇವಾ ದೀಕ್ಷೆ, ವಿಶ್ವಸ್ತತನಗಳ ವಿಷಯವನ್ನು ಇಲ್ಲಿ ಹೇಳುವುದು ಅಪಚಾರ ಆದೀತು ಎಂಬ ಅಂಜಿಕೆ. ಅವರ ಲೋಕ ಸೇವಾ ವೃಂದದ ಕೆಲಸವೇ ಅವರ ಉಳಿಕೆ. ಈ ಸೇವೆಯೇ ಅವರ ಉಳಿಕೆ. ಬೇರೆ ಎಲ್ಲವೂ ಅವರಿಗೆ ಅಳಿಕೆ. ಎಲ್ಲವನ್ನೂ ಅಳಿಸಿಹಾಕಿ ಲೋಕಸೇವೆ ಒಂದನ್ನೇ ಉಳಿಸಿಕೊಳ್ಳುವ ಅವರ ಪ್ರಯತ್ನ ಸಫಲವಾಗಲಿ ಎಂದು ಹಾರಯಿಸುತ್ತೇನೆ.

ಇಂಥ ವಿಚಾರಪೂರ್ಣ ಗ್ರಂಥವನ್ನು ಕನ್ನಡಿಗರಿಗೆ ನೀಡಿರುವುದಕ್ಕಾಗಿ ಅವರಿಗೆ ಧನ್ಯವಾದ.

ಗಾಂಧೀ ಸಾಹಿತ್ಯ ಸಂಘ
ಬೆಂಗಳೂರು–2

**ಸಿದ್ಧವನಹಳ್ಳಿ ಕೃಷ್ಣ ಶರ್ಮ.**

# ಪ್ರಸ್ತಾವನೆ

ಭಾರತ ದರ್ಪಣ ಎಂದರೆ ಭಾರತವನ್ನು ಇದ್ದುದಿದ್ದಂತೆಯೇ ತೋರುವ ಬೃಹತ್ ಕನ್ನಡಿ ಎಂಬರ್ಥ.

ದರ್ಪಣ ಎಂಬ ಪದದ ಕುರಿತಾದ ವಿವೇಚನೆಯನ್ನು ಯಥಾರ್ಥವಾಗಿಯೂ, ಸುಂದರವಾಗಿಯೂ ಕರ್ನಾಟಕದ ಹಿರಿಯ ಸಾಹಿತಿಗಳಾದ ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮರವರು ತಮ್ಮ ಮುನ್ನುಡಿಯಲ್ಲಿ ಮೇಲಿನ ಮಾತುಗಳಲ್ಲೇ ಮಾಡಿದ್ದಾರೆ. ಈ ದರ್ಪಣಕ್ಕೆ ಅಂತಹ ಯೋಗ್ಯತೆಯಿದೆಯೋ ಇಲ್ಲವೋ ನಾನು ತಿಳಿದಿಲ್ಲ. ಆದರೆ ದರ್ಪಣ ಎಂಬ ನಾಮಧೇಯದ ಉದ್ದೇಶ ಮುಖ್ಯವಾಗಿ ಅದು.

ಈ ದರ್ಪಣವನ್ನು ಹಿಡಿಯುವಾತನು ಯಾರು? ಭಾರತದ ಪ್ರಾಚೀನತೆಯ ಗರ್ಭದಿಂದಲೇ ಹೊತ್ತು ತಂದ ಸೌಂದರ್ಯವಿದ್ದ ಮುಖವಿಂದು, ಅಲ್ಲಲ್ಲಿ ಕುರೂಪನಾಗಿರುವುದನ್ನು ತೋರುವಾತನು ಯಾರು? ಜೋನ್ ಓರ್‌ಮನ್ ಎಂಬೊಬ್ಬ ವ್ಯಾವಹಾರಿಕ ಆದರ್ಶವಾದಿ (Practical idealist) ವಿದೇಶಿಯನು.

ಆದರೆ ಜೋನ್ ಓರ್‌ಮನ್ ಎಂಬ ಇಂತಹ ವಿದೇಶಿಯನು ಇರುವುದು ಹೌದೇ? ಹೌದು, ಸತ್ಯವಾಗಿಯೂ ಹೌದು. ಆತನು ಸರಕಾರಗಳ ಖಾನೇಶುಮಾರಿಯಲ್ಲಿಲ್ಲದಿರಬಹುದು. ಆದರೆ ಸತ್ಯದಗಾಧ ನೆಲೆಯಲ್ಲಿ ಆತನು ಎಂದೆಂದೂ ಇದ್ದಾನೆ. ಆತನ ಹೆಸರು ಜೋನ್ ಓರ್‌ಮನ್ ಎಂಬುದಾಗಿರುವುದು ಹೌದೇ ಎಂದರೆ ಹೌದು, ಅಲ್ಲ—ಎರಡೂ ಸರಿ. ಆತನಿಗೆ ಯಾವ ಹೆಸರನ್ನೂ ಇಡಬಹುದು ಎಂಬರ್ಥದಲ್ಲಿ ಸರಿ; ಆದರೆ ಆತನು ಒಂದೇ ಹೆಸರನ್ನು ಪಡೆದ ಪಾಂಚಭೌತಿಕ ದೇಹ ಪಡೆದ ವ್ಯಕ್ತಿಯೇನಲ್ಲ-ಆದುದರಿಂದ ಅದು ತಪ್ಪು.

ಈ ಗ್ರಂಥದ ಹಿನ್ನೆಲೆಯಲ್ಲಿ ಎರಡು ಬೃಹತ್ ಕನಸುಗಳಿವೆ—ಅವುಗಳು ಹಗಲುಗನಸುಗಳೇ ಆಗಿರಬಹುದು—ಅಥವಾ ರಾತ್ರಿಗನಸುಗಳೂ ಆಗಿರಬಹುದು. ಅಂತೂ ಅವುಗಳು ಸುಂದರವಾದ ಕನಸುಗಳು—ದಿವ್ಯತೆಯ ಲೋಕಕ್ಕೆ ಕೊಂಡೊಯ್ಯುವ ಸುಖ ಸ್ವಪ್ನಗಳು.

ವಿದೇಶಿಯರು ಮುಖ್ಯವಾಗಿ ಪಾಶ್ಚಿಮಾತ್ಯರು ಭಾರತವನ್ನೂ, ಭಾರತದ ಪರಂಪರೆ, ಸಂಸ್ಕೃತಿ, ಮತ್ತು ಧರ್ಮಗಳನ್ನೂ ಮೆಚ್ಚಿ, ಅದನ್ನು ತಮ್ಮ ನಾಡಿನ ಜನ ಜೀವನದಲ್ಲೂ ಇಳಿಸಲು ಯತ್ನಿಸಬೇಕೆಂಬುದು ಒಂದು ಕನಸು. ವಿಶ್ವ ಶಾಂತಿಗೆ, ವಿಶ್ವದ ಅಭ್ಯುದಯಕ್ಕೆ ಈ ಸನಾತನ ಪುಣ್ಯಭೂಮಿಯ ಅಂತಃಕರಣವನ್ನೇ ಅಳವಡಿಸಿಕೊಳ್ಳುವುದು ಬಹಳ ಅಗತ್ಯವೆಂಬ ನಂಬುಗೆಯೇ ಈ ಕನಸಿಗೆ ಕಾರಣ.

ಭಾರತೀಯರು ಇಂದು ತಮ್ಮಲ್ಲಿ ಉಂಟಾದ ಅಜಾಗ್ರತ ಅವಸ್ಥೆಯಿಂದ, ಅಂಧ ವಿಶ್ವಾಸದ ಕೂಪದಿಂದ, ಅಜ್ಞಾನ, ಅನಾಚಾರಗಳ ನರಕದಿಂದ, ಪರರ ಅಂಧ ಅನುಕರಣೆಯೆಂಬ ಭ್ರಷ್ಟತೆಯಿಂದ, ಆತ್ಮ ಜಾಗೃತಿ, ಆತ್ಮಸ್ಫೂರ್ತಿ, ಆತ್ಮವಿಶ್ವಾಸ, ಆತ್ಮಾನುಸಂಧಾನಗಳೆಂಬ ದಿವ್ಯತೆಗೆ ಏರಿ ಜಗತ್ತಿಗೇ ಮಾರ್ಗದರ್ಶಕರಾಗಬೇಕೆಂಬುದು ಇನ್ನೊಂದು ಕನಸು. ಹುಚ್ಚು ಹೊಳೆಯಾಗಿ ಹರಿಯುವ ತನ್ನ ನಾಡು, ಧರ್ಮ ಮತ್ತು ಸಂಸ್ಕೃತಿಯ ಮೇಲಿನ ಪ್ರೇಮ ಮತ್ತು ಅಭಿಮಾನಗಳೇ ಈ ಎರಡನೆಯ ಕನಸಿಗೆ ಕಾರಣ.

ಈ ಕನಸುಗಳಿರುವುದು ಸರಿಯೋ ತಪ್ಪೋ ಓದುಗರೇ ನಿರ್ಣಯಿಸಬೇಕು. ಅಂತೂ ಕನಸು ಇದೆ. ಈ ಕನಸಿನಲ್ಲಂತೂ ಜೋನ್ ಓರ್‌ಮನ್‌ನೂ ಜೀವಂತ ಇದ್ದಾನೆ. ಭಾರತ ದರ್ಶನವನ್ನು ಮಾಡುತ್ತ, ಭಾರತ ದರ್ಪಣವನ್ನು ಎಲ್ಲರಿಗೂ ತೋರಿಸಬಯಸುತ್ತಾನೆ.

ಈ ಕನಸುಗಳ ಅಸ್ತಿತ್ವಕ್ಕೂ, ಜೋನ್ ಓರ್‌ಮನ್‌ನ ಮೂಲಕ ಈ ದರ್ಪಣವನ್ನು ಹಿಡಿಸುವುದಕ್ಕೂ, ಈ ಕನಸುಗಳನ್ನು ನೆನಸಾಗಿಸುವ (ಅದೆಷ್ಟು ಸಣ್ಣ ರೀತಿಯಲ್ಲೇ ಆಗಿರಲಿ) ಗುರಿ ಸಾಧಿಸುವುದಕ್ಕೂ ಒಂದು ಸೇತುವೆಯಿದೆ; ಸಂಬಂಧವಿದೆ.

ಜನ ಜಾಗೃತಿ ಬರಲು, ತಮ್ಮ ಕೊರತೆಯ ದರ್ಶನವಾಗಲು ಪರಕೀಯನೊಬ್ಬನು ನಮ್ಮನ್ನು ಟೀಕಿಸಬೇಕು, ಗೇಲಿಮಾಡಬೇಕು, ಮೂದಲಿಸಬೇಕು.

ಆಗ ಬೇರೇನಲ್ಲವಾದರೂ ಸಿಟ್ಟಿನಿಂದಲಾದರೂ ಮೈ ಕೊಡಹಿ ಎದ್ದು ನಿಲ್ಲು ತ್ತೇವೆ, ಆ ಮೂದಲಿಕೆಯನ್ನು ನೀಗಿಸುವುದಕ್ಕಾದರೂ ನಮ್ಮ ಸನಾತನ ಆದರ್ಶಗಳನ್ನು ಪುನಃ ಮೈಗೂಡಿಸಿಕೊಳ್ಳಲು ನಾವು ಯತ್ನಿಸುತ್ತೇವೆ.

ನಮ್ಮ ಅಂತಃಕರಣದ ಹಿರುಳು, ನಮ್ಮ ತತ್ವದ ಶ್ರೇಷ್ಠತೆ, ನಮ್ಮ ಧರ್ಮದ ವೈಭವ ಮತ್ತು ನಮ್ಮ ಸಂಸ್ಕೃತಿಯ ಉಜ್ವಲತೆಗಳನ್ನು ನಾವು ಅರ್ಥ ಮಾಡಿಕೊಳ್ಳಲೂ; ಅವುಗಳ ನಿಜದರ್ಶನ ನಾವು ಸರಿಯಾಗಿ ಮಾಡಲೂ ಪರ ಕೀಯನೇ, ಅವುಗಳನ್ನು ಎತ್ತಿಹಿಡಿಯಬೇಕು, ಶ್ಲಾಘಿಸಬೇಕು–ಅವುಗಳೆಡೆಗೆ ತನ್ನ ಬುದ್ಧಿಯ, ವಿವೇಚನೆಯ, ವಿಮರ್ಶೆಯ ಪ್ರಕಾಶವನ್ನೂ ಚೆಲ್ಲಬೇಕು. ಆಗ ನೊಂಡಾದ ಆತ್ಮಜಾಗೃತಿ, ಆತ್ಮದರ್ಶನ ಪುನಃ ಚಿಗುರೊಡೆದು, ನಳ ನಳಿಸಿ ಬೆಳೆಯುವುದೆಂಬ ವಿಶ್ವಾಸ.

ಇದಕ್ಕಾಗಿಯೇ ಅಂತಃಕರಣದ ಕಲ್ಪನಾ ಲೋಕದಲ್ಲಿದ್ದ ಜೋನ್ ಓರ್‌ಮನ್‌ನಿಗೆ ಉಡುಪು ತೊಡಿಸಿ, ಪಯಣ ಹೊರಡಿಸಿ, ಭಾರತ ಪರ್ಯಟನ ಮಾಡಿಸಿ, ಕೈಗೆ ಲೇಖನಿ ಕೊಟ್ಟು ಕಳುಹಿಸಬೇಕಾಯಿತು.

ಸೇವಾಮೃತದ ಹಲವು ಓದುಗರು ಓರ್‌ಮನ್‌ನ ಭಾರತದರ್ಶನವನ್ನೂ, ವಿಮರ್ಶೆಯನ್ನೂ ಬಹಳವಾಗಿ ಮೆಚ್ಚಿಕೊಂಡಿದ್ದಾರೆ. ಅವರು ಓರ್‌ಮನ್‌ನು ಸತ್ಯವಾದ ವ್ಯಕ್ತಿಯೆಂದು ಭಾವಿಸಿರಲೂ ಬಹುದು; ಅಥವಾ ಆತನ ವ್ಯಕ್ತಿತ್ವದ ಹಿನ್ನೆಲೆಯ ಸತ್ಯವನ್ನು ಮೇಲಿನಂತೆ ತಿಳಿದುಕೊಂಡಿರಲೂ ಬಹುದು. ಅಂತೂ ಮೆಚ್ಚಿದ್ದಾರೆ.

ಆದರೆ ಕೆಲವು ಉಗ್ರಗಾಮಿಗಳು ಈ ವಿಮರ್ಶೆಯಿಂದ ನೊಂದುಕೊಂಡಿ ರಲೂ ಬಹುದು; ಬೆಂಗಳೂರಿನ ಒಬ್ಬ ಓದುಗರಿಂದ ಈ ರೀತಿಯ ಅಭಿಪ್ರಾ ಯದ ಒಂದು ಪತ್ರ ಒಮ್ಮೆ ಬಂದಿತ್ತು. "ಭಾರತವನ್ನು ನಿಂದಿಸುವ, ಅವ ಹೇಳನ ಮಾಡುವ ಒಬ್ಬ ವಿದೇಶಿಯನ ಪತ್ರಗಳನ್ನು ನೀವು ಈ ರೀತಿ ಪ್ರಕಟಿಸು ವುದು, ನಿಜವಾಗಿ ವಿಷಾದದ ಸಂಗತಿ; ನಾನು ಆ ಕುರಿತಾಗಿ ತೀವ್ರವಾಗಿ ಪ್ರತಿಭಟನೆ ಸಲ್ಲಿಸುತ್ತೇನೆ, ಮಾತ್ರವಲ್ಲ ಮುಂದೆ ಸೇವಾಮೃತದ ಚಂದಾದಾರ ನಾಗಲು ಬಯಸುವುದಿಲ್ಲ" ಎಂಬಿತ್ಯಾದಿಯಾಗಿ.

ಅವರಿಗೆ ಏನು ಉತ್ತರ ಕೊಡಲಾಯಿತು ಎಂಬುದು ಮುಖ್ಯವೇ ಅಲ್ಲ. ಆದರೆ ಒಬ್ಬರಿಗಾದರೂ ಓರ್‌ಮನ್‌ನ ವಿಮರ್ಶೆಯ ಮಹತ್ವವನ್ನು ಅರ್ಥ

ಮಾಡಲು ಸಾಧ್ಯವಾಗದೆ ಹೋಯಿತಲ್ಲ ಎಂಬುದೇ ಆಶ್ಚರ್ಯದ ಹಾಗೂ ವಿಷಾದದ ವಿಚಾರ. ಅಂಥವರು ಕೆಲವರಿರಬಹುದು. ಅದು ಇನ್ನಷ್ಟು ವಿಷಾದಕರ.

ಏಕೆಂದರೆ ತನ್ನ ಕೊರತೆಯನ್ನು ತಾನು ನೋಡಿಕೊಳ್ಳದೆ, ತಾನೇ ಹಿಂದೆಯೂ, ಇಂದೂ, ಮುಂದೆಯೂ ಪರಮಶ್ರೇಷ್ಠನೆಂದು ಅಭಿಮಾನ ಪಡುವ ವ್ಯಕ್ತಿಯು, ಯಥಾರ್ಥವಾಗಿ ವಿಕಾಸದ ಪಥದಲ್ಲಿರುವ ಸಜೀವ ವ್ಯಕ್ತಿಯೆನ್ನ ಬರುವುದಿಲ್ಲ. ಆತನು ಆಗಲೇ ಮೃತ್ಯುಲೋಕದಲ್ಲಿ ವಿಹರಿಸುತ್ತಿದ್ದಾನೆ ಎಂಬರ್ಥ! ಅದೇ ರೀತಿ ತಮ್ಮನಾಡು, ಸಂಸ್ಕೃತಿ, ಧರ್ಮ, ಜನಜೀವನ, ಇಂದಿನ ಪರಿಸ್ಥಿತಿ—ಇವುಗಳ ಕುರಿತಾಗಿ ಸತ್ಯವಾದ ವಿಮರ್ಶೆಯನ್ನು ಮಾಡಿ, ಅವುಗಳಲ್ಲಿರುವ ಕೊರತೆಯನ್ನೇ ಕಾಣಲಾರದೆ ಯಥಾರ್ಥವಾದ ಟೀಕೆಯನ್ನೋ, ವಿಮರ್ಶೆಯನ್ನೋ ಸಹಿಸದೆ ಉದ್ರಿಕ್ತರಾಗುವ ರಾಷ್ಟ್ರದ ಜನ, ನಿಜವಾದ ಬೆಳವಣಿಗೆಯನ್ನೇ ಬಿಟ್ಟು ಮರಣೋನ್ಮುಖರಾಗಿದ್ದಾರೆ ಎಂಬರ್ಥ! ನಾಡಿನ ಕೊರತೆಯನ್ನೇ ನೋಡಲೊಪ್ಪದೆ, ಅದನ್ನು ಒಂದೇ ಸವನೆ ತುದಿಗಾಲಲ್ಲಿ ನಿಂತು ಹೊಗಳುತ್ತ ಹೋಗುವವನು ರಾಷ್ಟ್ರಪ್ರೇಮಿ–ನಾಡಿನ ಹಿಂದಿನ ಪರಂಪರೆ, ಸಂಸ್ಕೃತಿ ಧರ್ಮಗಳನ್ನು ಎತ್ತಿತೋರಿ, ಆ ಆದರ್ಶಗಳಿಗೆ ಸರಿಯಾಗಿ ನಾವಿಂದು ಜೀವಿಸದೆ ಅಲ್ಪತನದಲ್ಲಿ ವ್ಯವಹರಿಸುತ್ತಿದ್ದೇವೆ—ನಾವು ಜಾಗೃತರಾಗಬೇಕು—ನಮ್ಮ ನಷ್ಟ ಹೊಂದಿದ ಯೋಗ್ಯತೆಯನ್ನು ಪುನಃ ಸಂಪಾದಿಸಿಕೊಳ್ಳಲೇ ಬೇಕು ಎಂದು ಕಹಳೆಯೂದುವ ವ್ಯಕ್ತಿಯು ಕೇವಲ ರಾಷ್ಟ್ರದ್ರೋಹಿ ಎಂದು ಯಾರಾದರೂ ಭಾವಿಸಿದರೆ ಅದಕ್ಕೇನನ್ನಬೇಕು? ಓದುಗರೇ ಅದಕ್ಕೆ ಉತ್ತರವೀಯಬೇಕು.

ಇಂದಿನ ನಮ್ಮ ಕೊರತೆಯನ್ನು ಕಂಡು ನಾಚಿಕೊಂಡು, ಅವುಗಳನ್ನು ಹೋಗಲಾಡಿಸುವ ಯತ್ನ ಮಾಡದೆ ಹುಚ್ಚು ಅಭಿಮಾನಮಾತ್ರ ಬೆಳೆಸಿಕೊಂಡುದರಿಂದ, ಅಥವಾ ಅಂತಹ ಯಾವ ಅಭಿಮಾನವೇ ಇಲ್ಲದೆ ಕೆಡುಕಿನ, ಅನಾದರ್ಶದ ಪಥದಲ್ಲೇ ಮುಂದೆ ಮುಂದೆ ಸಾಗುವವರು ಬಹಳ ಮಂದಿ ಇದ್ದಾರೆಂಬುದರಿಂದಲೇ ನಾಡಿಗಿಂದು ಇಂದು ಕಾಣುವ ರೀತಿಯ ದುರವಸ್ಥೆ ಬಂದಿದೆ. ದುರವಸ್ಥೆಯೆಲ್ಲಿ ಎಂದು ಯಾರಾದರೂ ಪ್ರಶ್ನಿಸಬಹುದು. ಪ್ರತಿಯೊಬ್ಬನ ಅಂತರಂಗದಲ್ಲಿರುವ ಅತೃಪ್ತಿ, ಅಶಾಂತಿ, ಅಸಹನೆ, ಅಭದ್ರತೆಯ ಭಾವನೆ

ಹಾಗೂ, ಹಲವರಲ್ಲಿರುವ ಅನ್ಯಾಯ, ಅಕ್ರಮ, ಅನಾಚಾರಗಳ ಸ್ವಭಾವವೇ ಈ ದುರವಸ್ಥೆಯ ದ್ಯೋತಕ.

ಅದನ್ನು ನೋಡಿ ಬಂದ ಮನ ಮರುಕದಿಂದಲೇ ಜೋನ್ ಓರ್‌ಮನ್ ಹೊರಬರಲು ಕಾರಣ.

ಇಷ್ಟೆಲ್ಲ ಹೇಳಿದ ನಂತರ, ಸೇವಾಮೃತದಲ್ಲಿ ಧಾರಾವಾಹಿಯಾಗಿ "ಭಾರತ ದರ್ಶನ" ಎಂಬ ಶಿರೋನಾಮೆಯಲ್ಲಿ ಪ್ರಕಟಿತವಾಗುತ್ತಿದ್ದ ಪತ್ರಮಾಲೆಯೇ ಈಗ "ಭಾರತ ದರ್ಪಣ"ವೆಂಬ ಈ ಗ್ರಂಥವಾಗಿ ಬಂದಿದೆ ಎಂಬುದಾಗಿ ಪುನಃ ಹೇಳುವ ಅಗತ್ಯವಿಲ್ಲ.

ಜೋನ್ ಓರ್‌ಮನ್ ಎಂಬ ಹೆಸರು ಹಾಕಿ, ಆತನೊಬ್ಬ ಅಮೇರಿಕನ್ ಪ್ರವಾಸಿಯೆಂದು ಸೂಚಿಸಿ, ನಾನು ಜನರನ್ನು ವಂಚಿಸುತ್ತಿದ್ದೇನೆಯೇ ಎಂಬ ಸಂಶಯ, ಸಂಕೋಚಗಳು ನೂರಾರು ಸಲ ನನ್ನ ಮನವನ್ನು ಮುತ್ತಿವೆ. ಆದರೆ ನನ್ನ ಉದ್ದೇಶ ಪೂರ್ತಿ ಮಾಡಲು ನಾನು ಹೀಗೆಯೇ ಬರೆಯ ಬೇಕಾಗಿತ್ತು.

ಜೋನ್ ಓರ್‌ಮನ್ ಎಂದರೆ ಯಾರು ಎಂಬುದಾಗಿ ನೂರಾರು ಜನರು ನನ್ನ ಕೂಡೆ ಪ್ರಶ್ನಿಸಿದ್ದಾರೆ. "ಅದೊಂದು ಗುಪ್ತ ನಾಮ–ನಿಜವಾಗಿ ಅಮೇರಿ ಕನ್ ಪ್ರವಾಸಿಯಲ್ಲ"ವೆಂದಷ್ಟೇ ನಾನವರಿಗೆ ಉತ್ತರ ನೀಡಿದ್ದೆ–ಆದರೆ ಜೋನ್ ಓರ್‌ಮನ್‌ನಿಗೆ ಜೀವ ತುಂಬಿದ್ದು ಯಾರು ಎಂಬುದಾಗಿ ಹೇಳಿರಲಿಲ್ಲ.

ಸೇವಾಮೃತದ ಉದಯವಾದಂದಿನಿಂದ ಹಲವು ಸಲ ಇದನ್ನು ಪ್ರಕಟಿಸಿ ಬಿಡಲೇ? ಎಂದು ಕಂಡುದಿದೆ. ಆದರೆ ಅದೇಕೋ "ಈಗ ಬೇಡ–ಗ್ರಂಥ ರೂಪವಾಗಿ ಹೊರಬರಲಿ–ಆಗ ಪ್ರಕಟಿಸೋಣ" ಎಂದೇ ಅಂತರಂಗ ನುಡಿ ಯಿತು. ಅದನ್ನೇ ಅನುಸರಿಸಿದೆ.

ಈ ರೀತಿ ವಿದೇಶಿ ಪ್ರವಾಸಿಯ ಹೆಸರಲ್ಲಿ ತನ್ನ ರಾಷ್ಟ್ರದ ಕುರಿತಾದ ವಿಮರ್ಶೆ ಮಾಡಲು ನನಗೆ ಕಲಿಸಿಕೊಟ್ಟದ್ದು ಹಾಗೂ ಸ್ಫೂರ್ತಿ ನೀಡಿದ್ದು ಪ್ರಸಿದ್ಧ ಇಂಗ್ಲಿಷ್ ಸಾಹಿತಿಯಾದ ಮಿ. ಒಲಿವರ್ ಗೋಲ್ಡ್ ಸ್ಮಿತ್. ಈ ಬಗ್ಗೆ ಅಗಲಿ ಹೋದ ಆ ಮಹಾ ಸಾಹಿತಿಗೆ ನಾನು ಚಿರಋಣಿಯಾಗಿದ್ದೇನೆ.

ಈ ತನಕವೂ ಸತ್ಯವನ್ನು ಮರೆಮಾಚಿದ ಅಪರಾಧಕ್ಕಾಗಿ ನಾನು ಓದು ಗರ ಕ್ಷಮಾಯಾಚನೆ ಮಾಡುತ್ತೇನೆ.

ಶ್ರೀ ಸಿದ್ಧವನ ಹಳ್ಳಿ ಕೃಷ್ಣ ಶರ್ಮರು ಹಿರಿಯರು, ಕರ್ಮಯೋಗಿಗಳು; ಮಹಾತ್ಮಾ ಗಾಂಧೀಜಿಯವರ ನಿಜವಾದ ಅನುಯಾಯಿಗಳಲ್ಲೊಬ್ಬರು. ಅವರ ಪರಿಚಯ, ಮತ್ತು ಸ್ನೇಹದ ಲಾಭ ಇತ್ತೀಚೆಗೆ ಆದೊಡನೆಯೇ ಅವರ ಮುನ್ನುಡಿಯನ್ನೇ ಆಶೀರ್ವಾದ ರೂಪವಾಗಿ ಪಡೆಯಬೇಕೆಂದು ಮನಸ್ಸಿಗನ್ನಿಸಿತು.

ಅವರನ್ನು ಕಂಡು ಕೇಳಿದೊಡನೆಯೇ ಒಪ್ಪಿಕೊಳ್ಳುವ ಔದಾರ್ಯವನ್ನೂ, ಕೆಲವೇ ದಿನಗಳಲ್ಲಿ ಬರೆದು ಕಳುಹಿಸುವ ಪ್ರೇಮ ಹಾಗೂ ಕಾರ್ಯದಕ್ಷತೆಗಳನ್ನೂ ಅವರು ತೋರಿದರು. ಅವರು ನಿಶ್ಚಯವಾಗಿ ತಮ್ಮ ಬಹುಮುಖ ಕಾರ್ಯಗಳನ್ನು ಈ ಬಗ್ಗಾಗಿ ಬಂದಿಷ್ಟಾದರೂ ಹಿಂದೆ ಹಾಕಿರಬೇಕು. ಆ ಬಗ್ಗೆ ಮನ ತುಂಬಿ, ಎದೆ ತುಂಬಿ, ಅನಂತ ಕೃತಜ್ಞತೆಗಳನ್ನರ್ಪಿಸುತ್ತೇನೆ.

ಅಲ್ಲದೆ ನನ್ನ ಅಂತರಂಗದ ಅಂತರಾಳದ ಉದ್ದೇಶಗಳನ್ನು ಅವರು ಕಂಡುಕೊಂಡು ನಾನು ಎಂದೆಂದೂ ನಿರೀಕ್ಷಿಸಲು ಸಾಧ್ಯವಿಲ್ಲದಷ್ಟು ಪೂರ್ಣವಾಗಿ, ಅಂದವಾಗಿ, ಸೊಗಸಾಗಿ, ಅವುಗಳನ್ನು ಮುನ್ನುಡಿಯಲ್ಲಿ ನುಡಿದಿದ್ದಾರೆ. ಆ ಬಗ್ಗೆ ನನ್ನ ಮೆಚ್ಚುಗೆಯನ್ನು ತೋರಿ ಹೇಗೆ ಮುಗಿಸಲಿ? ಇಲ್ಲ ಮುಗಿಸುವಂತಿಲ್ಲ. ಆ ಬಗ್ಗೆ ಅವರಿಗೆ ಅನಂತ ವಂದನೆಗಳು.

ಭಾರತ ದರ್ಶನವನ್ನು ಮುಂದರಿಸಿ, ಭಾರತ ದರ್ಪಣವನ್ನು ಎತ್ತಿಹಿಡಿಯಲು ನನಗೆ ಸ್ಫೂರ್ತಿ ನೀಡಿದವರು ಸೇವಾಮೃತದ ಓದುಗರು–ಹಾಗೂ ನನ್ನ ಸಹವರ್ತಿಗಳಾದ ಗೆಳೆಯರು. ಇದು ಮುಂದರಿಸತಕ್ಕ ಕಾರ್ಯ ಹೌದೇ ಅಲ್ಲವೇ ಎಂಬ ಸಂಶಯ ಬಂದುದು ಒಮ್ಮೆಯಲ್ಲ. ಆಗ ನನ್ನ ಗೆಳೆಯರ ಸ್ಫೂರ್ತಿಯ ಮಾತಲ್ಲವಾದರೆ, ಪ್ರಾಯಶಃ ಅರ್ಧದಲ್ಲೇ ನಿಲ್ಲಿಸುತ್ತಿದ್ದೆನೋ ಏನೋ? ಈ ಬಗ್ಗೆ ಸೇವಾಮೃತದ ಓದುಗರಿಗೂ, ಗೆಳೆಯರಿಗೂ ನಾನು ಕೃತಜ್ಞನಾಗಿದ್ದೇನೆ.

ಭಾರತ ದರ್ಪಣ ಇಲ್ಲಿಗೇ ಮುಗಿಯುವ ಉದ್ದೇಶವಿಲ್ಲ. ಭಾರತದ ಜನ ಜೀವನದ ವಿವಿಧ ಮುಖಗಳು ಇನ್ನೂ ಬಹಳಷ್ಟು ಇವೆ—ಆದುದರಿಂದ ಇನ್ನೂ ಇಂಥದೇ ಒಂದೆರಡು ಸಂಪುಟಗಳು ಹೊರಬಂದರೆ ಆಶ್ಚರ್ಯವಿಲ್ಲ—ಹಾಗೆ ಹೊರಬರಬೇಕೆಂದೇ ಇಂದಿನ ಉದ್ದೇಶವಾಗಿದೆ. ಆದ್ದರಿಂದಲೇ ಇದನ್ನು ಮೊದಲ ಸಂಪುಟವೆಂದು ಕರೆಯಲಾಗಿದೆ.

ಜೋನ್ ಓರ್‌ಮನ್ ಮುಂದೆಯೂ, ಜೀವಿಸಲಿದ್ದಾನೆ; ಭಾರತ ಸಂಚರಿಸಲಿದ್ದಾನೆ; ಭಾರತ ದರ್ಶನ ಮಾಡಲಿದ್ದಾನೆ; ಭಾರತ ದರ್ಪಣವನ್ನು ಎತ್ತಿ ಹಿಡಿಯಲಿದ್ದಾನೆ. ಆತನಿಗೆ ಕನ್ನಡದ ಜನತೆ ತಿರಸ್ಕಾರ ತೋರದೆ, ತೆರೆದೆದೆಯ ಸ್ವಾಗತ ನೀಡಿದರೆ, ಈ ಗ್ರಂಥ ರಚನೆಯ ಉದ್ದೇಶ ಪೂರ್ತಿಯಾಗುವ ದಾರಿಯಲ್ಲಿ ನಿಂತಂತಾಯಿತು.

ಈ ಮುದ್ರಣ ಕಾರ್ಯವನ್ನು ಅಚ್ಚುಕಟ್ಟಾಗಿ ಮುಗಿಸಿಕೊಟ್ಟ ಶ್ರೀ ಸತ್ಯಸಾಯಿ ಪ್ರೆಸ್ಸಿನ ಮೇನೇಜರ್ ಹಾಗೂ ಇತರ ಕಾರ್ಯಕರ್ತರಿಗೆ ನನ್ನ ಆಭಾರ ಮನ್ನಿಸುತ್ತೇನೆ.

ಜೋನ್ ಓರ್‌ಮನ್‌ನ ಉದ್ದೇಶ ಪೂರ್ತಿಯಾಗಲಿ ಎಂದು ಪ್ರಾರ್ಥಿಸುತ್ತ ಸದ್ಯ ವಿರಮಿಸುತ್ತೇನೆ.

ಸತ್ಯಸಾಯಿ ವಿಹಾರ, ಅಳಿಕೆ
11-4-1966

**ಮುಡಿಯೂರು ನಾರಾಯಣ ಭಟ್.**
ಅಧ್ಯಕ್ಷ, ಲೋಕಸೇವಾ ವೃಂದ.

# ಭಾರತ ದರ್ಪಣ



ಪ್ರಿಯ ಸಿಲ್ವರ್,

ಬೊಂಬಾಯಿ
6. 2. 62

ಹೌದು; ನಾನು ಅಮೇರಿಕದಿಂದ ಹೊರಟು ಭಾರತಕ್ಕೆ ಬಂದು ಇಂದಿಗೆ ಒಂದು ವರ್ಷ ಸಂದುಹೋಯಿತು. "ಸುಮ್ಮನೆ ಏನನ್ನಾದರೂ ಏಕೆ ಗೀಚುತ್ತೀಯೇ? ಭಾರತದ ಕುರಿತು ಏನನ್ನಾದರೂ ಬರೆ" ಎಂಬುದಾಗಿ ನೀನು ಪದೇ ಪದೇ ನನ್ನನ್ನು ಎಚ್ಚರಿಸುತ್ತಿದ್ದರೂ, ನಾನೀ ತನಕ ಆ ಕುರಿತಾಗಿ ಸುಮ್ಮನಿದ್ದೆ. ಏಕೆ ಗೊತ್ತೇ? ಈ ತನಕ ನಾವು ಅಮೇರಿಕನರು ಹಾಗೂ ಇತರ ಪಾಶ್ಚಾತ್ಯರು ಮಾಡಿದ ತಪ್ಪನ್ನೇ ಪುನರಪಿ ಮಾಡಲು ನಾನು ಸಿದ್ಧನಿಲ್ಲ, ಸಿಲ್ವರ್. ಅವರೆಲ್ಲ ಒಂದು ಪುಟ್ಟ ರಜೆ ತಗೊಂಡು ಕೈಯಲ್ಲಿ 5—6 ಸಾವಿರ ಡಾಲರು ಹಿಡಿದುಕೊಂಡು ಇತ್ತ ಬಂದು, ಶೃಂಗಾರಕ್ಕಾಗಿ ಅತ್ತಿತ್ತ ಕೆಲವು ಪಟ್ಟಣ ಸುತ್ತಾಡಿ, ಬರಿಯ ಹದಿನೈದೇ ದಿನಗಳಲ್ಲಿ ಮರಳಿ, "ನಾನು ಭಾರತ ಸಂಚಾರ ಮಾಡಿದೆ" ಎಂಬ ಹೆಗ್ಗಳಿಕೆಯಿಂದ ಅರ್ಧಘರ್ಧ ತಿಳಕೊಂಡು ಏನಾದರೂ ಅಸಂಬದ್ಧ ಟೀಕೆ ಟಿಪ್ಪಣಿ ಮಾಡುವುದು ರೂಢಿಯಾಗಿ ಹೋಗಿದೆ. ನನಗೆ ಸಮಗ್ರ ಭಾರತದ ಸರ್ವಾಂಗೀಣ ದರ್ಶನವಾಗಬೇಕಾಗಿದೆ. ಅದಕ್ಕಾಗಿ ಈ ಒಂದು ವರ್ಷದಲ್ಲಿ ಭಾರತದ ಎಲ್ಲ ನಗರಗಳನ್ನೂ, ಅನೇಕ ಅಭಿವೃದ್ಧಿ ಯೋಜನೆಯ ಸ್ಥಳಗಳನ್ನೂ, ಅನೇಕ ಹಳ್ಳಿಗಳನ್ನೂ, ಎಲ್ಲಾ ಪ್ರಾಮುಖ್ಯ ವಿಹಾರ ಕ್ಷೇತ್ರಗಳನ್ನೂ, ಕಾಡುಬೆಟ್ಟಗಳನ್ನೂ, ಕಾಶ್ಮೀರವನ್ನೂ, ಹಿಮಾಲಯವನ್ನೂ ಸುತ್ತಿದ್ದೇನೆ. ಅತಿ ಸಣ್ಣ ಹಳ್ಳಿಯಿಂದ ಹಿಡಿದು ಬೊಂಬಾಯಿ, ಕಲ್ಕತ್ತಾಗಳಂತಹ ಬೃಹನ್ನಗರಗಳ

ಎಲ್ಲ ವರ್ಗದ ಜನರನ್ನೂ ಕಂಡು ಮಾತನಾಡಿದ್ದೇನೆ. ಭಾರತದ ಎಲ್ಲಾ ಪ್ರಾಮುಖ್ಯ ಧರ್ಮಗಳ ಪರಿಚಯ ಮಾಡಿಕೊಂಡಿದ್ದೇನೆ. ಸಂಸ್ಕೃತ ಕಲಿತು, ಭಾರತದ ಹಿಂದಿನ ಕೆಲವು ಪ್ರಾಮುಖ್ಯ ಗ್ರಂಥಗಳ ತಿರುಳನ್ನು ಸಂಗ್ರಹಿಸಿದ್ದೇನೆ.

ಇಂದಿಷ್ಟು ನೋಡಿ ಏನೋ ಅಭಿಪ್ರಾಯ ಪಟ್ಟುಕೊಂಡು ನಿನಗಿಷ್ಟು ಗೀಚಿದರೆ ಏನು ಮಾಡಿದಂತಾಯಿತು? ಅದಕ್ಕಾಗಿ ಭಾರತದ ಕುರಿತು ನನ್ನ ಅಭಿಪ್ರಾಯ ಸರಿಯಾಗಿ ರೂಪುಗೊಳ್ಳುವ ತನಕವೂ ನಿನಗೆ ಆ ಕುರಿತು ಬರೆಯುವುದಿಲ್ಲವೆಂದು ಹಠಮಾಡಿ ಕುಳಿತಿದ್ದೆ. ನಿನ್ನ ಕುತೂಹಲ ತಣಿಸೋಣ ಎಂಬ ಚಪಲತೆ ಆಗಾಗ ಬಂದಿದ್ದರೂ, ನಾನು ಬಲವಂತದಿಂದ ಹಿಂದಕ್ಕೆ ತಳ್ಳಿ ಸುಮ್ಮನಿದ್ದೆ. ಸಿಲ್ವರ್, ಈಗಲಾದರೂ ತಿಳಿಯಿತೇ ಈ ಕುರಿತಾದ ದೀರ್ಘ ಮೌನದ ಕಾರಣ? ಈಗ ನನ್ನನ್ನು ಕ್ಷಮಿಸುವೆಯಷ್ಟೆ?

ಸಿಲ್ವರ್, ಈಗಲೀಗ ಭಾರತದ ಕುರಿತಾಗಿ ನಾನು ಒಂದು ಸ್ಪಷ್ಟ ಅಭಿಪ್ರಾಯಕ್ಕೆ ಬರತೊಡಗಿದ್ದೇನೆ. ಆದರೆ ನನ್ನ ಆಳವಾದ ಅಧ್ಯಯನ ಇನ್ನೂ ಮುಗಿದಿಲ್ಲ, ನೋಡು. ನಾನು ಇನ್ನೂ 3—4 ವರ್ಷ ಇಲ್ಲಿದ್ದರೂ ಆಶ್ಚರ್ಯವೇನಿಲ್ಲ, ಆದರೆ ಆ ತನಕವೂ ನಿನ್ನನ್ನು ನಿರಾಶೆ ಪಡಿಸದೆ, ನನ್ನ ಕೆಲವೊಂದು ಪತ್ರಗಳ ಮೂಲಕ ಇಲ್ಲಿಯ ಕುರಿತಾದ ಕೆಲವು ಅಭಿಪ್ರಾಯ ಬರೆಯುತ್ತೇನೆ. ನೀನೂ ಒಂದು ರೀತಿಯ ನಿಷ್ಪಕ್ಷಪಾತ ಬುದ್ಧಿಯಿಂದಲೂ, ಸಹಾನುಭೂತಿಪರ ಹೃದಯದಿಂದಲೂ ಇದನ್ನು ತಿಳಕೊಳ್ಳಲು ಯತ್ನಿಸಬೇಕು.

ನೋಡು ಸಿಲ್ವರ್, ಭಾರತದಂತಹ ಒಂದು ವೈವಿಧ್ಯಪೂರ್ಣ ನಾಡನ್ನು ಜಗತ್ತಿನಲ್ಲಿ ನೀನು ಬೇರೆ ನೋಡಲಾರೆ. ದೇಶವೇನೋ ನಮ್ಮ ಸಂಯುಕ್ತ ಅಮೇರಿಕದ ಅರೆವಾಸಿಯೆನ್ನು. ಆದರೆ ಜನಸಂಖ್ಯೆಯಾದರೋ ಹೆಚ್ಚು ಕಡಿಮೆ ನಮ್ಮ ದೇಶದ 2½ ಪಾಲಷ್ಟಿದೆ. ಅತಿ ಉಷ್ಣ ಪ್ರದೇಶಗಳಾದ ನೆಲ್ಲೂರು, ಮದರಾಸಿನಂಥ ಸ್ಥಳಗಳೂ, ಇಂಗ್ಲೆಂಡಿನ ಹವೆಯನ್ನೊಳಗೊಂಡ, ಕಾಶ್ಮೀರ, ಬೆಂಗಳೂರು, ಊಟಿ, ಮುಸ್ಸೂರಿಯಂಥ ಪ್ರದೇಶಗಳೂ, ತುಂದ್ರಾ ಪ್ರದೇಶದಂಥ ಹಿಮಾಚ್ಛಾದಿತ ಹಿಮಾಲಯ ಪರ್ವತವೂ ಇಲ್ಲಿದೆ. ಹಾಗೆಯೇ ಗಂಗಾ ಸಿಂಧೂ ಬಯಲು ಭೂಮಿಯಂಥಾ ಫಲವತ್ತಾದ ಪ್ರದೇಶಗಳಿದ್ದರೆ, ಬರಿಯ ಮರಳಿನಿಂದಲೇ ತುಂಬಿದ ರಾಜಸ್ಥಾನದ ಥಾರ್ ಮರುಭೂಮಿಯೂ ಇಲ್ಲಿದೆ. ಜಗತ್ತಿನಲ್ಲೇ ಅತಿ ಕೊಳಕಾದ ಪ್ರದೇಶಗಳನ್ನೂ ಇಲ್ಲಿ ನಿನಗೆ ಕಾಣಬಹುದಾದರೆ, ಪ್ರಪಂಚದಲ್ಲೇ ಅತಿ ಸುಂದರವಾದ ಕಾಶ್ಮೀರ, ಹಿಮಾಲಯ, ಪಶ್ಚಿಮಘಟ್ಟ, ಊಟಿ

ಯಂಥ ಪ್ರದೇಶಗಳನ್ನೂ ಕಾಣಬಹುದು. ಬಿಲಗಳಂಥ ಸ್ಥಳಗಳಲ್ಲಿ ವಾಸಿಸುವ ಅತೀ ಗರೀಬರಿಂದ ತೊಡಗಿ, ಟಾಟಾ, ಬಿರ್ಲ, ನಿಜಾಮು ಮೊದಲಾದ ಕೋಟ್ಯಾಧೀಶರನ್ನೂ ನೀನಿಲ್ಲಿ ನೋಡಬಹುದು. ಪ್ರಪಂಚದ ಸಕಲ ಸುಖವನ್ನೂ ತ್ಯಜಿಸಿ, ಹಿಮಾಲಯದಲ್ಲಿ ಸಿಂಹದಂತೆ ತಿರುಗಾಡುವ ವಿರಕ್ತ ಸನ್ಯಾಸಿಗಳು ಒಂದು ಬದಿಯಲ್ಲಿದ್ದರೆ, ಪಾಶ್ಚಾತ್ಯರೂ ನಾಚುವಂತಹ ರೀತಿಯ ಶೃಂಗಾರ, ಕಾಮಕೇಳಿಗಳಲ್ಲಿ ಕಾಲಯಾಪನೆ ಮಾಡುವ ಜನರೂ ಇಲ್ಲಿದ್ದಾರೆ. ಇಡೀ ಜಗತ್ತಿಗೇ ಮಾನವೀಯತೆಯ ಅತಿ ಭವ್ಯಸಂದೇಶ ನೀಡಬಲ್ಲ ಮಹಾನುಭಾವರ ಜತೆಯಲ್ಲೇ, ಜಗತ್ತಿನ ಅತಿ ನಿಕೃಷ್ಟ ಮೋಸಗಾರ, ದಗಾಖೋರ ಜನರನ್ನೂ ನೀನಿಲ್ಲಿ ನೋಡಬಲ್ಲೆ. ಎತ್ತಿನ ಗಾಡಿಯ ಯುಗವೂ ಎಟೋಮಿಕ್ ಯುಗವೂ ಕೈಕೈ ಹಿಡಿದು ನಡೆಯುವುದನ್ನು ನೋಡಬೇಕಿದ್ದರೆ ಭಾರತಕ್ಕೆ ಬರಬೇಕು. ತಾಜಮಹಲಿನಂಥ, ಜಗತ್ತಿಗೇ ಕಣ್ಣಾಗಬಹುದಾದ ಚಾರಿತ್ರಿಕ ಅವಶೇಷಗಳು ಅನೇಕ ಇದ್ದರೆ, ಕೊಳೆತು ನಾರುವ ಹೊಲಸು ಪ್ರದೇಶದಲ್ಲಿ ಮಾನವರೆಂಬ ಪ್ರಾಣಿಗಳಿಗೆ ವಾಸಿಸಲು ಉದ್ದೇಶಿತವಾದ ಹರುಕು ಚಿಂದಿ, ತುಕ್ಕು ಹಿಡಿದ ಡಬ್ಬಿ ಇತ್ಯಾದಿಗಳಿಂದ ತಯಾರಿಸಿದ ಲಕ್ಷಗಟ್ಟಲೆ ಬಿಲಗಳನ್ನೂ ಇಲ್ಲಿಯ ಪಟ್ಟಣಗಳಲ್ಲಿ ನೋಡಬಹುದು. ನೀಗ್ರೋಗಳಂಥ ಕರಿ ಬಣ್ಣದ ಜನರೂ ಇಲ್ಲಿದ್ದಾರಾದರೂ ಪಾಶ್ಚಾತ್ಯರನ್ನೂ ನಾಚಿಸಬಹುದಾದಷ್ಟು ಬಿಳಿಯ ಸುಂದರ ಜನರೂ ಇಲ್ಲಿದ್ದಾರೆ. ಭಾರತದ ಘಟನೆಯಲ್ಲಿ ಅಡಕವಾದ 14 ರಾಷ್ಟ್ರೀಯ ಭಾಷೆಗಳನ್ನಾಡುವ ಜನರನ್ನೂ ನೀನು ಗುರುತಿಸಬಹುದು. ಮಾತ್ರವಲ್ಲ, ಲಿಪಿಯೇ ಇಲ್ಲದ ಕೊಂಕಣಿ, ತುಳು, ಇತ್ಯಾದಿ ನೂರಾರು ಇತರ ಭಾಷೆಗಳನ್ನಾಡುವ ಜನರನ್ನೂ ಕಾಣಬಹುದು. ಕ್ರೈಸ್ತಪೂರ್ವ ಶತಮಾನಗಳಲ್ಲಿ ಬಳಸುತ್ತಿದ್ದ ನೇಗಿಲುಗಳನ್ನೇ ಉಪಯೋಗಿಸಿ, ಬಡಕಲು ಎತ್ತುಗಳಿಂದಲೇ ಸಾಗುವಳಿ ಮಾಡುವ ಜನರೊಂದು ಬದಿಯಲ್ಲಿದ್ದರೆ, ಆಧುನಿಕ ಟ್ರಾಕ್ಟರು, ವಿಮಾನಗಳನ್ನು ಉಪಯೋಗಿಸಿ, ಸಾಗುವಳಿ ಮಾಡುವ ಬೃಹತ್ ಕೃಷಿ ಕೇಂದ್ರಗಳನ್ನೂ ನೀನಿಲ್ಲಿ ವೀಕ್ಷಿಸಬಹುದು. ಇಲ್ಲಿ ಆಧುನಿಕ ಬೃಹತ್ ಕೈಗಾರಿಕಾ ಕ್ಷೇತ್ರಗಳೂ; ಸಹಸ್ರಾರು ವರ್ಷಗಳ ಹಿಂದಿನ ಗುಡಿ ಕೈಗಾರಿಕೆಗಳೂ ಕೈಕೈ ಹಿಡಿದು ನಡೆಯುತ್ತಿವೆ! ನಾಲ್ಕು ಸಾವಿರ ವರ್ಷಗಳ ಮೊದಲು ಉಪಯೋಗಿಸುತ್ತಿದ್ದ ಏತಗಳಿಂದ ತೊಡಗಿ, ಜಗತ್ತಿನಲ್ಲೇ ಅತ್ಯುನ್ನತವೆನ್ನಿಸಲಿರುವ ಬಕ್ರಾನಂಗಲ್‌ನಂತಹ ಅಣೆಕಟ್ಟುಗಳಿಂದಲೂ ನೀರಾವರಿ ಕೆಲಸ ಸಾಗುತ್ತಿವೆ. ಹಿಂದುಗಳು, ಮುಸಲ್ಮಾನರು, ಕ್ರೈಸ್ತರು,

ಸಿಕ್ಖರು, ಪಾರ್ಶಿಗಳು, ಬೌದ್ಧರು, ಜೈನರು ಮೊದಲಾದ ಜಗತ್ತಿನ ಎಲ್ಲಾ ಧರ್ಮದ ಜನರನ್ನೂ ನೀನಿಲ್ಲಿ ನೋಡಬಹುದು. ಮಾತ್ರವಲ್ಲ, ನೂರಾರು ಒಳ ಜಾತಿಗಳಿಂದ ಕೂಡಿ, ತಮ್ಮತಮ್ಮೊಳಗೇ ಬಡಿದಾಡಿಕೊಳ್ಳಲು ಹವಣಿಸುತ್ತಿರುವ ಹಿಂದೂ ಧರ್ಮದ ಅತಿ ನಿಕೃಷ್ಟ ಬದಿಯನ್ನೂ ನೀನಿಲ್ಲಿ ಕಾಣುವೆ. ಭೂತ, ಪ್ರೇತ, ಪಿಶಾಚಿಗಳ ಆರಾಧನೆಯ ಬದಿಯಲ್ಲೇ ಅತಿ ವೈಜ್ಞಾನಿಕವಾದ ಹಿಂದೂ ಧರ್ಮದ ಬ್ರಹ್ಮ ಸೂತ್ರಗಳು, ಉಪನಿಷತ್ತುಗಳು ಮತ್ತು ಗೀತೆಯ ತಳಹದಿ ಯಲ್ಲಿ ಉಪಾಸನೆ ಮಾಡುವ ಬ್ರಹ್ಮಜ್ಞಾನಿಗಳನ್ನು ಕಾಣಬಹುದು. ಇದು ನಿನಗೆ ವಿಚಿತ್ರವಾಗಿ ತೋರುತ್ತಿಲ್ಲವೇ ಸಿಲ್ವರ್! ಇಂತಹ ತುಲನೆ ಎಷ್ಟೂ ಇದೆ, ಗೆಳೆಯ! ಆದರೆ ನಾನು ಬರೆದು ದಣಿದೆನಾದರೆ, ನೀನು ಓದಿ ದಣಿಯಬಹುದು.

ಇಲ್ಲಿಯ ಬಹು ಸಂಖ್ಯಾಕರು ಸಹಜವಾಗಿಯೇ ಹಿಂದುಗಳು. ಸುಮಾರು 440 ಮಿಲಿಯ ಜನಸಂಖ್ಯೆಯಿರುವ ಈ ಭೂಖಂಡದಲ್ಲಿ ಸುಮಾರು 370 ಮಿಲಿಯ ಜನರೂ ಕೂಡ ಹಿಂದುಗಳೆಂದರೆ ತಪ್ಪಾಗಲಾರದು. ಅವರ ಮತ ಹಿಂದೂ ಧರ್ಮ.

ನನಗೆ ಭಾರತಕ್ಕೆ ಕಾಲಿಟ್ಟಮೊದಲಿನಿಂದಲೇ ಈ ಹಿಂದೂ ಧರ್ಮದ ಅಧ್ಯ ಯನ ಮಾಡಬೇಕೆಂಬ ಹುಚ್ಚು ಹಿಡಿಯಿತು, ಸಿಲ್ವರ್. ಕಾರಣವೇನು ಗೊತ್ತೆ? ನಮ್ಮ ಕ್ರೈಸ್ತ ಪಾದರಿಗಳು ಹಿಂದೂ ಧರ್ಮವನ್ನು ಯಾವಾಗಲೂ ಅವಹೇಳನ ಮಾಡುತ್ತಿರುವುದನ್ನು ಸಂಯುಕ್ತ ಅಮೇರಿಕದಲ್ಲೂ, ಇತರ ಕಡೆಗಳಲ್ಲೂ ಕೇಳಿದ್ದೆ. ಅದರ ಸತ್ಯಸ್ಥಿತಿ ನನಗೆ ತಿಳಿಯಬೇಕಾಗಿತ್ತು. ಹಾಗೆಯೇ ಅನೇಕ ಇಂಗ್ಲಿಷ್ ಪುಸ್ತಕಗಳನ್ನು ಓದಿದೆ. ಡಾ। ರಾಧಾಕೃಷ್ಣನ್, ಸ್ವಾಮಿ ಶಿವಾ ನಂದ, ಸ್ವಾಮಿ ಶಂಕರಾಚಾರ್ಯ, ಆಚಾರ್ಯ ವಿನೋಬಾ, ಮೊದಲಾದ ಹಿಂದೂ ಧರ್ಮದ ಆಧುನಿಕ ಆದರ್ಶ ಪುರುಷರನ್ನು ಕಂಡು, ಸಂಭಾಷಣೆ ಮಾಡಿದೆ. ಸಂಸ್ಕೃತ ಕಲಿತು, ಅನೇಕ ಸಂಸ್ಕೃತದ ಮೂಲ ಗ್ರಂಥಗಳನ್ನೂ ಓದಿದೆ.

ಸಿಲ್ವರ್, ಏನಾಶ್ಚರ್ಯ ಗೊತ್ತೆ? ಹಿಂದೂ ಧರ್ಮವು ಅತ್ಯದ್ಭುತವಾ ದುದು! ಅದನ್ನು ಸರಿಯಾಗಿ ತಿಳಿದಾಗ ಅದು ಎಷ್ಟು ವೈಜ್ಞಾನಿಕವಾಗಿದೆಯೆಂ ಬುದು ಅರ್ಥವಾಗುವುದು. ಶಿಲಾಯುಗಕ್ಕೂ, ಅದರ ಸಿದ್ಧಾಂತ ಹೊಂದಿಕೆ ಯಾಗಬಲ್ಲುದು—ಎಟೋಮಿಕ್ ಯುಗಕ್ಕೂ ಸರಿಸಾಟಿಯಾಗಬಲ್ಲುದು—ಮಾ ತ್ರವಲ್ಲ, ಇನ್ನು ಮುಂದೆ ಬರಲಿರುವ ಯಾವ ಯುಗವೂ ಅದನ್ನು ಹಿಂದೆ ಹಾಕಿ

ಅದನ್ನು ನಿರುಪಯುಕ್ತವಾಗಿ ಮಾಡಲು ಸಾಧ್ಯವಿಲ್ಲ. ನಮ್ಮ ಪಾದರಿಗಳು ಕ್ರೈಸ್ತ ಮತದ ಪ್ರಚಾರದ ಹೆಸರಿನಲ್ಲಿ ಎಂತಹ ಕೀಳು ಮಟ್ಟದ ಸುಳ್ಳು ಪ್ರಚಾರ ಮಾಡುತ್ತಾರೆ! ಹಿಂದೂ ಧರ್ಮದ ಲವಲೇಶವೂ ಅವರಿಗೆ ತಿಳಿದಿಲ್ಲ, ಪುಸ್ತಕ ಓದಿಯಾದರೂ ತಿಳಿಯುವ ಗೋಜಿಗೆ ಅವರು ಹೋಗುವುದೂ ಇಲ್ಲ.

ಸಿಲ್ವರ್, ಮಹಾತ್ಮಾ ಯೇಸುವಿನ ಮೇಲೆ ನನಗಿರುವ ಪೂರ್ಣ ಅಭಿಮಾನದೊಂದಿಗೆ, ಭಕ್ತಿಯೊಂದಿಗೆ ಹೇಳುತ್ತಿದ್ದೇನೆ. ಹಿಂದೂ ಧರ್ಮವು ಕ್ರೈಸ್ತ ಧರ್ಮಕ್ಕಿಂತಲೂ ಪೂರ್ಣವಾಗಿದೆ, ವಿಸ್ತಾರವಾಗಿದೆ, ವೈವಿಧ್ಯಪೂರ್ಣವಾಗಿದೆ, ವ್ಯಾವಹಾರಿಕವಾಗಿದೆ, ವೈಜ್ಞಾನಿಕವಾಗಿದೆ, ಅನುಭವ ಸಿದ್ಧವಾಗಿದೆ. ನಾನು ಕ್ರೈಸ್ತನೇನೋ ಹೌದು, ಆದರೂ ನಾವು ಸತ್ಯವನ್ನು ಇದ್ದುದಿದ್ದಂತೆ ನೋಡ ಬೇಕಲ್ಲ ಸಿಲ್ವರ್? ನಿನಗೀಗ ತೀವ್ರ ಸಿಟ್ಟು ಬರಬಹುದು; ನಾನು ಬಲ್ಲೆ. ಆದರೆ ನಾನೇನೂ ಹಿಂದುವಾಗಿ ಮತಾಂತರ ಹೊಂದುತ್ತೇನೆಂದು ನೀನೇನೂ ಭಯ ಪಡುವ ಅಗತ್ಯವಿಲ್ಲ, ಸಿಲ್ವರ್. ಹಿಂದೂ ಧರ್ಮದ ಭವ್ಯ ಸಿದ್ಧಾಂತವನ್ನು ತಿಳಿದ ಯಾವನೂ, ಮತಾಂತರ ಹೊಂದುವ ಆವಶ್ಯಕತೆಯೇ ಏಳುವುದಿಲ್ಲ. ಈಗ ಸಮಾಧಾನವಾಯಿತೇ?

ಇತರ ಧರ್ಮಗಳು, ಡಾರ್ವಿನರ ವಿಕಾಸವಾದದಿಂದ ಗಾಬರಿಗೊಂಡಂತೆ, ಹಿಂದೂ ಧರ್ಮ ಗಾಬರಿಗೊಳ್ಳುವುದಿಲ್ಲ. ಹಿಂದೂ ಸಿದ್ಧಾಂತಕ್ಕನುಸಾರವಾಗಿ ಪರಮಾತ್ಮನ ಎರಡು ಬದಿಗಳಿವೆ; ಒಂದು ಪುರುಷ, ಇನ್ನೊಂದು ಪ್ರಕೃತಿ ಅಥವಾ ಕ್ರಿಯಾಶಕ್ತಿ. ಪುರುಷ ಎಂದರೆ ಸಚ್ಚಿದಾನಂದ ಸ್ವರೂಪಿಯಾದ ಕೇವಲ (Absolute) ಸ್ಥಿತಿಯಲ್ಲಿರುವ ತ್ರಿಗುಣಾತೀತ ನಿರಾಕಾರಿಯಾದ ಮಹಾ ಭಗವಚ್ಚೇತನ. ಪ್ರಕೃತಿ ಎಂದರೆ ಆ ಪರಮಾತ್ಮನ ಸಂಕೇತದಿಂದ ಜನಿಸಿದ ಮೂಲ ಕ್ರಿಯಾತ್ಮಕ ಶಕ್ತಿ. ಈ ಕ್ರಿಯಾತ್ಮಕ ಶಕ್ತಿಯೆಂಬ ತಾಯಿಯಿಂದಲೇ ಈ ವಿಸ್ಮಯಕಾರಕ ವಿಶ್ವದ ಜನನವಾಯಿತು; ಬೆಳವಣಿಗೆಯಾಯಿತು; ವಿಕಾಸವಾಯಿತು. ನಾವಿಂದು ಕಣ್ಣಿಗೆ ಕಾಣುವ ಪ್ರಕೃತಿ, ಮಾನವ ಎಲ್ಲ ಆ ಮಹಾನ್ ಕ್ರಿಯಾಶಕ್ತಿಯ ಅವ್ಯಾಹತ ದುಡಿಮೆಯ ಫಲ. ಆ ದುಡಿಮೆ ಸಾಗುತ್ತಲೇ ಇದೆ—ಲೀಲಾಜಾಲವಾಗಿ.

ವಿಶ್ವದ ಸಚರಾಚರವೆಲ್ಲ ಸಜೀವಿ, ನಿರ್ಜೀವಿಗಳೆಲ್ಲ ಪ್ರಕೃತಿ, ಪುರುಷರ ಸಂಯೋಗದಿಂದ ಉದ್ಭವವಾದುವು; ಅರ್ಥಾತ್, ಪ್ರತಿಯೊಂದು ಪರಮಾಣುವಿನಲ್ಲಿಯೂ, ಬೃಹತ್ ವಿಶ್ವದಲ್ಲಿಯೂ, ಸಕಲ ಪ್ರಾಣಿಗಳಲ್ಲಿಯೂ, ಪರಮಾತ್ಮನು ಸಚ್ಚಿದಾನಂದ ಕೈವಲ್ಯ ಸ್ವರೂಪಿಯಾಗಿ ಎಲ್ಲದಕ್ಕೂ ಸಾಕ್ಷಿ

ಸ್ವರೂಪನಾಗಿಯೂ, ಅಧ್ಯಕ್ಷನಾಗಿಯೂ ಪವಡಿಸಿದ್ದಾನೆ. ಮಹಾನ್ ಕ್ರಿಯಾತ್ಮಕ ಶಕ್ತಿಯಾಗಿ ಪ್ರಕೃತಿ ಅನವರತ ಕಾರ್ಯದಲ್ಲಿ ತೊಡಗಿದ್ದಾಳೆ. ಎಷ್ಟು ವೈಜ್ಞಾನಿಕ, ನೋಡು! ಪ್ರತಿಯೊಂದು ಪರಮಾಣುವಿನಲ್ಲಿಯೂ ಅಡಕವಾದ, ಅಭೇದ್ಯವಾದ, ವಿಜ್ಞಾನಿಯ ಬುದ್ಧಿ ಮನಸ್ಸುಗಳಿಗೂ ಎಟಕದ ಅದ್ಭುತ ಪವಾಡರೂಪೀ ಶಕ್ತಿಯನ್ನು, ಈ ಸಿದ್ಧಾಂತ ಎಷ್ಟು ಚಂದವಾಗಿ ನಿರೂಪಿಸುತ್ತಿದೆ, ಅಲ್ಲವೇ? ಅಲ್ಲದೆ ಪ್ರತಿಯೊಂದು ಪರಮಾಣುವೂ ಸ್ವತಂತ್ರವೇ ಎಂಬ ಒಂದು ರೀತಿಯ ವೈಜ್ಞಾನಿಕ ಸಿದ್ಧಾಂತವನ್ನಾದರೂ ಅಲ್ಲಗಳೆಯುವುದೇ ನೋಡು ! ಕಾರಣ ಪ್ರತಿಯೊಂದು ಪರಮಾಣುವಿನಲ್ಲಿ ಅಡಕವಾದ ಭಗವತ್ ಚೈತನ್ಯವೂ ಪರಿಪೂರ್ಣವೇ ಎಂಬುದು ಹಿಂದೂ ಸಿದ್ಧಾಂತ.

"ಅದೂ (ವಿರಾಟ್ ಪರಮಾತ್ಮ!) ಪೂರ್ಣ. ಇದೂ (ವ್ಯಷ್ಟಿ ಅಥವಾ ಪರಮಾಣು) ಪೂರ್ಣ! ಪೂರ್ಣಕ್ಕೆ ಪೂರ್ಣವನ್ನು ಕೂಡಿಸಿದರೂ ಪೂರ್ಣವೇ! ಪೂರ್ಣದಿಂದ ಪೂರ್ಣವನ್ನು ತೆಗೆದರೆ ಉಳಿಯುವುದೂ ಪೂರ್ಣವೇ!" ಇಂತಹ ಭವ್ಯವಾದ ಉಪನಿಷದ್ವಾಕ್ಯ ಕೇಳಿದಾಗ ಯಾವ ಸಾಧಕನಿಗೆ ಮೈಪುಳಕವಾಗದು ಸಿಲ್ವರ್! ನಾನಂತೂ ಅದನ್ನು ಗ್ರಹಿಸಿದೊಡನೆಯೇ ಆನಂದ ತುಂದಿಲನಾಗುತ್ತೇನೆ.

ಈ ಹಿಂದೂ ಸಿದ್ಧಾಂತವು ಪ್ರತಿಯೊಬ್ಬ ಮಾನವನಿಗೂ ಯಾವೊಂದು ಪವಿತ್ರ ಸ್ಥಾನವನ್ನು ಕೊಡುವುದು, ಗೊತ್ತೆ? ಯಾವ ವ್ಯಕ್ತಿಯೂ, ಅಲಕ್ಷ್ಯನಲ್ಲ, ಅಪವಿತ್ರನಲ್ಲ. ಹಾಗೆಂದು ಇಡೀ ವಿಶ್ವಕ್ಕೇ ಆಧಾರವಾದ ಆ ಸಮ್ಯಕ್ ಬ್ರಹ್ಮಸ್ವರೂಪವನ್ನು ಅಲ್ಲಗಳೆಯುವ ಪ್ರಶ್ನೆಯೂ ಇದರಲ್ಲಿಲ್ಲ.

ಸಿಲ್ವರ್, ಹೀಗೆ ಹೇಳಿದೊಡನೆಯೇ ನಿನ್ನಲ್ಲಿ ಸಹಜವಾಗಿಯೇ ಒಂದು ಪ್ರಶ್ನೆಯೇಳಬಹುದು—ಏನೆಂದರೆ ಹಿಂದೂ ಧರ್ಮ ಪ್ರಕಾರ ಸಜೀವಿ, ನಿರ್ಜೀವಿಗಳೆಂಬ ವ್ಯತ್ಯಾಸವಿಲ್ಲವೇ ಎಂದು! ಇದೆ ಸಿಲ್ವರ್, ಇದೆ. ನೋಡು, ಹಿಂದೂ ಸಿದ್ಧಾಂತ ಪ್ರಕಾರ ಸ್ಥೂಲ, ಸೂಕ್ಷ್ಮವೆಂಬ ಎರಡು ಪ್ರಭೇದವಿದೆ. ಸ್ಥೂಲವೆಂಬುದರಲ್ಲಿ ಪರಮಾತ್ಮನ ಕ್ರಿಯಾಶಕ್ತಿಯೇ ಪ್ರಮುಖ ಸ್ಥಾನ ಪಡೆಯುತ್ತಿದೆ-ಪರಮಾತ್ಮನ ಸಚ್ಚಿದಾನಂದ ರೂಪವು ಗೌಣವಾಗಿ ಸುಪ್ತವಾಗಿ ಅದರಲ್ಲಿ ಅಡಗಿರುವುದು. ಈ ಸ್ಥೂಲಕ್ಕೆ ಭಾವ ಬುದ್ಧಿಗಳಾಗಲೀ, ಪ್ರಜ್ಞೆಯಾಗಲೀ, ಇಲ್ಲ. ಸೂಕ್ಷ್ಮದಲ್ಲಿ ಪರಮಾತ್ಮನ ಸಚ್ಚಿದಾನಂದ ಸ್ವರೂಪವು ಹೆಚ್ಚು ಪ್ರಕಟವಾಗಿರುವುದಲ್ಲದೆ, ಕ್ರಿಯಾಶಕ್ತಿಯನ್ನೂ ಒಳಗೊಂಡಿರುವುದು ಈ ಸೂಕ್ಷ್ಮಕ್ಕೆ ಪ್ರಜ್ಞೆಯಿದೆ ಮಾತ್ರ

ವಲ್ಲ, ಈ ಸೂಕ್ಷ್ಮದ ವಿಕಸಿತ ಸ್ಥಿತಿಯಲ್ಲಿ, ಭಾವ, ಬುದ್ಧಿ ಗಳೂ, ಅದೇ ವಿಕಾಸದ ಪರಾಕಾಷ್ಠೆಯ ಸ್ಥಿತಿಯಲ್ಲಿ ಪರಮಾತ್ಮನ ಕೈವಲ್ಯ ಹಾಗೂ ಸಚ್ಚಿದಾನಂದ ಸ್ಥಿತಿಯೂಅನುಭವಕ್ಕೆಬರುವವು. ಸ್ಥೂಲವೇಜಡವಸ್ತು, ಸೂಕ್ಷ್ಮವೇ ಜೀವ. ಕಡಿಮೆ ವಿಕಸಿತಸ್ಥಿತಿಯ, ಕ್ರಿಮಿಕೀಟಗಳು, ಪ್ರಜ್ಞೆಯನ್ನು ಮಾತ್ರವೇ ಒಳಗೊಂಡಿವೆ. ಪ್ರಾಣಿಗಳು, ಭಾವ, ಬುದ್ಧಿ ಗಳನ್ನೂ ಕೆಲವೊಂದು ಮಟ್ಟಿಗೆ ಪಡಕೊಂಡಿವೆ. ಆದರೆ ನಾಯಿ, ಕುದುರೆ, ಆನೆ, ಮಂಗನಂಥ ಪ್ರಾಣಿಗಳು ಈ ದಿಸೆಯಲ್ಲಿ ಇನ್ನೂ ಮುಂದುವರಿದಿವೆ. ಆದರೆ ಎಲ್ಲ ಪ್ರಾಣಿಗಳೂ, ತಮ್ಮ ಹುಟ್ಟುಗುಣಕ್ಕನುಸಾರ ವರ್ತಿಸುವವು ಹೊರತು, ಬುದ್ಧಿಯನ್ನು ಹೆಚ್ಚು ವಿಸ್ತಾರವಾದ ಕ್ಷೇತ್ರಕ್ಕೆ ಬಳಸಲಾರವು. ಮಾನವನ ಜೀವವಾದರೋ, ಭಾವ, ಬುದ್ಧಿ ಪ್ರಜ್ಞೆಗಳನ್ನು ಮಾತ್ರವೇ ಪಡೆದಿರುವುದಲ್ಲದೆ, ಪರಮಾತ್ಮನ ಅನಂತ ಚೇತನವನ್ನೂ, ಸಚ್ಚಿದಾನಂದ ಸ್ವರೂಪವನ್ನೂ ಅನುಭವಿಸಲು ಸಮರ್ಥವಿರುವ ಸುಪ್ತ ಶಕ್ತಿಯನ್ನು ಒಳಗೊಂಡಿದೆ. ಮಾನವ ಮತ್ತು ಇತರ ಪ್ರಾಣಿಗಳಲ್ಲಿ ಜೀವವೆಂಬ ಸೂಕ್ಷ್ಮ ಶಕ್ತಿಯೂ, ದೇಹವೆಂಬ ಸ್ಥೂಲ ಶಕ್ತಿಯೂ ಅಡಕವಾಗಿದ್ದರೆ, ಜಡ, ನಿರ್ಜೀವ ವಸ್ತುಗಳಲ್ಲಿ ಸ್ಥೂಲ ಶಕ್ತಿ ಮಾತ್ರವೇ ಅಡಕವಾಗಿದೆ. ಬಹಳ ಇದು ಕಷ್ಟವಾಗಿ ಕಂಡಿರಬಹುದು, ಅಲ್ಲವೇ ಸಿಲ್ವರ್? ಬೇಸರ ಬಂತೇ? ನಿದ್ದೆ ಬರುತ್ತಿದೆಯೇ?

ಪುರುಷನ ಸಂಕಲ್ಪದಿಂದ ಕ್ರಿಯಾ ಶಕ್ತಿಯೂ, ಅದರಿಂದ ಈ ವಿಶ್ವವೂ ಹೇಗೆ ಉತ್ಪತ್ತಿಯಾಯಿತೋ, ಹಾಗೆಯೇ ಮಾನವನ ಅಂತರಂಗದಲ್ಲಿ ಬರುವ ಸಂಕಲ್ಪ, ಹಾಗೂ ಆಸೆಗಳಿಂದ, ಆತನ ದೇಹದ ಹುಟ್ಟು ಸಾವುಗಳು ಉಂಟಾಗುವವು; ಆತನ ಸಂಕಲ್ಪ ಲಯವಾದೊಡನೆಯೇ, ದೇಹ ತೊರೆದು ಆತನು ಬ್ರಹ್ಮ ಚೈತನ್ಯದಲ್ಲಿ, ಕೈವಲ್ಯ ಸ್ವರೂಪದಲ್ಲಿ ಲೀನನಾಗುವನು. ಅದಕ್ಕಾಗಿ ಸತ್ಯ ಸ್ಥಿತಿಯಾದ ಪುರುಷೋತ್ತಮನನ್ನೇ ಚಿಂತಿಸುತ್ತಾ ವಿಶ್ವದ ಇತರ ವ್ಯಾಪಾರವನ್ನು ಉಪೇಕ್ಷೆಯಿಂದ ನೋಡಿದಾಗ ಅಂಥಾ ಸ್ಥಿತಿ ಸಿದ್ಧಿಸುವುದೆಂದೂ, ಆಶಾಪಾಶಾದಿಗಳು ಸ್ವೈಜನಾಗಿ ಲಯ ಹೊಂದುವವೆಂದೂ ಹಿಂದೂ ಸಿದ್ಧಾಂತ !

ಈ ತೆರನಾಗಿ ಹುಟ್ಟು ಸಾವುಗಳ ಬಂಧನದಿಂದ ಬಿಡುಗಡೆಯಾಗಿ ಆತನ ಮಹಾ ಚೈತನ್ಯದಲ್ಲಿ, ಮಹಾ ಪ್ರಜ್ಞೆಯಲ್ಲಿ ಒಂದಾಗುವುದನ್ನೇ ಹಿಂದುಗಳು ಮುಕ್ತಿ ಅಥವಾ ಮೋಕ್ಷವೆಂದು ಕರೆಯುತ್ತಾರೆ. ಓರ್ವ ಹಿಂದೂ ಆಶಿ

ಸುವ ಅತ್ಯುಚ್ಚ ಪದವಿಯೆಂದರೆ ಇದು! ಇದಕ್ಕಾಗಿ ಹಿಂದೂ ಧರ್ಮದಲ್ಲಿ ಜ್ಞಾನ ಯೋಗ, ರಾಜಯೋಗ, ಸಾಂಖ್ಯಯೋಗ, ಕರ್ಮಯೋಗ ಮತ್ತು ಭಕ್ತಿ ಯೋಗಗಳೆಂಬ ವಿವಿಧ ದಾರಿಗಳು ನಿರೂಪಿಸಲ್ಪಟ್ಟಿವೆ.

ಈಗ ಹಿಂದೂ ಧರ್ಮದಲ್ಲಿ ಉಲ್ಲೇಖಿತವಾಗುವ ಅನೇಕ ದೇವರುಗಳೆಂದ ರೇನು ನೋಡೋಣ.

ನಾನು ಮೇಲೆ ಹೇಳಿದ ಕ್ರಿಯಾಶಕ್ತಿಯನ್ನೇ ದೇವಿ, ಜಗನ್ಮಾತೆ ಅಥವಾ ಭಗವತಿ ಎಂದು ಹೆಣ್ಣು ರೂಪ ಕೊಟ್ಟು ಕರೆಯುತ್ತಾರೆ. ಮಾತ್ರವಲ್ಲ, ಆ ರೀತಿಯಲ್ಲಿ ಭಜಿಸುತ್ತಾರೆ. ಆರಾಧಿಸುತ್ತಾರೆ. ಈ ದೇವಿ ಅಂದರೆ ಕ್ರಿಯಾ ಶಕ್ತಿ ಮತ್ತು ಪುರುಷರ ಸಂಯೋಗದಿಂದಲೇ ಬ್ರಹ್ಮ, ವಿಷ್ಣು, ಮಹೇಶ್ವರರು ಉಂಟಾದರು ಎಂಬುದು ಹಿಂದುಗಳ ಪುರಾಣ ವಾಕ್ಯ. ಅಂದರೆ ಪರಮಾ ತ್ಮನ ಸೃಷ್ಟಿಸುವ ಕ್ರಿಯಾ ಶಕ್ತಿಯಂಶವನ್ನೇ ಬ್ರಹ್ಮನೆಂತಲೂ, ರಕ್ಷಿಸುವ ಕ್ರಿಯಾಶಕ್ತಿಯಂಶವನ್ನೇ ವಿಷ್ಣುವೆಂತಲೂ, ನಾಶಪಡಿಸುವ ಕ್ರಿಯಾಶಕ್ತಿಯಂಶ ವನ್ನೇ ಶಿವನೆಂತಲೂ ಕರೆಯುತ್ತಾರೆ. ಆದರೆ ಈ ದೇವರ ಅಂಶಕ್ಕೆ ಒಂದೊಂದು ರೂಪ ಕೊಡದಿದ್ದರೆ ಸಾಮಾನ್ಯ ಜನತೆಗೆ ಸರಿಯಾದ ಭಕ್ತಿವಿಶ್ವಾಸ ಬರುವುದಿಲ್ಲವೆಂಬುದಕ್ಕಾಗಿ ಆ ಮೂರು ಪರಮಾತ್ಮನ ಶಕ್ತಿಗಳಿಗೆ 3 ರೂಪ ವನ್ನು ಕೊಟ್ಟರು. ತ್ರಿಮೂರ್ತಿಗಳೆಂದು ಕರೆಯಲ್ಪಡುವ ಈ ಮೂರು ಶಕ್ತಿ ಗಳಲ್ಲೂ ಪುರುಷನ ಅಂಶವು ಪ್ರಧಾನವಾಗಿಯೂ, ಪ್ರಕೃತಿ ಎಂದರೆ ಕ್ರಿಯಾ ಶಕ್ತಿಯಂಶವು ಗೌಣವಾಗಿಯೂ ಇದ್ದೇ ಇರುವುದರಿಂದ ತ್ರಿಮೂರ್ತಿಗಳಲ್ಲಿ ಪ್ರತಿಯೊಬ್ಬನಿಗೂ ಒಂದೊಂದು ಪತ್ನಿಯನ್ನು ಕಲ್ಪಿಸಿ, ಆ ಕ್ರಿಯಾ ಶಕ್ತಿ ಯನ್ನು ಸಾಂಕೇತಿಕವಾಗಿ ಸೂಚಿಸಿದ್ದಾರೆ. ಅಷ್ಟೇ ಅಲ್ಲ, ತ್ರಿಮೂರ್ತಿ ಗಳ ಪತ್ನಿಯರೆಂದು ರೂಪಿಸಿದ್ದರಲ್ಲಿ ಇನ್ನೊಂದು ಸಾಂಕೇತಿಕ ಅರ್ಥವೂ ಇದೆ. ಸಕಲ ರೀತಿಯ ಸೃಷ್ಟಿಗೂ ವಿವಿಧ ಜ್ಞಾನ ಅಥವಾ ತಿಳುವಳಿಕೆಯೇ ಆಧಾರ ವಾದ್ದರಿಂದ ಬ್ರಹ್ಮನ ಪತ್ನಿಯನ್ನು ವಿದ್ಯೆಯ ಅಧಿದೇವತೆಯಾದ ವಾಣಿ ಎಂದರೆ ಸರಸ್ವತಿಯೆಂತಲೂ, ಜೀವನ ರಕ್ಷಣೆಯೆಂಬುದರಲ್ಲಿ ಅನ್ನವೇ ಮೊದ ಲಾದ ಸಕಲ ಸಾಧನ ಸಾಮಗ್ರಿಯೇ ಮುಖ್ಯವಾದ್ದರಿಂದ ವಿಷ್ಣುವಿನ ಪತ್ನಿ ಯನ್ನು ಧನ ಅಂದರೆ ಸಾಧನ ಸಂಪತ್ತಿಯ ಅಧಿದೇವತೆಯಾದ ಲಕ್ಷ್ಮಿಯೆಂತ ಲೂ, ಪ್ರಾಣಿಗಳ ಮೃತ್ಯು ಅಥವಾ ಲಯವೆಂಬುದರಲ್ಲಿ ದುಷ್ಟರಿಗೆ ಶಿಕ್ಷೆ ಕೊಡು ವುದು ಎಂಬಂಶ ಮುಖ್ಯವಾದ್ದರಿಂದ ಶಿವನ ಪತ್ನಿಯ ದುಷ್ಟ ಶಿಕ್ಷಣದ ಅಧಿ

ದೇವತೆಯೂ, ದೇವಿಯ ಅಂಶೀಭೂತಳೂ ಆದ ಪಾರ್ವತಿಯೆಂತಲೂ ನಾಮವನ್ನಿಟ್ಟಿದ್ದಾರೆ. ಇದೇ ರೀತಿ, ಭಕ್ತರ ಕಷ್ಟಗಳನ್ನು ಮುಂದಾಗಿ ಕಂಡು, ಪರಿಹರಿಸುವ ಪರಮಾತ್ಮನ ಶಕ್ತಿಯನ್ನು ಅಥವಾ ಸ್ವಭಾವವನ್ನು ಗಣಪತಿಯೆಂತಲೂ, ಯುದ್ಧದಲ್ಲಿ ಸೇನಾಪತ್ಯ ವಹಿಸುವ ಶಕ್ತಿಯನ್ನು ಸುಬ್ರಹ್ಮಣ್ಯನೆಂತಲೂ ಸಾಂಕೇತಿಕವಾಗಿ ಕರೆಯುತ್ತಾರೆ.

ಅಲ್ಲದೆ, ಹಿಂದು ಸಿದ್ಧಾಂತ ಪ್ರಕಾರ ಅಣುರೇಣು ತೃಣಕಾಷ್ಠದಲ್ಲಿಯೂ ಪರಮಾತ್ಮನು ಸಂಚರಿಸುತ್ತಿದ್ದಾನೆ ಎಂಬುದರಿಂದಾಗಿ, ಯಾವುದಾದರೊಂದು ವೈಶಿಷ್ಟ್ಯವನ್ನು ಸ್ಥಾಪಿಸಿದ ವ್ಯಕ್ತಿ, ಅಥವಾ ಪ್ರಾಣಿ, ಅಥವಾ ಸಸ್ಯಗಳಲ್ಲೂ, ಅದೇ ದೈವತ್ವವನ್ನು ಆರೋಪಿಸಿ ಅವರು ಪೂಜಿಸುತ್ತಾರೆ. ಉದಾಹರಣೆಗೆ ತುಳಸಿ, ಗೋವು, ಕಲ್ಪವೃಕ್ಷ, ಅಶ್ವತ್ಥಮರ, ಇತ್ಯಾದಿ. ಆದರೆ ಅವರ ಮಂತ್ರಾದಿಗಳಿಂದ ತಿಳಿಯುವಂತೆ ಎಲ್ಲವೂ ಏಕಮೇವಾದ್ವಿತೀಯನಾದ ಆ ಬ್ರಹ್ಮನಿಗೇ ಅಂತಿಮವಾಗಿ ಸಮರ್ಪಿತವಾಗುವುದು. ಅಂದರೆ, ಭಿನ್ನತೆಯಲ್ಲೇ ಅವರೊಂದು ಐಕ್ಯತೆಯನ್ನು ಕಾಣುತ್ತಾರೆ.

ಆದ್ದರಿಂದ ಸಿಲ್ವರ್, ಈ ಮೂಲ ತಿರುಳನ್ನು ತಿಳಿಕೊಳ್ಳದೆ, ಹಿಂದುಗಳಿಗೆ ನೂರಾರು ದೇವರುಗಳಿವೆ ಎಂದು ಆರೋಪಿಸುವುದು ಶುದ್ಧ ತಪ್ಪಲ್ಲವೇ? ನೋಡು, ನಾವು ಕ್ರೈಸ್ತರಾದರೂ, ಯೇಸುವನ್ನೂ, ಮೇರಿಯನ್ನೂ ಅಥವಾ ವಿವಿಧ ಸಂತರನ್ನೂ ಪೂಜಿಸುವುದಿಲ್ಲವೇ? ಅವರೆಲ್ಲರೂ ಪರಮಾತ್ಮನ ಶಕ್ತಿಯ ಒಂದೊಂದು ಅಂಶವನ್ನು ಹಿಂದುಗಳು ಆ ರೀತಿ ಭಿನ್ನ ರೂಪದಿಂದ, ಭಿನ್ನ ಗುಣಗಳನ್ನು ಆರೋಪಿಸಿ ಪೂಜಿಸುತ್ತಾರೆ, ಅಷ್ಟೆ !

ಪರಮಾತ್ಮನು ದುಷ್ಟರ ಸಂಹಾರಕ್ಕಾಗಿಯೂ, ಸಾಧು ಸಜ್ಜನರ ರಕ್ಷಣೆಗಾಗಿಯೂ ಆಗಾಗ ವಿವಿಧ ರೂಪದಿಂದ ಜನ್ಮ ತಾಳಿ ಬರುತ್ತಾನೆ, ಎಂಬುದು ಹಿಂದೂ ಸಿದ್ಧಾಂತ. ವಿಷ್ಣುವು ಆ ರೀತಿ 10 ವಿಧವಾಗಿ ಜನ್ಮತಾಳಿ ಬಂದನೆಂದು ಅವರ ಪುರಾಣ ಸಾರಿ ಹೇಳುತ್ತಿದೆ. ಆ ಪೈಕಿ ಶ್ರೀ ರಾಮ, ಶ್ರೀ ಕೃಷ್ಣ ಮತ್ತು ಬುದ್ಧ ಇವರು ಪ್ರಧಾನ ಅವತಾರಗಳು. ಅವರ ದೃಷ್ಟಿಯಿಂದ ಏಸು ಕ್ರಿಸ್ತನೂ ಪರಮಾತ್ಮನ ಒಂದು ಅವತಾರ. ಭಗವಾನ್ ಶಂಕರಾಚಾರ್ಯ ಮತ್ತು ಶ್ರೀ ರಾಮಕೃಷ್ಣ ಪರಮಹಂಸರೂ ಒಂದೊಂದು ಅವತಾರಗಳು.

ಸರ್ವ ಶಕ್ತನಾದ ಪರಮಾತ್ಮನು ಏಕೆ ಮಾನವ ರೂಪದಿಂದ ಬರಬಾರದು ಸಿಲ್ವರ್? ನನಗದು ಬಹಳ ಸೂಕ್ತವಾಗಿ ತೋರುತ್ತದೆ.

ನಮ್ಮ ಬೈಬಲಿನಲ್ಲಿ ಪರಮಾತ್ಮ, ಸೃಷ್ಟಿ ಮತ್ತು ಮಾನವ ಇವರ ಕುರಿತಾಗಿ ಹೇಳುವ ಸಿದ್ಧಾಂತ ಮತ್ತು ಆ ವಿಚಾರದಲ್ಲಿ ನಮ್ಮ ಪಾದರಿಗಳು ಹೇಳುವ ಸಿದ್ಧಾಂತ ಇವುಗಳು ನನಗೇಕೋ ವೈಜ್ಞಾನಿಕವಾಗಿ ತೋರುತ್ತಿಲ್ಲ, ಸಿಲ್ವರ್. ಅದರ ಮೂಲ ಶೋಧನೆ ಮಾಡುವ ಬದಲು, ನಮ್ಮ ಪಾದರಿಗಳು ಹಿಂದಿನ ಬೈಬಲ್ಲಿನ ಶಾಬ್ದಿಕ ಅರ್ಥವನ್ನು ಸಾರಲು ಮತ್ತು ಆ ಬೈಬಲ್ ವಾಕ್ಯಗಳಿಗೆ ಅವರಿಗೆ ಬೇಕಾದ ಅರ್ಥ ಕಟ್ಟಲು ಯತ್ನಿಸುತ್ತಾರೆ, ಸಿಲ್ವರ್! ಏನನ್ನಬೇಕು ಇದಕ್ಕೆ. ಆದರೆ ಮಹಾತ್ಮ ಏಸುಕ್ರಿಸ್ತರು ಪರಮಾತ್ಮ ಸೃಷ್ಟಿ ಮತ್ತು ಮನುಷ್ಯ ಇವರ ಕುರಿತಾಗಿ ವೈಜ್ಞಾನಿಕ ಸಿದ್ಧಾಂತವೇನನ್ನೂ ಹೇಳದಿದ್ದರೂ, ಮಾನವನ ಸಾಧನೆಯ ಕುರಿತು ಎಷ್ಟು ಚಂದವಾಗಿ ಹೇಳಿಲ್ಲ! ಸಿಲ್ವರ್! ಅಹಂಭಾವ ಬಿಟ್ಟು ಸದಾಚಾರಿಯಾಗಿ, ಭಕ್ತನಾಗಿ ಆತ್ಮ ಸಮರ್ಪಣ ಮಾಡಿ ಆತನ ರಾಜ್ಯಕ್ಕೆ ಹೋಗಬೇಕೆಂದು ಎಷ್ಟು ಸುಂದರವಾಗಿ ನಿರೂಪಿಸಿದ್ದಾರೆ! ಸಾರಿದ್ದಾರೆ! ಆದರೆ, ಅವರು ದೇವರ ರಾಜ್ಯವೆಂದು ಹೇಳಿದ್ದು ಅಂತರಂಗದ ಮೋಕ್ಷದ ಸ್ಥಿತಿಯನ್ನು! ದೇವರ ರಾಜ್ಯವು ನಿಮ್ಮೊಳಗೆಯೇ ಇದೆ (Kingdom of God is within you) ಎಂಬುದಾಗಿ ಸ್ಪಷ್ಟ ಹೇಳಿದ್ದಾರೆ. ಆದರೆ ನಮ್ಮ ಪಾದರಿಗಳು ಎಷ್ಟು ಕಲಿತವರಾದರೂ, ಅದರ ಗೂಢಾರ್ಥ ವಿಚಾರಿಸುವುದಕ್ಕೇ ಹೋಗದೆ, ಆದರ ಶಾಬ್ದಿಕ ಅರ್ಥ ಮಾತ್ರ ಕಟ್ಟಿಕೊಳ್ಳುತ್ತಾರೆ.

ಮಹಾತ್ಮಾ ಏಸುಕ್ರಿಸ್ತರು ಹೆಚ್ಚು ವಿದ್ಯಾವಂತರಲ್ಲ. ಅವರ ಊರಾದ ಪೆಲೆಸ್ತೈನ್ ಕೂಡಾ ವಿದ್ಯಾವಂತರ ಊರಾಗಿರಲಿಲ್ಲ. ಅದ್ದರಿಂದ ಓಲ್ಡ್ ಟೆಸ್ಟಮೆಂಟಿನಲ್ಲಿರುವ ಪರಮಾತ್ಮ, ಸೃಷ್ಟಿ, ಮತ್ತು ಮಾನವರಿಗೆ ಸಂಬಂಧಿಸಿದ ಕೆಲವೊಂದು ವಿಚಾರಗಳಿಗೆ ಸಂಬಂಧಪಟ್ಟ ಯಾವ ವಿಷಯಗಳಿಗೂ ಕೈಯಿಕ್ಕದೆ, ಸಾಧನೆಯ ದಾರಿಯನ್ನು ಬೇರೆ ಬೇರೆ ಬದಿಗಳಿಂದ ಅವರು ಸ್ವಾರಸ್ಯವಾಗಿ ಮನ ಮುಟ್ಟುವಂತೆ ಹೇಳಿದರು. ಅದ್ಭುತವಾದ ಜೀವನ ಸಾಗಿಸಿ, ಮಾನವ ಜನಾಂಗಕ್ಕಾಗಿ ಪ್ರಾಣಾರ್ಪಣೆ ಮಾಡಿದರು! ಎಂಥ ತ್ಯಾಗ ಅದು! ಆದರೆ ತಾನು ಹೇಳಿದ್ದು ಮಾತ್ರವೇ ಸತ್ಯವೆಂದೂ ಪ್ರಪಂಚದಲ್ಲಿ ಇನ್ನೆಲ್ಲಿಯೂ ಯಾರೂ ಹೇಳಿದ್ದು ಸತ್ಯವಲ್ಲವೆಂದೂ, ದೇವರ ರಾಜ್ಯಕ್ಕೆ ಹೋಗಬೇಕಿದ್ದರೆ ತನ್ನನ್ನು ನಂಬುವುದೊಂದೇ ದಾರಿಯೆಂದೂ ಅವರೆಲ್ಲಿಯೂ ಹೇಳಿದಂತೆ ನನಗೆ ನೆನಪಿಲ್ಲ. ಮಹಾನುಭಾವ ಏಸುಕ್ರಿಸ್ತರಿಗೆ ಆಗ ತಿಳಿದಿದ್ದ, ಮತ್ತು ತಿಳಿಯು

ಬಹುವಾಗಿದ್ದ ಪ್ರಪಂಚ ಸಣ್ಣದಾಗಿತ್ತು. ಆ ಪ್ರಪಂಚದ ನಾಸ್ತಿಕರನ್ನೂ, ಕಪಟಿಗಳನ್ನೂ, ವಂಚಕರನ್ನೂ ಅವರು ಖಂಡಿಸಿದ್ದಾರೆ ನಿಜ. ಆದರೆ ಹೊರಗಿನ ದೇಶಗಳಲ್ಲಿ ಏನು ನಡೆಯುತ್ತಿತ್ತೆಂಬುದು ಅವರಿಗೆ ತಿಳಿದಿರಲೇ ಇಲ್ಲ. ತಿಳಿಯಲು ಸಾಧ್ಯವೂ ಇರಲಿಲ್ಲ. ಆದ್ದರಿಂದ ಹೊರಗಿನವರ ವಿಚಾರ ಅವರು ಎತ್ತಿ ಹೇಳಲೇ ಇಲ್ಲ. ನಾನು ಹೇಳಿದ ದಾರಿಯಲ್ಲಿ ಹೋಗಿರಿ ಎಂದು ಅವರ ನಾಡಿನ ಕಪಟಿಗಳಿಗೆ ಅವರು ಹೇಳಿದ ಮಾತು. ಆದರೆ ನಮ್ಮೂರಿನ ಪಾದರಿಗಳು "ದೇವರ ರಾಜ್ಯಕ್ಕೆ ಹೋಗಬೇಕಿದ್ದರೆ ಏಸುಕ್ರಿಸ್ತರನ್ನು ಮಾತ್ರವೇ ನಂಬಬೇಕು" ಎಂಬ ಬೈಬಲಿನ ಆಧಾರ ಮತ್ತು ಮಹಾತ್ಮಾ ಏಸುಕ್ರಿಸ್ತರ ಮಾತಿನ ಆಧಾರ ತೆಗೆದುಕೊಂಡು ಪ್ರಚಾರ ಮಾಡುತ್ತಾರೆ.

ಭಕ್ತರೂ, ಜ್ಞಾನಿಗಳೂ, ಯಾರೇ ಆದಗೂ ಹೇಳುವ ಪ್ರಾಮುಖ್ಯ ದಾರಿಯೆಲ್ಲವೂ ಒಂದೇ. ಹಿಂದೂ ಧರ್ಮದಲ್ಲಿ ಯಾವ ಭಕ್ತಿಯೋಗವಿದೆಯೋ ಅದನ್ನೇ ಮಹಾತ್ಮಾ ಏಸುಕ್ರಿಸ್ತರು ಹೇಳಿದ್ದಾರೆ.

ಆದರೆ, ನಮ್ಮ ಪಾದರಿಗಳ ದೃಷ್ಟಿಯಲ್ಲಿ ಒಬ್ಬ ಹಿಂದೂ, ಮುಸಲ್ಮಾನ ಅಥವಾ ಬೌದ್ಧನಾಗಿ ಅಥವಾ ಇತರ ಮತಾವಲಂಬಿಯಾಗಿ, ದೇವರ ರಾಜ್ಯ ಅಂದರೆ ಮುಕ್ತಿಯನ್ನೇರಲು ಸಾಧ್ಯವೇ ಇಲ್ಲ. ಅಂದರೆ ಏಸುಕ್ರಿಸ್ತರ ಮೂಲಕ ಮಾತ್ರವೇ ದೇವರ ಕೂಡೆ ಮಾನವನಿಗೆ ಸಂಪರ್ಕ. ಅವರ ದೃಷ್ಟಿಯಲ್ಲಿ ಮಹಾತ್ಮಾ ಏಸುಕ್ರಿಸ್ತರು ಮಾತ್ರವೇ ಮಾನವನನ್ನು ದೇವರ ರಾಜ್ಯಕ್ಕೆ ಕೊಂಡೊಯ್ಯಲು ಸಮರ್ಥರು. ಏನೆನ್ನಬೇಕು ಇಂಥಾ ಅಭಿಪ್ರಾಯಕ್ಕೆ? ಇಂಥ ತಪ್ಪು ಕಲ್ಪನೆಗಳಿಂದ ಕ್ರೈಸ್ತ ಪಾದರಿಗಳು ಮಹಾತ್ಮ ಏಸುಕ್ರಿಸ್ತರ ದಿವ್ಯ ಕೀರ್ತಿಗೆ ಕಳಂಕ ತರುತ್ತಿದ್ದಾರೆ ಎಂಬುದಾಗಿ ನನಗನಿಸುತ್ತಿದೆ. ಏಸು ಕ್ರಿಸ್ತರ ಮೊದಲು ಪ್ರಪಂಚವು ಮಿಲಿಯಗಟ್ಟಲೆ ವರ್ಷ ಅಸ್ತಿತ್ವದಲ್ಲಿ ಇತ್ತು. ಹಾಗಿದ್ದರೆ, ಆಗ ಮಾನವನಿಗೆ ದೇವರನ್ನು ಪಡೆಯುವ ಹಕ್ಕೇ ಇರಲಿಲ್ಲವೇ? ಇದು ಅತಿರೇಕ, ಸಿಲ್ಲಿನೆಸ್! ಮಹಾತ್ಮ ಏಸುಕ್ರಿಸ್ತರು ಮಹಾನುಭಾವರೆಂಬುದು ಸ್ಪಷ್ಟ! ಅವರೂ ಪರಮಾತ್ಮನ ಒಂದು ಅವತಾರವೆಂಬುದು ಸ್ಪಷ್ಟ! ಹಾಗೆಯೇ ಇತರ ಅವತಾರಗಳನ್ನೂ ನಾವು ಮನ್ನಿಸಬೇಕು. ವ್ಯಕ್ತಿಗತ ತಳಹದಿಯಲ್ಲಿರುವ ಕ್ರೈಸ್ತ ಮತವು, ಹಿಂದೂ ಧರ್ಮದಂತೆ ಒಂದು ತಾತ್ವಿಕ ತಳಹದಿಗೆ ಬರುವಂತೆ ಮಾಡಬೇಕು. ಹಿಂದೂ ಧರ್ಮದಲ್ಲಿ ಯಾವನೇ ಒಬ್ಬ ವ್ಯಕ್ತಿಯೂ, ಆ ಧರ್ಮ

ವನ್ನು ರೂಪಿಸಿದ್ದೆಂದು ಹೇಳುವುದಿಲ್ಲ. ದೈವ ಪ್ರೇರಣೆಯಿಂದ ಹಿಂದೂ ಧರ್ಮದ ಉದಯವಾಯಿತು. ಅದೇ ದೈವ ಪ್ರೇರಣೆಯಿಂದಲೇ ಕ್ರೈಸ್ತ ಮತದ ಉದಯವಾಯಿತು.

ಅಮೇರಿಕದಲ್ಲಿ ಇಂದು ಅನೇಕರು, ಭೌತಿಕವಾದಿಗಳಾಗಲು ಕ್ರೈಸ್ತ ಪಾದರಿಗಳು, ವೈಜ್ಞಾನಿಕ ಹಾಗೂ ತರ್ಕಬದ್ಧ ದಾರಿಯಲ್ಲಿ ಮುಂದರಿಯ ದಿರುವುದೇ ಕಾರಣವೆಂದು ನನ್ನ ಅಭಿಪ್ರಾಯ! ಆದರೆ ಎಷ್ಟು ಜನ ಕ್ರೈಸ್ತ ರಿಂದು, ಅಮೇರಿಕದಲ್ಲಿ ಹಿಂದೂ ಧರ್ಮವನ್ನು ಮೆಚ್ಚುತ್ತಿಲ್ಲ! ಅದಕ್ಕೆ ಆ ತತ್ವದ ತಿರುಳು ಹಾಗೂ ಅದನ್ನು ನಿರೂಪಣೆ ಮಾಡುವ ಮತ್ತು ಈಗಿನ ಕಾಲ ಕ್ಕನುಸಾರವಾಗಿ ಅದನ್ನು ಹೊಂದಿಸಿಕೊಳ್ಳುವ ಕ್ರಮವೇ ಕಾರಣ.

ಆದರೆ ಸಿಲ್ವರ್, ಈ ಕುರುಡು ವಿಶ್ವಾಸದ ಹುಚ್ಚು ನಮ್ಮ ಕ್ರೈಸ್ತ ಜನಾಂಗಕ್ಕೆ ಮಾತ್ರ ತಾಗಿದ್ದಲ್ಲ. ಹಿಂದೂಗಳಲ್ಲಿಕೂಡಾ ಇದು ಇದ್ದೇ ಇದೆ. ಅವರೂ ಹಿಂದೂ ಧರ್ಮದ ನಿಜವಾದ ಸಾರ, ತಿರುಳನ್ನು ತಿಳಿಯುವ ಬದಲು, ಅದರ ಬರಿಯ ತೊಗಲನ್ನು ಹಿಡಿದುಕೊಂಡು ಪರಸ್ಪರ ಜಗಳಾಡುತ್ತಿದ್ದಾರೆ. ಅದಲ್ಲನಾಗಿದ್ದರೆ, ಹಿಂದೂ ಧರ್ಮವಿಂದು ಜಗತ್ತಿನಾದ್ಯಂತ ಜಯಭೇರಿ ಹೊಡೆಯುತ್ತಿತ್ತು.

ಇಂದೀಗ ನೋಡು. ಹಿಂದೂ ಜನಾಂಗವು ನಗೆಗೀಡಾದ ಒಂದು ವಿಷ ಯ, ಈ ಜನಾಂಗದಲ್ಲಿರುವ ಜಾತಿಭೇದ. ಈ ಜಾತಿಭೇದದ ಮೂಲ ವರ್ಣಾ ಶ್ರಮ ವಿಭಾಗ. ವರ್ಣಾಶ್ರಮವೆಂದರೆ ಮೊದಲಲ್ಲಿ ಒಂದು ರೀತಿಯ ಶ್ರಮ ವಿಭಾಗ (Division of Labour) ವಾಗಿತ್ತಂತೆ. ಪಾರಮಾರ್ಥಿಕ ಸಾಧನೆ ಮತ್ತು ಬೌದ್ಧಿಕ ಬೆಳವಣಿಗೆ ಮಾಡುವವರೆಲ್ಲರೂ ಬ್ರಾಹ್ಮಣರೆಂತಲೂ, ದೇಶದ ರಕ್ಷಣೆಯ ಭಾರ ಹೊತ್ತವರು ಕ್ಷತ್ರಿಯರೆಂತಲೂ, ದೇಶದ ಕೃಷಿ, ವಾಣಿಜ್ಯೋದ್ಯಮಗಳ ಭಾರ ಹೊತ್ತವರು ವೈಶ್ಯರೆಂತಲೂ, ಬರಿಯ ಕೂಲಿ ಗಾರರು ಶೂದ್ರರೆಂತಲೂ ವಿಂಗಡಿಸಲ್ಪಟ್ಟಿದ್ದರು. ಆಯಾಯ ವಿಭಾಗವನ್ನು ವಹಿಸಿಕೊಂಡವರು ಆಯಾ ವಿಭಾಗವನ್ನು ಶ್ರದ್ಧೆಯಿಂದ ಪೂರೈಸಬೇಕೆಂದು ನಿಯಮವಾಗಿತ್ತು. ಆದರೆ, ಭಾರತದ ಪ್ರಾಚೀನ ಚರಿತ್ರೆಯ ಸಂಶೋಧನೆ ಮಾಡಿದಾಗ ಈ ನಾಲ್ಕು ವರ್ಣದ ಜನರೊಳಗೆ ಯಾವುದೇ ಭೇದ ಬುದ್ಧಿ, ತಿರಸ್ಕಾರ, ಮೇಲುಕೀಳೆಂಬ ಭಾವನೆ ಇದ್ದಂತೆ ತೋರಿಬರುವುದಿಲ್ಲ— ಮಾತ್ರ ವಲ್ಲ, ಈ ವರ್ಣವಿಭಾಗವು ಪರಂಪರಾಗತವೂ ಆಗಿರಲಿಲ್ಲ, ಎಂಬುದಕ್ಕೂ

ಆಧಾರವಿದೆ. ಬ್ರಾಹ್ಮಣನ ಮಗ, ಕ್ಷತ್ರಿಯನಾಗಬಹುದಿತ್ತು; ಶೂದ್ರನ ಮಗ ಬ್ರಾಹ್ಮಣನಾಗಬಹುದಿತ್ತು; ಅಥವಾ ಯಾವ ವರ್ಣದವನ ಮಗನು ಯಾವುದೇ ವರ್ಣಕ್ಕೆ ದಾಟಬಹುದಿತ್ತು. ಆದರೆ ಬ್ರಾಹ್ಮಣರು ಬ್ರಹ್ಮತೇಜಸ್ಸುಳ್ಳವರೆಂಬ ಕಾರಣದಿಂದ ಅವರನ್ನು ಎಲ್ಲರೂ ಪೂಜ್ಯಭಾವದಿಂದ ನೋಡುತ್ತಿದ್ದರು-ಕ್ಷತ್ರಿಯರು ಅಧಿಕಾರವುಳ್ಳವರಾದ್ದರಿಂದ ಭಯ, ಭೀತಿಗಳಿಂದ ನೋಡಲ್ಪಡುತ್ತಿದ್ದರು.

ಕಾಲಕ್ರಮೇಣ ಬ್ರಾಹ್ಮಣರು ತಮ್ಮ ಮಕ್ಕಳೂ ಬ್ರಾಹ್ಮಣರೇ ಆಗಿದ್ದು, ಆ ಸ್ಥಾನವನ್ನು ಉಳಿಸಿಕೊಳ್ಳಬಾರದೇಕೆ? ಎಂತಲೂ, ಕ್ಷತ್ರಿಯರು, ತಮ್ಮ ಪುತ್ರರೂ ಅದೇ ಅಧಿಕಾರಕ್ಕೆ ಹಕ್ಕುದಾರರಾಗಿ ಏಕೆ ಬರಬಾರದೆಂತಲೂ, ಯೋಚಿಸತೊಡಗಿದರು. ಆ ಎರಡೂ ಪಂಗಡಗಳೂ ತಮ್ಮ ಸ್ಥಾನ ಕಾಯ್ದುಕೊಂಡು ಇತರ ವರ್ಣಗಳಿಂದ ತಮ್ಮ ವರ್ಣಕ್ಕೆ ಆಗುವ ವರ್ಗಾವಣೆಯನ್ನು ಪ್ರೋತ್ಸಾಹಿಸದೆ ಇರತೊಡಗಿದರು.

ಕಡೆಗೆ ಎಲ್ಲರೂ ಪರಸ್ಪರ ಬೆರೆತಾಗ, ಎಲ್ಲರ ಕೀಳು ಮನೋಭಾವವು ತಮಗೂ ತಾಗುವುದೆಂದು, ಮೇಲಿನ ಎರಡೂ ವರ್ಣಗಳವರೂ, ಇತರ ವರ್ಣಗಳೊಂದಿಗೆ ತಮ್ಮ ಸಂಪರ್ಕ ಕಡಿಮೆಮಾಡಿದರು. ಆದರೂ, ಪರಸ್ಪರ ಪ್ರೇಮ ಸಹಾನುಭೂತಿಗಳಿದ್ದುವು.

ಅನೇಕ ಸಾವಿರ ವರ್ಷಗಳ ನಂತರ, ಬ್ರಾಹ್ಮಣನು ನೀತಿ, ಆಚಾರಗಳನ್ನು ಬಿಟ್ಟು ಬಿಟ್ಟು, ಬ್ರಾಹ್ಮಣ ಕುಲದಲ್ಲಿ ಹುಟ್ಟಿದವನೆಂಬಷ್ಟೇ ಕಾರಣಕ್ಕಾಗಿ, ಬ್ರಾಹ್ಮಣ್ಯದ ಸ್ಥಾನಮಾನ, ಅಪೇಕ್ಷಿಸತೊಡಗಿದನು. ಕ್ಷತ್ರಿಯನು ವಿಲಾಸಿಯೂ, ಭೋಗಿಯೂ ಆಗಿದ್ದು, ದೇಶದ ರಕ್ಷಣೆಗಾಗಿ ದುಡಿಯದಿದ್ದರೂ, ತಾನು ಕ್ಷತ್ರಿಯ ಕುಲದವನೆಂಬಷ್ಟೇ ಕಾರಣಕ್ಕಾಗಿ, ಇತರ ಮೂರು ವರ್ಣಗಳವರು ತನಗೆ ಮಣಿಯಬೇಕೆಂಬ ಮನೋಭಾವ ತಾಳತೊಡಗಿದನು. ಆದರೆ ಗೌರವ ಪಡೆಯುವ ಯೋಗ್ಯತೆ ಇಲ್ಲದಿದ್ದ ಆ ಎರಡೂ ವರ್ಣಗಳವರೂ, ಗೌರವ ನಿರೀಕ್ಷಣೆ ಮಾಡುವಾಗ, ಸಂಪತ್ತಿರುವ ನಾನೂ ಏಕೆ ಗೌರವ ಪಡೆಯಬಾರದೆಂದು, ವೈಶ್ಯ ವರ್ಣದವನೂ ಭಾವಿಸತೊಡಗಿದನು.

ಕಾಲಾನುಭಾಗದಲ್ಲಿ, ಒಂದು ವರ್ಣದವರನ್ನುಕೆಳಹಾಕಲು, ಇನ್ನೊಂದು ವರ್ಣದವರು, ಅನುಕ್ರಮವಾಗಿ ಯತ್ನಿಸಿದರು. ಈ ಪ್ರಯತ್ನಗಳೆಡೆಯಲ್ಲಿ

ಎಲ್ಲರೂ, ತಮಗೆ ನಿಯೋಜಿತವಾದ ಕಾರ್ಯಮಾಡುವುದನ್ನು ಬಿಟ್ಟು ಇನ್ನೇನೋ ಮಾಡಲು ಯತ್ನಿಸಿದರು. ಇದರ ಪರಿಣಾಮವಾಗಿ ನಾಲ್ಕೂ ವರ್ಣ ಒಡೆದು, ನಾನ್ನೂರು ಜಾತಿಗಳು ಜನಿಸಿದುವು. ಈ ಎಲ್ಲಾ ಭೇದಗಳೆಡೆಯಲ್ಲಿಯೂ ಬ್ರಾಹ್ಮಣರು, ಬ್ರಾಹ್ಮಣೇತರರು ಎಂಬ ಒಂದು ಮುಖ್ಯ ಭೇದ, ಎದ್ದು ಕಾಣತೊಡಗಿತು. ಬ್ರಾಹ್ಮಣೇತರರು ಸಹಜವಾಗಿ ಬಹುಸಂಖ್ಯಾಕರಾದ್ದರಿಂದ, ಮೇಧಾಶಕ್ತಿಯಲ್ಲಿ ಹಿರಿಯರಾದರೂ, ಸಂಖ್ಯೆಯಲ್ಲಿ ಕಿರಿಯರಾದ ಬ್ರಾಹ್ಮಣರನ್ನು ಮೂಲೆಗೆ ತಳ್ಳಲು ರಾಜಕೀಯವಾಗಿ ಯತ್ನಿಸತೊಡಗಿದರು. ಬ್ರಾಹ್ಮಣರು ಹಿಂದೆ ತಮಗೆ ಮಾಡಿದ ಅನ್ಯಾಯಕ್ಕಾಗಿ ತಾವು ಹೀಗೆ ಮಾಡುತ್ತಿದ್ದೇವೆ ಎಂದು ಬ್ರಾಹ್ಮಣೇತರರು ಹೇಳುತ್ತಿದ್ದಾರೆ. ಅಂತೂ, ಇಂದು ಹಿಂದೂ ಧರ್ಮದ ಈ ಜಾತಿ ಭೇದವು, ಆ ಜನಾಂಗವನ್ನು ಸಹಸ್ರ ಹೋಳಾಗಿ ಮಾಡಿ, ಅತಿ ಬಲಹೀನವಾದ ಒಂದು ಜನಾಂಗವನ್ನಾಗಿ ಮಾಡಿದೆ, ಎಂದು ಸ್ಪಷ್ಟವಾಗಿ ಹೇಳಬಹುದು.

ಮಾತ್ರವಲ್ಲ, ಸಿಲ್ವರ್, ಪ್ರಾರಂಭದಲ್ಲಿ, ವೇದ, ಧರ್ಮಶಾಸ್ತ್ರ, ಉಪನಿಷತ್ತು, ಬ್ರಹ್ಮಸೂತ್ರ ಇತ್ಯಾದಿಗಳನ್ನು ಓದುವ, ಅರ್ಥಮಾಡುವ ಅಧಿಕಾರ ಹಾಗೂ ಶಾಸ್ತ್ರೋಕ್ತವಾದ ಜಪತಪಾದಿಗಳನ್ನು ಮಾಡುವ ಅಧಿಕಾರವು ಬ್ರಾಹ್ಮಣರಿಗೆ ಮಾತ್ರ ಎಂದಿದ್ದುದರ ಪರಿಣಾಮವಾಗಿ, ಇಂದು ಬಹು ಸಂಖ್ಯಾಕರಾದ ಬ್ರಾಹ್ಮಣೇತರರ ಪಾಲಿಗೆ ದೇವರೇ ಇಲ್ಲವಾಗಿದೆ. ಅವರು ಶಾಸ್ತ್ರ ವಿರುದ್ಧವಾಗಿ ಕದ್ದು ಸಾಧನೆ ಮಾಡಬೇಕಷ್ಟೆ! ಪರಿಣಾಮವಾಗಿ ಅವರೂ, ಅವರೊಂದಿಗೆ ಬಹು ಸಂಖ್ಯಾಕ ಬ್ರಾಹ್ಮಣರೂ, ತಮ್ಮ ಪರಂಪರೆ, ತಮ್ಮ ಅಪೂರ್ವ ಹಿಂದೂ ಧರ್ಮ ಇವುಗಳನ್ನು ಮರೆತು, ಪೂರ್ಣ ಭೌತಿಕವಾದಿಗಳಾಗಿ ಬರತೊಡಗಿದ್ದಾರೆ. ಅವರ ಪಾಲಿಗೆ ದೇವರೇ ಇಲ್ಲ. ದೇವರ ಭಕ್ತಿಯೆಂದರೂ ಅವರಿಗೆ ಕಲಿಸಿಕೊಡುವವರಾರು?

ದೇವರಲ್ಲಿ ಭಕ್ತಿ, ವಿಶ್ವಾಸವಿಟ್ಟವರು ಎಂದೆನಿಸಿಕೊಳ್ಳುವವರಲ್ಲೂ ಹೆಚ್ಚಿನವರಲ್ಲಿ, ಸಿಲ್ವರ್, ದುಃಖದ ಮಾತೆಂದರೆ, ಹಿಂದೂ ಧರ್ಮದ ಕುರಿತಾದ ನಿಜವಾದ ತಿಳುವಳಿಕೆಯಿಲ್ಲ. ಅದರ ವೈಜ್ಞಾನಿಕ ಸಿದ್ಧಾಂತ ಅವರಿಗೆ ಕಲಿಸಿಕೊಟ್ಟವರಿಲ್ಲ. ಅವರಲ್ಲೂ ಅನೇಕ ಪಂಗಡಗಳಿವೆ. ನೋಡು, ದ್ವೈತಿಗಳು, ಅದ್ವೈತಿಗಳು, ವಿಶಿಷ್ಟಾದ್ವೈತಿಗಳು ಎಂಬ ಮೂರು ಪ್ರಭೇದವಿದೆ.

ದ್ವೈತಿಗಳು, ಪರಮಾತ್ಮನೇ ಸ್ವಾಮಿ, ಜೀವಾತ್ಮನೇ ದಾಸ ಎಂಬ

ಭಕ್ತಿ ಪಂಥವನ್ನು ಅನುಸರಿಸುತ್ತಾರೆ. ಜೀವಾತ್ಮನು ಎಂದೆಂದೂ ಪರಮಾತ್ಮನ ಅಂಕೆಯೊಳಗೆ ದಾಸನಾಗಿಯೇ ಇರಬೇಕೆಂದೂ ಅವರ ಸಿದ್ಧಾಂತ. ಆದರೆ ಆತನ ಭಕ್ತಿಯಿಂದ ಜೀವನ ಪಾವನವಾಗಿಸಬೇಕೆಂಬುದಾಗಿ ಅವರನ್ನುತ್ತಾರೆ. ನಾವು ಹಿಂದೆಯೇ ತಿಳಿದಂತೆ ಇದು ಕ್ರೈಸ್ತ, ಇಸ್ಲಾಂ ಮೊದಲಾದ ಧರ್ಮಗಳ ಸಿದ್ಧಾಂತಕ್ಕೆ ಸಮೀಪವಾಗಿದೆ. ಅದ್ವೈತಿಗಳು ಪರಮಾತ್ಮ, ಜೀವಾತ್ಮ ಎಂಬ ಭೇದವೇ ಇಲ್ಲವೆಂತಲೂ, ಕಣ್ಣಿಗೆ ಕಾಣುವುದು, ಕಾಣದಿರುವುದು, ವ್ಯಕ್ತವಾದ್ದು, ಅವ್ಯಕ್ತವಾದ್ದು ಎಲ್ಲವೂ ಪರಮಾತ್ಮನೇ ಎಂದೂ ಭಿನ್ನತೆಯಾಗಿ ಯಾವುದು ಕಾಣುತ್ತಿದೆಯೋ ಅದೆಲ್ಲವೂ ಮಾಯೆಯ ಪ್ರಭಾವದಿಂದ ಎಂತಲೂ ಅನ್ನುತ್ತಾರೆ. ಅಂದರೆ ಅಣುರೇಣು ತೃಣಕಾಷ್ಠವೂ ಅವನೇ ಆಗಿದೆ—ಅವನಿಂದಲೇ ಸುತ್ತುವರಿಯಲ್ಪಟ್ಟಿದೆ, ತುಂಬಲ್ಪಟ್ಟಿದೆ ಎಂಬುದು ಅವರ ಸಿದ್ಧಾಂತ. ವಿಶಿಷ್ಟಾದ್ವೈತವೆಂದರೆ, ಪರಮಾತ್ಮ ಜೀವಾತ್ಮ ಬೇರೆಯೇ. ಆದರೆ, ಆತನಿಗೆ ಆತ್ಮಾರ್ಪಣೆ ಮಾಡಿ, ಶರಣು ಹೊಡೆದಾಗ, ಕಟ್ಟಕಡೆಗೆ ಪರಮಾತ್ಮನೇ ಜೀವಾತ್ಮನನ್ನು ಉದ್ಧರಿಸಿ, ತನ್ನಾತ್ಮದಲ್ಲಿ ಲೀನವಾಗಿಸುತ್ತಾನೆ, ಎಂತಲೂ, ಆದ್ದರಿಂದ ಸದಾ ಶುದ್ಧ ಭಕ್ತಿಯಿಂದ ಸಾತ್ವಿಕವಾಗಿ, ಎಲ್ಲವೂ ಆತನಿಗರ್ಪಿತವೆಂಬ ಭಾವದಿಂದ ಕರ್ಮವೆಸಗುತ್ತಲೂ, ಪ್ರಾರ್ಥಿಸುತ್ತಲೂ ಇರಬೇಕೆಂಬುದು ಅವರ ವಾದ. ಇವೆಲ್ಲ ಒಂದೇ ಸಾಧನೆಯ ವಿವಿಧ ಹಂತಗಳೆಂದು ಗ್ರಹಿಸುವ ಬದಲು, ಈ ಮೂರು ಸಿದ್ಧಾಂತಗಳವರು ಪರಸ್ಪರ ಕಡುದ್ವೇಷದಿಂದ ವರ್ತಿಸುತ್ತಿದ್ದಾರೆ.

ಅದ್ವೈತ, ವಿಶಿಷ್ಟಾದ್ವೈತ ಎಂಬ ಈ ಭಕ್ತಿ ಪಂಥಗಳಲ್ಲಿಯೂ ಇನ್ನೂ ಅನೇಕ ಭೇದ ಭಾವನೆ ಹುಟ್ಟಿದೆ. ಶಿವನನ್ನು ಆರಾಧಿಸುವವರು ಶೈವರೆಂತಲೂ, ವಿಷ್ಣುವನ್ನು ಆರಾಧಿಸುವವರು ವೈಷ್ಣವರೆಂತಲೂ, ಆದಿಶಕ್ತಿಯನ್ನು ಆರಾಧಿಸುವವರು ಶಾಕ್ತೇಯರೆಂತಲೂ, ವಿಭಕ್ತರಾಗಿದ್ದಾರೆ. ಶೈವರು ವಿಷ್ಣುವನ್ನು ಆರಾಧಿಸುವುದು ಮಹಾ ಪಾಪವೆಂತಲೂ, ವೈಷ್ಣವರು ಶಿವನನ್ನು ತಪ್ಪಿಯಾದರೂ ಆರಾಧಿಸಿಬಿಟ್ಟರೆ ವಿಷ್ಣುವಿನ ಪ್ರೇಮವನ್ನು ಕಳಕೊಳ್ಳುವರೆಂತಲೂ, ಶಾಕ್ತೇಯರು, ಶಿವ, ವಿಷ್ಣು ಇಬ್ಬರನ್ನೂ ಆರಾಧಿಸಿದರೂ ಆದಿಶಕ್ತಿ ಸುಟ್ಟೇಬಿಡುವಳೆಂತಲೂ ಜನ ಭಾವಿಸಿಕೊಳ್ಳುತ್ತಾರೆ. ಸಿಲ್ವರ್, ಏನೆನ್ನಬೇಕು ಈ ಭ್ರಾಂತಿಗೆ!

ಇನ್ನೂ ಇದೆ ನೋಡು; ಪರಮಾತ್ಮನನ್ನು ಸಾಕಾರ ರೂಪಿನಲ್ಲಿ ಭಜಿಸಲೇ

ಬಾರದು—ಆತನು ನಿರಾಕಾರ; ಆದ್ದರಿಂದ ನಿರಾಕಾರನಾಗಿಯೇ ಭಜಿಸಬೇಕು, ಮೂರ್ತಿಪೂಜೆ ಎಷ್ಟಕ್ಕೂ ಸಲ್ಲದು ಎನ್ನುವ ಬ್ರಹ್ಮಸಮಾಜ ಮತ್ತು ಆರ್ಯಸಮಾಜನಿದೆ.

ಇನ್ನು ವಿವಿಧ ಭೂತ ಪ್ರೇತಗಳನ್ನು ಆರಾಧಿಸುವ ಒಂದು ಪಂಗಡವಿದೆ. ಅವರ ದೈವವೇ ಆ ಭೂತ ಅಥವಾ ಪ್ರೇತ. ಅದಕ್ಕೆ ರಕ್ತ ಬಲಿಕೊಡಬೇಕು, ಆಗಾಗ ಅದನ್ನು ಕುಣಿಸಿ ರಮಿಸಬೇಕು, ಕೋಳಿ ಕೊಡಬೇಕು. ಇಲ್ಲವಾದರೆ. ಆ ಭೂತ ಪ್ರೇತಗಳು ಅವರನ್ನು ನಾಶಪಡಿಸಿ ಬಿಡುವುದೆಂಬ ಭ್ರಾಂತಿ ಅವರಿಗೆ!

ಹಿಂದೂ ಧರ್ಮದಲ್ಲಿ ಮೊದಲ ಭಾಗದಲ್ಲಿ ವೇದವೇ ಬಹಳ ಪ್ರಧಾನ ಪಾತ್ರ ಪಡೆದಿತ್ತು. ಪರಮಾತ್ಮನ ಕುರಿತಾಗಿ ಹಿಂದುಗಳು ಕಂಡುಕೊಂಡ ಭವ್ಯ ಕಲ್ಪನೆ ಆ ವೇದದ ಕಾಲದಲ್ಲಿ ಇನ್ನೂ ಪೂರ್ಣ ರೂಪಿತವಾಗಿರಲಿಲ್ಲ. ಆದ್ದರಿಂದ ಆಗ, ಪಂಚಭೂತಗಳಾದ ಭೂಮಿ, ನೀರು, ಅಗ್ನಿ, ವಾಯು, ಆಕಾಶಗಳನ್ನು ಅವುಗಳ ದೇವತೆಗಳ ಮೂಲಕ ಪೂಜಿಸುತ್ತಿದ್ದರು. ಇದರಿಂದ, ಸ್ವರ್ಗ ನರಕ ಎಂಬ ಕಲ್ಪನೆ ಬಂದು, ಸ್ವರ್ಗಸುಖವನ್ನನುಭವಿಸಬೇಕಿದ್ದರೆ, ಯಜ್ಞ, ಯಾಗ, ದಾನ, ತಪಸ್ಸು ಮೊದಲಾದ ವಿಧಿವತ್ತಾದ ಕರ್ಮಗಳನ್ನು ಮಾಡಬೇಕೆಂಬ ಕಲ್ಪನೆಯಿತ್ತು. ಅಂಥ ಕ್ರಿಯಾಭಾಗಗಳನ್ನು ವಿವರಿಸುವ ವೇದದ ಆ ಭಾಗಕ್ಕೆ ಕರ್ಮಕಾಂಡವೆನ್ನುತ್ತಾರೆ.

ವೇದದಲ್ಲಿ ಉಕ್ತವಾದ ಯಜ್ಞವೆಂಬ ಶಬ್ದವು, ನಿಸ್ವಾರ್ಥ ಸೇವಾರೂಪವಾದ ಆತ್ಮ ಯಜ್ಞವನ್ನೂ ಒಳಗೊಂಡಿದೆ ಎಂಬ ಅಭಿಪ್ರಾಯ ಇತ್ತೀಚೆಗೆ ಅನೇಕ ವಿದ್ವಾಂಸರಲ್ಲಿ ಒಡಮೂಡುತ್ತಿದೆಯಾದರೂ, ಹೆಚ್ಚಿನ ಹಿಂದೂಗಳು ಆ ಅರ್ಥವನ್ನು ಸ್ವೀಕಾರಮಾಡುತ್ತಿಲ್ಲ. ವೇದಾಂತವೆಂದು ಹೇಳುವ ಉಪನಿಷತ್ತುಗಳ ಸಾರರೂಪವಾದ ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ವೇದದ ಕರ್ಮಕಾಂಡವನ್ನು ವಿಮರ್ಶಿಸುತ್ತಾ ಸ್ವರ್ಗಕ್ಕಾಗಿ ಹಂಬಲಿಸಿ ಕರ್ಮವನ್ನು ಮಾಡಬೇಡ. ಫಲದಾಸೆ ಬಿಟ್ಟು, ಧರ್ಮದ ಮೇಲೆ ಆಧರಿತವಾದ ಕರ್ಮ ಮಾಡುತ್ತಾ ಮೋಕ್ಷವನ್ನು ಪಡೆ" ಎಂದು ಸಾರಿ ಹೇಳಿದನು. ಆದರೆ ಅನೇಕ ಹಿಂದುಗಳು ಇಂದೂ ಕೂಡ ಆ ಕರ್ಮಕಾಂಡವನ್ನು ಮಾತ್ರವೇ ಗಟ್ಟಿಯಾಗಿ ನಂಬಿಕೊಂಡಿದ್ದು, ಅದರ ಹಿನ್ನೆಲೆಯಲ್ಲಿರುವ, ಸದ್ಭಾವಗಳಿಗೆ ಕೂಡಾ ಪ್ರಾಶಸ್ತ್ಯ ಕೊಡುವ ಬದಲು ಮಂತ್ರಗಳಿಗೂ, ಕ್ರಿಯಾಭಾಗಗಳಿಗೂ ಮಾತ್ರ ಪ್ರಾಶಸ್ತ್ಯ ಕೊಡುವ ಒಂದು ರೂಢಿಯು ಬಂತು. ಇದರಿಂದ ನಮ್ಮ ಕ್ರೈಸ್ತ

ಸಮಾಜದಂತೆಯೇ ಹಿಂದೂ ಸಮಾಜದಲ್ಲೂ, ಕಾಪಟ್ಯ ಮತ್ತು ಢಾಂಬಿಕತನವು ಧಾರಾಳವಾಗಿ ವಿರಾಜಮಾನವಾಗಿದೆ. ನಿಜವಾದ ಧಾರ್ಮಿಕ ಸಾಧನೆಯು ಬಹು ಮಟ್ಟಿಗೆ ಮೂಲೆಪಾಲಾಗಿದೆ.

ಏನಾದರೂ ಪಾಪಕೃತ್ಯ ಮಾಡಿಬಿಟ್ಟರೆ, ಇಗರ್ಜಿಗೆ ಹೋಗಿ, ಪಾದರಿಯೊಡನೆ ಕ್ಷಮಾಯಾಚನೆ ಮಾಡಿದೊಡನೆಯೇ ಪಾಪ ತೊಲಗಿತು ಎಂದು ನಾವು ಭಾವಿಸುವಂತೆಯೇ, ಹಿಂದೂಗಳು ದೇವಾಲಯಕ್ಕೆ ಹೋಗಿ, ಒಂದು ಪೂಜಾವಿಧಿ ಮಾಡಿಬಿಟ್ಟರೆ, ಪಾಪ ಪರಿಹಾರವಾಗುವುದು ಎಂಬ ಕಲ್ಪನೆಯನ್ನು ಇಟ್ಟುಕೊಂಡಿದ್ದಾರೆ.

ಇನ್ನೊಂದು ದುಃಖದ ವಿಚಾರವಿದೆ. ನೋಡು ಸಿಲ್ವರ್, ಹಿಂದೂ ಜನಾಂಗವು ಎಷ್ಟು ಹೆಡ್ಡಾಗಿದೆಯೆಂದರೆ ತಮ್ಮ ಬಾಂಧವರೇ ಆದ 6 ಕೋಟಿ ಹರಿಜನರನ್ನು ಹಿಂದುಗಳೆಂದು ಒಪ್ಪಿಕೊಳ್ಳುವುದಕ್ಕಾಗಲೀ, ಅವರೊಂದಿಗೆ ಸಮಾಜದಲ್ಲಿ ಬೆರೆಯುವುದಕ್ಕಾಗಲೀ ಅವರು ಸಿದ್ಧರಿಲ್ಲ. ಅಲ್ಲ. ನಾವೂ ನೀಗ್ರೋಗಳಿಗೆ ಅದೇ ರೀತಿಯ ಪಕ್ಷಪಾತ ಮಾಡುತ್ತಿದ್ದೇವೆನ್ನು. ಆದರೆ ಇಲ್ಲಿಯ ಹರಿಜನರ ಸಮಸ್ಯೆ ಇನ್ನೂ ಭೀಕರ; ಕರುಣಾಜನಕ! ಅಷ್ಟೇ ಅಲ್ಲ ನೋಡು, ಅದೇ ಹರಿಜನರು ಮುಸಲ್ಮಾನರಾಗಿಯೋ, ಕ್ರೈಸ್ತರಾಗಿಯೋ, ಮತಾಂತರ ಹೊಂದಿ ಅವರ ಮನೆಗೆ ಬಂದರೆ, ಅವರನ್ನು ಆ ಹಿಂದುಗಳು ಸ್ವಾಗತಿಸಲು ಸಿದ್ಧರಿರುತ್ತಾರೆ. ಎಂತಹ ಅವಾಂತರ ನೋಡು! ಕ್ರೈಸ್ತ ಮತಾವಲಂಬನದಿಂದಲೇ ದೇವರ ರಾಜ್ಯ ಪ್ರಾಪ್ತಿ ಎಂದು ನಂಬಿದ ಆ ಮುಗ್ಧ ಪಾದರಿಗಳು ಪಾಪ! ಈ ಒಂದು ಸಂದರ್ಭವನ್ನು ಸರಿಯಾಗಿ ಸದುಪಯೋಗ ಮಾಡಿಕೊಂಡು, ಆದಷ್ಟು ಜನರನ್ನು "ದೇವರ ರಾಜ್ಯ"ಕ್ಕೆ ಕಳುಹಿಸಲು ದಿನೇ ದಿನೇ ಕೆಲಸ ಮಾಡುತ್ತಿದ್ದಾರೆ. ಜೀವಂತ ಮಾನವರನ್ನು ಮಾತ್ರವಲ್ಲದೆ, ಎಷ್ಟೋ ಶವಗಳನ್ನೂ ದೇವರ ರಾಜ್ಯಕ್ಕೆ ಕಳುಹಿಸಿದರು; ಗೊತ್ತೆ? ಆದರೆ, ಅವರ ತ್ಯಾಗ, ಅವರ ಸಹಿಷ್ಣುತೆ, ಅವರ ಮಿಶನರಿ ಬುದ್ಧಿಯನ್ನು ಹಿಂದುಗಳಾದರೂ ಮೆಚ್ಚಲೇ ಬೇಕು. ಸಿಲ್ವರ್, ಏನನ್ನುತ್ತಿ?

ಇನ್ನೊಂದು ವಿಷಯ. ಹಿಂದೂ ಧರ್ಮವು ಅನೇಕ ಸಾವಿರ ವರ್ಷಗಳ ಹಿಂದಿನಿಂದಲೂ ಬೆಳೆದು ಬಂದ ಸಂಸ್ಥೆಯಾದುದರಿಂದ ಅದರಲ್ಲಿ ಯಾವುದೇ ಒಬ್ಬ ವ್ಯಕ್ತಿಯ ಕೈವಾಡ ನಡೆಯುವಂತಿಲ್ಲ. ಆದುದರಿಂದ ಕ್ರೈಸ್ತ

ಮತದಂತೆ ಅದೊಂದು ಸಂಘಟಿತ ಧರ್ಮವಲ್ಲ! ಯಾರೂ ಅದನ್ನು ಆ ರೀತಿ ಸಂಘಟಿಸುವಂತಿಲ್ಲ!

ಹಾಗೆಂದು ನಾವಿಂದು ಸಂಘಟನೆಯಿಂದ ಲಾಭಗಳಿಸಿದ್ದೇವೆಂದು ಇದರ ರ್ಥವಲ್ಲ. ನಮ್ಮ ಮಿಶನರಿಗಳ ಅಥವಾ ಸಾರ್ವಜನಿಕ ಅಭಿಪ್ರಾಯದ ಒತ್ತಾಯಕ್ಕಾಗಿ ಇಗರ್ಜಿಗೆ ಹೋಗುವ ನಮ್ಮಲ್ಲಿ ಎಷ್ಟು ಜನರಿಗೆ ನಿಜವಾದ ಭಕ್ತಿಯಿದೆ? ನಾವು ಹೆಚ್ಚಿನವರು ನಮ್ಮ ಆಡಂಬರ, ವೇಷಭೂಷಣ, ತೋರಿಸುವುದಕ್ಕಾಗಿ ಇಗರ್ಜಿಗೆ ಹೋಗುವುದಿಲ್ಲವೆ ? ಆದ್ದರಿಂದ ಆ ರೀತಿಯ ಸಂಘಟನೆಯಿಂದ ಪ್ರಯೋಜನವೂ ಇಲ್ಲವೆನ್ನು !

ಅಷ್ಟೇ ಅಲ್ಲ; ವಿಚಿತ್ರವೆಂದರೆ ನೋಡು, ಹಿಂದೂ ಧರ್ಮವನ್ನು ಅನೇಕ ಶತಮಾನಗಳಿಂದೀಚೆಗೆ ಯಾವ ಯಾವ ಪಂಗಡಗಳು, ಅನ್ಯದೇಶದವರು, ಅನ್ಯ ಮತೀಯರು, ಹಾಳುಗೆಡವಲು ಯತ್ನಿಸಿದ್ದಾರೆ; ಅದು ಸಾಧ್ಯವಾಗಲಿಲ್ಲ. ಇತರ ದೇಶಗಳಲ್ಲಿ ಅದರ ಸಂದೇಶ ಬೌದ್ಧ, ಕ್ರೈಸ್ತ ಮತ್ತು ಇಸ್ಲಾಂ ಪಂಥಗಳಂತೆ ಹರಡದಿದ್ದರೂ, ಭಾರತದಿಂದ ಅದಿನ್ನೂ ತೊಲಗಿಲ್ಲ. ಅದರಲ್ಲಿರುವ ಒಂದು ಮೂಲಭೂತ ಶಕ್ತಿಯನ್ನದು ಪ್ರಕಟಿಸುತ್ತದೆ. ಅಂಥಾ ಒಂದು ಶಕ್ತಿಯು ಅದಕ್ಕಿಲ್ಲವಾಗಿದ್ದರೆ ಹಿಂದೂ ಧರ್ಮವು ಎಂದೋ ನಾಶವಾಗಿ ಹೋಗುತ್ತಿತ್ತು. ಹಿಂದೂ ಧರ್ಮಕ್ಕೆ ಹೋಲಿಸಿದಾಗ, ನಮ್ಮ ಕ್ರೈಸ್ತ ಧರ್ಮ ಅಥವಾ ಇಸ್ಲಾಂ ಇತ್ಯಾದಿ ಧರ್ಮಗಳು ವಯಸ್ಸಿನಲ್ಲಿ ಅಂಬೆಗಾಲಿಕ್ಕುವ ಮಕ್ಕಳು.

ಆ ಶಕ್ತಿಗೆ ಒಂದು ಕಾರಣವೂ ಇದೆ, ಸಿಲ್ವರ್. ಅನೇಕ ಸಾವಿರ ವರ್ಷಗಳ ಹಿಂದೆ ಅಂದರೆ ನಮ್ಮ ಹಿರಿಯರು ಯುರೋಪಿನಲ್ಲಿ ಕಾಡು ಜನರಾಗಿ, ಬಟ್ಟೆ ಬರೆಯಿಲ್ಲದೆ ಒಂದು ಹಿಡಿ ಮಾಂಸಕ್ಕಾಗಿ, ಭರ್ಚಿ ಮೊದಲಾದ ಅಸ್ತ್ರ ಹಿಡಿದು ತಿರುಗಾಡುತ್ತಿದ್ದಾಗ, ಹಿಂದೂ ದೇಶದ ಹಿಂದುಗಳು ಬಹಳ ಸುಸಂಸ್ಕೃತರೂ, ವಿದ್ಯಾವಂತರೂ ಆಗಿ ಸಶಕ್ತರಾಗಿದ್ದರು. ಅವರ ಅಗಾಧ ಪಾಂಡಿತ್ಯದ ಆ ಮಹಿಮೆ, ಅವರ ಆಧ್ಯಾತ್ಮಿಕ ಅನುಭವದಸಾರ, ಅವರು ತಯಾರಿಸಿದ ಆ ಧರ್ಮದ ಸಿದ್ಧಾಂತದಲ್ಲಿ ಎದ್ದು ಕಾಣುತ್ತಿದೆ.

ಆದರೆ ಒಂದು ತಮಾಷೆ ಗೊತ್ತೆ? ಹಿಂದುಗಳು ತಮ್ಮ ಮತದಿಂದ ಅನ್ಯ ಮತಕ್ಕೆ ಮತಾಂತರ ಹೊಂದುವುದಕ್ಕೆ ಬಿಡುತ್ತಾರೆ. ಆದರೆ ಅನ್ಯ ಮತಗಳಿಂದ ತಮ್ಮ ಮತಕ್ಕೆ ಅವರು ಮತಾಂತರ ಮಾಡುವುದೇ ಇಲ್ಲ. ಇತರರೆಲ್ಲ

ನ್ಲೇಂಛರೆಂಬುದು ಒಂದು ಸಿದ್ಧಾಂತವಾದರೆ, ಪ್ರಪಂಚದ ಎಲ್ಲರೂ ಸನಾತನ ಹಿಂದೂ ಧರ್ಮದ ಅನುಯಾಯಿಗಳೇ ಆದ್ದರಿಂದ ಮತಾಂತರದ ಪ್ರಶ್ನೆಯೇ ಇಲ್ಲ ಎಂಬುದು ಇನ್ನೊಂದು ಸಿದ್ಧಾಂತ! ಆ ಸಿದ್ಧಾಂತಕ್ಕೆ ಕಾರಣ-ಪ್ರಪಂಚದ ಎಲ್ಲ ಧರ್ಮಗಳ ಸಾಧನಾ ವಿಧಾನವೂ ಹಿಂದೂ ಧರ್ಮದಲ್ಲಿದೆ ಎಂಬ ವಿಚಾರವಾಗಿರಬಹುದು.

ಹಾಗಿದ್ದರೂ, ಇಂದಿನ ಅನೇಕ ಮಿಶನರಿ ಮನೋಭಾವನೆಯ ಯುವಕರಿಗೆ ಈ ಮಾತು ಹಿತವಾಗುತ್ತಿಲ್ಲ. ಅದಕ್ಕಾಗಿ ಮತಾಂತರ ಮಾಡಲು ಆರ್ಯ ಸಮಾಜವು ತಲೆ ಎತ್ತಿತು. ಆದರೆ ಆರ್ಯ ಸಮಾಜವನ್ನೇ ಹಿಂದೂ ಧರ್ಮಾಧಿಕಾರಿಗಳು ಹಿಂದುಗಳೆಂದು ಒಪ್ಪುವುದಿಲ್ಲ. ಹಿಂದೂ ಧರ್ಮದ ಪಂಡಿತರೆನ್ನಿಸುವವರು ನಮ್ಮ ಕ್ರೈಸ್ತ ಪಾದರಿಗಳಂತೆಯೇ ಯಾವ ಬದಲಾವಣೆಯೂ ಬೇಡ ಎಂಬುದಾಗಿ ತಮ್ಮ ಸ್ಥಾನದಲ್ಲಿ ಗಟ್ಟಿಯಾಗಿ ಕುಳಿತುಬಿಟ್ಟಿದ್ದಾರೆ.

ನೋಡು ಸಿಲ್ವರ್, ಚರಿತ್ರೆಯಲ್ಲಿ ವೇದನಾಮಯ ಪ್ರಸಂಗವೆಂದರೆ ಹೀಗೆ! ಹಿಂದೂ ಧರ್ಮವು ಉನ್ನತಿಯ ಪರಾಕಾಷ್ಠೆಯನ್ನೈದಿದರೂ, ಹಿಂದೂ ಜನಾಂಗವು ಈ ರೀತಿಯ ಸಹಸ್ರ ವರ್ಷಗಳ ತಪ್ಪು ಕಾಳರೂಢಿಯ ಭಾರದಡಿಯಲ್ಲಿ ಬಸವಳಿದು ನಿಂತಿದೆ. ಸುಧಾರಣೆ ಬೇಡ - ತನ್ನಲ್ಲಿ ಹೊಸ ಜೀವ ತುಂಬಿಸುವುದು ಬೇಡ! ತನ್ನ ಕುರುಡು ವಿಶ್ವಾಸವೇ ಸತ್ಯವಾದುದು ಎಂದು ಪಟ್ಟು ಹಿಡಿದು ಕುಳಿತಿದೆ ಹಿಂದೂ ಜನಾಂಗ.

ನಾವು ಮುಂದೆ ನೋಡಲಿರುವಂತೆ ಹಿಂದೂ ಜನಾಂಗದ ಈ ಒಂದು ಕೊರತೆ, ಇಡಿಯ ಭಾರತದ ರಾಜಕೀಯ, ಸಾಮಾಜಿಕ, ಆರ್ಥಿಕವೇ ಮೊದಲಾದ ವ್ಯಾಪಕವಾದ ಎಲ್ಲಾ ಕ್ಷೇತ್ರಗಳ ಮೇಲೂ ದುಷ್ಪರಿಣಾಮ ಬೀರಿ ನಿಜವಾದ ದೇಶಪ್ರೇಮಿ ಇಂದಿಗೂ ಕಣ್ಣೀರು ಮಿಡಿಯುವಂತಾಗಿದೆ, ಸಿಲ್ವರ್!

ಈ ದಿನ ಇಲ್ಲಿಗೆ ನಿಲ್ಲಿಸುತ್ತೇನೆ, ಆಗದೇ? ನಿನಗೂ ಖಂಡಿತ ದಣಿದಿರಬಹುದು. ನನ್ನ ಕೈಯಂತೂ ಸೋತಿತು! ಮುಂದಿನ ಪತ್ರದಲ್ಲಿ ಇಲ್ಲಿಯ ಸಾಮಾಜಿಕ ಸ್ಥಿತಿಗತಿಯ ವಿಷಯ ಬರೆಯುತ್ತೇನೆ.

ನಮ್ಮ ದೇಶದಲ್ಲಿ ಕೆನಡಿ ಸರಕಾರದ ಕುರಿತು ಏನೇನು ಅಭಿಪ್ರಾಯ ಬರುತ್ತಿದೆ ಎಂಬುದನ್ನೂ ಗೋವೆಯ ಕುರಿತು ಈಗಿನ ಅಭಿಪ್ರಾಯವನ್ನೂ ಮುಂದಿನ ನಿನ್ನ ಪತ್ರದಲ್ಲಿ ಬರೆ ಆಗದೇ?

ನಿನ್ನ ಪತ್ನಿಗೆ ನನ್ನ ಶುಭಾಶಂಯ ತಿಳಿಸುವೆಯಾ? ಮುದ್ದು ಕೇನ್ನಿ ಹೇಗಿದ್ದಾಳೆ?

ಇತಿ, ನಿನ್ನ ಆಪ್ತ ಮಿತ್ರ,

**ಜೋನ್ ಓರ್‌ಮನ್**

---



ಪ್ರಿಯ ಸಿಲ್ವರ್, ಬೊಂಬ್ಯಾ

15—2—62.

ನಿನ್ನ ತಾ. 10-2-'62ರ ಪತ್ರದಿಂದ ನಿಮ್ಮೆಲ್ಲರ ಸುಖದ ಸುದ್ದಿ ತಿಳಿದು ನಿಜವಾಗಿ ಖುಶಿ ಪಟ್ಟೆ. ನಿನ್ನ ಮೋಹದ ಮಗು ಕೇನ್ನಿಯ ಶುಭ ಸಂದೇಶ ಕೇಳಿಯಂತೂ ಸಂತೋಷದಿಂದ ಕುಣಿಯೋಣ ಎಂದಾಯಿತು. ನಮ್ಮ ದೇಶದ ಕುರಿತಾದ ನಿನ್ನ ದೀರ್ಘ ವರದಿ ಓದಿ ಅಮೇರಿಕದಲ್ಲೇ ಒಮ್ಮೆ ಸಂಚರಿಸಿದಂತಾಯಿತು.

ನನ್ನ ಹಿಂದಿನ ಪತ್ರದ ಸೂತ್ರದೆಳೆಗಳನ್ನು ಪುನಃ ಸಂಗ್ರಹಿಸಿ ಭಾರತದ ಉಳಿದ ಬದಿಗಳ ದರ್ಶನ ನಿನಗೆ ಮಾಡಿಸಬೇಕಾಗಿದೆ ಅಲ್ಲವೇ? ಮೊದಲ ಪತ್ರ ಮೋದಿ ನೀನು ಒಂದು ಹೊಸ ಬೆಳಕು ಪಡೆದಂತಾಯಿತು ಎಂಬ ನಿನ್ನ ಮಾತುಗಳಿಂದ ನಾನು ತುಂಬಾ ಉತ್ತೇಜಿತನಾಗುವುದರೊಂದಿಗೆ ಬೇಡ ಬೇಡವೆಂದರೂ ಸ್ವಲ್ಪ ಹೆಮ್ಮೆ ಪಡುವಂತಾಯಿತು.

ಭಾರತದ ಸಾಮಾಜಿಕ ಸ್ಥಿತಿಯ ಕುರಿತಾಗಿ ಈ ಪತ್ರದಲ್ಲಿ ನಾನು ಬರೆಯಬೇಕಾಗಿದೆ. ಇಂದಿನ ಪ್ರಪಂಚದಲ್ಲಿ ಯಾವ ಕುರಿತಾಗಿಯೂ ಬರೆಯಬಹುದು; ಆದರೆ ಇಲ್ಲಿಯ ಸಾಮಾಜಿಕ ಪರಿಸ್ಥಿತಿಯನ್ನು ವರ್ಣಿಸುವುದೆಂದರೆ ಮೈನಡುಕ ಪ್ರಾರಂಭವಾಗುವುದು. ಭಾರತೀಯ ಜನತೆಯ ಸ್ವಭಾವ ತರಂಗಗಳು ಹೀಗೆಯೇ ಇವೆ, ಎಂಬುದಾಗಿ ಹೇಳುವುದು ಪ್ರಯಾಸಕರ. ಅಷ್ಟು ವೈವಿಧ್ಯತೆಯಿದೆ ಇಲ್ಲಿಯ ಜನ ಜೀವನದಲ್ಲಿ. ಹೇಗೂ ಆಗಲಿ, ಭಾರತ ಸಂಚಾರದ ಕಾಲದಲ್ಲಿ ನನ್ನ ಅನುಭವಕ್ಕೆ ಬಂದ ವಿಚಾರಗಳನ್ನು ನಿನ್ನ ಮುಂದಿಡಲು ಯತ್ನಿಸುತ್ತೇನೆ. ಆದರೆ ಅದಕ್ಕಿಂತಲೂ ಮೊದಲಾಗಿ ಅವರ ಸಂಸ್ಕೃತಿ

ಮತ್ತು ನಾಗರಿಕತೆಗಳ ಮೂಲ ತಳಹದಿಯನ್ನೂ, ಮೂಲ ಕಾರಣವನ್ನೂ, ನಾನು ವಿಶ್ಲೇಷಿಸುವುದು ಆವಶ್ಯವಲ್ಲವೇ?

ಹಿಂದಿನ ನನ್ನ ಪತ್ರದಲ್ಲೇ ಭಾರತದ ವರ್ಣವಿಭಾಗದ ಕುರಿತಾಗಿ ನಾನು ಪ್ರಸ್ತಾಪಿಸಿದ್ದೆನಷ್ಟೆ. ಭಾರತೀಯ ಸಮಾಜದಲ್ಲಿ ಕಾಣುವ ಒಳಿತಿಗೆ ಈ ವರ್ಣ ವಿಭಾಗ ಮತ್ತು ಹಿಂದೂ ಧರ್ಮದ ಭವ್ಯ ಸಿದ್ಧಾಂತವು ಹೇಗೆ ಸಹಕಾರಿಯಾ ಯಿತೋ ಹಾಗೆಯೇ ಅದರ ಕೆಡುಕುಗಳಿಗೆ ಈ ವರ್ಣವಿಭಾಗದ ಮತ್ತು ಹಿಂದೂ ಧರ್ಮದ ಮೂಲ ಸಿದ್ಧಾಂತದ ದುರುಪಯೋಗವು ಪ್ರಾಮುಖ್ಯ ಕಾರಣವಾಗಿ ನಿಂತಿದೆ ಎಂಬ ನನ್ನ ಸಿದ್ಧಾಂತವನ್ನು ನಿನ್ನ ಮುಂದಿಡ ಬಯಸು ತ್ತೇನೆ.

ಈ ಮೊದಲು ಸೂಚಿಸಿದಂತೆ ಇದು ಆಗಿನ ಕಾಲದ ಒಂದು ಶ್ರಮ ವಿಭಾ ಗವಾಗಿತ್ತು. ವರ್ಣ ನಿಶ್ಚಯವು ಮೊದಲಲ್ಲಿ ಗೀತೆಯಲ್ಲಿ ಹೇಳುವ ಶ್ರೀ ಕೃಷ್ಣನ "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ"(ಗುಣ ಮತ್ತು ಕರ್ಮಗಳಿಗನುಸಾರವಾಗಿ ನಾಲ್ಕು ವರ್ಣಗಳು ನನ್ನಿಂದ ಸೃಷ್ಟಿಸಲ್ಪ ಟ್ಟವು) ಎಂಬ ವಾಣಿಯಂತೆ ಗುಣ ಮತ್ತು ಕರ್ಮಗಳ ಮೇಲೆ ಆಧರಿತವಾಗಿ ಬಂತೇ ವಿನಾ ಕುಲ ಮತ್ತು ಜನನದ ಮೇಲಲ್ಲ. ಇದರಿಂದ ವ್ಯಕ್ತಿಯ ಯೋಗ್ಯತಾನುಸಾರ ಆತನ ಕಾರ್ಯಕ್ಷೇತ್ರ ನಿರ್ಣಯವಾದಂತಾಗಿ ಆತನು ತನ್ನ ಗುಣ ಮತ್ತು ಕರ್ಮಗಳನ್ನು ಹೆಚ್ಚು ಕೇಂದ್ರೀಕೃತವಾಗಿ ಬೆಳೆಸುವಂತಾಯಿತು. ಆದರೆ ತಮ್ಮ ಕಾರ್ಯಕ್ಷೇತ್ರಕ್ಕೆ ಎಲ್ಲರೂ ಸೀಮಿತವಾಗಿದ್ದು ಆ ಕ್ಷೇತ್ರದಲ್ಲಿ ತಮ್ಮ ಶ್ರಮ, ಅಧ್ಯಯನ, ವಿಚಾರ ಸಂಶೋಧನೆಗಳನ್ನು ಬೆಳೆಸಿದರೂ ಎಲ್ಲ ವರ್ಣದವರಿಗೂ ಇಡಿಯ ತಮ್ಮ ಜನಾಂಗದ ಸರ್ವಾಂಗೀಣ ಉನ್ನತಿಯ ಸಮಗ್ರ ದೃಷ್ಟಿಯಿತ್ತು. ಹೀಗಾಗಿ ಅಂದಿನ ಭಾರತವು ಅನೇಕ ವಿಷಯಗಳಲ್ಲಿ ಅದ್ಭುತವಾದ ಪ್ರಗತಿಯನ್ನು ಪಡೆಯುವಂತಾಯಿತು.

ಆ ಕಾಲದಲ್ಲಿ ಜಗತ್ತಿನಲ್ಲೆಲ್ಲೂ ನಾವು ನೋಡಲಾರದಷ್ಟು, ಅಧ್ಯಾತ್ಮ ಸಾಧನೆಯ ಪರಮಪದವಾದ ಮುಕ್ತಿಯನ್ನು ಪಡೆಯಲು ಅರ್ಹತೆ ಪಡೆದ ಬ್ರಹ್ಮಜ್ಞಾನಿಗಳು ಭಾರತ ದೇಶದಲ್ಲಿ ಒಬ್ಬರ ಹಿಂದೊಬ್ಬರಂತೆ ಉದಯಿಸಿದರು. ಅವರೆಲ್ಲರೂ ಸನಾತನ ಹಿಂದೂ ಧರ್ಮದ ಮೂಲ ಸಿದ್ಧಾಂತಗಳ ಚೌಕಟ್ಟಿನಲ್ಲಿ ಸಂಶೋಧನೆ ಅನುಭವಗಳನ್ನು ಬೆಳೆಸಿ, ಭಾರತದ ಜನತೆಗೆ ಉಚ್ಚ ಆಧ್ಯಾತ್ಮಿಕ ಸಂದೇಶವನ್ನು ನೀಡುತ್ತಾ ಬಂದರು. ಹಿಂದೂ ಧರ್ಮವು ವೈವಿಧ್ಯಪೂರ್ಣ

ವಾಗಿ, ಸಾರಯುತವಾಗಿ ಬೆಳೆಯಿತು. ಮಾತ್ರವಲ್ಲ, ಇಡಿಯ ವಿಶ್ವದಲ್ಲೇ ತಮಗೆ ಸರಿಸಾಟಿಯಿಲ್ಲದ ಮಹಾ ವಿದ್ವಾಂಸರ, ಮೇಧಾವಿಗಳ, ಬುದ್ಧಿ, ಹೃದಯ, ಹಾಗೂ ಆತ್ಮಜೀವಿಗಳ ಒಂದು ಬಳಗವೇ ಬೆಳೆಯಿತು. ವಿವಿಧ ವಿಭಾಗದ ವಿಜ್ಞಾನದಲ್ಲೂ ಅಂದಿನ ಕಾಲಕ್ಕೆ ಅದ್ಭುತವೆನಿಸುವಷ್ಟು ಜ್ಞಾನ ಭಂಡಾರವನ್ನವರು ಪ್ರಯೋಗ, ವಿಚಾರಗಳಿಂದ ಸಂಪಾದಿಸಿದ್ದರು. ಅಲ್ಲದೆ ಕ್ಷತ್ರಿಯರಿಗೆ ಬೇಕಾದ ರಾಜಕೀಯ ಮಾರ್ಗದರ್ಶನವನ್ನೂ ಮಾಡಿ ತಮ್ಮ ಜನಾಂಗದ ಉತ್ಕರ್ಷಕ್ಕಾಗಿಯೂ, ಅವರು ಹೋರಾಡುತ್ತಿದ್ದರು.

ಯುದ್ಧ ಕೌಶಲ್ಯ ಹಾಗೂ ರಾಜನೀತಿಯಲ್ಲಿಯೂ ಅಂದಿನ ಕಾಲದ ಪ್ರಪಂಚವನ್ನು ನೂರ್ಮಡಿ ಮೀರಿಸುವಂತಿತ್ತು ಭಾರತೀಯ ಕ್ಷತ್ರಿಯರ ಶಕ್ತಿ, ಸಾಮರ್ಥ್ಯಗಳು. ಅವರ ರಾಜನೈತಿಕ ಸೂತ್ರಗಳ ಯೋಗ್ಯತೆ, ಮಹತ್ವ ಗಳು ಮಹಾಭಾರತ, ರಾಮಾಯಣಗಳಂತಹ ಪುರಾಣಗಳಲ್ಲಿಯೂ, ಕೌಟಿಲ್ಯನ ಅರ್ಥಶಾಸ್ತ್ರದಂತಹ ಗ್ರಂಥಗಳಲ್ಲಿಯೂ ತೋರಿ ಬರುವುದು. ಶ್ರೀ ರಾಮ, ಶ್ರೀ ಕೃಷ್ಣರಂತಹ ಅವತಾರಿ ಪುರುಷರೆನ್ನಿಸಿಕೊಂಡವರೂ, ಜನಕ, ಭೀಷ್ಮ, ಧರ್ಮರಾಯರಂತಹ ಜ್ಞಾನಿಗಳೂ ಕ್ಷತ್ರಿಯರೇ ಆಗಿದ್ದೂ ಅಧ್ಯಾತ್ಮ ತತ್ವವನ್ನು ಜಗತ್ತಿಗೆ ಬೀರಿದ್ದಾರೆ ಎಂಬುದರಿಂದ ಕ್ಷತ್ರಿಯರೂ ಅಧ್ಯಾತ್ಮದ ನೆಲೆಗೆ ಧಾರಾ ಳವಾಗಿ ಇಳಿದಿದ್ದರು ಎಂಬುದಾಗಿ ಹೇಳಬಹುದು. ಆಗಿನ ಕಾಲದ ರಾಜರು ನಿಜವಾದ ಪ್ರಜಾ ಪರಿಪಾಲಕರಾಗಿದ್ದರು, ಮಾತ್ರವಲ್ಲ ಪ್ರಜಾ ಪ್ರತಿನಿಧಿಗಳೂ ಆಗಿದ್ದರು. ಮಾಗಧನಂತಹ ಕೆಟ್ಟ ಪ್ರಜಾಹಿಂಸಕ ರಾಜರನ್ನುನಾವು ನೋಡ ಬಹುದಾದರೂ ಅಂತಹವರ ಸಂಖ್ಯೆಯು ಸನಾತನ ಧರ್ಮದ ಉಚ್ಛ್ರಾಯದ ಕಾಲದಲ್ಲಿ ಕಡಿಮೆಯೆನ್ನುವುದಕ್ಕೆ ಸಂಶಯವಿಲ್ಲ.

ಹೀಗೆಯೇ ಕೃಷಿ, ಕುಶಲ ಕೈಗಾರಿಕೆ, ಉದ್ದಿಮೆ ಮತ್ತು ವಾಣಿಜ್ಯಗಳ ಲ್ಲಿಯೂ ಅಂದಿನ ಕಾಲದ ವೈಶ್ಯರು ಪ್ರಪಂಚವನ್ನು ಮೀರಿಸಿ ಅವರ ವಾಣಿಜ್ಯ ಸಾಮ್ರಾಜ್ಯವನ್ನು ರೋಮ್, ಗ್ರೀಸ್, ಜಾವಾ, ದಕ್ಷಿಣ ಆಫ್ರಿಕ, ಮಧ್ಯ ಏಸ್ಯಾ, ಆಗ್ನೇಯ ಏಸ್ಯಾ ಮೊದಲಾದೆಡೆಗಳಿಗೂ ವಿಸ್ತರಿಸಿದರು. ಅಲ್ಲಿ ಇಂದಿಗೂ ಇರುವ ಚಾರಿತ್ರಿಕ ಅವಶೇಷಗಳು ಹಾಗೂ ಭಾರತದ ಸಂಸ್ಕೃತಿಯ ಕುರುಹುಗಳಿಂದ ಈ ವಿಚಾರವನ್ನು ನಾವು ಕಂಡುಕೊಳ್ಳಬಹುದು.

ಭಾರತದ ಶೂದ್ರರೆನ್ನಿಸಿಕೊಂಡ ವಿವಿಧ ವರ್ಗದ ಕಾರ್ಮಿಕರಂತೂ, ಯಾವುದೇ ಕೆಲಸದಲ್ಲಿ ಬಹಳ ನುರಿತವರಾಗಿದ್ದರು. ಭಾರತದ ಮಸ್ಲಿನ್

ಮತ್ತಿತರ ಬಟ್ಟೆಯನ್ನು ರೋಮ್, ಗ್ರೀಸ್, ಇತ್ಯಾದಿ ಪಾಶ್ಚಿಮಾತ್ಯ ದೇಶದ ರಾಜರುಗಳು ಪ್ರೀತಿ, ಹೆಮ್ಮೆಗಳಿಂದ ಸ್ವಾಗತಿಸುತ್ತಿದ್ದರು. ಇಲ್ಲಿಯ ವಜ್ರ ವೈಢೂರ್ಯಗಳು ವಿವಿಧ ದೇಶಗಳ ರಾಜರಾಣಿಯರ ಮೈಯಲ್ಲಿ ಬೆಳಗುತ್ತಿದ್ದುವು. ಆ ಬಹು ದೂರದ ಕಾಲದಲ್ಲಿಯೂ, ಭಾರತವು ತನ್ನದೇ ನೌಕೆಗಳು ಹಾಗೂ ನಾವಿಕರಿಂದ ಸ್ವತಂತ್ರವಾದ ಸಾಗರೋತ್ತರ ವಾಣಿಜ್ಯ ಸಾಗಿಸಿಕೊಂಡಿತ್ತೆಂಬು ದರಿಂದ, ನಾವೆಯಂತಹ ಪ್ರಾಮುಖ್ಯವಸ್ತುಗಳ ರಚನೆಯಲ್ಲಿಯೂ, ಅವರು ಎಲ್ಲರನ್ನೂ ಮೀರಿಸುತ್ತಿದ್ದರು ಎಂಬುದು ಸ್ಪಷ್ಟವಾಗುವುದು.

ಕಾಲಾನುಭಾಗದಲ್ಲಿ, ಮೊದಲ ಪತ್ರದಲ್ಲಿ ಬರೆದಂತಹ ವರ್ಣವಿಭಾಗದ ರೀತಿ ಬದಲಾಗತೊಡಗಿತು. ಗುಣ ಮತ್ತು ಕರ್ಮಗಳ ತಳಹದಿಯಲ್ಲಿ ನಿರ್ಣಯವಾಗಬೇಕಿದ್ದ ವರ್ಣ, ಕುಲ ಮತ್ತು ಜನನಗಳಿಂದ ನಿರ್ಣಯವಾಗ ತಕ್ಕದ್ದೆಂಬ ರೂಪಕ್ಕೆ ಬಂತು.

ಆಗಲೂ ಎಲ್ಲ ವರ್ಣಗಳವರೊಳಗೆ ಭೇದಭಾವವಿಲ್ಲದ ಮೈತ್ರಿ ಮತ್ತು ಸಮಗ್ರತೆಯ ದೃಷ್ಟಿಯಿತ್ತು. ಆದ್ದರಿಂದ ಈ ಬದಲಾವಣೆಯಾದ ನಂತರವೂ ಹಲವು ಸಮಯ, ದೇಶದ ಪ್ರಗತಿ ಮುಂದೆ ಸಾಗಿತು. ಆದರೆ ಈ ಬದಲಾವಣೆಯ ಮುಂದಿನ ಪರಿಣಾಮ ನಿಧಾನವಾಗಿ ಕಾಲಿಡತೊಡಗಿತು. ವರ್ಣ ವಿಭಾಗದ ದುರುಪಯೋಗವಾಗತೊಡಗಿತು.

ಪ್ರೇಮ, ಸಹಕಾರ ಮತ್ತು ಶ್ರಮ ವಿಭಾಗಗಳ ದ್ಯೋತಕವಾಗಿದ್ದ ಆ ಪದ್ಧತಿಯು ಮೇಲು ಕೀಳೆಂಬ ಭೇದ ಭಾವನೆಯ ಸಂಕೇತವಾಗಿ ಮಾರ್ಪಟ್ಟಿತು. ಎಲ್ಲ ವರ್ಣಗಳವರೂ ತಮ್ಮ ಜನಾಂಗದ ಉನ್ನತಿ, ಉತ್ಕರ್ಷಗಳಿಗಾಗಿ ಮಾನವ ಜೀವನದ ಎಲ್ಲ ಬದಿಗಳನ್ನೂ ತಮ್ಮ ಸಮಗ್ರತೆಯ ದೃಷ್ಟಿ ಪಥದಲ್ಲಿಟ್ಟುಕೊಂಡುದು ಮಾಯವಾಗಿ ಆಯಾಯ ವರ್ಣಗಳವರು ಕುರುಡಾಗಿ ತಮ್ಮ ತಮ್ಮ ಕ್ಷೇತ್ರದ ಹೊರಗೆ ಇಣಿಕಿಯೂ ನೋಡದಂತಾಯಿತು. ವೈಜ್ಞಾನಿಕ, ವಿಚಾರಾತ್ಮಕ, ಅನುಭವಾತ್ಮಕ ತಳಹದಿಯಲ್ಲಿ "ಇನ್ನೂ ತಿಳಿಯಬೇಕೆಂ"ಬುದಾಗಿ ಹಿಂದುಗಳಿಗಿದ್ದ ಆ ನವನವೋತ್ಸಾಹವು ಕುಂದಿಹೋಗಿ, "ನಾವೆಲ್ಲ ತಿಳಿದಾಯಿತು!" ಎಂಬ ರೂಪಕ್ಕೆ ಬಂತು. ಅನ್ಯದೇಶಗಳ ವಿಚಾರಧಾರೆಗೂ ತಮ್ಮ ಮನದ ಕಿಟಿಕಿಗಳನ್ನು ತೆರೆದಿಟ್ಟುಕೊಂಡು ವಿಮರ್ಶೆಗೆ ಸಿದ್ಧವಾಗಿದ್ದ ಅವರು ಅವುಗಳನ್ನೆಲ್ಲ ಮುಚ್ಚಿಟ್ಟು, "ನಮಗೆ ಸರಿಸಾಟಿಯಾದವರು ಪ್ರಪಂಚದಲ್ಲೇ ಇಲ್ಲ. ಪರಮಾತ್ಮನಿಂದಲೇ ರಚಿಸಲ್ಪಟ್ಟಿರುವ ವೇದವನ್ನನು

ಸರಿಸುವ ನಾವೇ ಶ್ರೇಷ್ಠರು. ಅನ್ಯರೆಲ್ಲ ಮ್ಲೇಂಛರು; ಅವರಿಂದ ತಿಳಿಯ ತಕ್ಕದ್ದೇ ಇಲ್ಲ, ಹಿಂದೂ ಧರ್ಮ ಮತ್ತು ಸಮಾಜದಲ್ಲಿ ಇನ್ನು ಬದಲಾಗ ತಕ್ಕುದೂ ಇಲ್ಲ" ಎಂಬ ನಿಲುವಿಗೆ ಬಂದು ನಿಂತರು. ಹಿಂದೂ ಧರ್ಮದ ಮೂಲ ತತ್ವವನ್ನು ಸಾರುವ ದರ್ಶನಗಳು, ಉಪನಿಷತ್ತುಗಳು, ಬ್ರಹ್ಮಸೂತ್ರ ಗಳು ಮತ್ತು ಗೀತೆಗಳಿಗಿದ್ದ ಮಹತ್ವ ಹಾಗೂ ಪ್ರಾಧಾನ್ಯತೆಗಳು ಜಾರಿ ಹೋಗಿ, ಕಾಲಕಾಲಕ್ಕೆ ಬದಲಾಗಲೇ ಬೇಕಾದ ಧರ್ಮಶಾಸ್ತ್ರದ ಗ್ರಂಥಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಬರುವಂತಾಯಿತು. ವಲಸೆ ಬಂದ ವಿದೇಶೀಯರನ್ನು ಹಿಂದೂ ಮತಕ್ಕೆ ಸೇರಿಸುವುದಾಗಲೀ, ಸಾಗರೋತ್ತರ ದೇಶಗಳಿಗೆ ಪಯಣ ಬೆಳೆಸುವುದಾಗಲೀ, ಶಾಸ್ತ್ರನಿಷಿದ್ಧವೆಂದು ಸಾರಲ್ಪಟ್ಟಿತು. ಆಯಾಯ ವರ್ಣ ಗಳವರು ತಮ್ಮ ಯೋಗ್ಯತೆ, ಹಾಗೂ ಉಪಯುಕ್ತತೆ ಬೆಳೆಯಿಸುವ ಬದಲು ತಮ್ಮ ಸ್ಥಾನ ಹಾಗೂ ಇತರ ವಿಷಯಗಳ ಕುರಿತು ಯೋಚಿಸತೊಡಗಿದರು. ಪ್ರತಿಷ್ಠೆಗಾಗಿ ತನ್ನ ಯೋಗ್ಯತೆಗೆ ಹಿಡಿಸದ ಕಾರ್ಯವನ್ನೂ ಮಾಡತೊಡಗಿ ದರು.

ಒಟ್ಟಿನಲ್ಲಿ, ವಿಕಾಸದ ದಾರಿಯಲ್ಲಿದ್ದ ಹಿಂದೂ ಸಮಾಜವು ಘನೀಭೂತ ವಾಗಿ ಕಲ್ಲಾಗಿ ನಿಂತಿತು. ಕಲ್ಲಾಗಿ ನಿಂತುದು ಮೇಲುಕೀಳೆಂಬ ಭೇದ ಭಾವನೆಗಳ, ಈರ್ಷ್ಯಾದ್ವೇಷಗಳ ಪರಿಣಾಮವಾಗಿ ನೂರಾರು ಒಳಜಾತಿಗ ಳಾಗಿ, ಪಂಗಡಗಳಾಗಿ ಒಡೆದುಹೋಯಿತು. ಒಂದು ಪಂಗಡವು ಇನ್ನೊಂದು ಪಂಗಡವನ್ನು ವಿರೋಧಿಸತೊಡಗಿತು. ಭಾರತೀಯರೆಲ್ಲ ಅಷ್ಟೇಕೆ ಹಿಂದು ಗಳೆಲ್ಲ ಒಂದು ಎಂಬ ಭಾವನೆಯೂ ಭಾರತೀಯರಿಂದ ತೊಲಗತೊಡಗಿತು.

ವರ್ಣವಿಭಾಗದ ಪದ್ಧತಿಯು ಈ ತೆರನಾಗಿ ತನ್ನ ಉಪಯುಕ್ತತೆಯನ್ನು ಕಳೆದುಕೊಂಡೊಡನೆಯೇ ಭಾರತೀಯ ವಿದ್ವಜ್ಜನರು, ಆಧ್ಯಾತ್ಮವಾದಿಗಳು, ಹಾಗೂ ರಾಜಕೀಯ ಮುಖಂಡರು ಒಂದಾಗಿ, ಆ ಪದ್ಧತಿಯನ್ನು ಬದಲಿಸಿ, ಆಗಿನ ಕಾಲಕ್ಕೆ ಯೋಗ್ಯವಾದ ಸುಧಾರಣೆ ಮಾಡುತ್ತಿದ್ದಲ್ಲಿ ಭಾರತೀಯ ಸಮಾಜವು ಹೀಗೆ ಒಡೆದು ಚೂರಾಗುತ್ತಿದ್ದಿಲ್ಲ. ಹಿಂದೂ ಧರ್ಮದ ತಿರು ಳಾದ ಆಧ್ಯಾತ್ಮಿಕ ಸಿದ್ಧಾಂತಗಳನ್ನು ತಿಳಿದು ರಾಜಮಾರ್ಗದಲ್ಲಿ ಮುನ್ನಡೆವ ಬದಲು ವಕ್ರ ಮಾರ್ಗ ಅನುಸರಿಸಿ, ಜನತೆಯನ್ನು ಎತ್ತಲೋ ಕೊಂಡೊಯ್ಯು ತ್ತಿರುವವರನ್ನು ಎಚ್ಚರಿಸಿ, ಅಂದಿನ ಮುಖಂಡರು ಸರಿದಾರಿಗೆ ಹಚ್ಚುತ್ತಿದ್ದರೆ ಇಂತಹ ದುಃಖದಾಯಕ ಪ್ರಸಂಗ ಸಂಭವಿಸುತ್ತಿರಲಿಲ್ಲ.

ಆದರೇನು ಮಾಡುವುದು ಸಿಲ್ವರ್? ಚರಿತ್ರೆಯಲ್ಲಿ ಇಂತಹ ದುರಂತಗಳು ಎಷ್ಟೋ ಸಂಭವಿಸುತ್ತವೆ. ಮಹಾತ್ಮಾ ಏಸುಕ್ರಿಸ್ತರ ತತ್ವವನ್ನು ತಪ್ಪಾಗಿ ತಿಳಿದುಕೊಂಡು, ಕೆಥೋಲಿಕರು, ಪ್ರೊಟೆಸ್ಟೆಂಟರು, ಎಂಬಿತ್ಯಾದಿ ಭೇದಗಳನ್ನು ಕಲ್ಪಿಸಿಕೊಂಡು ಯುರೋಪಿನಲ್ಲಿ ನಮ್ಮ ಹಿರಿಯರು ಹಿಂದೆ ಹೊಡೆದಾಡಿಕೊಂಡು ರಕ್ತದ ಕಾಲುವೆ ಹರಿಸಲಿಲ್ಲವೆ? ಇದಕ್ಕೆ ಕೆಥೋಲಿಕರ ಸಂಪ್ರದಾಯವಾದ, ಕುರುಡು ವಿಶ್ವಾಸ, ಹಾಗೂ ಸ್ವಪ್ರತಿಷ್ಠೆಯ ಆಸೆ ಒಂದು ಕಾರಣವಾಗಿದ್ದರೆ, ಪ್ರೊಟೆಸ್ಟೆಂಟರು ಮತ್ತು ಪ್ಯೂರಿಟನರ ತೀವ್ರಗಾಮಿಯಾದ ಸಂಕುಚಿತ ದೃಷ್ಟಿಗಳು ಇನ್ನೊಂದು ಕಾರಣವಾಗಿ ಪರಿಣಮಿಸಿತು.

ನಾವು, ಮಹಾನುಭಾವ ಅಬ್ರಹಾಂ ಲಿಂಕನ್ನರ ಕಾಲದ ತನಕವೂ ನೀಗ್ರೋ ಜನರನ್ನು ಗುಲಾಮರಾಗಿ ಅತಿ ಕ್ರೂರ ರೀತಿಯಿಂದ ನಡೆಸಿ, ಮಾನವೀ ಗುಣಕ್ಕೆ ವ್ಯತಿರಿಕ್ತವಾಗಿ ವರ್ತಿಸಿಲ್ಲವೇ? ಏಸುಕ್ರಿಸ್ತರ ಪ್ರೇಮ ಮತ್ತು ದಯೆಗಳ ತತ್ವವನ್ನು ನಾವಾಗ ಲವಲೇಶವಾದರೂ ಗ್ರಹಿಸಿದೆವೆ? ಇಡಿಯ ಒಂದೊಂದು ಜನಾಂಗಗಳ ಪರ್ವತಾಕಾರದ ಈ ರೀತಿಯ ಹೆಡ್ಡುತನಗಳಲ್ಲವಾದರೆ ಚರಿತ್ರೆಯಾದರೂ ಎಲ್ಲಿ ಉಂಟಾಗುವುದು?

ಆದರೆ, ಸಿಲ್ವರ್, ನನ್ನನ್ನು ಮುಗ್ಧನನ್ನಾಗಿ ಮಾಡಿದ ಮಹೋನ್ನತ ಹಿಂದೂ ಧರ್ಮದ ಅನುಯಾಯಿಗಳೂ ಈ ರೀತಿಯ ಅವಿಚಾರಿಯಾದ ಕಾಳು ರೂಢಿಯಲ್ಲಿಳಿದು ಗಟ್ಟಿಯಾಗಿ ಕುಳಿತು ಬಿಟ್ಟು, ಭಾರತದ ಸರ್ವಾಂಗೀಣ ಉನ್ನತಿಯನ್ನೇ ತಡೆಹಿಡಿದುದು ನನಗೆ ಅತೀವವಾದ ಯಾತನೆಯನ್ನು ಒದಗಿಸುತ್ತದೆ. ಭಾರತದ ಸಮಾಜವನ್ನು ಟೀಕಿಸುವಾಗ, ಸಂತೋಷದಿಂದ ಹಾಗೆ ಮಾಡುತ್ತೇನೆ ಎಂದು ಭಾವಿಸಬೇಡ. ಹೃದಯವೇದನೆಯಿಂದ ಸತ್ಯವಿಮರ್ಶೆ ಮಾಡುತ್ತಿದ್ದೇನೆ. ಭಾರತದ ಬೃಹತ್ ಸಾಮಾಜಿಕ ಸಮಸ್ಯೆಗಳ ಪರಿಹಾರ ಮಾರ್ಗಗಳನ್ನು ಕಿಂಚಿತ್ತಾದರೂ ನಾನು ಕಂಡುಹಿಡಿಯಬಹುದೇ ಎಂಬ ಅನ್ವೇಷಣೆಯ ದಾರಿಯಲ್ಲಿ ಹೀಗೆ ಬರೆಯುತ್ತಿದ್ದೇನೆ. ಏಕೆಂದರೆ, ಪರಕೀಯ ದೇಶವಾದರೂ ಭಾರತ ನನಗೆ ಪವಿತ್ರವಾಗಿದೆ; ಪುಣ್ಯಭೂಮಿಯಾಗಿದೆ, ಪ್ರಿಯವಾಗಿದೆ-

ಕ್ಷಮಿಸು, ಸಿಲ್ವರ್, ಭಾವಾವೇಶದಿಂದ ನಾನು ವಿಷಯ ಬಿಟ್ಟು ಎತ್ತಲೋ ಹೋದೆ. ನಾನೇನನ್ನು ಬರೆಯುತ್ತಿದ್ದೆ? ಭಾರತೀಯ ಸಮಾಜದ ಅವನತಿಯ ಕುರಿತಾಗಿ, ಹೌದು; ಮುಂದಕ್ಕೆ ಸಾಗೋಣ.

ಭಾರತಕ್ಕೆ ಆಗ ಹಾಳಾಗುವ ಕಾಲ ಬಂದಿದ್ದಿರಬೇಕು, ಇಲ್ಲವಾದರೆ ಹಾಗೇಕಾಗಬೇಕು?

ಸಮಗ್ರ ಮಾನವ ಜೀವನವನ್ನು ಒಂದಾಗಿ ಗ್ರಹಿಸುವ ಬದಲು, ಹೀಗೆ, ದಾರಿತಪ್ಪಿದ ವರ್ಣವಿಭಾಗವು ಮಾನವ ಮಾನವರನ್ನು ಪ್ರತ್ಯೇಕಿಸಿತು. ಸಂಶಯದ, ದ್ವೇಷದ, ಅಶಕ್ತತೆಯ ಮನೋಭಾವವನ್ನು ಹಬ್ಬಿಸಿತು.

ಒಂದು ದೇಶವು ಐಕ್ಯವಾಗಿದ್ದಾಗ, ಐಕ್ಯತೆಯ ಚೌಕಟ್ಟಿನಲ್ಲಿ ಇತರ ಶಕ್ತಿ ಮತ್ತು ಯೋಗ್ಯತೆಗಳನ್ನು ಇಟ್ಟುಕೊಂಡು, ಮಹಾನ್ ಕಾರ್ಯಗಳನ್ನು ಸಾಧಿಸಿದಾಗ, ಆ ದೇಶದ ಜನರು ದೇಶಪ್ರೇಮದಿಂದ, ದೇಶಾಭಿಮಾನದಿಂದ ಪುಲಕಿತರಾಗುತ್ತಾರೆ. ಆಗ ಆ ದೇಶಕ್ಕಾಗಿ ಜೀವನವನ್ನೇ ಮೀಸಲಾಗಿಡುವ, ಅಷ್ಟೇಕೆ ಪ್ರಾಣಾರ್ಪಣೆ ಮಾಡಲೂ ಸಿದ್ಧರಾಗಿರುವ ಜನಸಮೂಹ ಎದ್ದೇಳುವುದು. ಅಂತಹ ಐಕ್ಯತೆಯ ಬದಲಿಗೆ, ಅದರ ವಿರುದ್ಧ ಸ್ಥಿತಿ ನಿಂತಾಗ, ದೇಶಕ್ಕಾಗಿ ತ್ಯಾಗ ಮಾಡೋಣ ಎಂದು ಕಾಣಬೇಕಿದ್ದರೆ ಕಷ್ಟವಿದೆ.

ಮೇಲೆ ಹೇಳಿದ ರೀತಿಯ ದುಸ್ಥಿತಿ ಬಂದಾಗ ಭಾರತದ ಅವಸ್ಥೆಯೂ ಹಾಗೆಯೇ ಆಯಿತು. ಭಾರತಕ್ಕಾಗಿ ತನ್ನ ಬದುಕು ಎಂಬ "ಮಿಶನರಿ" ಮನೋಭಾವ ಯಾರಿಗೂ ಇಲ್ಲವಾಯಿತು. ಭಾರತಕ್ಕಾಗಿ ತ್ಯಾಗ ಮಾಡುವ ಸಿದ್ಧತೆ ತಪ್ಪಿಹೋಯಿತು. ದೇಶದ ಯಾವುದೇ ಒಂದು ವಿಶಿಷ್ಟ ಭಾಗದ ಸಂಕಷ್ಟಕ್ಕಾಗಿ ಕೊರಗುವ, ಸುಖಕ್ಕಾಗಿ ಹಿಗ್ಗುವ, ಅಂತರಂಗ ಇಲ್ಲವಾಯಿತು. ಜನಸಾಮಾನ್ಯರಿಗೆ ದೇಶಪ್ರೇಮವೆಂಬುದು ಅರ್ಥವಿಲ್ಲದ ಶಬ್ದವಾಯಿತು.

ಬ್ರಾಹ್ಮಣರು ರಾಜಕಾರಣ ಅಥವಾ ರಾಷ್ಟ್ರದ ಸಮಗ್ರತೆ, ಅಖಂಡತೆ, ರಾಷ್ಟ್ರೀಯ ಜಾಗೃತಿ ಮೊದಲಾದುವುಗಳಿಗೆ ಏನೂ ಮಹತ್ವ ಕೊಡದಾದರು. ಯಾವ ರಾಜನೇ ಬಂದರೂ ಬ್ರಾಹ್ಮಣರಿಗೇನು? ತಮ್ಮ ಧಾರ್ಮಿಕ ಮತ್ತು ಆಧ್ಯಾತ್ಮಿಕ ಸಾಧನೆಗೆ ಕೊರತೆ ಬಾರದಿದ್ದರಾಯಿತು—ಎಂಬ ಮನೋಭಾವನೆ ಅವರಲ್ಲಿ ಬೆಳೆಯಿತು. ಮೊದಲು ಆಧ್ಯಾತ್ಮಿಕ ಮತ್ತು ಬೌದ್ಧಿಕ ಸಂಪತ್ತಿನ ನಿಧಿಗಳಾಗಿದ್ದ ಅವರೇ ಈ ರೀತಿಯ ರಾಜಕೀಯ ಔದಾಸೀನ್ಯ ತೋರಿದ್ದರಿಂದ, ಹೊರಗಿನ ರಾಜಕೀಯ ಒತ್ತಡವನ್ನು ಎದುರಿಸುವ ಶಕ್ತ ಹಾಗೂ ಪ್ರಭಾವಶಾಲೀ ಬುದ್ಧಿಜೀವಿಗಳು ಕಡಿಮೆಯಾದರು. ಬರಿಯ ರಾಜರಿಂದ ಆ ಕೆಲಸವಾಗಲಿಲ್ಲ.

ರಾಜಕೀಯದ ಹೊರೆ ಹೊತ್ತಿದ್ದ ಅನೇಕ ರಾಜಾಧಿರಾಜರು, ಜನರನ್ನು ಆಳುವುದು, ಅವರಿಗೆ ಕರಹೊರಿಸಿ, ತಾವು ಶೃಂಗಾರ ವಿಲಾಸಗಳಲ್ಲಿ ಮೆರೆಯುವುದು ಮಾತ್ರವೇ ತಮ್ಮ ಅಸ್ತಿತ್ವದ ಉದ್ದೇಶವೆಂಬಂತೆ, ಬದುಕತೊಡಗಿ,

ಆಧ್ಯಾತ್ಮ, ಧರ್ಮ, ತತ್ವ, ವಿದ್ವತ್ತುಗಳಿಗೆ ಅವರು ಬೆಲೆಕೊಡುವುದು ಕಡಿಮೆ ಯಾಯಿತು. ಅನ್ಯ ದೇಶೀಯರು ಭಾರತಕ್ಕೆ ಬಂದು ವಿವಿಧ ಕೃತ್ರಿಮ ಹಾಗೂ ಮೋಸದ ಕ್ರಿಯೆಗಳಿಂದ, ಭಾರತೀಯರನ್ನು ಮತಾಂತರ ಮಾಡಿದಾಗ ಮತ್ತು ದೇಶದ ಇತರ ಭಾಗವನ್ನು ಸುಟ್ಟು ಸೂರೆ ಮಾಡಿದಾಗ, ಈ ರಾಜರು ಕಣ್ಣು ಮುಚ್ಚಿ ಕುಳಿತಿದ್ದರಲ್ಲದೆ, ಆ ಕುರಿತಾಗಿ ಯಾವುದೇ ಕ್ರಮ ಕೈಗೊಳ್ಳ ಲಿಲ್ಲ. ಏಕೆಂದರೆ ರಾಜಕೀಯ ಅಧಿಕಾರ ಮಾತ್ರವೇ ಅವರ ಕ್ಷೇತ್ರವೆಂಬ ಅಭಿ ಪ್ರಾಯ ಅವರಿಗೆ ಬಂತು.

ವೈಶ್ಯರಂತೂ, ಯಾವ ರಾಜನೇ ಬರಲಿ– ಯಾವ ಧರ್ಮವೇ ಬರಲಿ— ತಮ್ಮ ವ್ಯಾಪಾರವೊಂದು ಸರಿಯಾಗಿ ಸಾಗಿದರಾಯಿತು. ಅದೇ ತಮ್ಮ ಧರ್ಮವೆಂದು ಭಾವಿಸಿ, ಎಲ್ಲವನ್ನೂ ಸುಮ್ಮನೇ ಪ್ರೇಕ್ಷಕರಾಗಿ ನೋಡುತ್ತಾ ನಿಂತಿದ್ದರು.

ಬಹು ಸಂಖ್ಯಾಕರಾದ ಕಾರ್ಮಿಕರಂತೂ ಮೇಲಿನ ಮೂರೂ ವರ್ಣ ಗಳವರಿಂದ ಹೇರಲ್ಪಟ್ಟ ಒಂದು ರೀತಿಯ ದಾಸ್ಯಕ್ಕೆ ಒಳಗಾಗಿದ್ದರು. ಅವರ ಸಾಮಾನ್ಯ ಜೀವನದ ಮಟ್ಟ ದಿನದಿಂದ ದಿನಕ್ಕೆ ಕೆಳಗಿಳಿಯುತ್ತಿತ್ತು. ಅಲ್ಲದೆ ಸಾಮಾಜಿಕ ತಿರಸ್ಕಾರ, ಆರ್ಥಿಕ ಗುಲಾಮತನ, ರಾಜಕೀಯ ಬಹಿಷ್ಕಾರವೂ ಅವರ ಪಾಲಿಗೆ ದೊರಕಿತು. ಸಾಲದುದಕ್ಕೆ ಹಿಂದೂ ಧರ್ಮದ ಪ್ರಕಾರ ಬ್ರಾಹ್ಮ ಣೇತರರಿಗೆ ಮುಖ್ಯವಾಗಿ ಶೂದ್ರರಿಗೆ ಹಿಂದೆಯೇ ನಾನು ವಿವರಿಸಿದಂತೆ ಹೆಚ್ಚಿನ ಮಟ್ಟಿಗೆ ಯಾವುದೇ ನಿಯಮಿತ ಅಧ್ಯಾತ್ಮ ಸಾಧನೆಗೆ ಆಸ್ಪದವಿಲ್ಲವಾಗಿ ಅವರು ದೇವರೇ ಇಲ್ಲದವರಾಗಿದ್ದರು, ಎಂದರೆ ತಪ್ಪೆನಿಸಲಾರದು.

ಒಂದು ಗಣನೀಯ ಭಾಗವಾದ ಹರಿಜನರಂತೂ ಸವರ್ಣ ಹಿಂದೂಗ ಳೆಂಬ ಪಂಗಡಕ್ಕೂ ಸೇರಿಸಲ್ಪಡದೆ, ಬರಿಯ ಗುಡ್ಡಗಾಡು ಜನರಿರಾಗಿ, ಇತರ ಮತೋಪದೇಶಕರಿಗೆ ಬಲಿಗೊಡಲು ಕಾದಿರಿಸಲ್ಪಟ್ಟ ಪ್ರಾಣಿಗಳಾಗಿ ಜೀವಿಸು ತ್ತಿದ್ದರು.

ಈ ರೀತಿ ಪ್ರಾರಂಭವಾದ ಭಾರತೀಯ ಸಮಾಜದ ಅವನತಿ ವೃದ್ಧಿ ಯಾದ ಮೇಲೂ, ರಾಜಕಾರಣದಲ್ಲಿ, ಅಧ್ಯಾತ್ಮದಲ್ಲಿ, ಸಾಹಿತ್ಯದಲ್ಲಿ, ಕಲೆ ಯಲ್ಲಿ ಮತ್ತಿತರ ರಂಗಗಳಲ್ಲಿ ಪ್ರಖ್ಯಾತಿಗೆ ಬಂದು ದೇಶದ ಉನ್ನತಿಗಾಗಿ ಜೀವ ನಾರ್ಪಣ ಮಾಡಿದ ಮಹಾನುಭಾವರನೇಕರು ಆಗಿ ಹೋಗಿದ್ದಾರೆ. ಭಗವಾನ್ ಶಂಕರಾಚಾರ್ಯ, ಪೂಜ್ಯ ಮಧ್ವಾಚಾರ್ಯ, ಪೂಜ್ಯ ರಾಮಾನುಜಾಚಾ ರ್ಯರಂತಹ ಮಹಾನ್ ಧರ್ಮೋಪದೇಶಕರ, ಚಂದ್ರಗುಪ್ತ, ಹರ್ಷವರ್ಧನ,

ವಿಕ್ರಮಾದಿತ್ಯ, ಪುಲಿಕೇಶಿ, ಕೃಷ್ಣದೇವರಾಯ, ಪ್ರತಾಪಸಿಂಹ, ಶಿವಾಜಿ ಯಂತಹ ಮಹಾರಾಜರ, ಸಮರ್ಥ ರಾಮದಾಸ್, ಕೃಷ್ಣಚೈತನ್ಯ, ಕಬೀರ ದಾಸ್, ತುಕಾರಾಮ್ ಮೊದಲಾದ ಭಕ್ತ ಶಿಖಾಮಣಿಗಳ ಉಜ್ವಲ ಜೀವನ ಮತ್ತು ಮಾರ್ಗದರ್ಶನದಿಂದ ಭಾರತದ ಒಂದೊಂದು ಭಾಗದ, ಒಂದೊಂದು ವರ್ಗದ, ಒಂದೊಂದು ಮನೋಭಾವನೆಯ ಜನರ ಮೇಲೆ ತಾತ್ಕಾಲಿಕವಾಗಿ ಪರಿಣಾಮವಾದರೂ, ರಾಷ್ಟ್ರೀಯ ಜಾಗೃತಿ, ಹಾಗೂ ರಾಷ್ಟ್ರೀಯ ಜಾಗೃತಿಯ ಹಿನ್ನೆಲೆಯಲ್ಲಿನ ಅಧ್ಯಾತ್ಮದ ದೃಷ್ಟಿಯಿಂದ ಭಾರತೀಯ ಜನತೆಯ ಬಹು ಸಂಖ್ಯಾಕರು ಯಾರಿಂದಲೂ ಹೆಚ್ಚುಕಾಲ ಪ್ರಚೋದಿಸಲ್ಪಡಲಿಲ್ಲ.

ಹಿಂದೂ ಧರ್ಮವು ಅವನತಿಯ ಪರಾಕಾಷ್ಠೆಯನ್ನೈದಿದಾಗ, ಶಾಕ್ಯ ಮುನಿಯಾಗಿ ಬುದ್ಧನು ಕ್ರಿಸ್ತಪೂರ್ವ 6ನೇ ಶತಮಾನದಲ್ಲಿ ತನ್ನ ಹೊಸ ಮತ ಸ್ಥಾಪನೆಮಾಡಿ, ಅಪೂರ್ವವಾದ ತ್ಯಾಗ ಪ್ರೇಮಗಳಿಂದ ಜನತೆಯನ್ನು ಎಚ್ಚರಿಸಿದರೂ, ಆ ಧರ್ಮವೂ ಭಾರತದಲ್ಲಿ ಹೆಚ್ಚು ಕಾಲ ಬಾಳಲಿಲ್ಲ. ಅಶೋಕನೇ ಮೊದಲಾದ ಬೌದ್ಧ ಚಕ್ರವರ್ತಿಗಳ ಕಾರ್ಯಗಳ ಪರಿಣಾಮವೂ ಅನತಿ ಕಾಲದ ತನಕ ಮಾತ್ರವೇ ಉಳಿಯಿತು.

ಅಲೌಕಿಕ ಅಧ್ಯಾತ್ಮಿಕ ವ್ಯಕ್ತಿಯೂ, ಪ್ರಚಂಡ ಬುದ್ಧಿ ಸಾಮರ್ಥ್ಯವುಳ್ಳವರೂ ಆದ ಭಗವಾನ್ ಶಂಕರಾಚಾರ್ಯರು ಭಾರತೀಯ ಸಮಾಜದಲ್ಲಿ ಸುಮಾರು 8ನೇ ಶತಮಾನದಲ್ಲಿ ಉದಯಿಸಿ ಹಿಂದಿನ ಹಿಂದೂ ಧರ್ಮದ ವೈಜ್ಞಾನಿಕ ಸಿದ್ಧಾಂತವನ್ನು ಎತ್ತಿ ತೋರಿದರು—ಆಗ ಪ್ರಚಲಿತವಿದ್ದ ಎಷ್ಟೋ ಕುರುಡು ವಿಶ್ವಾಸಗಳನ್ನು ನೀಗಿ ಹಿಂದೂ ಸಮಾಜದ ಸುಧಾರಣೆ ಮಾಡಿದರು. ಅಧ್ಯಾತ್ಮರಂಗದಲ್ಲಿ ಒಂದು ನವೀನ ವಿಚಾರ ಕ್ರಾಂತಿಯನ್ನೇ ಅವರು ಉಂಟು ಮಾಡಿದರು. ಹಿಂದೂ ಧರ್ಮವನ್ನೆದುರಿಸಿದ್ದ ಬೌದ್ಧ ಮತವನ್ನು ಮೂಲೆ ಪಾಲು ಮಾಡಿದರು. ಮಾತ್ರವಲ್ಲ, ಸಾವನ್ನಪ್ಪುತ್ತಿದ್ದ ಹಿಂದೂ ಧರ್ಮವನ್ನು ಎಷ್ಟೋ ವಿಷಯಗಳಲ್ಲಿ ವಿಕಸನಗೊಳಿಸಿ ಅದನ್ನು ಉಳಿಸಿದರು ಎಂದರೆ ಹೆಚ್ಚಾಗಲಾರದು. ಅವರಿ ಬೇಕಾಗಿದ್ದ ರಾಷ್ಟ್ರೀಯ ಜಾಗೃತಿಯನ್ನೊದಗಿಸಿ ಭಾರತದ ರಾಜಕೀಯ ರಕ್ಷಣೆಗೆ ಅತ್ಯವಶ್ಯವಾಗಿದ್ದ ತಳಪಾಯ ಹಾಕಲು ಅವರಿಗೆ ಸಂದರ್ಭ ದೊರೆತಂತೆ ಕಾಣುವುದಿಲ್ಲ.

ಅಂದರೆ ಒಟ್ಟಿನಲ್ಲಿ ಭಾರತೀಯರನ್ನೆಲ್ಲ ಬಂಧಿಸುವ ಯಾವುದೇ ಸೂತ್ರ ಇಲ್ಲವಾಯಿತು. ನಾವು ಭಾರತೀಯರೆಂದು ಯಾರೂ ಹೆಮ್ಮೆ ಪಡುತ್ತಿರಲಿಲ್ಲ. ತಾವು ಬ್ರಾಹ್ಮಣರೆಂದೋ, ಕ್ಷತ್ರಿಯರೆಂದೋ, ಶ್ರೀಮಂತ ವೈಶ್ಯರೆಂದೋ,

ರಜಪೂತರೆಂದೋ, ವಂಗರೆಂದೋ, ಗುರ್ಜರರೆಂದೋ, ಮರಾಠರೆಂದೋ, ಚೋಳರೆಂದೋ, ಚೇರರೆಂದೋ, ಕನ್ನಡಿಗರೆಂದೋ ಜನರು ಹೆಮ್ಮೆಪಡುತ್ತಿದ್ದ ರಲ್ಲದೆ, "ನಾವು ಭಾರತೀಯರು" ಎಂಬುದಾಗಿ ಗ್ರಹಿಸಿ ಹೆಮ್ಮೆ ಪಡುತ್ತಿದ್ದ ಜನಸಾಮಾನ್ಯರು ಇರಲಿಲ್ಲ. ಅಂತಹ ರಾಷ್ಟ್ರನಾಯಕರೂ ಸಾಕಷ್ಟು ಸಂಖ್ಯೆ ಯಲ್ಲಿ ಕಾಣಲಿಲ್ಲ. ದೇಶದಲ್ಲಿದ್ದ ರಾಜಮಹಾರಾಜರುಗಳಲ್ಲಿ ಹೆಚ್ಚಿನವರು ತಮ್ಮ ತಮ್ಮ ಸಾಮ್ರಾಜ್ಯ ವಿಸ್ತರಣೆಯ ಉದ್ದೇಶ ಮಾತ್ರ ಇಟ್ಟುಕೊಂಡಿದ್ದರಲ್ಲದೆ, ಸಮಗ್ರ ಭಾರತ ಒಂದಾಗಬೇಕು ಎಂಬ ಮಹಾಧ್ಯೇಯವಿಟ್ಟುಕೊಂಡು ಅದ ಕ್ಕಾಗಿ ಹೋರಾಡಲಿಲ್ಲ.

ಹೀಗೆ ಶತಮಾನಗಳುರುಳಿದಂತೆ ಅತಿ ದುಃಖಮಯ ಸಂಕಟಗಳ ಪರಿವಾರ ಗಂಟುಬೀಳುವ ನಾಂದಿ ಭಾರತೀಯ ಸಮಾಜದಲ್ಲಿ ಉಂಟಾಯಿತು.

ಇಲ್ಲಿಯ ಸ್ಥಿತಿಗತಿಗಳನ್ನು ಚೆನ್ನಾಗಿ ಅಧ್ಯಯನಮಾಡಿ ಉಲ್ಲಸಿತರಾ ಗಿದ್ದ, ಅಷ್ಟೇಕೆ ಭಾರತೀಯ ರಾಜರಿಂದಲೇ ಕೆಲವೊಂದು ಸಂದರ್ಭ, ಅಪ್ರತ್ಯ ಕ್ಷವಾಗಿ ಆಮಂತ್ರಿಸಲ್ಪಟ್ಟ ಝೆಂಗಿಸ್ ಖಾನ್, ಘಜನಿ ಮಹಮ್ಮದ, ಘೋರಿ ಮಹಮ್ಮದ, ನಾದಿರ್ ಶಾ, ತೈಮೂರ ಮತ್ತಿತರರು ಭಾರತಕ್ಕೆ ಸಸೈನ್ಯ ರಾಗಿ ಆಗಿಂದಾಗ ಧಾಳಿಯಿಟ್ಟು ಭಾರತದ ವಿಪುಲ ಸಂಪತ್ತನ್ನು ಸೂರೆಗೈದರು. ಚಾರಿತ್ರಿಕವಾಗಿ ಅಮೂಲ್ಯವಾದ ಕಟ್ಟಡವೇ ಮೊದಲಾದ ಕಲಾತ್ಮಕ ವಸ್ತು ಗಳನ್ನು ನಾಶಪಡಿಸಿದರು. ದೇವಾಲಯ ಮೊದಲಾದವುಗಳನ್ನು ಕ್ರೂರವಾಗಿ ಹಾಳುಗೆಡವಿ ಹಿಂದೂಗಳ ಧೈರ್ಯವನ್ನೂ, ಆತ್ಮವಿಶ್ವಾಸವನ್ನೂ ಇನ್ನಷ್ಟು ಕೆಡಿ ಸುವ ಕಾರ್ಯಮಾಡಿದರು. ಭಾರತದ ಒಂದು ರಾಜ್ಯವನ್ನು ಸೂರೆಗೈದಾಗ ಇತರ ರಾಜ್ಯಗಳವರು ಸುಮ್ಮನೆ ಕೈಕಟ್ಟಿ ಕುಳಿತು ವಿನೋದ ನೋಡುತ್ತಿದ್ದರು. ಇದರಿಂದ ನೇರವಾಗಿ ಆಘಾತ ಹೊಂದಿದ ಬ್ರಾಹ್ಮಣರೂ ವಿದ್ವಜ್ಜನರೂ ಏನೂ ಮಾಡಲಾರದೆ ಅಸಹಾಯಕರಾಗಿದ್ದರೆ, ಇತರ ರಾಜ್ಯಗಳವರು "ಸಂತೋಷಪ್ರದ ವಾದ ಅಜ್ಞಾನ"ದಲ್ಲಿದ್ದರು (Happy ignorance). ಸಿಲ್ವರ್, ಭಾರತದ ಈ ಸುಲಿಗೆಗಳ ಕತೆ, ಅನೇಕ ಒಂಟೆಗಳ ಮೇಲೆ ಇಲ್ಲಿಯ ಸಂಪತ್ತನ್ನು ಹೇರಿಕೊಂಡು ಹೋದ ಆ ಚರಿತ್ರೆ. ತಿಳಿದಾಗ ಪರಕೀಯನಾದ ನನಗೇ ತೀವ್ರ ದುಃಖವೆನಿಸು ವುದು. ಆದರೆ ವೈರಿಗಳ ವಿರುದ್ಧ ಕೈಮಾಡುವ ಶಕ್ತಿ ಯಾರಿಗಿತ್ತು? ಆದ್ದ ರಿಂದ ಅಂದಿನಿಂದಲೇ ಕೆಲವೊಂದು ಮುಸ್ಲಿಮರ ರಾಜ್ಯಗಳು ಭಾರತದಲ್ಲಿ ಸ್ಥಾಪಿಸಲ್ಪಟ್ಟುವು. ಹಿಂದುಗಳ ಆಲಸ್ಯಕ್ಕೆ, ಅಲಕ್ಷ್ಯಕ್ಕೆ, ಪ್ರಕೃತಿಯ ಶಿಕ್ಷೆ ಈ ತೆರನಾಗಿ ಬಂತು.

ಮುಂದೆ ಬಾಬರನು, ಫಿರಂಗಿ ಸಮೇತವಾದ ದಂಡು ತಂದು, ಬಲಿಷ್ಠವಾದ ಮೊಗಲ್ ಸಾಮ್ರಾಜ್ಯ ಸ್ಥಾಪನೆಯ ಬುನಾದಿಯನ್ನು ಭದ್ರವಾಗಿ ಹಾಕಿದನು. ವಿದೇಶಗಳ ಸಂಪರ್ಕವೇ ಇಲ್ಲದೆ ಫಿರಂಗಿಯೆಂದರೆ ಏನೆಂದೇ ತಿಳಿಯದ ಭಾರತೀಯ ಸೈನಿಕರು ಹಾಗೂ ಅಧಿಕಾರಿಗಳು ನುಚ್ಚುನುರಿಯಾದರು. ಬಾಬರ್, ಹುಮಾಯೂನ್, ಅಕ್ಬರ, ಜಹಾಂಗೀರ, ಷಾಜಹಾನ ಮತ್ತು ಔರಂಗಜೇಬರೆಂಬ ಮೊಗಲ್ ಬಾದಶಹರು ಒಬ್ಬರ ಹಿಂದೆ ಒಬ್ಬರಾಗಿ ಭಾರತವನ್ನಾಳಿದರು. ಅವರ ಕಾಲದಲ್ಲಿ ಭಾರತೀಯ ಪರಾಕ್ರಮಿಗಳು, ಬುದ್ಧಿಜೀವಿಗಳು ಮತ್ತು ಕ್ಷತ್ರಿಯರು, ಮೊಗಲ ಚಕ್ರವರ್ತಿಗಳ ನಮ್ರಸೇವಕರಾಗಿ ಸೇರಿ, ಅವರ ಸಾಮ್ರಾಜ್ಯಲಾಲಸೆಯನ್ನು ತೃಪ್ತಿಗೊಳಿಸಿದರು. ಸಾಲದುದಕ್ಕೆ ಹಿಂದೂ ಹೆಣ್ಣುಮಕ್ಕಳನ್ನೂ ಅವರಿಗೆ ಧಾರೆಯೆರೆದುಕೊಟ್ಟು, "ಮೊಗಲ್ ಬಾದಶಹನೇ ನಮ್ಮಳಿಯ"ನೆಂಬ ಹೆಮ್ಮೆಯಿಂದ ಮೆರೆದರು. ಅವರಲ್ಲಿ ಕೆಲವು ಬಾದಶಹರು ಹಿಂದುಗಳಿಗೂ, ಹಿಂದೂ ಸಂಸ್ಕೃತಿಗೂ ದ್ರೋಹವೆಸಗುವುದನ್ನು ಈ ಮಹನೀಯರು ನೋಡಿ, ಸುಮ್ಮನೇ ಸಹಿಸಿದರು. ಅನೇಕ ಹಿಂದೂಗಳು ಈ ಕಾಲದಲ್ಲಿ ಮತಾಂತರ ಹೊಂದಿದರು. ಹಿಂದೂಗಳು ಕ್ಷುಲ್ಲಕ ಕಾರಣಕ್ಕಾಗಿ ತಮ್ಮವರನ್ನು ಮತಭ್ರಷ್ಟರನ್ನಾಗಿ ಮಾಡಲು ಸಿದ್ಧರಾಗಿದ್ದರೆ, ಮುಸಲ್ಮಾನರು ಅಂತಹವರನ್ನೇ ಪ್ರೇಮದಿಂದ ಸ್ವಾಗತಿಸಿ, ತಮ್ಮ ಮತಕ್ಕೆ ಸೇರಿಸಿಕೊಳ್ಳಲು ಸೊಂಟ ಕಟ್ಟಿದ್ದರು. ಆಗಿನ ಕಾಲದಲ್ಲಿ ಬ್ರಾಹ್ಮಣರೂ, ಕ್ಷತ್ರಿಯರೂ ಈ ಎಲ್ಲಾ ಘಟನೆಗಳನ್ನು ಹೆಚ್ಚಿನ ಮಟ್ಟಿಗೆ ಉಪೇಕ್ಷೆಯಿಂದ ಕಂಡು, "ಸುಖಸಂಕಥಾ ವಿನೋದ"ದಿಂದ ಕಾಲ ಕಳೆಯುತ್ತಿದ್ದರು. ಮೊಗಲರಿಗೆ ಇದಕ್ಕಿಂತ ಹೆಚ್ಚಿನ ಅಪೇಕ್ಷಣೀಯ ಸಂದರ್ಭ ಬೇರಿರಲಿಲ್ಲ. ಆದರೆ ಮೊಗಲ್ ಚಕ್ರವರ್ತಿಗಳಲ್ಲಿ ಒಂದು ಗುಣವಿತ್ತು. ಅವರು ಭಾರತೀಯ ಸಂಪತ್ತನ್ನು ಸೂರೆಗೈದು, ಎಲ್ಲಿಯೋ ರಾಜರಾಗಿರುವ ಬದಲು ಭಾರತದ ಬಾದಶಹರಾಗಿ ಉಳಿದು, ಭಾರತೀಯ ಸಂಪತ್ತನ್ನು ವೃದ್ಧಿಗೊಳಿಸಿದರು. ಶಿಲ್ಪ, ಸಂಗೀತ ಇತ್ಯಾದಿ ಕಲೆಗಳನ್ನೂ ಪ್ರೋತ್ಸಾಹಿಸಿದರು.

ಮೊಗಲರ ಅವನತಿಯಾಗುತ್ತ ಬಂದಾಗ ಭಾರತಕ್ಕೆ ವ್ಯಾಪಾರದ ಹೆಸರಲ್ಲಿ ಕಾಲಿಟ್ಟವರು, ಪೋರ್ಚುಗೀಸರು, ಡಚ್ಚರು, ಫ್ರೆಂಚರು ಮತ್ತು ಕಡೆಯದಾಗಿ ಬ್ರಿಟಿಷರು. ಈ ಎಲ್ಲಾ ಐರೋಪ್ಯ ಜನಾಂಗಗಳ "ವಿಭಾಗಿಸಿ ಆಳುವ" ರಾಜನೀತಿಗೆ ಮೊದಲೇ ಬೆನ್ನುಮೂಳೆ ಮುರಿಯಲ್ಪಟ್ಟು, ಸಹಸ್ರ ಹೋಳುಗಳಾಗಿ ವಿಭಾ

ಗಿಸಲ್ಪಟ್ಟ ಭಾರತವು ಉತ್ತಮ ಕ್ಷೇತ್ರವಾಗಿ ಮಾರ್ಪಟ್ಟಿತು. ದೇಶ ಪ್ರೇಮದ ಬದಲಿಗೆ ತಮ್ಮ ವೈಯಕ್ತಿಕ ಪ್ರತಿಷ್ಠೆಯ ಆಸೆಯಿಟ್ಟುಕೊಂಡಿದ್ದ ರಾಜರನ್ನು ಈ ಚಾಣಾಕ್ಷ ಐರೋಪ್ಯರು, ಮುಖ್ಯವಾಗಿ ಬ್ರಿಟಿಷರು, "ಭಾರತದ ಕೊರವಂಜಿಯು ಮಂಗನನ್ನು ಕುಣಿಸುವಂತೆ" ಕುಣಿಸಿ ಒಬ್ಬರ ಎದುರಿಗೆ ಇನ್ನೊಬ್ಬರನ್ನು ಎತ್ತಿಕಟ್ಟಿ ಯುದ್ಧ ಮಾಡಿಸಿ, ತಮಗೆ ಬೇಕಷ್ಟು ರಾಜ್ಯ ಪಡೆಮಕೊಳ್ಳುತ್ತಾ ಮುಂದೆ ಸಾಗಿದರು. ಕಟ್ಟಕಡೆಗೆ ನೀನೇ ತಿಳಿದಂತೆ ಸಮಗ್ರ ಭಾರತದ ಹೆಚ್ಚಿನ ಭಾಗ ಬ್ರಿಟಿಷ್ ಸಾಮ್ರಾಜ್ಯದ ಅಡಿಗಲ್ಲಾಯಿತು.

ಹಾಗಿದ್ದರೂ, ಸಿಲ್ವರ್, ಒಂದು ರೀತಿಯಿಂದ ಬ್ರಿಟಿಷರನ್ನು ನಿಂದಿಸಿ ಫಲವಿಲ್ಲ. ಆಗ ಬ್ರಿಟಿಷರು ಇಲ್ಲವಾಗಿದ್ದರೆ ಭಾರತವು ಇನ್ನೂ ಕ್ರೂರವೂ, ಅನಾಗರಿಕವೂ ಆದ ಮತ್ತೊಂದು ಮಹತ್ವಾಕಾಂಕ್ಷಿಯಾದ ರಾಷ್ಟ್ರದ ಸ್ವಾಧೀನವಾಗುತ್ತಿತ್ತು. ತನ್ನನ್ನೇ ರಕ್ಷಣೆ ಮಾಡಿಕೊಳ್ಳಲಾಗದ ಅಶಕ್ತ ಸ್ಥಿತಿಯಲ್ಲಿದ್ದ ಈ ದೇಶ ಆಗ ಏನು ತಾನೇ ಮಾಡಬಹುದಿತ್ತು? ಇನ್ನೊಬ್ಬರ ಬಗಲಿಗೆ ಬೀಳುವುದನ್ನು ಬ್ರಿಟಿಷರು ಉಳಿದರು. ಇತಿಹಾಸದ ಅಧ್ಯಯನದಿಂದ ನಾವೀ ಸತ್ಯವನ್ನು ಮನಗಾಣುತ್ತೇವೆ

ಭಾರತವು ಬ್ರಿಟಿಷರ ಅಧೀನವಿದ್ದ ಪ್ರಾರಂಭದ ಸುಮಾರು ಮುಕ್ಕಾಲು ಶತಮಾನದಲ್ಲಿ ಭಾರತೀಯರ ಉಳಿದುಳಿದ ಆತ್ಮ ವಿಶ್ವಾಸ, ಸಂಸ್ಕೃತಿ, ಧರ್ಮ, ದೇಶಪ್ರೇಮ ಪೂರ್ಣ ನಷ್ಟ ಹೊಂದಿದಂತಾಗಿ ಬ್ರಿಟಿಷ್ ಧ್ವಜವು ಭಾರತೀಯ ಆಕಾಶದಲ್ಲಿ ಫಟ ಫಟನೆ, ನಿರ್ವಿಘ್ನವಾಗಿ ಹಾರುವಂತಾಗಿತ್ತು. ಬ್ರಿಟಿಷ್ ಜನಾಂಗದ ವಿಧೇಯ "ಕೂಲಿ"ಗಳಾಗಿದ್ದರು ಭಾರತೀಯ ಜನರು.

ಆದರೆ, ಬ್ರಿಟಿಷ್ ರಾಜ್ಯಭಾರದ ಕೆಡುಕಿನಲ್ಲಿಯೂ ಒಂದು ಒಳಿತೇ ಆಯಿತು. ಹಿಂದೆಂದೂ ಒಂದೇ ಆಡಳಿತದಲ್ಲಿ ಒಟ್ಟಾಗದ ಭಾರತವೀಗ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಒಟ್ಟಾಗಿತ್ತು. ಇದರಿಂದ ಭಾರತೀಯರಿಗೆಲ್ಲ ಒಟ್ಟಾಗಿ ಬೆರೆಯಲು, ವಿಚಾರ ವಿನಿಮಯ ಮಾಡಲು, ಐಕ್ಯತೆಯ ಭಾವನೆಯನ್ನು ಸ್ವಲ್ಪವಾದರೂ ಅನುಭವಿಸಲು ಸಹಾಯಕವಾಯಿತು.

ಬ್ರಿಟಿಷ್ ಆಡಳಿತದಲ್ಲಿ ರೈಲ್ವೆ, ಟಪ್ಪಾಲು, ತಂತಿ, ರಸ್ತೆಗಳು, ವಿಮಾನ ಇತ್ಯಾದಿ ಆಧುನಿಕ ಸಂಚಾರ ಸಂಪರ್ಕಗಳು ಏರ್ಪಟ್ಟುದರಿಂದ ಭಾರತೀಯರೆಲ್ಲ ಒಂದು ಎಂಬ ರಾಷ್ಟ್ರೀಯ ಭಾವನೆ ಕಿಂಚಿತ್ತಾದರೂ ಜಾಗೃತವಾಗುವಂತಾಯಿತು.

ತಮ್ಮ ಸರಕಾರ ನಡೆಸಲು ಬೇಕಾದ ಅಧಿಕಾರಿಗಳ ತರಬೇತಿಗಾಗಿಯೇ ಸರಕಾರವು ಅನೇಕ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿತು. ಅವರಿಗೆ ಅಲ್ಲಿ ಆಧುನಿಕ ಶಿಕ್ಷಣ ಹಾಗೂ ಪ್ರಭಾವಶಾಲಿಯಾದ ಇಂಗ್ಲಿಷ್ ಭಾಷೆಯ ತಿಳಿವು ದೊರೆಯಿತು. ಆದರಿಂದ ಭಾರತದ ವಿವಿಧ ಭಾಗದ ಜನರಿಗೆ ಒಂದೇ ಸಾಮಾನ್ಯ ಭಾಷೆ ದೊರೆತಂತಾಗಿ, ಭಾವನಾತ್ಮಕ ಐಕ್ಯತೆಗೆ ಸುಲಭವಾಯಿತು. ಅಲ್ಲದೆ, ಮಹಾನ್ ಸಾಹಿತ್ಯದಿಂದ ಕೂಡಿದ ನಮ್ಮ ಮೆಚ್ಚಿನ ಇಂಗ್ಲಿಷ್ ಭಾಷೆಯ ಸಹಾಯದಿಂದ ಭಾರತೀಯರು ಇತರ ದೇಶಗಳ ದೇಶಪ್ರೇಮದ ಸಾಹಸದ ಚರಿತ್ರೆ ತಿಳಿದುಕೊಂಡರು. ನಮ್ಮ ಸ್ವಾತಂತ್ರ್ಯದ ಹೋರಾಟವೂ ಅವರನ್ನು ಸ್ಫೂರ್ತಿಗೊಳಿಸಿರಬೇಕು. ತಾವೂ ಏಕೆ ಅಂತಹ ರಾಷ್ಟ್ರೀಯ ಮನೋಭಾವ ಬೆಳೆಸಬಾರದೆಂದುಕೊಂಡು, 19ನೇ ಶತಮಾನದ ಅಂತ್ಯಭಾಗದ ಹಾಗೂ 20ನೇ ಶತಮಾನದ ಆದಿ ಭಾಗದಲ್ಲಿ ಅನೇಕ ವಿದ್ಯಾವಂತರಿಗೆ ತೋರಿತು.

ಅಂತಹ ಭಾವನೆಯಿಂದ ಪ್ರಚೋದಿತರಾದವರಲ್ಲಿ ಮೊದಲಿಗರಾದವರು ದಾದಾಭಾಯಿ ನೌರೋಜಿ, ಗೋಪಾಲ ಕೃಷ್ಣ ಗೋಖಲೆ, ಬಾಲಗಂಗಾಧರ ತಿಲಕರಂತಹರಾದರೆ ಅವರ ಪೈಕಿ ಪ್ರಮುಖರು ಮತ್ತು 1948ರ ತನಕವೂ ಭಾರತೀಯ ರಾಜಕೀಯಾಕಾಶದಲ್ಲಿ ಉಜ್ವಲ ತಾರೆಯಾಗಿ ಮಿನುಗಿದ್ದವರು ಮಹಾತ್ಮಾ ಗಾಂಧೀಜಿಯವರು. ಇವರು ತಮ್ಮ ಅಲೌಕಿಕ ಪ್ರೇಮ, ಮಾನವೀಯ ಹೃದಯ, ಬುದ್ಧಿಮತ್ತೆ, ಮತ್ತು ದೇಶಭಕ್ತಿಗಳಿಂದ ಇಡಿಯ ಭಾರತದ ಸಮಾಜದಲ್ಲಿರುವ ಭಾವನಾತ್ಮಕ ವ್ಯಕ್ತಿಗಳನ್ನೆಲ್ಲ ಸಂಘಟಿಸಿ, ಸ್ವಾತಂತ್ರ್ಯ ಹೋರಾಟ ಹೂಡಿದರು. ಅವರಿಗೆ ನೆರವಾಗಿ ಇತರ ಅನೇಕ ಮಹಾನ್ ರಾಷ್ಟ್ರನಾಯಕರೂ ದುಡಿದರು. ಇದರಿಂದ ಭಾರತೀಯರು ತಮ್ಮ ನಷ್ಟ ಚೇತನವನ್ನು ಪುನಃ ಕೆಲವು ಮಟ್ಟಿಗೆ ಪಡೆಯುವಂತಾಯಿತು. ಹಿಂದೂ ಸಮಾಜವೂ ಪುನಃ ಆಧ್ಯಾತ್ಮಿಕವಾಗಿ ಚೇತರಿಸಿತು.

ಯಾವ ವರ್ಣವಿಭಾಗದ ತಪ್ಪಾದ ಆಚರಣೆಯಿಂದ, ಹಿಂದೂ ಸಮಾಜವು ಒಡೆದು ನೂರಾಗಿತ್ತೋ, ಆ ವರ್ಣವಿಭಾಗವನ್ನು ಗಾಂಧೀಜಿಯವರು ತಮ್ಮದೇ ಆದ ಹೊಸ ದೃಷ್ಟಿಯಿಂದ, ಅಂದರೆ ವರ್ಣವಿಭಾಗದ ಮೂಲ ಸಿದ್ಧಾಂತಕ್ಕನುಸಾರ ನೋಡಿದರು. ಅದು ಜನನದಿಂದ ನಿರ್ಣಯವಾಗುವುದೆಂಬ ಸಿದ್ಧಾಂತವನ್ನೂ, ಅದರಲ್ಲಿ ಮೇಲು ಕೀಳೆಂಬ ಭೇದ ಭಾವನೆಯಿದ್ದೇ

ತೀರಬೇಕು ಎಂಬ ದೃಷ್ಟಿಯನ್ನೂ ಅವರು ಕಾರ್ಯತಃ ತಮ್ಮ ಜೀವನದಲ್ಲಿ ತೊಡೆದು ಹಾಕಿ, ಗೀತಾ ವಾಕ್ಯದಂತೆ ಅದು ಗುಣ ಕರ್ಮಗಳಿಂದ ನಿರ್ಣಯ ವಾಗತಕ್ಕದ್ದೆಂದೂ, ಈ ಎಲ್ಲ ವರ್ಣಗಳಲ್ಲಿ ಮೇಲು ಕೀಳೆಂಬ ಭೇದವೇ ಇಲ್ಲ ವೆಂದೂ ತೋರಿದರು. ಮಾತ್ರವಲ್ಲ ಪಂಚಮರೆಂದು ತಿರಸ್ಕೃತರಾದ ಆದಿವಾಸಿ ಗಳನ್ನು ಹರಿಜನರೆಂದು ಗೌರವಿಸಿ, ಎದೆಗಪ್ಪಿಕೊಂಡು, ಹಿಂದೂ ಸಮಾಜವು ನಗೆಗೀಡಾದ ಪ್ರಸಂಗವನ್ನು ತಪ್ಪಿಸಲು ಯತ್ನಿಸಿದರು. ಎಷ್ಟೋ ಸಂಪ್ರದಾ ಯವಾದಿ ಕರ್ಮಠರು ಇದನ್ನು ತೀವ್ರವಾಗಿ ಖಂಡಿಸಿದರೂ, ಗಾಂಧೀಜಿಯ ವರು ಗಣಿಸದೆ, ಅವರಿಗೆ ದೇವಾಲಯ ಪ್ರವೇಶ ಕೂಡಾ ಸಿಗಬೇಕು, ಅವರ ಆರ್ಥಿಕ ಉನ್ನತಿ ಆಗಬೇಕು ಎಂದು ಘೋಷಿಸಿ ಅದಕ್ಕಾಗಿ ದುಡಿದರು.

ಆದ್ದರಿಂದಲೇ ಬ್ರಿಟಿಷ್ ಭಕ್ತರನ್ನುಳಿದು ಎಲ್ಲ ವರ್ಗದ ಎಲ್ಲ ವರ್ಣದ ಭಾವನಾತ್ಮಕ ವ್ಯಕ್ತಿಗಳನ್ನು ಅವರು ಒಂದಾಗಿಸಿ, ಚಾರಿತ್ರಿಕವಾದ ಸ್ವಾತಂತ್ರ್ಯ ಹೋರಾಟವನ್ನು ಸತ್ಯಾಗ್ರಹವೆಂಬ ಹೆಸರಿನಲ್ಲಿ ಹೂಡಲು ಸಮರ್ಥರಾದರು. ಅವರ ಹೋರಾಟಕ್ಕೆ, ಇಂಡಿಯನ್ ನೇಶನಲ್ ಕಾಂಗ್ರೆಸ್ ಎಂಬ ಪಕ್ಷವನ್ನ ವರು ಒಂದು ಸಾಧನವನ್ನಾಗಿ ಉಪಯೋಗಿಸಿಕೊಂಡರು.

ಅವರ ಜೀವನ ಹಾಗೂ ತತ್ವದಲ್ಲಿ ಇನ್ನೊಂದು ಮಹತ್ವವಿದೆ. ಯಾವ ಹಿಂದೂ ಧರ್ಮದ ಭವ್ಯ ಸಿದ್ಧಾಂತಗಳನ್ನು ವಿರೂಪಗೊಳಿಸಿ ಸಮಾಜ ಛಿದ್ರ ವಾಗಿದ್ದಿತೋ ಆ ಸಿದ್ಧಾಂತದ ಎಳೆಗಳನ್ನು ಈ ಮಹಾನ್ ವ್ಯಕ್ತಿ ಪುನಃ ಸಂಗ್ರ ಹಿಸಿ ಕ್ರೋಢೀಕರಿಸಿ, ವೈಜ್ಞಾನಿಕ, ವೈಚಾರಿಕ, ಅನುಭವಾತ್ಮಕ ರೂಪದಲ್ಲಿ ತುಲನೆಮಾಡಿ, ಅನ್ಯದೇಶದ ಮಹಾನ್ ವ್ಯಕ್ತಿಗಳ ಜೀವನದಿಂದಲೂ ಸ್ಫೂರ್ತಿ ಪಡೆದು. ಪ್ರಾಚೀನ ಕಾಲದಲ್ಲಿ ಭಾರತದ ಋಷಿಗಳು ಹೇಗೆ ಬದುಕಿದರೋ ಹಾಗೆಯೇ ಬದುಕಿದರು—ಪರಮಾತ್ಮನೊಡನೆ ಸಹಜೀವನ ಮಾಡಿದರು. ಆದರಿಂದಲೇ ಅವರಿಗೆ ಅಂತಹ ಅಲೌಕಿಕ ಶಕ್ತಿ ಸಿದ್ಧಿಸಿತು. ಭಾರತೀಯರನ್ನು ಒಂದು ಧ್ವಜದಡಿಯಲ್ಲಿ ತಾತ್ಕಾಲಿಕವಾಗಿಯಾದರೂ ಒಂದುಗೂಡಿಸುವ ಶಕ್ತಿ ಬಂತು.

ಇದು ಭಾರತೀಯ ಚರಿತ್ರೆಯಲ್ಲೇ ಅನುಪಮವೂ, ಅಸಾಧಾರಣವೂ ಆದ ವಿಷಯವಾಗಿದೆ.

19ನೇ ಶತಮಾನದಲ್ಲಿ ಜನಿಸಿದ ಅಪ್ರತಿಮ ಆಧ್ಯಾತ್ಮಿಕ ವ್ಯಕ್ತಿಯಾದ ಭಗವಾನ್ ರಾಮಕೃಷ್ಣ ಪರಮಹಂಸರು ಹಾಗೂ ಅವರ ಕೀರ್ತಿಶಾಲಿ ಶಿಷ್ಯ

ಸ್ವಾಮಿ ವಿವೇಕಾನಂದರನ್ನು ಈ ಸಂದರ್ಭ ನಾನು ನೆನಸದಿರಲು ಸಾಧ್ಯವೇ ಇಲ್ಲ ಸಿಲ್ವರ್. ಶ್ರೀ ರಾಮಕೃಷ್ಣರು ಅನೇಕ ವಿಧದ ಸಾಧನೆಗಳನ್ನು ಅಂದರೆ ನಮ್ಮ ಕ್ರೈಸ್ತ ಪಂಥದ ಸಾಧನೆ ಕೂಡಾ ಮಾಡಿ, ಪರಮಾತ್ಮ ಸಾಕ್ಷಾತ್ಕಾರ ಪಡೆದು ಹಿಂದೂ ಸಿದ್ಧಾಂತದ ಸರ್ವ ಧರ್ಮ ಸಮನ್ವಯವನ್ನು ಸತ್ಯವಾಗಿ ಮಾಡಿ ತೋರಿದರು. ಆಗಿನ ಕಾಲದಲ್ಲಿ ತುಂಬಿದ್ದ ಅನಾಚಾರ, ಗೊಡ್ಡು ಸಂಪ್ರದಾಯಗಳನ್ನು ತೆಗೆದು, ಹಿಂದೂ ಧರ್ಮದ ವೈಜ್ಞಾನಿಕತೆಯನ್ನು ಜಗತ್ತಿಗೆ ಪ್ರದರ್ಶಿಸಲು ಅವರು ಮಾಡಿದ ಯತ್ನ ಬಹಳ ಹಿರಿದು. ಇದೇ ದಿಸೆಯಲ್ಲಿ ಸ್ವಾಮಿ ವಿವೇಕಾನಂದರೂ ಮುಂದರಿದು ವೇದಾಂತ ಕೇಸರಿಯಾಗಿ, ಇಡಿಯ ಅಮೇರಿಕಾವನ್ನೂ ಪ್ರಪಂಚವನ್ನೂ ಮುಗ್ಧರಾಗಿ ಮಾಡಿ ಹಿಂದೂ ಧರ್ಮದ ಮಹತ್ವವನ್ನು ಘಂಟಾಘೋಷವಾಗಿ ಸಾರಿ, ಶ್ರೀ ರಾಮಕೃಷ್ಣ ಮಿಶನ್ ಎಂಬ ಮಹಾನ್ ಸಂಸ್ಥೆಯನ್ನು ರಚಿಸಿ, ಭಾರತಕ್ಕೂ, ಅನ್ಯ ದೇಶ ಗಳಿಗೂ ಸೇವೆಯೆಸಗಲು ಮುಂದಾದ ವಿಷಯವಂತೂ ನಿನಗೆ ಗೊತ್ತೇ ಇದೆ. ಅವರಿಬ್ಬರ ಪ್ರಯತ್ನದಿಂದಲೂ ಹಿಂದೂಗಳ ಸಮಾಜದ ಮೇಲೆ ಬಹಳ ಉತ್ತ ಮವಾದ ಹಾಗೂ ಆರೋಗ್ಯಕರವಾದ ಪರಿಣಾಮವಾಗಿತ್ತು. ಗಾಂಧೀಜಿಯ ವರ ಮುಂದಿನ ಕಾರ್ಯಕ್ಕೆ ಇದರಿಂದ ಗಣನೀಯ ಪ್ರಯೋಜನವಾಯಿತು.

ಅಂತೂ 1947ರಲ್ಲಿ ಗಾಂಧೀಜಿಯವರ ಆಶ್ಚರ್ಯಕರ ಆತ್ಮಶಕ್ತಿ ಹಾಗೂ ಸಂಘಟನಾ ಶಕ್ತಿಗಳ ಪರಿಣಾಮವಾಗಿ, ಅಲ್ಲದೆ ಬ್ರಿಟಿಷರ ಆಂತರಿಕ ಶಕ್ತಿಯು ಎರಡು ಮಹಾ ಯುದ್ಧಗಳಿಂದ ಕುಂದಿದ ಕಾರಣದಿಂದಲಾಗಿ, ಭಾರತಕ್ಕೆ ಅನೇಕ ಶತಮಾನಗಳ ಪಾರತಂತ್ರ್ಯದ ನಂತರ ಸ್ವಾತಂತ್ರ್ಯ ದೊರಕಿತು. 1857ರಲ್ಲಿ ಝಾನ್ಸಿ ರಾಣಿ ಲಕ್ಷ್ಮೀಬಾಯಿಯವರ ನೇತೃತ್ವದಲ್ಲಿ ನಡೆಸಿದ ವಿಫಲ ಸ್ವಾತಂತ್ರ್ಯ ಹೋರಾಟದ ಕನಸು ಈಗ ನೆನಸಾಯಿತು. ಆದರೆ ಸ್ವಾತಂ ತ್ರ್ಯಕ್ಕಾಗಿ ಭಾರತದ ವಿಭಜನೆಯಂತಹ ಮೌಲ್ಯವನ್ನು ತೆರಬೇಕಾಯಿತು.

ಹೀಗಿದ್ದರೂ ಭಾರತವು ಗಾಂಧೀಜಿಯವರ ನೆರಳಲ್ಲಿ ಸ್ವಾತಂತ್ರ್ಯ ಪೂರ್ವ ದಲ್ಲಿ ಏನನ್ನೆಲ್ಲ ಕಲಿತಿತ್ತೋ, ಅದನ್ನೆಲ್ಲ ಹೆಚ್ಚಿನ ಮಟ್ಟಿಗೆ ಸ್ವಾತಂತ್ರ್ಯ ದೊರೆ ತೊಡನೆಯೇ ಮರೆಯತೊಡಗಿತು, ಎಂಬುದು ಚರಿತ್ರೆಯಲ್ಲೇ ಇನ್ನೊಂದು ಅತಿ ದುಃಖಾವಹ ಸಂಗತಿಯಾಗಿದೆ.

ಮಹಾತ್ಮಾ ಗಾಂಧೀಜಿಯವರು ತನ್ನ ದೇಶ ಬಾಂಧವರಿಗೆ ಸರ್ವ ಧರ್ಮ ಸಮನ್ವಯದ ತಳಹದಿಯಲ್ಲಿ ಹಿಂದೂ ಮುಸ್ಲಿಂ ಐಕ್ಯತೆಯಾಗಬೇಕು ಎಂಬು

ದಾಗಿ ದಿನ ಬಿಡದೆ ಉಪದೇಶಿಸಿದ್ದರೂ ಕೂಡಾ ಫಲ ದೊರೆಯಲಿಲ್ಲ. ಬ್ರಿಟಿಷರು ಪ್ರಯಾಸಪಟ್ಟು ಅನೇಕ ತಲೆಮಾರುಗಳಿಂದ ಉದ್ದೇಶಪೂರ್ವಕ ತಮ್ಮ ಲಾಭಕ್ಕಾಗಿ ಗಾಳಿ ಹಾಕಿ ಬೆಳೆಸಿದ ಹಿಂದೂ ಮುಸ್ಲಿಂ ವೈಷಮ್ಯದ ಕಿಚ್ಚು 1947 ನೇ ಇಸವಿ ಓಗಸ್ಟ್ 15ರಂದು ಮಧ್ಯರಾತ್ರಿಯ ಹೊತ್ತಿಗೆ ಪವಿತ್ರವಾದ ಭಾರತೀಯ ಸ್ವಾತಂತ್ರ್ಯ ಘೋಷಿಸಲ್ಪಟ್ಟು ಕಾರ್ಯರೂಪಕ್ಕೆ ಬರುವ ಕಾಲದಲ್ಲೇ, ಘೋರವಾದ ಕಾಡ್ಗಿಚ್ಚಾಗಿ, ಭಾರತವನ್ನು ವಿಭಜಿಸಿ ಒಂದು ದಿನಕ್ಕೆ ಮೊದಲು ಸ್ಥಾಪಿತವಾದ ಪಾಕಿಸ್ತಾನದಲ್ಲೂ ನಂತರ ಭಾರತದಲ್ಲೂ ವ್ಯಾಪಿಸಿತು. ಲಕ್ಷಗಟ್ಟಲೆ ಜನರ ಸಂಹಾರವಾಯಿತು. ರಕ್ತದ ಕಾಲುವೆ ಕೋಡಿ ಹರಿಯಿತು; ಜನ ಶೋಕ ಸಾಗರದಲ್ಲಿ ಮುಳುಗಿದರು. ಹಲವರು ಕೋಪೋದ್ರಿಕ್ತರಾಗಿ ದ್ವೇಷದ ಕಿಚ್ಚನ್ನು ಇತರೆಡೆಗಳಿಗೂ ಹಬ್ಬಿಸಿದರು. ಶತಕೋಟಿಗಳ ಲೆಕ್ಕದಲ್ಲಿ ಧನ ಹಾನಿಯಾಯಿತು. ಲಕ್ಷೋಪ ಲಕ್ಷ ಮನೆಗಳು ಸುಟ್ಟು ಸೂರೆಯಾದುವು. ಸಹಸ್ರಾರು ಹೆಣ್ಣುಮಕ್ಕಳ ಮಾನ ಹಾನಿಯಾಯಿತು. ಹಿಲ್ವರ್, ಆಗಿನ ಆ ಎದೆಯೊಡೆಯುವ ಭೀಕರ ಕತೆಯನ್ನು ಕಣ್ಣಾರೆ ಕಂಡವರ ಬಾಯಿಯಿಂದಲೇ ಕೇಳಬೇಕು.

ಗಾಂಧಿಜೀಯವರು ಈ ಘಟನೆಯಿಂದ ಹತಾಶರಾದರು; ನಾಚಿ ತಲೆಬಾಗಿದರು. ಆದರೂ ಬಿಡದೆ ಗೊಂದಲಪೀಡಿತ ನೋಖಾಲಿಯಲ್ಲಿ ನಿಶ್ಶಸ್ತ್ರರಾಗಿ ಶಾಂತಿ ದೂತರಾಗಿ ಮುಸ್ಲಿಮರ ಮಧ್ಯೆ ಸಂಚರಿಸಿ, ಅವರ ಹಿಂಸಾ ಭಾವನೆ ತೆಗೆದು ಅಲ್ಲಿಯ ಹಿಂದುಗಳನ್ನು ಸಾಂತ್ವನಗೊಳಿಸಲು ಯತ್ನಿಸಿದರು. ಎರಡೂ ಕಡೆಯವರ ಹೃದಯ ಪರಿವರ್ತನೆಗಾಗಿ ಅವರು ಎರಡು ಸಲ ಆಮರಣ ಉಪವಾಸದಂತಹ ಅಸಹ್ಯ ಶಿಕ್ಷೆಯನ್ನು ತಮಗೇ ಹೇರಿಕೊಂಡಿದ್ದರು. ಈ ಯಜ್ಞದಲ್ಲಿ ಅವರು ಸಫಲರಾಗಿ ಹಿಂದೂ ಮುಸ್ಲಿಂ ದಂಗೆಯನ್ನು ಪೂರ್ಣವಾಗಿ ನಿಲ್ಲಿಸಿ, ಇಕ್ಕಡೆಯ ಮನೋಪರಿವರ್ತನೆ ಮಾಡಲು ಸಮರ್ಥರಾದರೂ ಉಗ್ರಗಾಮಿಗಳಾದ ಕೆಲವರು ಹಿಂದುಗಳು ಬೇರೆಯೇ ಯೋಚಿಸಿದರು. ಗಾಂಧೀಜಿಯವರ ಇಹಲೋಕಯಾತ್ರೆ ಮುಗಿಸದೆ, ಭಾರತದಲ್ಲಿ ಮುಸ್ಲಿಮರನ್ನು ಕೊನೆಗೊಳಿಸಲು ಸಾಧ್ಯವಿಲ್ಲವೆಂದು ಅವರು ನಂಬಿ, ಇತಿಹಾಸದಲ್ಲೇ ಅತಿ ನಾಚಿಕೆಗೇಡಿನ ಕೆಲಸವಾದ, ಗಾಂಧೀಜಿಯವರ ಕಗ್ಗೊಲೆಯನ್ನು ಗೈದು ಸಂತೋಷಪಟ್ಟರು.

ಗಾಂಧೀಜಿಯವರ ಅಕಾಲಿಕ ಮರಣದ ನಂತರ, ಭಾರತವನ್ನು ಅನೇಕ ಶತಮಾನಗಳಿಂದ ಕಾಡುತ್ತಿದ್ದ ಭೂತವು ಪುನಃ ಕಾಡತೊಡಗಿದೆಯೆಂದು

ಅತೀವ ವಿಷಾದದಿಂದ ನಾನು ಗುರುತಿಸಿದ್ದೇನೆ. ಯಾವ ಕೊರತೆಗಳಿಂದ ಭಾರತವು ಶತಮಾನ ಶತಮಾನಗಳ ಪರಿಯಂತ ಅನ್ಯರ ಪಾದಾಕ್ರಾಂತವಾಯಿತೋ ಅವೇ ಕೊರತೆಗಳು ಬಂದು ಭಾರತದ ಹೊಸಲಲ್ಲಿ ನಿಂತು, ಬಾಗಿಲು ಬಡಿಯುತ್ತವೆ.

ಆದರೆ ಸಿಲ್ವರ್, "ಈ ಭಾರತದ ದೀರ್ಘ ಇತಿಹಾಸ ನನಗೇಕೆ ಬೇಕು?" ಎಂದುಕೊಂಡು ನೀನಿದನ್ನು ಓದುತ್ತಿರುವಾಗಲೇ ಆಕಳಿಸಿ ಚಿಟಿಕೆ ಹೊಡೆಯುತ್ತಿಯೇನೋ? ಹಾಗಿದ್ದರೆ ಸ್ವಲ್ಪ ನೆಟ್ಟಗೆ ಕುಳಿತು, ನನಗಾಗಿಯಾದರೂ ಇದನ್ನು ಪೂರ್ಣ ಓದಿಬಿಡು ಗೆಳೆಯ, ಆಗದೇ? ಇದೇನು ಅಷ್ಟೊಂದು ದೀರ್ಘವಾಗಿಲ್ಲ. ಅತಿ ಸಂಕ್ಷಿಪ್ತವಾಗಿದೆ.

"ಹೇಗೂ ಇರಲಿ! ನನಗಿದೆಲ್ಲಾ ಏತಕ್ಕೆ?" ಎಂದುಕೊಂಡು ನೀನು ಪುನಃ ಆಕ್ಷೇಪಿಸಬಹುದು, ನನಗೆ ಗೊತ್ತು. ನಿನ್ನಷ್ಟು ತಾಳ್ಮೆಯಿಲ್ಲದ ಜನರು ಈ ಪ್ರಪಂಚದಲ್ಲಿ ಸಿಗುವುದು ಅಪರೂಪವಲ್ಲವೇ? ಹಿಂದಿನ ಕತೆ ಬರೆಯಲು ಕಾರಣವಿದೆ. ಏನು ಗೊತ್ತೇ?

ಹಿಂದಿನ ಭಾರತೀಯ ಸಮಾಜದ ವಿವಿಧ ಮುಖ ಸಮಸ್ಯೆಗಳು, ಇಂದಿನ ಸಮಾಜದ ಮೇಲೂ ತಮ್ಮ ನೆರಳು ಬೀರಿವೆ. ಮಾತ್ರವಲ್ಲ ಹಿಂದಿನ ಸಮಸ್ಯೆಗಳ ಪರಿಣಾಮವಾಗಿ ಭಾರತಕ್ಕೆ ಗಂಟು ಬಿದ್ದ ಶತಮಾನಗಳ ಪಾರತಂತ್ರ್ಯವೂ ಕೂಡಾ ಇಂದಿನ ಸಮಾಜದಲ್ಲಿ ಅನೇಕ ಸಮಸ್ಯೆಗಳನ್ನುಂಟುಮಾಡಿದೆ. ಅದನ್ನು ವಿಶದೀಕರಿಸುವುದಕ್ಕಾಗಿ ಮಾತ್ರವೇ ಹಿಂದಿನ ಪ್ರಸಂಗ ಸ್ವಲ್ಪ ಹೇಳಿದೆ ಅಷ್ಟೆ. ನಿನ್ನನ್ನು ಇಷ್ಟು ಕಾಯಿಸಿ, ಇನ್ನೀಗ ಇಲ್ಲಿಯ ಪ್ರಚಲಿತ ರಾಷ್ಟ್ರೀಯ ಸಂಬಂಧವಿರುವ ಸ್ಥಿತಿಗತಿಗಳ ವಿಷಯ ನಿನಗೆ ಬರೆಯುತ್ತೇನೆ.

ಅನ್ಯರ ಆಳ್ವಿಕೆಯಲ್ಲಿ ಮುಖ್ಯವಾಗಿ ಬ್ರಿಟನಿನ ವಶವರ್ತಿಯಾಗಿದ್ದ ಕಾಲದಲ್ಲಿ ಭಾರತದಲ್ಲಾದ ತೀವ್ರ ಆರ್ಥಿಕ ಶೋಷಣೆಯ ಪರಿಣಾಮವಾಗಿ ಉಂಟಾದ ದಾರುಣವಾದ ದಾರಿದ್ರ್ಯ; ಪರಕೀಯ ರಾಜಕೀಯ ದಬ್ಬಾಳಿಕೆಯಿಂದುಂಟಾದ ಸತ್ವಹೀನ, ಪರತಂತ್ರ, ಅಸಹಾಯಕ ಮನೋಭಾವ; ಶತಮಾನ ಶತಮಾನಗಳ ತನಕ ಭೀಕರ ದಾರಿದ್ರ್ಯದಲ್ಲಿ ಮುಳುಗಿ, ಯಾವುದೇ ಸ್ಫೂರ್ತಿಯುತ ಕಾರ್ಯಕ್ರಮವಿಲ್ಲದೆ ಹೊಟ್ಟೆಗಾಗಿ ಯಂತ್ರದಂತೆ, ಗಾಡಿಯೆತ್ತಿನಂತೆ, ದುಡಿದು ಉಂಟಾದ ರಕ್ತಗತ ಜಡತೆ; ಭಾರತದ ಮೇಲೆ ಹೇರಲ್ಪಟ್ಟ ಅನ್ಯ ಸಂಸ್ಕೃತಿಯಲ್ಲಿ ಬೇಕಾದುದನ್ನು ಮಾತ್ರವೇ ಅರಗಿಸಿ, ಉಳಿದುದನ್ನು ಬಿಸುಡುವ ಬದಲು

ಎಲ್ಲವೂ ಭಾರತೀಯರ ಉದರದಲ್ಲಿ, ಭಾರವಾಗಿ ಜೀರ್ಣವಾಗದ, ಕೊಳೆತ ಆ ಹಾರವಾಗಿ ಉಳಿದುದರ ಫಲ; ಧರ್ಮದ ಹೆಸರಲ್ಲಿ ಅನೇಕ ಶತಮಾನಗಳಿಂದ ಬೆಳೆಸಿಕೊಂಡು ಬಂದ ಅಪೌರುಷೇಯವಾದ; ಧಾರ್ಮಿಕ ಕುರುಡು ವಿಶ್ವಾಸಗಳು, ಆಧ್ಯಾತ್ಮಿಕತೆಯ ಮತ್ತು ದೇವರ ಹೆಸರಲ್ಲಿ ಹೊಟ್ಟೆಹೊರೆಯಲು ಮತ್ತು ದುಡ್ಡು ಮಾಡಲು ಮಾಡುವ ಕಪಟ, ವಂಚನೆಗಳು ಹಾಗೂ ಸನ್ಯಾಸದ ವೇಷ ಭೂಷಣಗಳು; ವರ್ಣ ವಿಭಾಗದ ಹೆಸರಲ್ಲಿ ಇಂದು ಕಾಣುವ ಸಹಸ್ರ ಮುಖವಾದ ಭಿನ್ನತೆಗಳು, ಮೇಲು ಕೀಳು ಭಾವನೆಗಳು, ವೈಷಮ್ಯಗಳು; ಮತೀಯ ವೈಷ ಮ್ಯದಿಂದ ಕುಲುಷಿತವಾದ ವಾತಾವರಣ; ಮತ್ತು ಸಮಗ್ರ ಭಾರತವನ್ನು ಒಂದಾಗಿಸುವ, ಆಲಿಂಗಿಸುವ, ಒಂದು ಮಹಾ ಭಾವದ, ಭಾವಪ್ರವಾಹದ ಕೊರತೆ, ಇವುಗಳಿಂದು ಭಾರತದ ಸಾಮಾಜಿಕ ಚಿತ್ರವನ್ನು ಪೂರಾ ಕೆಡಿಸಿವೆ ಸಿಲ್ವರ್, ವಿರೂಪಗೊಳಿಸಿವೆ.

ನನ್ನ ಪ್ರಿಯ ಗೆಳೆಯ, ಇಷ್ಟು ಹೊತ್ತು ಓದುವಾಗಲೂ ನೀನು ಎಚ್ಚರ ವಾಗಿಯೇ ಇದ್ದಿಯಾದರೆ, ನಿನಗೀಗ ನಮ್ಮ ಮಾತೃಭೂಮಿ ಸಂಯುಕ್ತ ಅಮೇ ರಿಕದ ತುಲನೆ ನಿನ್ನ ಕಣ್ಣ ಮುಂದೆ ಬರಬಹುದು. "ಅಲ್ಲಿಯೂ ಮೊದಲು ಬ್ರಿಟಿಷರ ಆಳ್ವಿಕೆ ಇರಲಿಲ್ಲವೇ? ನಮ್ಮ ಮೇಲೆ ಅದರಿಂದ ಅಂತಹ ಕೆಡುಕಾದ ಪರಿಣಾಮವೇಕಾಗಲಿಲ್ಲ? ನಾವು ಸ್ವಾತಂತ್ರ್ಯ ಪಡೆದ ನಂತರ ಶೀಘ್ರವಾಗಿ ಮುಂದರಿದು, ಇಂದು ಜಗತ್ತಿನ ಅತಿ ಪ್ರಬಲ ರಾಷ್ಟ್ರವಾಗಿ ರೂಪಿಸಲ್ಪಟ್ಟಿ ಲ್ಲವೇ?" ಎಂದು ನೀನು ಪ್ರಶ್ನಿಸಬಹುದು. ಅದು ಸಹಜ. ಆದರೆ ನಾವು ಸಂಯುಕ್ತ ಅಮೇರಿಕದ ಜನತೆ ಬ್ರಿಟನಿನಿಂದಲೂ, ಹೆಚ್ಚು ಕಡಿಮೆ ಬ್ರಿಟನಿನ ಸಂಸ್ಕೃತಿಯೇ ವ್ಯಾಪಿಸಿರುವ ಯುರೋಪಿನ ಇತರ ದೇಶ ಗಳಿಂದಲೂ ಅಮೇರಿಕಕ್ಕೆ ವಲಸೆ ಹೋದವರೆಂಬುದನ್ನು ಮರೆಯಬಾರದು. ಹೀಗಿರುತ್ತಾ, ಹೊಸದರಲ್ಲಿ ಅಮೇರಿಕದ ಮತ್ತು ಯುರೋಪಿನ ಸಂಸ್ಕೃತಿ ಒಂದೇ ಆಗಿತ್ತು. (ಕೆಥೋಲಿಕರು ಪ್ರೊಟೆಸ್ಟಂಟರೆಂಬ ಧಾರ್ಮಿಕ ಭೇದವಿ ದ್ದರೂ ಕೂಡಾ.) ಈ ಕಾರಣದಿಂದ ಅನ್ಯರ ಸಂಸ್ಕೃತಿ ಹೇರಿದರೆ ಏನಾಗುವು ದೆಂಬ ಅನುಭವ ನಮಗೆ ದೊರೆತೇ ಇಲ್ಲ. ಭಾರತಕ್ಕೆ ಆ ಅನುಭವ ಹಾಗೂ ಅದರಿಂದ ಜನಿಸುವ ದುಷ್ಪರಿಣಾಮಗಳು ಸಂಭವಿಸಿವೆ.

ಇನ್ನೊಂದು ವಿಷಯವಿದೆ, ಸಿಲ್ವರ್. ಸಂಯುಕ್ತ ಅಮೇರಿಕವು ಹೆಚ್ಚು ಹೊಸ ರಾಷ್ಟ್ರ. ನಮ್ಮ ಇತಿಹಾಸ ಕೇವಲ ೨-೩ ಶತಮಾನದ್ದು. ಆದರೆ

ಭಾರತದಷ್ಟು ಹಳೆಯ ರಾಷ್ಟ್ರ, ಅದರ ಸಂಸ್ಕೃತಿಯಷ್ಟು ಹಳೆಯ ಸಂಸ್ಕೃತಿ, ಯಥಾರ್ಥವಾಗಿ ಪ್ರಪಂಚದಲ್ಲಿ ಬೇರಿಲ್ಲ. ಕಡಿಮೆಯೆಂದರೂ 50–60 ಶತಮಾನಗಳ ಚರಿತ್ರೆ ಅದಕ್ಕಿದೆ. ತನ್ನ ದೀರ್ಘ ಇತಿಹಾಸದಿಂದ, ತನ್ನ ಅತಿ ಪುರಾತನವಾದ ಸಂಸ್ಕೃತಿಯಿಂದ, ಪ್ರಯೋಜನ ಪಡೆದಂತೆಯೇ, ಆ ಸಂಸ್ಕೃತಿಯಲ್ಲಿ ಸೇರಿ ಹೋದ ಹಳೆಯ ಗೊಡ್ಡು ಸಂಪ್ರದಾಯಗಳು, ಕುರುಡು ವಿಶ್ವಾಸಗಳು, ಹಾಗೂ ಕಾಲಕಾಲಕ್ಕೆ ಬದಲಿಸ ಬೇಕಾಗಿದ್ದೂ, ಬದಲಿಸದೆ ಉಳಿದು ಹೋಗಿ, ಇಂದು ಕೊಳೆಯುತ್ತಿರುವ ಆಚಾರಗಳು ಇವುಗಳ ಭಾರದಿಂದ ಮಾತ್ರವಲ್ಲ, ಕೊಳಕಿನಿಂದ ಭಾರತವಿಂದು ಕಂಗಾಲಾಗಿದೆ, ಬಸವಳಿದು ನಿಂತಿದೆ.

"ಹಾಗಿದ್ದರೆ ಉತ್ಕರ್ಷದ ಪರಾಕಾಷ್ಠೆಯಲ್ಲಿದ್ದ ಅನ್ಯ ನಾಗರಿಕತೆಗಳು, ಸಂಸ್ಕೃತಿಗಳು, ಮತ್ತು ಧರ್ಮಗಳು, ಇಂದು ಹೇಳ ಹೆಸರಿಲ್ಲದಂತೆ ನಾಶವಾಗಿ ಹೋದರೂ ಭಾರತದ ಧರ್ಮ ಮತ್ತು ಸಂಸ್ಕೃತಿ, ಉಳಿಯಲು ಹೇಗೆ ಕಾರಣವಾಯಿತು" ಎಂದು ನೀನು ಪ್ರಶ್ನಿಸಬಹುದು. ಮೊದಲಲ್ಲಿ ಮೂಲ ಸ್ವರೂಪದ, ಶುದ್ಧವಾದ ವರ್ಣ ವಿಭಾಗದ ದೆಸೆಯಿಂದಲಾಗಿ ಅನೇಕಾನೇಕ ಬ್ರಾಹ್ಮಣರಿಗೆ ಕೇಂದ್ರೀಕೃತವಾಗಿ ಅಧ್ಯಾತ್ಮ ಸಾಧನೆಮಾಡಿ, ಅಧ್ಯಾತ್ಮ ದರ್ಶನ ಪಡೆದು ಹಿಂದೂ ಜನರನ್ನು ಧರ್ಮದಲ್ಲಿ ತೊಡಗಿಸಲು, ಸ್ಫೂರ್ತಿಗೊಳಿಸಲು, ಅನುಕೂಲವಾದುದು ಒಂದು ಕಾರಣ. ಅಲ್ಲದೆ ನಾನು ಹಿಂದೆಯೇ ಬರೆದಂತೆ ಹಿಂದೂ ಧರ್ಮವು ರತ್ನಗರ್ಭಿತ ಮಹಾನ್ ಸಾಗರ. ಅದರಲ್ಲಿರುವಷ್ಟು ಪರಮಾತ್ಮ ಸಾಕ್ಷಾತ್ಕಾರದ ಸುಲಭ ಮಾರ್ಗಗಳು ಇನ್ಯಾವುದರಲ್ಲಿಯೂ ಇಲ್ಲ. ಎಲ್ಲವೂ ವೈಜ್ಞಾನಿಕವಾದವುಗಳು; ತರ್ಕಬದ್ಧವಾದವುಗಳು. ಇದರಿಂದಲಾಗಿ, ಕಾಲ ಕಾಲಕ್ಕೆ, ಪ್ರತಿಶತಮಾನಗಳಲ್ಲಿಯೂ ಅನೇಕ ತಪಸ್ವಿಗಳು ರೂಪಿಸಲ್ಪಡುವಂತಾಯಿತು. ಇಂತಹ ಮಹಾಪುರುಷರು, ಈ ಧರ್ಮವನ್ನು ಪುನರಪಿ, ಜನರಿಗೆ ನೆನಪುಮಾಡಿ, ಅದು ಅವ್ಯಾಹತವಾಗಿ ಇಂದಿನ ಕಾಲದ ತನಕವೂ ಉಳಿಯುವಂತೆ ಮಾಡಿದರು. ಹೀಗೆ ಸಾಧನಾ ಪಥಗಳ ಸುಲಭತೆ ಮತ್ತು ವೈವಿಧ್ಯತೆಗಳು ಹಾಗೂ ಸಾಧನೆಗೆ ಹಿಂದೂ ಧರ್ಮದಲ್ಲಿರುವ ಪೂರ್ಣ ಸ್ವಾತಂತ್ರ್ಯ, ಇವುಗಳೇ ಹಿಂದೂ ಧರ್ಮದ ಸನಾತನತೆಗೆ ಅಥವಾ ಅವಿಚ್ಛಿನ್ನತೆಗೆ ಮೂಲಕಾರಣವಾಗಿದೆ.

ಇರಲಿ, ನಾನೀಗ ಪುನಃ ದಾರಿತಪ್ಪಿ ಎತ್ತಲೋ ಹೋದೆ. ಹಿಂದೆ ನಿಲ್ಲಿಸಿದ ಸ್ಥಳಕ್ಕೆ ಪುನಃ ಬಂದು ಸೇರುತ್ತೇನೆ.

ಇಂದಿನ ಭಾರತೀಯ ಸಮಾಜ ಹೇಗಿದೆ? ಎಂಬುದರ ವಿವರವಾದ ಚಿತ್ರಣವನ್ನು ನಡುಗುವ ಕೈಗಳಿಂದಲೇ ನಿನ್ನ ಮುಂದಿಡಲು ಯತ್ನಿಸುತ್ತೇನೆ. ಕೈನಡುಗುವುದೇಕೆ ಗೊತ್ತೆ? ಈ ತನಕ ಬರೆದಂತೆ ಹಿಂದಿನ ಹಿನ್ನೆಲೆ ಬರೆಯುವುದು ಸುಲಭ—ಆದರೆ ಇಂದು ಇರುವ ನಿಜ ಚಿತ್ರಣ ಬರೆಯುವುದು ಕಷ್ಟ. ನಾನೇನೋ ಬರೆದು ಬಿಟ್ಟು, ನೀನು ಎಲ್ಲಿ ಭಾರತದ ಕುರಿತಾಗಿ ತಪ್ಪು ತಿಳಿದು ಕೊಳ್ಳುವೆಯೋ ಎಂಬ ಭಯ ನನಗೆ. ನಾನು ಇಲ್ಲಿಯ ಕೆಡುಕನ್ನು ಚಿತ್ರಿಸ ಹೋಗುವಾಗ ಇಲ್ಲಿಯ ಪುರಾತನ ಸಂಸ್ಕೃತಿಯಲ್ಲಿರುವ ಅತಿ ಸುಂದರವಾದ, ಭವ್ಯವಾದ ವಿಷಯಗಳು ಬಿಟ್ಟು ಹೋಗಿಬಿಟ್ಟರೆ, ನಾನೀ ಪುಣ್ಯಭೂಮಿಯನ್ನು ತಪ್ಪಾಗಿ ಪ್ರತಿನಿಧೀಕರಿಸಿದಂತೆ ಎಲ್ಲಿ ಆಗಿ ಬಿಡುವುದೋ ಎಂಬ ಭಯ ನನಗಿದೆ. ಇರಲಿ, ಸಿಲ್ವರ್, ನೀನು ನನ್ನ ಆಪ್ತ ಮಿತ್ರ ತಾನೇ. ನೀನು ತಪ್ಪು ನಿರ್ಣಯಕ್ಕೆ ಬಂದರೆ ನಿನ್ನ ಕಿವಿ ಹಿಂಡಿಯಾದರೂ ನಿನ್ನನ್ನು ಸರಿ ದಾರಿಗೆ ತಂದೇನು! "ಭಾರತವನ್ನು ತೆಗಳಬೇಡ!" ಎಂದು ಎಚ್ಚರಿಸಿಯೇನು ! ಎಂಬ ಒಳಗಿನ ಒಂದು ಧೈರ್ಯವೂ ನನಗಿದೆ.

ಭಾರತೀಯ ಸಮಾಜವಿಂದು ಭಾವನಾತ್ಮಕ ಅನೈಕ್ಯತೆಯಿಂದ ನರಳುತ್ತಿದೆ. ಗಾಂಧೀಜಿಯವರ ಕಾಲದಲ್ಲಿ ಮೈಗೂಡಿದ ಆ ರಾಷ್ಟ್ರೀಯ ಭಾವನೆಯ ಸರಪಳಿಯಿಂದು ಸಂದು ಕಳಚಿ ಕಡಿಯುತ್ತಿದೆ.

ಹಿಂದೆ ಆಡಳಿತ ಸೌಕರ್ಯ ದೃಷ್ಟಿಯಿಂದ ರಚಿಸಲ್ಪಟ್ಟ ಪ್ರಾಂತ್ಯಗಳನ್ನು ಭಾಷೆಯ ತಳಹದಿಯಲ್ಲಿ ಪುನರ್ವಿಂಗಡಣೆ ಮಾಡಿದ್ದು ಇದಕ್ಕೆ ಒಂದನೆಯ ಕಾರಣ. ಇದರಿಂದ ಅಂಥ ಭಾಷಾಭಿಮಾನ ಕೆರಳಿ, ಜನತೆಯಲ್ಲಿ ಶತಮಾನಗಳಿಂದಲೂ ರಕ್ತಗತವಾಗಿ ಬೆಳೆದಿದ್ದ ಕೊರತೆಯಾದ ಪ್ರಾದೇಶಿಕ ಅಭಿಮಾನ ಮುಂದೆ ನಿಂತು, ರಾಷ್ಟ್ರೀಯ ಅಭಿಮಾನಕ್ಕೆ ತಡೆನೀಡುತ್ತಿದೆ. ಆಯಾಯ ಪ್ರಾಂತಗಳವರು ತಮ್ಮ ಭಾಷಾಭಿಮಾನದ ಭರದಲ್ಲಿ ಸರಕಾರೀ ಆಡಳಿತ ಮತ್ತು ವಿದ್ಯಾಭ್ಯಾಸದ ಎಲ್ಲ ಹಂತಗಳಿಂದ ಇಂಗ್ಲಿಷ್ ಭಾಷೆಯನ್ನು ತೆಗೆದು ಹಾಕಿ ತಮ್ಮ ಭಾಷೆಯನ್ನೇ ನೆಲೆಗೊಳಿಸುವ ಕಾರಣದಿಂದ, ಅನ್ಯ ಪ್ರಾಂತಗಳವರಿಗೆ ಆ ಪ್ರಾಂತ್ಯವು ಕಾರ್ಯತಃ ಅನ್ಯ ದೇಶವೇ ಎನ್ನಿಸುವಷ್ಟು ಭಿನ್ನ ಭಾವನೆ ಯುಂಟಾಗುತ್ತಿದೆ.

ಇಡಿಯ ರಾಷ್ಟ್ರದ ಉನ್ನತಿ ನೋಡುವ ಬದಲು ಪ್ರತಿ ಪ್ರಾಂತ್ಯವೂ ರಾಜಕೀಯ ಸ್ವಾತಂತ್ರ್ಯವನ್ನು ಸಾರಲೋ ಎಂಬಂತೆ ಆರ್ಥಿಕ ಸ್ವಾಮ್ಯವನ್ನು

ಬಯಸಿ, ತಮ್ಮ ಪ್ರದೇಶದಲ್ಲಿಯೂ ಕಬ್ಬಿಣ ಮತ್ತು ಉಕ್ಕು, ತೈಲ ಶುದ್ಧೀಕರಣ, ರೈಲ್ವೆ ಎಂಜಿನ್ ತಯಾರಿ ಇವೇ ಮೊದಲಾದ ಘನ ಉದ್ದಿಮೆಗಳು ಸ್ಥಾಪಿತವಾಗಬೇಕೆಂದು ಜಗಳಾಡತೊಡಗಿವೆ. ಪ್ರಾಂತ್ಯಪ್ರಾಂತ್ಯಗಳೊಳಗೆ ಗಡಿವಿವಾದಗಳು, ಜಲವಿವಾದಗಳು, ಭಾಷಾವಿವಾದಗಳು ನೆಲಸಿವೆ.

ಎರಡನೆಯದಾಗಿ, ಭಾರತವನ್ನೆಲ್ಲ ಒಂದುವರೆ ಶತಮಾನ ಒಂದಾಗಿಸಿದ ಮಾತ್ರವಲ್ಲ, ಭಾರತೀಯರನ್ನು ಅಂತರ್ರಾಷ್ಟ್ರೀಯ ರಂಗದಲ್ಲಿರುವ ಪ್ರಗತಿಪರ ಭಾವ ಪ್ರವಾಹಗಳಲ್ಲಿ ಮುಳುಗಿಸಿದ ಮತ್ತು ಆಧುನಿಕ ವೈಜ್ಞಾನಿಕ ಸಾಧನೆಗಳ ದರ್ಶನ ಮಾಡಿಸಿದ ಮಹೋನ್ನತ ಇಂಗ್ಲಿಷ್ ಭಾಷೆಯೆಂದು ಕಡೆಗಣಿಸಲ್ಪಟ್ಟಿದೆ. ಹಿಂದಿಯು ಆ ಸ್ಥಾನ ಪಡೆದಿದೆ.

ದಕ್ಷಿಣದವರಿಗೆ ಹಿಂದಿ ತಿಳಿದಿಲ್ಲ. ಉತ್ತರದ ಕೆಲವು ಪ್ರಾಂತಗಳವರಿಗೆ ಇಂಗ್ಲಿಷ್ ತಿಳಿಯುವ ಮನವಿಲ್ಲ. ಇದರಿಂದ ಪ್ರಾಂತ್ಯ ಪ್ರಾಂತ್ಯಗಳೊಗಿನ ಸಂಪರ್ಕಕ್ಕೆ ಇಂಗ್ಲಿಷ್, ಹಿಂದಿ ಎರಡೂ ಇಲ್ಲವಾಗಿದೆ. ವಿಶ್ವ ವಿದ್ಯಾಲಯ ಮಟ್ಟದ ಉಚ್ಚ ಶಿಕ್ಷಣವನ್ನೂ ಪ್ರಾಂತೀಯ ಭಾಷೆಯಲ್ಲೇ ಕೊಡುವಂತಾಗಬೇಕು ಎಂಬ ಈಗಿನ ಕೂಗು ಮನ್ನಿಸಲ್ಪಟ್ಟರೆ ಭಾರತದ ಸಂಚಾರವೆಂದರೆ ಯುರೋಪಿನ ಭಿನ್ನ ಭಾಷೆಗಳನ್ನಾಡುವ ವಿವಿಧ ರಾಷ್ಟ್ರಗಳ ಮಧ್ಯೆ ಸಂಚರಿಸುವುದಕ್ಕಿಂತಲೂ ಕಷ್ಟವಾಗಬಹುದು.

ಹಿಂದಿಯನ್ನು ಜ್ಯಾರಿಮಾಡುವ ಪ್ರಸಂಗದಿಂದ ದಕ್ಷಿಣ ಮತ್ತು ಉತ್ತರದವರೊಳಗೆ, ಎರಡು ಭೂಖಂಡಗಳ ನಡುವಿರಬಹುದಾದ ವ್ಯತ್ಯಾಸ, ವಿಷಮತೆ ಈಗ ಕಂಡುಬರುತ್ತಿದೆ. ಈ ರೀತಿಯ ಅನೈಕ್ಯತೆಗೆ ಧ್ವನಿಗೂಡಿಸುವಂತಿದೆ, ಭಾರತದಲ್ಲಿರುವ ಮತೀಯ ವೈಷಮ್ಯ, ಹಾಗೂ ಜಾತೀಯ ವೈಷಮ್ಯಗಳು ಮತ್ತು ವರ್ಗ ಕಲಹಗಳು.

ಆದರೆ ಸ್ವಾತಂತ್ರ್ಯಾನಂತರದಲ್ಲಿ, ಉಜ್ವಲ ರಾಷ್ಟ್ರ ನಾಯಕರೂ, ಚಾಣಾಕ್ಷ ರಾಜನೀತಿಜ್ಞರೂ, ದಕ್ಷ ಆಡಳಿತಗಾರರೂ ಆದ ಸರ್ದಾರ್ ವಲ್ಲಭಾಯಿ ಪಟೇಲರ ನೇತೃತ್ವದಲ್ಲಿ ಭಾರತದ 500ಕ್ಕೂ ಮಿಕ್ಕಿದ ಆಶ್ರಿತ ರಾಜ್ಯಗಳನ್ನು ಭಾರತದಲ್ಲಿ ವಿಲೀನಗೊಳಿಸಿ, ಭಾರತದ ಭೂಪಟವನ್ನು ಪುನರ್ರಚಿಸಿ ರಾಷ್ಟ್ರೀಯ ಸಂಘಟನೆ ಮಾಡಿದ್ದು ಸ್ಮರಣಾರ್ಹ ಸಂಗತಿಯಾಗಿದೆ. ಆದರೆ ಅವರು ಕಾಲವಾದೊಡನೆಯೇ ಅನೈಕ್ಯತೆಯ ಕರಾಳ ರೂಪ ಮೇಲೆ ಬರೆದ ರೀತಿ ತನ್ನ ತಲೆಯನ್ನು ಬಹಳ ಮೇಲೆತ್ತತೊಡಗಿತು.

ಕೆಲವು ನಿದರ್ಶನ ಬರೆಯುತ್ತೇನೆ, ಸಿಲ್ವರ್. ಒಂದು ದಿನ ಬೊಂಬ್ಯಾಯ ಪ್ರಸಿದ್ಧ ಚಾರಿತ್ರಿಕ ಸ್ಥಳವಾದ ಗೇಟ್‌ವೇ ಓಫ್ ಇಂಡಿಯಾದ ಬಳಿ ಅಡ್ಡಾಡುತ್ತಿದ್ದೆ. ಅಲ್ಲಿ ಔರಂಗಜೇಬನ ಸಮಕಾಲೀನನಾಗಿ ಮಹಾರಾಷ್ಟ್ರದ ಪ್ರಸಿದ್ಧ ಮಹಾರಾಜರಾಗಿದ್ದ ಛತ್ರಪತಿ ಶಿವಾಜಿಯವರ ಉನ್ನತವಾದ ಪ್ರತಿಮೆ ನೋಡಿದೆ. ಅದರೆದುರಿಗೆ ಐರೋಪ್ಯ ಪೋಷಾಕು ಧರಿಸಿದ ವಿದ್ಯಾವಂತ ಭಾರತೀಯ ಯುವಕನೋರ್ವನು ಭಕ್ತಿಭಾವದಿಂದ ವಂದಿಸಿದ್ದಲ್ಲದೆ. ಪ್ರತಿಮೆಯ ಕಾಲು ಮುಟ್ಟಿ ನಮಸ್ಕರಿಸಿದ. ನಾನು ಮಾತನಾಡಲು ಬಯಸಿ, ಬಳಿಸಾರಿ ಇಂಗ್ಲಿಷಿನಲ್ಲಿ ಶುಭ ಕೋರಿದೆ. ಅದಕ್ಕೆ ಆತನು ಬಿಗುವಾಗಿಯೇ ಸದ್ದಿಲ್ಲದೆ ತಲೆಬಾಗಿದ. ನಾನು ಧೈರ್ಯ ಮಾಡಿ, ಇಂತಹ ಚಾರಿತ್ರಿಕ ಸ್ಥಳದಲ್ಲಿ ಭಾರತದ ರಾಷ್ಟ್ರಪಿತರೆನ್ನಿಸಿದ ಮಹಾತ್ಮಾ ಗಾಂಧೀಜಿಯವರ ಪ್ರತಿಮೆಯಿಡುವುದರ ಬದಲು ಎಂತಹ ರಾಷ್ಟ್ರಪ್ರೇಮಿಯೇ ಇರಲಿ, ವೀರನೇ ಇರಲಿ, 3—4 ಶತಮಾನಗಳ ಹಿಂದೆ ಕೇವಲ ಮಹಾರಾಷ್ಟ್ರದ ರಾಜನಾಗಿದ್ದ ಶಿವಾಜಿಯ ಪ್ರತಿಮೆಯನ್ನೇಕೆ ಇಟ್ಟರು? ಎಂದು ಕೇಳಿದೆ. ಅದಕ್ಕೆ ಆತ ಬಹಳ ಕೋಪದಿಂದ ಯಾವುದೋ ಭಾಷೆಯಿಂದ ಉತ್ತರವಿತ್ತು "ಜೈ ಶಿವಾಜಿ ಮಹಾರಾಜ್! ಜೈ ಮಹಾರಾಷ್ಟ್ರ!" ಎಂದುಬಿಟ್ಟ. ನನಗೆ ಅರ್ಥವಾಗಲಿಲ್ಲ. ನನ್ನ ಬಳಿಯೇ ನಿಂತಿದ್ದ ಇನ್ನೊಬ್ಬ ಭಾರತೀಯ ಯುವಕನ ಕೂಡೆ ಆತ ಏನು ಹೇಳಿದ್ದೆಂದು ವಿಚಾರಿಸಿದೆ. ಅದಕ್ಕವನು ಇಂಗ್ಲಿಷಿನಲ್ಲಿ ವಿವರಿಸಿದ. "ಗಾಂಧೀಜಿಯವರಿಗಿಂತ ಶಿವಾಜಿ ಮಹಾರಾಜರೇ ದೊಡ್ಡವರು. ಇಡಿಯ ಮಹಾರಾಷ್ಟ್ರವನ್ನು ಆಳಿದ ಮಹಾರಾಜರಲ್ಲವೇ ಅವರು! ಶಿವಾಜಿ ಮಹಾರಾಜರಿಗೆ ಜಯವಾಗಲಿ! ಮಹಾರಾಷ್ಟ್ರಕ್ಕೆ ಜಯವಾಗಲಿ! ಎಂದಾತ ಹೇಳಿದ್ದು" ಎಂಬುದಾಗಿ ಹೇಳಿ ನಸುನಕ್ಕ. ನಾನು ಆಶ್ಚರ್ಯಚಕಿತನಾಗಿ "ಅಂದರೆ........"ಎಂದು ಹೇಳಿ ಮಾತು ಹೊರಡದೆ ಸುಮ್ಮನೆ ನಿಂತೆ! "ಅಂದರೆ ಆತನು ಮರಾಠೀ ಜನ; ಆದ್ದರಿಂದ ಹಾಗೆ ಹೇಳುತ್ತಾನೆ" ಎಂದು ಹೇಳಿದ. "ಬೃಹತ್ ಬೊಂಬ್ಯಾ ನಗರದಲ್ಲಿ ಇದೇ ಗಾತ್ರದ ಗಾಂಧೀಜಿಯವರ ಪ್ರತಿಮೆ ಬೇರೆಡೆಯಲ್ಲಾದರೂ ಇದೆಯೇ ಎಂದು ದೃಢಪಡಿಸುವುದಕ್ಕೆ ಕೇಳಿದೆ. ಆತ ತಲೆಯಲ್ಲಾಡಿಸಿ ಇಲ್ಲವೆಂದು ಉತ್ತರವಿತ್ತ. "ಆತನು ವಿದ್ಯಾವಂತನಾಗಿದ್ದೂ ಇಂಗ್ಲಿಷಿನಲ್ಲಿ ಏಕೆ ಉತ್ತರಿಸಲಿಲ್ಲ?" ಎಂದು ವಿಚಾರಿಸಿದಾಗ, "ಇಂಗ್ಲಿಷಿನಲ್ಲಿ ಉತ್ತರವೀಯುವುದು ತನ್ನ ಗೌರವಕ್ಕೆ ಕುಂದೆಂದು ಭಾವಿಸಿ ಆತನು ಮರಾಠಿಯಲ್ಲೇ ಉತ್ತರ ಕೊಟ್ಟಿರಬೇಕೆಂಬುದಾಗಿ

ತಿಳಿಸಿದ. ಇದು ಮೊದಲ ಘಟನೆ. ಇಂತಹ ಮರಾಠೀ ಅಭಿಮಾನದ ಪರಿಚಯ ನಂತರ ನನಗೆ ಮತ್ತೂ ಹೆಚ್ಚಾಯಿತು. ಇದರ ಮಹತ್ವವೇನೆಂಬುದು ನಿನಗೇ ಅರ್ಥವಾಯಿತಲ್ಲ ಸಿಲ್ವರ್? ಆದರೆ ಪುಣ್ಯವಶಾತ್ ಮಹಾರಾಷ್ಟ್ರದ ಶಕ್ತ ಮುಖ್ಯ ಮಂತ್ರಿಗಳಾದ ಶ್ರೀ। ವೈ. ಬಿ. ಚವ್ಹಾಣರು ಹೀಗಿಲ್ಲ. ಅವರು ಅಚ್ಚ ರಾಷ್ಟ್ರೀಯವಾದಿಗಳಾಗಿದ್ದಾರೆ.

ಇದೇ ರೀತಿ ಮದ್ರಾಸಿನಲ್ಲಿ "ದ್ರಾವಿಡಸ್ಥಾನ್ ಝಿಂದಾಬಾದ್ !" ಎಂದು ಕೂಗುವ ಸಾವಿರಾರು ಜನರ ಮೆರವಣಿಗೆಯನ್ನೂ, ದ್ರಾವಿಡಸ್ಥಾನ ಸಿಗಲೇಬೇಕೆಂದು ಒಂದೆರಡು ಲಕ್ಷ ಜನರ ಬೃಹತ್ ಸಭೆಯಲ್ಲಿ ಪ್ರಸಿದ್ಧ ತಮಿಳು ವಾಗ್ಮಿ ಹಾಗೂ ನಾಯಕ ಅಣ್ಣಾದುರೈ ಘೋಷಿಸುವುದನ್ನೂ, ನಾಗಾ ಜನರು "ನಾಗಾ ಸ್ವತಂತ್ರರಾಷ್ಟ್ರ!" ಎಂದು ಬೊಬ್ಬಿಡುವುದನ್ನೂ ಅಕಾಲಿಗಳು "ಸಿಖ್ಖಿಸ್ಥಾನ್" ಎಂದು ಕೂಗುವುದನ್ನೂ ಕೇಳಿ, ನೋಡಿ, ದುಃಖಪಟ್ಟಿದ್ದೇನೆ. ಈ ಎಲ್ಲಾ ಪ್ರಾಂತೀಯ ಭಾವನೆ ಕೆರಳಿಸುವ ಕೂಗುಗಳಿಗೆ ಜನಬೆಂಬಲವಿಲ್ಲವೆಂದು ತಿಳಿಯಬೇಡ. ಅಸಂಖ್ಯ ಜನ ಬೆಂಬಲವಿದೆ. ರಾಷ್ಟ್ರೀಯ ಐಕ್ಯತೆ ಇಲ್ಲದ ಕಾರಣದಿಂದಲಾಗಿ, ಇಷ್ಟು ಶತಮಾನಗಳಿಂದಲೂ ಪಾರತಂತ್ರ್ಯವನ್ನನುಭವಿಸಿಯೂ, ಭಾರತದ ಸುಶಿಕ್ಷಿತ ಜನರ ಬಾಯಿಯಿಂದ ಇಂತಹ ಕೂಗು ಬಂದರೆ ಅದನ್ನೇನೆನ್ನಬೇಕು?

ಇನ್ನೊಂದು ದಿನ ಮಧ್ಯಮ ವಯಸ್ಸಿನ ಭಾರತೀಯರ ಪರಿಚಯ ನನಗಾಯಿತು. ಅವರು ಸರಕಾರೀ ಕೆಲಸದಲ್ಲಿದ್ದು ರಾಜಿನಾಮೆ ಕೊಟ್ಟು ಈಗ ವ್ಯಾಪಾರಸ್ಥರಾಗಿ ದುಡಿಯುತ್ತಿದ್ದಾರೆ. ಮಾತಿಗೆ ಮಾತು ಬಂದು, ಭಾರತದ ಭೂಪ್ರದೇಶವನ್ನು ಚೀನಾವು ಆಕ್ರಮಿಸಿದೆಯಲ್ಲಾ ಎಂದು ನಾನು ನಿಟ್ಟುಸಿರು ಬಿಟ್ಟೆ. ಆಗ "ನಮಗೆ ಯಾರಾದರೇನು ಸ್ವಾಮಿ? ಭಾರತವೂ ಒಂದೇ; ಚೀನಾವೂ ಒಂದೇ. ಏನಾದರೂ ಆಗಲಿ!" ಎಂದುಬಿಟ್ಟರು, ಆ ವಿದ್ಯಾವಂತ ಮಹಾಶಯರು. ನನಗೆ ಆಗ ಆಶ್ಚರ್ಯವಾಯಿತು "ನೀವು ಸುಶಿಕ್ಷಿತ ಭಾರತೀಯರು ಹೀಗನ್ನುವುದೇ?" ಎಂದು ನಾನು ಕೇಳಿಯೇ ಬಿಟ್ಟೆ. "ಮತ್ತೇನು ಸ್ವಾಮಿ? ನಮಗೆ ಯಾರಾದರೇನು? ನಮ್ಮ ಸಂಸಾರ ಸುಖವಾಗಿ ಸಾಗಬೇಕು. ಅದು ಈಗಲೂ ಸಾಗುವುದಿಲ್ಲ. ಚೀನಿಯರು ಬಂದರೂ ಸಾಗುವುದಿಲ್ಲ. ಯಾವ ಸರಕಾರ, ಯಾರ ಆಳ್ವಿಕೆ ಬಂದರೂ ನಮಗೆ ಒಂದೇ" ಎಂದು ಬಿಟ್ಟರು. ನಾನು ಅಲ್ಲಿಗೇ ಬಿಡದೆ, "ಚೀನಿಯರು ದಂಡೆತ್ತಿ ಬಂದರೆ

ಭಾರತದ ಜನರು ಏನು ಮಾಡಿಯಾರು" ಎಂದು ಕೇಳಿದೆ. "ಅವರವರ ವೈಯ್ಯಕ್ತಿಕ ಜೀವನಕ್ಕೆ ತೊಂದರೆಯಾಗದಿದ್ದರೆ ಹೆಚ್ಚಿನವರು ಏನೂ ಮಾಡಲಿಕ್ಕಿಲ್ಲ. ಬಂದ ಹೊಸ ಸರಕಾರದ ಪ್ರೀತಿ ಗಳಿಸಲು ಯತ್ನಿಸಿಯಾರು" ಎಂದು ಹೇಳಿಬಿಟ್ಟರು. ಭಾರತವನ್ನು ಅತಿಯಾಗಿ ಪ್ರೀತಿಸುತ್ತಿರುವ ನನಗೆ, ಈ ಮಾತನ್ನು ನಂಬಲಾಗಲಿಲ್ಲ. ಆದರೂ ನನ್ನೆದೆ ಇದನ್ನು ಕೇಳಿ 'ಢವ ಢವ' ಎನ್ನತೊಡಗಿತು. ಮಹಾತ್ಮಾಗಾಂಧೀಜಿಯವರು, ನೆಹರೂಗಳು ಇನ್ನೆಷ್ಟೋ ಮಹಸೀಯರು ದೇಶ ಪ್ರೇಮವನ್ನು ಸಾರಿಯೂ ಭಾರತದ ಜನತೆ ತನ್ನ ಪೂರ್ವದ ರಾಜಕೀಯ ಉಪೇಕ್ಷೆಯಲ್ಲೇ ಇದೆಯೇ ಎಂದು ನನಗೆ ವ್ಯಥೆಯಾಯಿತು. ನಂತರ ಈ ಕುರಿತು ನಾನು ಸಾಮಾಜಿಕವಾಗಿ ಹೆಚ್ಚು ಅಧ್ಯಯನ ಮಾಡಿದಾಗ, ಅನೇಕರನ್ನು ಸಂದರ್ಶಿಸಿ ಈ ಪ್ರಶ್ನೆ ಕೇಳಿದಾಗ, ಸಿಕ್ಕಿದ ಉತ್ತರದಿಂದ ಅವರ ಮಾತು ಪೂರ್ಣವಲ್ಲವಾದರೂ ಕೆಲಮಟ್ಟಿಗೆ ಸತ್ಯವೆನಿಸಿತು. ನನಗೆ ಭಾರತದ ಭವಿತವ್ಯದ ಬಗ್ಗೆ ಆಳವಾದ ಭೀತಿಯೂ ವ್ಯಾಪಿಸಿತು.

ನಮ್ಮ ಸಂಯುಕ್ತ ಅಮೇರಿಕದಲ್ಲಿ ಇಂತಹ ಒಂದೇ ಒಂದು ಸ್ವರ ಕೇಳಿದರೆ, ಉಳಿದವರು ಆ ಸ್ವರವನ್ನು ಹೊರಡಿಸಿದವನನ್ನು ಜೀವದಲ್ಲಿಟ್ಟಾರೇ ಸಿಲ್ವರ್? ಆದರೆ ಭಾರತದ ಸಮಾಜ ಇಂದು ಹೀಗಿದೆ.

"ಭಾರತವೇ ಹಿಮಾಲಯದಲ್ಲಿ ಆಕ್ರಮಣ ಮಾಡಿದ್ದು. ನಾವು ಆಕ್ರಮಣ ಹಿಂತೆಗೆಯಬೇಕು. ಶಾಂತಿಯಿಂದ ಸಮಸ್ಯೆ ಬಗೆಹರಿಸಬೇಕು" ಎಂಬುದಾಗಿ ಘೋಷಿಸುತ್ತಾ ಕಲ್ಕತ್ತದಲ್ಲಿ ಕೂಲಿಗಾರರ ಬೃಹತ್ ಪ್ರದರ್ಶನವನ್ನು ಅಲ್ಲಿಯ ಸಾಮ್ಯವಾದಿ ಪಕ್ಷ ನಡೆಸಿದ್ದನ್ನು ನಂತರ ವೃತ್ತ ಪತ್ರಿಕೆಗಳಲ್ಲಿ ನೋಡಿ ನಾನು ಗಲಿಬಿಲಿಗೊಂಡಿದ್ದೆ. ಭಾರತ ಮತ್ತು ಪಶ್ಚಿಮ ಬಂಗಾಳ ಸರಕಾರಗಳು ಈ ಘಟನೆಯಿಂದ ಯಾವುದೇ ರೀತಿಯಲ್ಲಿ ವ್ಯಥಿತವಾಗದೆ ಇದ್ದುದು ನೋಡಿ ನಾನು ಮತ್ತಷ್ಟು ಕಂಗೆಟ್ಟೆ. ಇದು ಇಂದಿನ ಭಾರತವೇ? ಗಾಂಧೀಜಿಯವರ ಕನಸಿನ ಭಾರತವು ಇದೇ ಏನು? ಎಂಬುದಾಗಿ ನಾನು ಎಷ್ಟೋ ಸಲ ಆಶ್ಚರ್ಯ ಪಡುತ್ತಿದ್ದೇನೆ. ದುಃಖ ಪಡುತ್ತಿದ್ದೇನೆ.

ಏಕೆ ಗೊತ್ತೇ ಸಿಲ್ವರ್? ಭಾರತೀಯ ಸಂಸ್ಕೃತಿ, ಹಿಂದೂಧರ್ಮ ನಾನು ಮೆಚ್ಚುವಂಥಾದ್ದು ತುಂಬಾ ಇದೆ. ಭಾರತ ಹಾಳಾದರೆ, ಸಹಸ್ರ ಹೋಳಾದರೆ ಆ ದಿವ್ಯ ಸಂಸ್ಕೃತಿಯನ್ನು ಪ್ರಪಂಚಕ್ಕೆ ಸಾರುವ ಸನ್ನಿವೇಶವೇ ಇಲ್ಲವಾಗುವುದಲ್ಲ! ಎಂಬುದೇ ನನ್ನ ಕಳವಳ. ಕೇವಲ ಬಿಡಿ ಬಿಡಿಯಾದ

ಕೆಲವು ಘಟನೆ ನೋಡಿ ನಾಸೀ ನಿರ್ಣಯಕ್ಕೆ ಬಂದಿಲ್ಲ ನಿಲ್ವರ್. ಇಲ್ಲಿಯ ಜನಮನ, ವೃತ್ತಪತ್ರಿಕೆಗಳು, ಇತ್ಯಾದಿಗಳನ್ನು ನೋಡಿ, ಅಧ್ಯಯನ ಮಾಡಿ ಈ ತೆರನಾದ ನಿರ್ಣಯಕ್ಕೆ ಬಂದಿರುತ್ತೇನೆ.

ಆದರೆ ನಮ್ಮ ಯುವಕ ಅಧ್ಯಕ್ಷ ಕೆನೆಡಿಯುವರು ಹಾಗೂ ಅವರ ಸರಕಾರ ಈಗಲೂ ನೆನಪಿಟ್ಟು "ಗೋವಾದ ಆಕ್ರಮಣ" ಎಂದೇ ಕರೆಯುವಂತಹ ಗೋವಾದ ಬಿಡುಗಡೆಯ ದಿನ ಬೊಂಬ್ಯಾಯ ಜನ ನಕ್ಕು ನಲಿದಾಡಿದುದನ್ನು ನೋಡಿ ನಾನೂ ಸಂತಸಪಟ್ಟಿದ್ದೇನೆ. ಹಾಗೆಯೇ ಈ ಘಟನೆಯಿಂದ ದೇಶದಾದ್ಯಂತ ಎದ್ದ ಆನಂದದ, ಉತ್ಸಾಹದ ತೆರೆಯಿಂದ ನಾನು ಕಾರ್ಮುಗಿಲ ಎಡೆಯಲ್ಲಿ ಸೂರ್ಯ ಕಿರಣವೊಂದನ್ನು ನೋಡಿದಂತಾಯಿತು. ಇನ್ನೂ ಸ್ವಲ್ಪವಾದರೂ ರಾಷ್ಟ್ರಭಕ್ತಿ ಉಳಿದಿದೆಯಲ್ಲ! ಎಂಬುದಾಗಿ ಸಮಾಧಾನ ಪಟ್ಟುಕೊಂಡೆ; ಆದರೆ ಇದು ಸಾಲದು, ಏನೇನೂ ಸಾಲದು. ಭಾರತದಂತಹ ಬೃಹತ್ ರಾಷ್ಟ್ರವನ್ನು ಒಂದಾಗಿ ನಿಲ್ಲಿಸಲು ಈ ಅಬಲ ರಾಷ್ಟ್ರ ಪ್ರೇಮ ಮತ್ತು ಈಗಿನ ಐಕ್ಯತೆ ಶಕ್ತವಾಗದು.

ಒಟ್ಟಿನಲ್ಲಿ, "ಇಡಿಯ ನಾಡಿಗೆ ಕಡು ವೈರಿಯಾದ ಬ್ರಿಟಿಷರನ್ನೋಡಿಸಿಯಾಯಿತು; ಇನ್ನು ಐಕ್ಯತೆ ಬೇಕಿಲ್ಲ." ಎಂಬ ನಿಲುಮೆಯಲ್ಲಿ ಭಾರತದ ಜನತೆ ನಿಂತಂತಿದೆ. ಹೋರಾಟವಿದ್ದಾಗ ಐಕ್ಯತೆ, ಶಾಂತಿಕಾಲದಲ್ಲಿ ಭಿನ್ನತೆ—ಹೀಗಾಗಿದೆ. ಅಂದರೆ ಭಾರತದ ಈ ತನಕದ ದುರಂತಮಯ ಇತಿಹಾಸದ ಪಾಠಗಳನ್ನು ಭಾರತೀಯರು ಸಂಪೂರ್ಣ ಮರೆತು ಪುನಃ ಮಧ್ಯಯುಗಕ್ಕೆ ಪ್ರವೇಶಿಸುತ್ತಿದ್ದಾರೆ, ಎಂದು ನನಗೆ ಭಾಸವಾಗುತ್ತಿದೆ.

ಗಾಂಧೀಜಿಯುವರು ಕಲಿಸಿದ ಪಾಠ ಇಂದು ಗಾಳಿಗೆ ತೂರಲ್ಪಡುತ್ತಿದೆ. ಹಿಂದೆ ಭಾರತದ ಮೂಲೆ ಮೂಲೆಯಲ್ಲೂ, ಹಳ್ಳಿ ಹಳ್ಳಿಗಳಲ್ಲೂ ಪ್ರತಿಧ್ವನಿಸುತ್ತಿದ್ದ ಭಾರತೀಯರ ಮೈನವಿರೇಳಿಸುತ್ತಿದ್ದ "ಭಾರತ ಮಾತಾಕೀ ಜೈ!" ಎಂಬ ಸೊಲ್ಲು ಇಂದು ನನಗೆ ಎಲ್ಲಿಯೂ ಕೇಳಿಸುತ್ತಿಲ್ಲ. ಭಾರತ ಮಾತೆಗೆ ಜಯ ದೊರೆತಾಯಿತು; ಇನ್ನು ನಿದ್ರಿಸಬಹುದೆಂಬ ಹಿಮಾಲಯ ಗಾತ್ರದ ಅಜ್ಞಾನ ಭಾರತೀಯರನ್ನು ಆವರಿಸಿದೆಯೋ ಏನೋ? ಪ್ರಾಯಶಃ ಈ ಪವಿತ್ರ ಸೊಲ್ಲು ಭಾರತದ ಇತಿಹಾಸದ ಹಾಳೆಗಳೊಳಗೆ ಈಗಾಗಲೇ ಸೇರಿ ಹೋಗಿರಬೇಕು. ಆದುದರಿಂದಲೇ ಹೊರಗೆಲ್ಲಿಯೂ ಕಾಣದಾಗಿರಬೇಕು.

ಇಂದು ಸರಿಯಾಗಿ ಇಲ್ಲಿಯ ಸ್ಥಿತಿಗತಿ, ಇಲ್ಲಿಯ ಮನೋಪ್ರವಾಹ ನೋಡಿದರೆ ಭಾರತವನ್ನು ಒಂದಾಗಿ ನಿಲ್ಲಿಸಿದ್ದು, ಜನತೆಯ ಹೃದಯದಲ್ಲಿರ

ಬೇಕಾಗಿದ್ದ ದೇಶಪ್ರೇಮವಾಗಲಿ, ಸ್ವಾತಂತ್ರ್ಯ ನಿಷ್ಠೆಯಾಗಲೀ, ಅಲ್ಲ, ಎಂದು ತೋರುತ್ತಿದೆ, ಗೆಳೆಯ. ಭಾರತವನ್ನು ಇಂದು ಉಳಿಸುತ್ತಿರುವ, ಮತ್ತು ಒಂದಾಗಿ ನಿಲ್ಲಿಸಿರುವ ಏಕಮಾತ್ರ ಸೂತ್ರವು ಗಾಂಧೀಜಿಯವರ ಪಟ್ಟ ಶಿಷ್ಯರೆನ್ನಿಸಿದ, ಕೇವಲ ಪಂಡಿತ್ ಜವಾಹರ್‌ಲಾಲ್ ನೆಹರೂರವರ ವ್ಯಕ್ತಿತ್ವ. ಅವರು ವೃದ್ಧರಾದರೂ, ತಾರುಣ್ಯದ ಉತ್ಸಾಹದಿಂದ ದುಡಿಯುತ್ತಿದ್ದಾರೆ. ಆದರೆ ಅವರ ಆಡಳಿತದ ಶಿಥಿಲತೆಯಿಂದಾಗಿ ದೇಶಪ್ರೇಮಿಗಳೆಡೆಯಲ್ಲಿ ಅವರೂ ದಿನೇದಿನೇ ಅಪ್ರಿಯರಾಗುತ್ತ ಬರುತ್ತಿರುವುದು ವಿಷಾದಕರವಾಗಿ ಕಂಡು ಬರುತ್ತಿದೆ. ಅವರ ಮೇಲಿನ ಪ್ರೇಮ ಕಾರಣವಶಾತ್ ಜನತೆಗೆ ತಪ್ಪಿಹೋದರೆ ಏನಾದೀತು? ಅವರ ನಂತರ ಭಾರತ ಹೇಗೆ ಸಾಗೀತು ಎಂಬ ಪ್ರಶ್ನೆಗೆ ಇನ್ನೂ ಉತ್ತರ ದೊರಕಿಲ್ಲ.

ಚುಟುಕಿನಲ್ಲಿಯೇ ಮುಗಿಸಬೇಕೆಂದು ಬಯಸಿದರೂ, ಈ ಸಲದ ಪತ್ರ ಬಹಳ ದೀರ್ಘವೇ ಆಯಿತು, ಸಿಲ್ವರ್. ಕ್ಷಮಿಸುವೆಯಷ್ಟೆ? ಓದಿ ತಲೆಸಿಡಿತ ಪ್ರಾರಂಭವಾದರೆ, ಗುಣಪಡಿಸಲು ಭಾರತದ 'ಅಮೃತಾಂಜನ'ದ ಸೀಸೆಯೊಂದನ್ನು ಕಳುಹಿಸಲೇ? ಅಲ್ಲ, ಅನಾಸಿನ್‌ನಲ್ಲೇ ನಿವೃತ್ತಿ ಪಡಿಸಿಕೊಳ್ಳುವೆಯಾ?

ನಿನ್ನ ನಿರೀಕ್ಷಿತ ಹೊಸ ಮಗು ಯಾವಾಗ ಹೊರ ಬಂದೀತು ಸಿಲ್ವರ್? ಜನನವಾದೊಡನೆಯೇ ತಂತಿ ಬಿಡುವೆಯಷ್ಟೆ! ನಿನ್ನ ಶ್ರೀಮತಿಗೆ ಉತ್ತಮ ಆರೋಗ್ಯವುಳಿದು ಸುಖ ಪ್ರಸವವಾಗುವಂತೆ ನಾನು ಪ್ರಾರ್ಥಿಸುತ್ತಿದ್ದೇನೆಂದು ತಿಳಿಸುವೆಯಾ?

ನಿನ್ನ ಮೋಹದ ಮಗು ಕೇನ್ನಿಗೆ ಭಾರತೀಯ ಮಿಠಾಯಿಗಳ ಪಾರ್ಸೆಲನ್ನು ಎರಡು ದಿನದಲ್ಲಿ ಕಳುಹಿಸಲಿಕ್ಕಿದ್ದೇನೆ. ಅದು ತಲಪುವ ತನಕ ನನ್ನ ಪ್ರೇಮವನ್ನು ಮಾತ್ರ ನೆನಸಿಕೊಳ್ಳುವಂತೆ ಹೇಳಿಬಿಡು, ಆಗದೇ?

ಪೆನ್ಸಿಲ್ವೇನಿಯಾದ ಪ್ರಶಾಂತ ವಾತಾವರಣದಲ್ಲಿರುವ, ನಿನ್ನ ಸುಂದರ ಮನೆಯಲ್ಲಿ ಕೆಲವು ದಿನ ಕಳೆಯಬೇಕೆಂಬ ಆಸೆಯಾಗುತ್ತಿದೆ, ಸಿಲ್ವರ್. ಆದರೇನು ಮಾಡುವುದು? ಭವ್ಯ ಭಾರತ ನನ್ನನ್ನು ಕೆಲವು ಸಮಯಕ್ಕೆ ಇಲ್ಲಿಂದ ಹೊರಡಬಿಡುವುದಿಲ್ಲ. ಇರಲಿ, ಇಲ್ಲಿಗೆ ನಿಲ್ಲಿಸುತ್ತೇನೆ. ಉಳಿದುದು ಮುಂದಿನ ಪತ್ರದಲ್ಲಿ.

ನಿನ್ನ ಆಪ್ತ ಗೆಳೆಯ,

**ಜೋನ್ಸ್ ಓರ್‌ಮನ್**

# ೩

ಬೊಂಬ್ಯಾ

ಪ್ರಿಯ ಸಿಲ್ವರ್, 1—3—'62

ನಿನ್ನ 20–2–'62ರ ಕೇಬ್ಲ್ ಸಂದೇಶ ನನಗೆ ಅದೇ ದಿನ ಬೈಸಾರಿ ಸಿಕ್ಕಿತ್ತು. ನಿನ್ನ ಅದೇ ದಿನಾಂಕದ ಪತ್ರವು ತಾ. 22–3–'62ಕ್ಕೂ 26–3–'62ರ ಪತ್ರವು ನಿನ್ನೆಯೂ ತಲಪಿದವು. ನಿನ್ನ ಶ್ರೀಮತಿಯು ನಿನಗೆ ಗಂಡು ಶಿಶುವನ್ನಿತ್ತುದರಿಂದ ನಾನು ತುಂಬಾ ಆಹ್ಲಾದಿತನಾದೆ. ಸ್ವಾಮಿ ಏಸುವು ತಾಯಿ ಮಕ್ಕಳನ್ನು ಆರೋಗ್ಯವಾಗಿ ನಡೆಸಿ, ನಿನ್ನ ಕಣ್ಣಿಗೆ ಹಬ್ಬ ವನ್ನೀಯಲಿ ಎಂಬುದಾಗಿ ದಿನಾ ಪ್ರಾರ್ಥಿಸುತ್ತಿದ್ದೇನೆ.

ನಾನೊಂದು ಮರು ಸಂದೇಶವನ್ನು ತಂತಿ ಮೂಲಕ ಕೂಡಲೇ ಕಳುಹಿಸಿ ದ್ದರೂ ಈ ಹದಿನೈದು ದಿನಗಳಿಂದ ಮೌನವಾಗಿ ಕುಳಿತಿರಬೇಕಾಗಿ ಬಂದುದಕ್ಕೆ ತೀರಾ ವಿಷಾದಪಡುತ್ತೇನೆ. ನಿನ್ನ ಕ್ಷಮಾಯಾಚನೆ ಮಾಡುತ್ತೇನೆ. ಈ ದೇಶ ದಲ್ಲಿ ಅಲ್ಲಲ್ಲಿರುವ 'ಫ್ಲೂ' ನನ್ನನ್ನು ನಾಲ್ಕೈದು ದಿನ ಮಲಗಿಸಿತ್ತು. ಹೋ ಟೇಲಿನ ಕೋಣೆಯಿಂದ ಹೊರ ಹೊರಡುವಂತಿಲ್ಲ. ಎದ್ದು ಕುಳಿತಿರುವಂತಿಲ್ಲ. ಈ ದಿನ ಈಗ ಬೈಸಾರಿ ಸ್ವಲ್ಪ ಉಲ್ಲಾಸ ಬಂದು ಬರೆಯ ತೊಡಗಿದೆ.

ಮುದ್ದು ಕೇನ್ನಿಗಾಗಿ ಬೊಂಬ್ಯಾಯ ಬೇರೆಬೇರೆ ಅಂಗಡಿ ಸುತ್ತಾಡಿ ಭಾರತೀಯ ಮಿಠಾಯಿಗಳ ಒಂದು ಉತ್ತಮ ಸಂಗ್ರಹ ಮಾಡಿ ವಿಮಾನ ಪಾರ್ಸೆಲು ಮಾಡುವುದಕ್ಕಾಗಿ ತೆಗೆದಿಟ್ಟಿದ್ದೆ. ಆದರೆ ನನ್ನ ಹೆಡ್ಡುತನ ನೋಡು! ನಾನು ಅಮೇರಿಕಾ ದೇಶದಲ್ಲೇ ಇದ್ದೇನೆ—ಎಂಬಂತೆ ಕೋಣೆಗೆ ಬೀಗ ಹಾಕದೆ, ನೆರೆಯ ಕೋಣೆಯ ಒಬ್ಬ ಭಾರತೀಯ ಮಿತ್ರನೆಡೆಗೆ ಹೋಗಿ, ಸಂಭಾಷಣೆ ಮಾಡುತ್ತಿದ್ದೆ. ಹಿಂದಿರುಗುವಾಗ ಮಿಠಾಯಿಯ ಕಟ್ಟು ಕಾಣೆ ಯಾಗಿತ್ತು. ಪೆಟ್ಟಿಗೆಗೆ ಬೀಗ ಹಾಕಿಟ್ಟಿದ್ದರಿಂದ ಪುಣ್ಯವಶಾತ್ ಹಣದ ಚೀಲ ಉಳಿಯಿತು.

ಹೀಗೆ ಕೇನ್ನಿಗಾಗಿ ತೆಗೆದಿಟ್ಟ ಬೆಲೆಬಾಳುವ ಮಿಠಾಯಿ ಕಟ್ಟು ಯಾವುದೋ ತಿಂಡಿಬಾಕನ ಹೊಟ್ಟೆ ಸೇರಿತು. ಇನ್ನು ಜ್ವರದಿಂದ ಚೇತರಿಸಿ ಕೊಂಡ ಮೇಲೆ ಪುನಃ ಸಂಗ್ರಹಿಸಿ, ಕಳುಹಿಸುತ್ತೇನೆ. ಹಾಗೆಂದು ಸಿಲ್ಕಿನಂಥ ಸುಂದರ ಕೂದಲು ಧರಿಸಿರುವ ಕೇನ್ನಿಗೆ ತಿಳಿಸಿಬಿಡುವೆಯಾ?

ಗೆಳೆಯ, ಈ ಹಾಳು ಹರಟೆಯಲ್ಲೇ ನನ್ನ ಪತ್ರದ ಪುಟ ತುಂಬಿ ಹೋ ದೀತು! ಈ ಮೊದಲು ನಿಂತಲ್ಲಿಂದ ನನ್ನ ಪತ್ರವನ್ನು ಮುಂದರಿಸುತ್ತೇನೆ.

ಆಗಿಂದಾಗ ಅನೇಕ ಮಹಾ ಪುರುಷರು ಹುಟ್ಟಿದ ಮತ್ತು ಪರಮಾತ್ಮನು ಅನೇಕ ಅವತಾರಗಳನ್ನೆತ್ತಿದ ನಾಡು ಈ ಭಾರತ. ಆದ್ದರಿಂದ ಈ ಭೂಮಿ ಸತ್ಯ, ಪ್ರಾಮಾಣಿಕತೆ, ಹಾಗೂ ದೈವೀಗುಣಗಳ ಸ್ವರ್ಗವಾಗಿರಬಹುದು— ಎಂದು ಯಾರಾದರೂ ಭಾವಿಸಿದ್ದರೆ ಅದು ಕೇವಲ ತಪ್ಪು. ಇಂದಿಗೂ ಇಲ್ಲಿ ಜಗತ್ತಿನಲ್ಲೆಲ್ಲೂ ಕಾಣಲಾರದಷ್ಟು ಯಥಾರ್ಥವಾದ ಸಂತ ಜನರೂ, ಅಧ್ಯಾತ್ಮ ವಾದಿಗಳೂ ಇದ್ದಾರೆಂಬುದು ಸತ್ಯ. ಆದರೆ ಸರ್ವಸಾಮಾನ್ಯ ಜನರ ಮನೋಭಾವನೆ ಹೇಗಿದೆಯೆಂದು ಪರಿಶೀಲಿಸಿದಾಗ ನಾವು ನಿರಾಶರಾಗಲೇ ಬೇಕು. ಈ ಮಹಾತ್ಮರಿಂದ ಈ ನಾಡಿನ ಜನರು ವಿಶೇಷವೇನನ್ನೂ ಪಡ ಕೊಂಡಂತೆ ಈಗ ಕಂಡುಬರುವುದಿಲ್ಲ.

ಮಹಾತ್ಮಾ ಗಾಂಧೀಜಿಯವರು ಸಾರಿದ ಸತ್ಯದ ಮಾತಂತಿರಲಿ! ಜನಸಾಮಾ ನ್ಯರಲ್ಲಿ, ಇಡಿಯ ನಾಗರಿಕ ಸಮಾಜದ ಪ್ರಾಮುಖ್ಯ ತಳಹದಿಯಾದ ಪ್ರಾಮಾ ಣಿಕತೆಯೇ ಇದ್ದಂತೆ ನನಗನಿಸುವುದಿಲ್ಲ. ಹಾಗೆಂದರೆ ಎಲ್ಲರೂ ಅಪ್ರಾಮಾಣಿ ಕರೆಂದು ನಾನನ್ನುವುದಲ್ಲ. ಆದರೆ ಬಹು ಸಂಖ್ಯಾಕರಲ್ಲಿ ಪ್ರಾಮಾಣಿಕತೆ ಯೆಂಬುದು ಬಲವಾದ ಒಂದು ಸ್ವಭಾವವಾಗಿ ಕಾಣುತ್ತಿಲ್ಲ.

ನನ್ನ ಬೂಟ್ಸನ್ನು ಮೊದಲು ನಾನು ಬೊಂಬಾಯಿಯ ಬೀದಿಗಳಲ್ಲಿ ನೂರಾರು ಸಂಖ್ಯೆಯಲ್ಲಿರುವ ಬೂಟ್ ಪೋಲಿಷ್ ಹುಡುಗರಿಂದ ಪೋಲಿಷ್ ಮಾಡಿಸುತ್ತಿದ್ದೆ. ಈ ಬಗ್ಗೆ ನನ್ನಿಂದ ಕೆಲವರು ಎರಡು ರೂಪಾಯಿ ಇಸ ಕೊಳ್ಳು ತ್ತಿದ್ದರೆ, ಇನ್ನು ಕೆಲವರು ಕೇವಲ ಒಂದು ರೂಪಾಯಿಯಲ್ಲೇ ತೃಪ್ತರಾಗುತ್ತಿ ದ್ದರು. ಇದು ನನಗೊಂದು ಕುತೂಹಲಕಾರಿ ವಿಷಯವಾಯಿತು.

ಒಂದು ದಿನ ಈ ಕುರಿತಾಗಿ ಹೆಚ್ಚು ಪರಿಶೀಲಿಸಬೇಕೆಂದುಕೊಂಡು, ಒಂದು ಪಕ್ಕದಲ್ಲಿ ನಿಂತು ಭಾರತೀಯರಿಂದ ಅವರೆಷ್ಟು ತೆಗೆದುಕೊಳ್ಳುತ್ತಾ

ರೆಂದು ನೋಡಿವೆ. ಕೇವಲ ಹನ್ನೆರಡು ಭಾರತೀಯ ನಯೆ ಪೈಸೆಗಳಿಂದ ಇಪ್ಪತ್ತೈದರೊಳಗೆ ಈ ಕೆಲಸ ತೀರುತ್ತಿತ್ತು.

ಮತ್ತೊಮ್ಮೆ ನಾನೂ ಕೇವಲ 25 ನಯೆ ಪೈಸೆ ಕೊಟ್ಟೆ. ಪೋಲಿಷ್ ಹುಡುಗರು ದೊಡ್ಡ ಗುಲ್ಲೆಬ್ಬಿಸಿ "ಸಾಹೇಬ್ ಕೋ ಏಕ್ ರೂಪ್ಯಾ" (ಸಾಹೇಬ ರಿಗೆ ಒಂದು ರೂಪ್ಯಾ ಎಂಬರ್ಥ) ಎಂದು ವಸೂಲು ಮಾಡಿಯೇ ಬಿಟ್ಟರು. ಗುಲ್ಲಾಗುವುದನ್ನು ಬಯಸದ ನಾನು ಕೊಟ್ಟು ಬಿಟ್ಟೆ.

ನನ್ನ ಹೋಟಿಲಿನಲ್ಲಿದ್ದ ಒಬ್ಬ ಆಂಗ್ಲನ ಕೂಡೆ ಈ ವಿಚಾರ ಪ್ರಸ್ತಾಪಿಸಿದೆ. ತನ್ನಿಂದ ಎರಡು ರೂಪ್ಯಾ ಇಸಕೊಳ್ಳುತ್ತಾರೆ. ಎಂಬುದಾಗಿ ಅವನು ಹೇಳಿದ. ಭಾರತೀಯ ಮಿತ್ರನೊಬ್ಬನ ಕೂಡೆ ಈ ರಹಸ್ಯವನ್ನು ಪ್ರಸ್ತಾಪಿಸಿದಾಗ "ಈ ಹುಡುಗರು ದಗಾಖೋರರು. ನೀವೆಲ್ಲಾ ಶ್ರೀಮಂತಿಗೆಯಲ್ಲಿ ಹಣ ಚೆಲ್ಲಲೂ ಶಕ್ತರು ಎಂದು ಅವರ ತಲೆಯಲ್ಲಿದೆ. ಅದಕ್ಕಾಗಿ ವಿದೇಶೀಯರಿಂದ ಅವರು ಒಂದೆರಡು ರೂಪ್ಯಾ ತೆಗೆಯುತ್ತಾರೆ. ಶ್ರಮಕ್ಕೆ ತಕ್ಕ ಪ್ರತಿಫಲವೆಂಬುದು ಅವರ ಸಿದ್ಧಾಂತವಲ್ಲ. ಪರಮಾವಧಿ ಲಾಭವೆಂಬುದೇ ಅವರ ಸೂತ್ರ" ಎಂದುಬಿಟ್ಟನಾತ. ಗಾಂಧಿಜೀಯ ನಾಡಿನಲ್ಲೂ ಹೀಗಾದೀತೆಂದು ನಾನು ಭಾವಿಸಿರಲಿಲ್ಲ. ಅಂದಿನಿಂದ ನಾನು ಬೂಟ್ಸನ್ನು ಸ್ವತಃ ಪೋಲಿಷ್ ಮಾಡುತ್ತಿದ್ದೇನೆ. ನಮ್ಮ ದೇಶದಲ್ಲಿ ಪ್ರತಿಯೊಂದಕ್ಕೂ ಉಗ್ಗಡ ಬೆಲೆ ತೆತ್ತು ಅಭ್ಯಾಸವಾದ ನಾವು ಇಲ್ಲಿಯೂ ಹಾಗೆಯೇ ಇರಬಹುದೆಂದು ಭ್ರಮಿಸಿ ಹೇಳಿದಷ್ಟು ಕೊಟ್ಟುಬಿಡುತ್ತೇವೆ. ಆದರೆ ನಾನೀಗ ಇಲ್ಲಿಯ ವ್ಯಾಪಾರದ ಕ್ರಮ ತಿಳಿದು ಜಾಗ್ರತನಾಗಿದ್ದೇನೆ.

ಬೊಂಬ್ಯಾಯಲ್ಲಿ ನನಗೊಬ್ಬ ಆತ್ಮೀಯ ಮಿತ್ರನಿದ್ದಾನೆ. ಅವನ ಹೆಸರು ಮನ ಮೋಹನ್ ಎಂದು. ಆತನೊಬ್ಬ ಕಾಲೇಜಿನ ಪ್ರೊಫೆಸರನಾಗಿದ್ದಾನೆ. ನಾನೂ ಆತನೂ ಜತೆಯಾಗಿ ಬೊಂಬ್ಯಾಯಲ್ಲಿ ಅಡ್ಡಾಡುವುದಿದೆ. ಒಂದು ದಿನ ನಮ್ಮ ಸಂಯುಕ್ತ ಅಮೇರಿಕಾ ದೇಶದಲ್ಲೂ, ಬ್ರಿಟನ್‌ನಲ್ಲೂ ಬೃಹತ್ ಅಂಗಡಿಗಳಲ್ಲಿ ಕೂಡಾ ವಿಕ್ರಯಿಸಲು ಜನರೇ ಇಲ್ಲದೆ, ಕೇವಲ ಕ್ರಯದ ಪಟ್ಟಿ ತೂಗಹಾಕಿ ವ್ಯಾಪಾರ ನಡೆಸುವ ಕ್ರಮದ ಕುರಿತಾಗಿ ಮಾತು ಬಂತು. ಇಲ್ಲಿಯೂ ಭಾರತೀಯರು ಹಾಗೇಕೆ ಮಾಡುತ್ತಿಲ್ಲ? ಎಂಬುದಾಗಿ ನಾನು ಪ್ರಶ್ನಿಸಿದೆ.

ಆಗ ಅವನು "ಹಾಗೆ ಮಾಡಿದರೆ, ಅಂಗಡಿಯಲ್ಲಿ ಒಂದೇ ದಿನದಲ್ಲಿ ಸಾಮಾಗ್ರಿ ಮುಗಿದೀತು; ದುಡ್ಡು ಬರಲಿಕ್ಕಿಲ್ಲ. ಅಂಗಡಿಯವರು ಬೇಗನೇ

ದೀವಾಳಿ ಅರ್ಜಿ ಕೊಡಬೇಕಾದೀತು.” ಎಂಬುದಾಗಿ ಹೇಳಿಬಿಟ್ಟ. ನಾನು ಅವನ ಕೂಡೆ ಬಹಳ ವಾದಿಸಿದೆ. “ನಿಮ್ಮ ವ್ಯಾಪಾರಿಗಳಿಗೆ ವಿಶ್ವಾಸವಿಲ್ಲ. ಆ ಪದ್ಧತಿ ಕಾರ್ಯರೂಪಕ್ಕೆ ತಂದಾಗ ಖಂಡಿತ ಯಶಸ್ವಿಯಾದೀತು. ಗಾಂಧಿಯ ನಾಡಿನಲ್ಲಿ ಹಾಗಾಗುವುದು ಸಾಧ್ಯವಿಲ್ಲ” ಎಂದು ಹೇಳಿದೆ. ನಮ್ಮ ವಿಮರ್ಶೆಯು ಅಭಿಪ್ರಾಯ ಭೇದದಲ್ಲೇ ಕೊನೆಗೊಂಡಿತು. ಬೊಂಬ್ಾಯ ಕಿಸೆಗಳ್ಳರ ಕತೆ, ಅಥವಾ ಇತರ ರೀತಿಯ ಅಪ್ರಾಮಾಣಿಕ ವರ್ತನೆಗಳ ಕತೆ ಕೇಳಿ ನನ್ನ ಅಭಿಪ್ರಾಯ ಬದಲಾಗುತ್ತಾ ಬಂದಿತ್ತು. ಬೂಟ್ಸ್ ಪೋಲಿಷ್‌ನ ಘಟನೆಯಿಂದಲೂ, ನನಗೊದಗಿದ ಇತರ ಕೆಲವು ಘಟನೆಗಳಿಂದಲೂ ನನ್ನ ಮಿತ್ರ ಹೇಳಿದ್ದೇ ಸರಿಯೆಂಬ ನಿಲುವೆಗೆ ನಾನು ಬರತೊಡಗಿದೆ.

ಕೇನ್ನಿಗಾಗಿ ಇಟ್ಟ ಮಿಠಾಯಿಯ ಕಳವಿನಿಂದ ಆತನ ಮಾತು ನನಗೆ ಪೂರ್ಣ ಸಮಾಧಾನವಾಯಿತು. ಆದರೆ ಆ ದಿನ ನನಗಾದ ದುಃಖವೆಷ್ಟು ಬಲ್ಲಿರಾ? ನಾನು ಅತಿಯಾಗಿ ಗೌರವಿಸುವ ಭಾರತದಲ್ಲೂ ಹೀಗಾಗುವುದೇ? ಸಂಯುಕ್ತ ಅಮೇರಿಕಕ್ಕೆ ಭಾವನಾತ್ಮಕ ಮೇಲ್ಪಂಕ್ತಿ ಹಾಕಬೇಕಾಗಿದ್ದ ಭಾರತವು, ಕೇವಲ ಪ್ರಾಮಾಣಿಕತೆಯೆಂಬ ಗುಣಕ್ಕೂ ಎರವಾಗಿದೆಯೇ ಎಂಬುದಾಗಿ ನಾನು ಹಲುಬಿದೆ. ಹಿಂದೂ ಧರ್ಮದ ಉನ್ನತವಾದ ತತ್ವ ಇಂದಿನ ಭಾರತೀಯರ ರಕ್ತಕ್ಕೆ ಇನ್ನೂ ಇಳಿದಿಲ್ಲವೆಂದುಕೊಂಡೆ.

ಭಾರತದ ದಕ್ಷಿಣ ಪ್ರಾಂತ್ಯವೊಂದರಿಂದ ಬೊಂಬಾಯಿಗೆ ಬಂದ ವ್ಯಕ್ತಿಯೊರ್ವನ ಪರಿಚಯ ನನಗಾಯಿತು. ಅವನ ಜೀವನದ ವಿಷಯವೆಲ್ಲಾ ತಿಳಿದುಕೊಳ್ಳಬೇಕೆಂಬ ಆಸೆ ನನಗಾಯಿತು. ಆತನ ಪ್ರಾಂತ್ಯದ ಮುಖ್ಯ ಪಟ್ಟಣದಲ್ಲಿರುವ ಸರಕಾರಿ ಬಸ್ ಟ್ರಾನ್ಸ್‌ಪೋರ್ಟ್ ಕಂಪೆನಿಯ ಡಿಪೋವಿನ ನೌಕರನಂತೆ ಆತನು. ಮಾತಿನಲ್ಲಿ ಆತನ ವೇತನದ ಪ್ರಶ್ನೆ ಬಂತು. ಗ್ರೇಜ್ಯುವೇಟ್ ಆಗಿಯೂ ತಿಂಗಳಿಗೆ 100 ರೂಪಾಯಿ ವೇತನ ಪಡೆಯುತ್ತಿದ್ದಾನೆ— ಎಂದು ತಿಳಿಯಿತು. ಅಂದರೆ ತಿಂಗಳಿಗೆ 20 ಡಾಲರು ವೇತನವಾಯಿತು. ನಮ್ಮಲ್ಲಿ ಅತಿ ಕೀಳು ಮಟ್ಟದ ಉದ್ಯೋಗದಿಂದ, ಏನೂ ವಿದ್ಯಾಭ್ಯಾಸವಿಲ್ಲದವನೂ ಪ್ರತಿ ವಾರಕ್ಕೆ 40 ಡಾಲರಿಗೂ ಮಿಕ್ಕಿ ಸಂಪಾದಿಸುತ್ತಾನೆ. ಎಂದರೆ ತಿಂಗಳಿಗೆ 160 ಡಾಲರಿಗೂ ಮಿಕ್ಕಿದಂತಾಯಿತು. “ಏನಪ್ಪಾ ಇಷ್ಟು ಕಡಿಮೆ ವೇತನಕ್ಕೆ ಏತಕ್ಕೆ ಉದ್ಯೋಗ ಮಾಡುತ್ತೀ?” ಎಂದು ನಾನು ಕೇಳಿಬಿಟ್ಟೆ. “ಬೇರೆ ಉದ್ಯೋಗವಿಲ್ಲದಿರಲು ಏನು ಮಾಡುವುದು?” ಎಂದಾತನ ಉತ್ತರ ಬಂತು.

ಸ್ವಲ್ಪ ತಡೆದು ಇತರ ವಿಷಯ ಸಹಜವಾಗಿಯೇ ಹೊರಬಂತು. ಸರ

5

ಕಾರಿ ಬಸ್ಸಿನ ಡಿಪೋವಿನಲ್ಲಿ ಆತನಿಗೆ ಬೇರೆ ಉತ್ಪತ್ತಿಯೂ ಇದೆಯಂತೆ! ಏನು ಗೊತ್ತೇ? ಸರಕಾರಿ ಬಸ್ಸಿನ ಬಿಡಿ ಭಾಗಗಳನ್ನು ಕಳ್ಳಸಂತೆಯಲ್ಲಿ ಮಾರಾಟ ಮಾಡುವುದು. ನಾನು ಗಾಬರಿಯಿಂದ ಕಂಗಾಲಾಗಿಬಿಟ್ಟೆ. ಆಗ ಆತನು "ಏನು ಹೇಳುತ್ತೀರಿ ಮಿ. ಓರ್‌ಮನ್! ನಮ್ಮ ಮೆನೇಜರರು ಒಂದೇ ರಾತ್ರಿಯಲ್ಲಿ ಇಡೀಬಸ್ಸನ್ನೇ ಮಾರಾಟ ಮಾಡಿ ಬಿಡುತ್ತಾರೆ! ನಮ್ಮದೇನು ಮಹಾ!" ಎಂದುಬಿಟ್ಟ. ರಿಪೇರಿಗೆಂದು ಕದಲಿಸಿಟ್ಟ ಬಸ್ಸಿನ ಭಾಗಗಳನ್ನು ಇಡೀ ಲೋರಿಯಲ್ಲಿ ತುಂಬಿಸಿ, ಮಾರಾಟ ಮಾಡುವುದಂತೆ! ಆ ಲಾಭದಲ್ಲಿ ಮೇಲಿನ ಮತ್ತು ಕೆಳಗಿನ ಅಧಿಕಾರಿಗಳಿಗೆ ಲಾಭ ಹಂಚೋಣವಂತೆ! ಇದು ಶುದ್ಧ ಸರಕಾರಿ ವಿಭಾಗದಲ್ಲಿ!

ನಾನು ಮಂಕಾಗಿ ಬಿಟ್ಟೆ. "ಇದೆಲ್ಲಾ ಹೇಗೆ ನಡೆಯುತ್ತಿದೆ"–ಎಂದು ಕೇಳುವಾಗ—ಬಸ್ಸು ಸಂಚಾರದ ವಿಭಾಗದ, ಮಂತ್ರಿಗಳಿಗೆ ಇವರ ಅಕ್ಕನನ್ನು ವಿವಾಹವಾದುದು; ಒಡಿಟರ್ ಜನರಲ್ಲರು ಇವರ ಸೋದರ ಮಾವ, ಎಂದು ತಿಳಿಯಿತು. ಮತ್ತೇನು ಭಯ? "ಮೆನೇಜರರು ಎಲ್ಲಾ ಸುಧಾರಿಸುತ್ತಾರೆ." ಎಂದುಬಿಟ್ಟನವ. ಸಾರ್ವಜನಿಕ ಹಣದ ಪ್ರತ್ಯಕ್ಷ ಅಪಹಾರ!

"ಊರಿನ ಜನರಿಗಾದರೂ ಇದು ತಿಳಿಯುವುದಿಲ್ಲವೇ? ಅವರು ಹುಯಿಲೆಬ್ಬಿಸುವುದಿಲ್ಲವೇ?" ಎಂದು ಕೇಳಿ ಬಿಟ್ಟೆ, ಹೆಡ್ಡನಾಗಿ. "ಸರಕಾರದ ದುಡ್ಡು ಹೋದರೆ ಊರಿನವರಿಗೇನು? ಅವರು ನೋಡಿ ನಗಾಡುತ್ತಾರೆ. ಸಾಧ್ಯವಾದರೆ ಲಾಭಕ್ಕಾಗಿ ತಾವೇ ವಸ್ತುಗಳನ್ನು ಕೊಂಡುಕೊಳ್ಳುತ್ತಾರೆ" ಎಂಬುದಾಗಿ ಹೇಳಿಬಿಟ್ಟ, ಆ ಪುಣ್ಯಾತ್ಮ. ಆತನು ಬಿ. ಎ. ಆಗಿಯೂ ಸರಕಾರದ ಸೊತ್ತಿನ ಅಪಹಾರವೆಂದರೆ ಜನತೆಗೇ ವಂಚನೆ ಎಂಬುದು ಅವನಿಗೆ ಅಥವಾ ಆತನ ಊರಿನ ಜನರಿಗೆ ಅರ್ಥವಾಗಲಿಲ್ಲವೆಂಬುದು ಸ್ಪಷ್ಟವಾಯಿತು.

ಭಾರತದ ಸಾರ್ವಜನಿಕ ಜೀವನವು ಇಷ್ಟು ಕೆಡುಕಾಗಿತ್ತೆಂದು ನನಗೆ ತಿಳಿದದ್ದು ಆಗಲೇ.

ಪ್ರಿಯ ಸಿಲ್ವರ್, ಭಾರತದಲ್ಲಿಂದು ರಾಜಕೀಯ, ಸರಕಾರ, ಸಮಾಜ, ಉದ್ಯೋಗ, ವ್ಯಾಪಾರ, ಕೈಗಾರಿಕೆ, ವೈದ್ಯಕೀಯ ವಿದ್ಯಾ ಸಂಸ್ಥೆಗಳು, ಎಂಜಿನಿಯರಿಂಗ್ ಇಲಾಖೆ, ಹೀಗೆ ಪ್ರತಿಯೊಂದು ವಿಭಾಗದಲ್ಲೂ ಈ ರೀತಿ ಕೆಡುಕು ತುಂಬಿದ ಕುರಿತಾದ ಕತೆಗಳನ್ನೆಷ್ಟೂ ಬರೆಯಬಹುದು. ಅದನ್ನು ಗ್ರಹಿಸಿದಾಗ ಭಾರತೀಯನಲ್ಲದ ನನಗೇ ವ್ಯಥೆಯಾಗುವುದು .ಗಾಂಧಿಯವರು ಈಗ ಇದ್ದಿದ್ದರೆ ಅವರು ಏನು ಮಾಡಿಕೊಳ್ಳುತ್ತಿದ್ದರೋ ಹೇಳುವಂತಿಲ್ಲ.

ಒಂದು ದಿನ ಒಂದು ಹೃದಯ ವಿದ್ರಾವಕ ದೃಶ್ಯ ನೋಡಿದೆ. ನಾನೂ ಮನಮೋಹನನೂ, ಒಂದು ರಜೆ ದಿನ ಪೂನಾಕ್ಕೆ ಹೋಗಿದ್ದೆವು. ಕುತೂಹಲ ದಿಂದ ಅಲ್ಲೇ ಪಟ್ಟಣದ ಹೊರವಲಯದ ಒಂದು ಗುಡಿಸಲಿಗೆ ಹೊಕ್ಕೆವು. ಮನೆಯ ಯಜಮಾನನು ಗೋಡೆಯಲ್ಲಿ ತೂಗಹಾಕಿದ್ದ ಮಹಾತ್ಮಾ ಗಾಂಧಿಯ ವರ ಒಂದು ಹರುಕು ಭಾವಚಿತ್ರದೆದುರಿಗೆ ನಿಂತು ಮರಾಠಿಯಲ್ಲಿ ಏನನ್ನೋ ಹೇಳುತ್ತಾ ಕಣ್ಣೀರಿಡುತ್ತಿದ್ದನು. ನನ್ನ ಮಿತ್ರನ ಕೂಡೆ ಕೇಳಿದೆ—ಏನು ವಿಷ ಯವೆಂದು.

ಆಗ, ತನ್ನ ದೇಶದ ಈಗಿನ ದುರವಸ್ಥೆಯ ಕುರಿತಾಗಿ ಆತನು ರಾಷ್ಟ್ರ ಪಿತನ ಕೂಡೆ ಹೇಳಿಕೊಳ್ಳುತ್ತಿದ್ದಾನೆಂದೂ, "ನೀನು ಹೋದ ಇಷ್ಟು ಸ್ವಲ್ಪದ ರಲ್ಲೇ ನಾವು ಹೀಗೆಲ್ಲಾ ಆಗಿಬಿಟ್ಟೆವಲ್ಲಾ!" ಎಂದಾತನು ತನ್ನ ದೇಶದ ಪರ ವಾಗಿ ದುಃಖವನ್ನು ತೋಡಿಕೊಳ್ಳುತ್ತಿದ್ದಾನೆಂದೂ ತಿಳಿಯಿತು.

ಆ ಮುದುಕ, ಗಾಂಧೀಜಿಯವರ ಶಿಷ್ಯರಲ್ಲೊಬ್ಬನಾಗಿದ್ದ. ಸತ್ಯಾಗ್ರಹ ಸಮರಗಳಲ್ಲಿ ಜೈಲುವಾಸವನ್ನನುಭವಿಸಿದ ವೀರ ಯೋಧನಂತೆ. ಈಗ ಹೀಗೆ ದುಃಖಿಸಿ ಕಷ್ಟಪಡುತ್ತಿದ್ದಾನೆ; ಸ್ವಲ್ಪ ತಡೆದು ಆತನ ಅನುಭವವನ್ನೆಲ್ಲಾ ನಮ್ಮ ಮುಂದೆ ಹೇಳಿದ. ಈ ಒಂದು ದೃಶ್ಯ ನನ್ನ ಕಣ್ಣಿಗೆ ಕಟ್ಟಿದೆ, ಸಿಲ್ವರ್. ಭಾರತದ ದುರಂತಮಯ ಚಿತ್ರವಾಗಿ ನನ್ನೆದುರು ಅದು ನಿಂತಿದೆ.

ಪ್ರಿಯ ಗೆಳೆಯ, ನೀನೀಗ ಭಾರತದ ಕುರಿತಾಗಿ ಫೂತ್ಕರಿಸಬಹುದು—ನನಗೆ ತಿಳಿದಿದೆ. ನಿನಗೆ ಮೊದಲೇ ಭಾರತವೆಂದರೆ ಆಗದು. ಈ ಮಾತನ್ನು ಕೇಳಿ ನಿನ್ನ ತಿರಸ್ಕಾರ ದ್ವಿಗುಣಿತವಾಗಬಹುದು.

ಆದರೆ ಹಾಗಾಗಗೊಡಬೇಡ. ಅದಕ್ಕಾಗಿಯೇ ಹಿಂದಿನ ಪತ್ರಗಳಲ್ಲಿ ಭಾರತದ ಹಿಂದಿನ ಹಿನ್ನೆಲೆಯನ್ನೆಲ್ಲಾ ಬರೆದೆ.

ಭಾರತದಲ್ಲಿ ಹಿಂದೆ ಚಾರಿತ್ರಿಕ ಕಾಲದಲ್ಲಿಯೂ ಮತ್ತು ಪೌರಾಣಿಕ ಕಾಲದಲ್ಲಿಯೂ ಕೂಡಾ ನಿತ್ಯ ಸಾಮಾಜಿಕ ಜೀವನದಲ್ಲಿ ಸಾಮಾನ್ಯರೂ ಕೂಡಾ ಪೂರ್ಣ ಸತ್ಯವಾದ ಹಾಗೂ ಶುದ್ಧವಾದ ಆಚರಣೆಯನ್ನೇ ಇಟ್ಟುಕೊಂಡಿದ್ದರು. ಫಾಹಿಯಾನ್, ಹ್ಯುಯೆನ್‌ತ್ಸಾಂಗ್ ಮತ್ತಿತರ ಯಾತ್ರಿಕರ ವರದಿಗಳಿಂದ ಮತ್ತು ಚರಿತ್ರೆಯಿಂದ ಇದು ವಿದಿತವಾಗುವುದು. ಆದರೆ ನಂತರ ಇತರ ಕಾರಣಗಳಿಂದ ಅನೇಕ ಗಂಡಾಂತರಗಳು ಈ ದೇಶವನ್ನು ಹದಗೆಡಿಸಿದುವು. ಭಾರತದಂತಹ ಅವಸ್ಥೆ ನಮಗೆ ಬಂದಿದ್ದರೆ, ನಾವು ಹೇಳ ಹೆಸರಿಲ್ಲದೆ ನಾಶವಾಗುತ್ತಿದ್ದೆವು.

ಇಲ್ಲಿಯ ಮಹಾನುಭಾವರ ಆತ್ಮಬಲದಿಂದಲೇ ಭಾರತವು ತನ್ನ ಸಂಸ್ಕೃತಿಯನ್ನು ಒಳಗಿನ ನಿಧಿಯಾಗಿ ಹಿಡಿದುಕೊಂಡು ಮುಂದೆ ಸಾಗುತ್ತಿದೆಯೆಂದು ನನ್ನ ಅಭಿಪ್ರಾಯ.

ಹಿಂದಿನ ಪತ್ರದಲ್ಲಿ ಬರೆದ ರೀತಿಯ ಭೀಕರ ಮತ್ತು ಸಾರ್ವತ್ರಿಕ ದಾರಿದ್ರ್ಯದ ಫಲವಾಗಿ, ಬಡಜನರು ಹೊಟ್ಟೆತುಂಬಿಸುವುದಕ್ಕಾಗಿಯೇ ವಕ್ರಮಾರ್ಗವನ್ನನುಸರಿಸಿ, ಅಪ್ರಾಮಾಣಿಕ ವರ್ತನೆಗೆ ಇಳಿಯುವಂತಾಯಿತು. ಅವರ ಆಧ್ಯಾತ್ಮಿಕ ಬೆನ್ನುಮೂಳೆ ಮುರಿದು ಹೋಗಿತ್ತು. ಅವರ ಸ್ವಾಭಿಮಾನ ಅಳಿಸಿ ಹೋಗಿತ್ತು. ಹಿಂದೆಯೇ ಬರೆದಂತೆ ಬೆನ್ನು ಮುರಿಯುವ ಬಡತನದೆಡೆಯಲ್ಲಿ ಸ್ವಸಾಮರ್ಥ್ಯದಿಂದ ದುಡಿದು ಉತ್ಪತ್ತಿ ಮಾಡುವ ಉತ್ಸಾಹ ಉಡುಗಿ ಹೋಗಿತ್ತು. ಹೆಚ್ಚಿನವರ ಜೀವನ ಪ್ರವಾಹ ಹಾಗೆ ಬಂದಾಗ ಕೆಲವು ಸಾಮಾನ್ಯ ಜನರಿಗೆ ತಮ್ಮ ಮನೋಭಾವವನ್ನು ಬದಲಿಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಈ ದಾರಿದ್ರ್ಯಕ್ಕೆ ಕಾರಣಗಳನ್ನು ಹಿಂದಿನ ಪತ್ರದಲ್ಲೇ ವಿಮರ್ಶೆ ಮಾಡಿದ್ದೇನೆ. ಆದುದರಿಂದ ದಯವಿಟ್ಟು ಭಾರತದ ಜನತೆಯನ್ನು ತಪ್ಪು ತಿಳಿಯಬೇಡ, ಎಂಬುದಾಗಿ ಕೇಳಿಕೊಳ್ಳುತ್ತೇನೆ.

ಈ ರೀತಿಯಾಗಲು ಇನ್ನೊಂದು ಬಲವಾದ ಕಾರಣವಿದೆ, ಸಿಲ್ವರ್. ಹಿಂದೂ ಧರ್ಮದಲ್ಲಿ ಪ್ರವೃತ್ತಿ ಧರ್ಮ, ನಿವೃತ್ತಿ ಧರ್ಮವೆಂಬ ಎರಡು ಪ್ರಕಾರವಿದೆ. ಪ್ರವೃತ್ತಿ ಧರ್ಮವು, ಲೋಕರೂಢಿಗನುಸಾರವಾಗಿ, ಸಮಾಜದಲ್ಲಿ, ವೈಯಕ್ತಿಕವಾಗಿ ಮತ್ತು ಸಾಮೂಹಿಕವಾಗಿ ಮಾಡಬೇಕಾದ ಕೆಲಸಗಳು, ಕಟ್ಟು ಕಟ್ಟಳೆಗಳು ಪುಣ್ಯ ಸಂಪಾದಿಸಿ, ಮುಂದಿನ ಜನ್ಮದಲ್ಲಿ ಸುಖ ಪಡೆಯುವುದಕ್ಕಾಗಿ ಮಾಡುವ ಪೂಜೆ ಪುನಸ್ಕಾರಗಳು ಇತ್ಯಾದಿಗಳನ್ನು ಒಳಗೊಂಡಿದೆ. ನಿವೃತ್ತಿ ಧರ್ಮವೆಂಬುದು, ಪರಮಾತ್ಮನನ್ನು ಅಡ್ಡವಾಗಿಸುವ ಪ್ರಾಪಂಚಿಕ ಮಾಯಾ ಪಾಶಗಳನ್ನು ದೂರಮಾಡಿ, ಆತನೆಡೆಗೆ ಸಾಗಿ, ಆತನಲ್ಲೇ ಒಂದಾಗುವ ಧರ್ಮವೆಂದರ್ಥ.

ನಾನು ಮೊದಲು ವರ್ಣಿಸಿದಂತೆ ವರ್ಣಾಶ್ರಮಧರ್ಮವು ಸದುಪಯೋಗವಾಗಿ ಆದರಿಂದ ಸಮಾಜಕ್ಕೆಲ್ಲಾ ಹಿತವಾಗುವ ಕೆಲಸಗಳು ಸಾಗುತ್ತಿದ್ದು ಎಲ್ಲರ ಸರ್ವಾಂಗೀಣ ಉನ್ನತಿಯಾಗುತ್ತಿದ್ದ ಕಾಲದಲ್ಲಿ ಈ ಪ್ರವೃತ್ತಿ ಧರ್ಮ, ನಿವೃತ್ತಿ ಧರ್ಮಗಳನ್ನು ಸಮತೋಲನದಲ್ಲಿಟ್ಟುಕೊಂಡು ಸಮಗ್ರತೆಯ ದೃಷ್ಟಿಯಿಂದ ಜನರು ಮುಂದೆ ಸಾಗುತ್ತಿದ್ದರು.

ವರ್ಣಾಶ್ರಮ ಧರ್ಮವು ಕೆಟ್ಟು ಅದರ ಉದ್ದೇಶವು ದುರುಪಯೋಗ ವಾಗತೊಡಗಿದ್ದಾಗ, ಸಾಮಾನ್ಯ ಜನತೆಯು ನಿವೃತ್ತಿಧರ್ಮವನ್ನು ಪೂರಾ ತೊರೆದು ಬಿಟ್ಟು ಪೂರ್ಣವಾಗಿ ಪ್ರಾಪಂಚಿಕ ಮೌಲ್ಯಗಳನ್ನು ಮಾತ್ರವೇ ಕಟ್ಟಿಕೊಳ್ಳುವಂತಾಯಿತು. ಅವರು ನಿವೃತ್ತಿಯ ದೃಷ್ಟಿಕೋನವನ್ನು ಬಿಡ ದಂತೆ ಮಾಡುವುದಕ್ಕಾಗಿ, ಆಗಿನ ಸಾಮಾಜಿಕ ಧುರೀಣರು, ಮತ್ತು ಸಾಧು ಸಂತರಲ್ಲಿ ಹಲವರು ನಿವೃತ್ತಿ ಧರ್ಮವನ್ನೇ ಎತ್ತಿ ಸಾರತೊಡಗಿದರು.

ಆದರೆ ವಿರಕ್ತಿ, ಪರಾಭಕ್ತಿ, ತ್ಯಾಗದಂತಹ ನಿವೃತ್ತಿ ಧರ್ಮಗಳನ್ನು ಮಾತ್ರವೇ ಪಾಲಿಸುವುದು ಸಹಜವಾಗಿ ಸರ್ವಸಾಮಾನ್ಯರಿಗೆ ಅಸಾಧ್ಯವೆಂದಾ ಯಿತು. ಆಗ ಅವರು ಪ್ರವೃತ್ತಿ, ನಿವೃತ್ತಿಗಳನ್ನು ಸಮತೋಲನದಲ್ಲಿಟ್ಟು ಕೊಂಡು ಸಾಗುವ ಬದಲು ನಿವೃತ್ತಿ ಧರ್ಮವನ್ನು ಒದ್ದು ಪ್ರವೃತ್ತಿ ಧರ್ಮ ವೆಂಬ ಹೆಸರಿನಲ್ಲಿ ಪ್ರಪಂಚವನ್ನೇ ಗಟ್ಟಿಯಾಗಿ ನಂಬಿಕೊಂಡರು. ಅಂತರಂ ಗದ ಮಟ್ಟ ಇನ್ನೂ ಕೆಳಗಿಳಿದಾಗ, ಅವರು, ಮೂಲಭೂತ ನಡತೆಯಾದ ಪ್ರಾಮಾಣಿಕತೆಯನ್ನು ಕೂಡ ವರ್ಜಿಸಿ ಪ್ರಾಪಂಚಿಕ ಸುಖಕ್ಕಾಗಿ ಹೊಡೆದಾಡು ವಂತಾಯಿತು.

ಇದೇ ಅಭಿಪ್ರಾಯವನ್ನೇ ಇನ್ನೊಂದು ದೃಷ್ಟಿಕೋನದಿಂದ ನಿಂತು ಹೀಗೂ ನೋಡಬಹುದು. ಈ ದೇಶದಲ್ಲಿ ಜಗತ್ತಿನ ಬೇರಾವ ದೇಶದಲ್ಲೂ ಜನಿಸದಷ್ಟು ಸಾಧು ಸಂತರು, ಮಹಾತ್ಮರು, ಋಷಿ ಪುಂಗವರು ಜನಿಸಿದ್ದಾರೆ. ಅವರ್‍ಯಾರೂ ನಮ್ಮ ಸಂಯುಕ್ತ ಅಮೇರಿಕದ ಜೋರ್ಜ್ ವಾಶಿಂಗ್‌ಟನ್, ಅಬ್ರಹಾಂ ಲಿಂಕನ್, ಬೆಂಜಮಿನ್ ಫ್ರೇಂಕಲಿನ್, ಎಮರ್ಸನ್ ಮೊದಲಾದ ವರಂತೆ ಸಮಾಜದ ಮತ್ತು ರಾಷ್ಟ್ರದ ಉನ್ನತಿ, ಐಕ್ಯತೆ, ಭದ್ರತೆ, ಮತ್ತು ಸಮೃದ್ಧಿಗಳಿಗೆ ಬೇಕಾದ ಸರ್ವಸಾಮಾನ್ಯ ಮಾನವ ತತ್ವಗಳನ್ನು ಬೋಧಿಸಿದ್ದು ಅಪರೂಪ. ಬದಲಿಗೆ ಅವರು ಸದಾ ಸತ್ಯ, ಪೂರ್ಣ ವಿರಕ್ತಿ, ಸನ್ಯಾಸ, ತ್ಯಾಗ, ನಿಶ್ಚಲ ಭಕ್ತಿ, ಬ್ರಹ್ಮಚರ್ಯ, ಅಹಿಂಸೆ, ಪ್ರಪಂಚ ನಿರಾಕರಣೆ ಮೊದಲಾದ ತತ್ವಗಳನ್ನೇ ಎಲ್ಲರಿಗೂ ಬೋಧಿಸತೊಡಗಿದರು.

ಅವರ ಆತ್ಮಶಕ್ತಿಯಿಂದ ಪ್ರಭಾವಿತರಾದ ಅವರ ಸಮಕಾಲೀನರಾದ ಜನತೆ, ಆ ತತ್ವಗಳನ್ನು ಅಭ್ಯಾಸ ಮಾಡಲು ಮನಸಾ ಯತ್ನಿಸುತ್ತಿದ್ದರು. ಕೆಲ ವರು ಪ್ರಯತ್ನದಲ್ಲಿ ಸಫಲರೂ ಆಗಿರಬಹುದು. ಆದರೆ ಅವರ ಕಾಲಾನಂತ ರಕ್ಕೆ ಆ ಅತ್ಯುಚ್ಚ ಆದರ್ಶಗಳನ್ನು ಪಾಲಿಸುವುದು ಜನತೆಗೆ ಕಷ್ಟತರವಾಯಿತು.

ಆಗ ಏನು ದುರಂತ ನಡೆಯಿತು ಗೊತ್ತೇ? ಅವರ ಉಪದೇಶಾಮೃತ ದ ಮೂಲ ತಳಹದಿಯಾದ ನ್ಯಾಯ, ಋಜುತ್ವ, ಪರಹಿತ ದೃಷ್ಟಿ ಮೊದಲಾದ ವುಗಳನ್ನಾದರೂ ಸ್ವೀಕರಿಸಿ, ಅಭ್ಯಸಿಸುವ ಬದಲು ಸಾಮಾನ್ಯ ಜನತೆಯು ಎಲ್ಲವನ್ನೂ ಗಾಳಿಗೆ ತೂರಿ, ಸ್ವೇಚ್ಛಾ ಪ್ರವೃತ್ತಿಗೆ ತೊಡಗಿತು. ಇಂತಹ ಸನ್ನಿವೇಶವು ಅನೇಕ ಶತಮಾನಗಳ ಚರಿತ್ರೆಯಿರುವ ಭಾರತದಲ್ಲಿ ಆಗಿಂದಾಗ ಕಂಡುಬರುತ್ತದೆ.

"ಭಾರತೀಯ ತತ್ವ ಜ್ಞಾನಿಗಳಂತೆ ಪಾಶ್ಚಾತ್ಯ ತತ್ವ ಜ್ಞಾನಿಗಳು ಅತ್ಯುಚ್ಚ ತತ್ವಗಳನ್ನೇ ಸಾರಿ ಹೇಳಬೇಕಿತ್ತು; ಆಗ ನಮ್ಮ ಅಮೇರಿಕಾ ಮತ್ತು ಯುರೋಪು ಇಂದಿನಿಂದಲೂ ಎಷ್ಟೋ ಪಾಲು ಶ್ರೇಷ್ಠವಾಗುತ್ತಿತ್ತು" ಎಂದು ಅಮೇರಿಕಾದಲ್ಲಿದ್ದಾಗ ನನಗನಿಸುತ್ತಿತ್ತು.

ಆದರೆ ಈಗ ನನಗೆ ತಿಳಿದಿದೆ. ಆದರಿಂದ ನಮ್ಮ ದೇಶವು ಭಾರತದ ಇಂದಿನ ಸ್ಥಿತಿಗಿಂತಲೂ ಕೆಡುಕಾಗಿರುತ್ತಿತ್ತು. ವ್ಯಾವಹಾರಿಕ ತತ್ವಗಳನ್ನು, ಸಮಾಜ ಮತ್ತು ವ್ಯಕ್ತಿಯ ಕೆಲವೊಂದು ಮಟ್ಟದ ಸುಖಕ್ಕೆ ಅನುಕೂಲವಾಗು ವಂತೆ ನಮ್ಮ ಸಮಾಜ ಸುಧಾರಕರು ಮತ್ತು ತತ್ವ ಜ್ಞಾನಿಗಳು ಬೋಧಿಸಿ ದರು. ಭಾರತದ ಸಂತರು. ವಿರಕ್ತರಾಗಿ, ಎಲ್ಲ ತೊರೆದು ಸನ್ಯಾಸಿಗಳಾದರೆ, ನಮ್ಮ ದೊಡ್ಡ ತತ್ವ ಜ್ಞಾನಿಗಳೆನ್ನುವವರು, ಉಚ್ಚ ಆಧುನಿಕ ಪೋಷಾಕುಗ ಳನ್ನು ಧರಿಸಿ, ವಿಜ್ಞಾನ ಮತ್ತು ಐಶ್ವರ್ಯಗಳಿಂದ ಬರುವ ಸಕಲ ಸುಖ ಸಾಮಾಗ್ರಿಗಳನ್ನು ಅನುಭವಿಸುವುದನ್ನೂ, ಅಪರೂಪವಾಗಿ, ಅರುವತ್ತರ ಹರ ಯದಲ್ಲಿ ಪುನಃ ಮದುವೆಯಾಗುವ ರೀತಿಯನ್ನೂ ಸಹ ನಾವು ನೋಡಿರುತ್ತೇವೆ. ಹಾಗಿರುತ್ತಾ ಅವರನ್ನು ಅನುಸರಿಸುವುದು ನಮಗೆ ಸುಲಭವಾಯಿತು. ಆದ್ದ ರಿಂದ ನಾವು ಪಾಶ್ಚಾತ್ಯರು ವಿರಕ್ತರೇನೋ ಅಲ್ಲವೆಂಬುದು ನಿಜವಾದರೂ, ಇಂದಿನ ಸಾಮಾನ್ಯ ಭಾರತೀಯನಿಗಿಂತ ನಾವು ಎಷ್ಟೋ ಪಾಲು ಹೆಚ್ಚಾಗಿ ಪ್ರಾಮಾಣಿಕರಾಗಿದ್ದೇವೆ. ಆ ಮೂಲಕ ನಾವು ಒಂದು ಮಟ್ಟದ ಆಧ್ಯಾತ್ಮಿಕ ಜೀವನ ಮಾಡುತ್ತಿದ್ದೇವೆ ಎನ್ನಬಹುದು. ಏಕೆಂದರೆ ಪ್ರಾಮಾಣಿಕತೆಯೂ ಇಲ್ಲದ ಮನುಷ್ಯ ಅಧ್ಯಾತ್ಮ ಸಾಧನೆ ಮಾಡುವುದೆಂಬುದು ಕೇವಲ ಭ್ರಾಂತಿ, ಸಿಲ್ವರ್.

ಈ ಸತ್ಯವನ್ನು ನಾನು ಭಾರತಕ್ಕೆ ಬಂದ ಮೇಲೆ ಕಂಡುಕೊಂಡೆ.

ಪ್ರಿಯ ಗೆಳೆಯಾ, ಈಗ ನೀನು ನನ್ನ ಬೆನ್ನು ಚಪ್ಪರಿಸಲು ಮುಂದಾಗು ತ್ತಿದ್ದಿ ಎಂದು ನನಗೆ ಗೊತ್ತು. ಆದರೆ ಅವಸರ ಮಾಡಬೇಡ, ಸ್ವಲ್ಪ ತಡೆ. ನಾನು ಇನ್ನೂ ಹೇಳಲಿದೆ..

ಪಾಶ್ಚಾತ್ಯ ತತ್ವ ವೇತ್ತರು ಮತ್ತು ಸಮಾಜ ಸುಧಾರಕರ ಸಿದ್ಧಾಂತಗಳು ಮತ್ತು ನಮ್ಮ ಆಚರಣೆ ಪೂರ್ಣ ಸರಿಯೆಂದು ನಾನು ಹೇಳುವುದಿಲ್ಲ. ಹಾಗೆ ಯೇ ಭಾರತದ ಸಾಧುಸಂತರು, ತತ್ವವೇತ್ತರು ಸಾರಿದ ತತ್ವ ತಪ್ಪೆಂದೂ ನಾನು ಹೇಳುವುದಿಲ್ಲ. ಆದರೆ ಅಧ್ಯಾತ್ಮದ ವಿಷಯದಲ್ಲಿ ಹಸುಗೂಸಾದ ನನಗೆ ಕಾಣುವುದೇನೆಂದರೆ, ಈ ಎರಡೂ ಸಿದ್ಧಾಂತಗಳ ಸಮನ್ವಯವಾಗ ಬೇಕು, ಎಂಬುದಾಗಿ.

ಅಂದರೆ, ಜನ ಸಾಮಾನ್ಯರಿಗೆ ಮೂಲಭೂತ ಶೀಲದ ಔನ್ನತ್ಯಕ್ಕೆ ಬೇಕಾದ ವಿಚಾರ, ರಾಷ್ಟ್ರೀಯ ಜಾಗೃತಿ, ಮತ್ತು ದೈವ ಭಕ್ತಿ ಮೊದಲಾದ ಸರ್ವಸಾಮಾನ್ಯ ಹಾಗೂ, ಸಮಾಜದ ಬುಡಕಟ್ಟಿನ ರೂಪದ ಸಿದ್ಧಾಂತಗಳನ್ನು ಬೋಧಿಸಿ, ಅವರು ಅದನ್ನು ಚಾಚೂ ತಪ್ಪದೆ ಅನುಸರಿಸುವಂತೆ ಮಾಡಬೇಕು ಆದರೆ ತತ್ವ ಜ್ಞಾನಿಗಳು ನಮ್ಮವರಂತೆ ಅರುವತ್ತು, ಎಪ್ಪತ್ತರ ಹರೆಯದಲ್ಲಿ ಯೂ ಪುನಃ ವಿವಾಹವಾಗುವ ಯೌವನವನ್ನು ಪ್ರದರ್ಶಿಸಬಾರದು. ಶೃಂಗಾ ರವ ಜೀವನ ಮಾಡಬಾರದು. ಜನತೆಗೆ ಅವರು ಸರ್ವ ಸಾಮಾನ್ಯ ತತ್ವ ವನ್ನೇ ಬೋಧಿಸಿದರೂ ಭಾರತೀಯ ಸಂತರಂತೆ ಅವರು ಅತ್ಯುಚ್ಚ ಆದರ್ಶದಲ್ಲೇ ಜೀವಿಸಬೇಕು. ಮಾತ್ರವಲ್ಲ ಆ ತೆರನಾಗಿ ದುಡಿಯಬಲ್ಲ ಸಶಕ್ತ ಪಂಗಡ ವೊಂದಕ್ಕೆ ಶ್ರೇಷ್ಠ ಮಟ್ಟದ ಆದರ್ಶವನ್ನೇ ಬೋಧಿಸಿ ಆ ಪಂಗಡದವರು ಅದನ್ನು ಪಾಲಿಸುವಂತೆ ತರಬೇತಿ ಕೊಡಬೇಕು. ಆಗ ಭಾರತದಂತಹ ರಾಷ್ಟ್ರವನ್ನು ಅತ್ಯುನ್ನತ ಸ್ಥಿತಿಗೆ ತರಬಹುದು.

ಭಾರತದ ಆಧ್ಯಾತ್ಮಿಕ ಹಿನ್ನೆಲೆಯೂ, ಪಾಶ್ಚಾತ್ಯ ದೇಶಗಳ ವ್ಯಾವಹಾರಿಕ ತತ್ವಗಳ ಉಪಯೋಗವೂ ಸೇರಿದಾಗ, ಭವ್ಯವಾದ ಒಂದು ಮಿಲನವಾದೀತು. ರಾಷ್ಟ್ರ ಒಳಿತಾದೀತು. ಇದು ನಮಗೂ ಬೇಕಾದ ಪಾಠ. ಹೀಗಾದರೆ ಮಾತ್ರವೇ ನಮ್ಮ ಅತಿ ಲೈಂಗಿಕತೆಯ ಹುಚ್ಚು ಮತ್ತು ಪ್ರಾಪಂಚಿಕತೆಯ ಭ್ರಾಂತಿ ತೊಲಗೀತು.

ಸಿಲ್ವರ್. ಕಣ್ಣು ಕೆಂಪಾಯಿತೇ? ಕೋಪಿಸಬೇಡ, ಗೆಳೆಯಾ. ಸತ್ಯ ವನ್ನು ನಾನು ಕಂಡಂತೆ ಹೇಳಲೇ ಬೇಕಲ್ಲವೇ? ನೀನು ಪಾಶ್ಚಾತ್ಯ ಪ್ರಪಂಚವೆ

ಸ್ವರ್ಗವೆನ್ನುವ ಹುಚ್ಚನೆಂದು ನನ್ನ ಭಾವನೆ. ಇನ್ನಾದರೂ ಆ ಹುಚ್ಚನ್ನು ಬಿಡು. ಪೌರ್ವಾತ್ಯ ದೇಶದಲ್ಲಿ ಮುಖ್ಯವಾಗಿ ಭಾರತದಲ್ಲಿ ನೀನೂ ನಾನೂ ಕಲಿತುಕೊಳ್ಳತಕ್ಕದ್ದು, ಅರಗಿಸಿಕೊಳ್ಳತಕ್ಕದ್ದು ಅನಂತವಾಗಿದೆ. ಈಗಲೂ ಇರುವ ಇಲ್ಲಿಯ ಮಹಾ ಪುರುಷರ ಬಾಗಿಲು ಕಾಯುವ ಯೋಗ್ಯತೆಯೂ ನಮಗಿಲ್ಲ ತಿಳಿಯಿತೇ ? ಕೋಪದಲ್ಲಿ ಮರುಪತ್ರ ಬರೆಯುವುದನ್ನೇ ಬಿಡಲಾರೆಯಷ್ಟೇ! ನಮ್ಮ ಪ್ರಸಿದ್ಧ ವ್ಯವಹಾರಜ್ಞ ಡೇಲ್ ಕಾರ್ನೆಗಿ ಹೇಳಿದ ಸಿದ್ಧಾಂತಕ್ಕನುಸಾರವಾಗಿ, ಸ್ನೇಹಕ್ಕಾಗಿಯಾದರೂ, ನನ್ನ ಅಭಿಪ್ರಾಯವನ್ನು ಮೆಚ್ಚಿಬಿಡು, ಸಿಲ್ವರ್, ಆಗದೇ? ಇತರ ವಿಷಯಗಳಲ್ಲೆಲ್ಲ ನೀನು ಹೇಳಿದಂತೆಯೇ ನಾನು ನಡೆಯುತ್ತೇನೆ ತಿಳಿಯಿತೇ?

ಇನ್ನೊಂದು ವಿಷಯ ಸಿಲ್ವರ್. ಭಾರತದ ಸಾಮಾನ್ಯ ಜನತೆಯು ಅವರ ಬುದ್ಧಿಯ ನಿರ್ಣಯದಲ್ಲಿ ಪೂರ್ಣ ವಿಶ್ವಾಸವಿಡುವುದಿಲ್ಲ. ಅವರು ಸರ್ವ ವಿಷಯಗಳಲ್ಲೂ ಜನರ ಮನೋ ಪ್ರವಾಹವನ್ನು ಅನುಸರಿಸುವುದರಲ್ಲೇ ಸಂತೋಷಪಡುತ್ತಾರೆ; ಧೈರ್ಯಪಡುತ್ತಾರೆ. ಒಂದು ಸಾಮಾಜಿಕ ಪದ್ಧತಿಯು ತಪ್ಪಾಗಿ ರೂಢಿಗೆ ಬಂದಿದ್ದು, ಅದು ತಪ್ಪೆಂದು ತಿಳಿದೂ, ಅವರೂ ಅದನ್ನೇ ಅನುಸರಿಸುತ್ತಾರೆ. ವಿಚಾರಿಸುವಾಗ ತಪ್ಪೆಂದೇ ಒಪ್ಪಿಕೊಳ್ಳುತ್ತಾರೆ. ಅದೇ ತಪ್ಪನ್ನೇ ಪುನಃ ಮಾಡುತ್ತಾರೆ. ಅಂದರೆ ಜನಪ್ರವಾಹದಿಂದ ದೂರವಾದರೆ ಏನು ಅಪಾಯ ಬಂದೀತೋ ಎಂಬ ಭಯವೊಂದು ಬದಿಯಲ್ಲಾದರೆ, ಈ ವಿಧಾನದಿಂದ ಸಿಗುವ ತಾತ್ಕಾಲಿಕ, ವೈಯ್ಯಕ್ತಿಕ ಲಾಭವನ್ನೇಕೆ ಬಿಡಬೇಕೆಂಬುದು ಇನ್ನೊಂದು ಸಿದ್ಧಾಂತ.

ಆದ್ದರಿಂದ ಒಂದು ಸಾಮಾಜಿಕ ಚಳವಳದಿಂದ ಯಾವುದೇ ಮಾನಸಿಕ ಬದಲಾವಣೆಯಾಗುವುದನ್ನು ಹೆಚ್ಚಿನವರೂ ನಂಬುವುದಿಲ್ಲ. ಬದಲಾವಣೆಯಾಗಬೇಕಾದರೆ ದೇವರು ಅವತಾರವೆತ್ತಿ ಬರಬೇಕು. ಅವನು ಮಾತ್ರವೇ ಸಮಾಜವನ್ನು ಸರಿಪಡಿಸಲು ಸಮರ್ಥನು ಎಂಬುದವರ ಸಿದ್ಧಾಂತ. ಅಲ್ಲ, ಹಾಗೆ ಭಾವಿಸಲು ಕಾರಣವೂ ಇದೆಯೆನ್ನು. ಹಿಂದೂ ಧರ್ಮದ ಪ್ರಕಾರ, ಧರ್ಮ, ನೀತಿ ಕೆಟ್ಟಾಗಲೆಲ್ಲ ಪರಮಾತ್ಮ ಅವತಾರವೆತ್ತಿ ಬಂದಿದ್ದಾನೆ. ಆದ್ದರಿಂದ ಪುನಃ ನಾವೆಲ್ಲ ಸರಿಯಾಗಿರಬೇಕಾದರೆ ಆತನೇ ಬರಲಿ ಎಂಬುದು ಇಲ್ಲಿಯ ಒಂದು ಮನೋಭಾವ,

ಅಲ್ಲದೆ ಹಿಂದೂ ಸಿದ್ಧಾಂತ ಪ್ರಕಾರ ಕೃತಯುಗ, ತ್ರೇತಾಯುಗ, ದ್ವಾಪರ ಯುಗ, ಕಲಿಯುಗವೆಂಬ ನಾಲ್ಕು ಯುಗಗಳಿವೆ. ಕೃತಯುಗದಲ್ಲಿ ನಾಲ್ಕು ಕಾಲಿನಲ್ಲಿ ಧರ್ಮವು ನಿಂತಿತ್ತು. ತ್ರೇತಾಯುಗದಲ್ಲಿ ಮೂರು ಕಾಲಿನಲ್ಲಿ; ದ್ವಾಪರಾಯುಗದಲ್ಲಿ ಧರ್ಮವು ಎರಡೇ ಕಾಲಿನಲ್ಲಿ ನಡೆಯಬೇಕಾಗಿತ್ತು. ಈಗಲಂತೂ ಕಲಿಯುಗವಾದ್ದರಿಂದ ಧರ್ಮಕ್ಕೆ ಒಂದೇ ಕಾಲು.

ಅನ್ಯಾಯ ಮೋಸಗಳು ಈ ಕಲಿಕಾಲದಲ್ಲಿ ನಡೆಯುವುದು ಸಹಜ ಎಂಬುದಾಗಿ ಸಾಮಾನ್ಯ ಭಾರತೀಯನು ಮಾನಸಿಕವಾಗಿ ಒಪ್ಪಿಕೊಳ್ಳುತ್ತಾನೆ. ಆದ್ದರಿಂದ ತಾನೂ ಯುಗ ಧರ್ಮಕ್ಕನುಸಾರವಾಗಿ ಯಾರಿಗಾದರೂ ಮೋಸ, ವಂಚನೆ ಮಾಡದೆ ಬದುಕಲು ಮತ್ತು ವ್ಯವಹಾರ ಸಾಗಿಸಲು ಸಾಧ್ಯವಿಲ್ಲ ವೆಂದು ಪ್ರತಿಯೊಬ್ಬನೂ ಅಂತರಂಗದಲ್ಲಿ ಗುಟ್ಟಾಗಿ ಭಾವಿಸುವ ಭಾವನೆ. ಕೆಲ ವರು ಪ್ರಕಟವಾಗಿ ಹೀಗೆ ಹೇಳಿ ಬಿಡುವುದೂ ಉಂಟು.

ಹಾಗಾದರೆ ಇದಕ್ಕೆ ಪರಿಹಾರವೇನು ಎಂದರೆ, ಈ ಕಲಿಯುಗದ ಅಂತ್ಯ ದಲ್ಲಿ ಪರಮಾತ್ಮನು (ಅದು ಇನ್ನೂ ಎಷ್ಟೋ ಸಹಸ್ರ ವರ್ಷಗಳ ನಂತರ) ಕಲ್ಕಿ ಎಂಬ ರೂಪದಲ್ಲಿ ಅವತಾರವೆತ್ತಿ ಬಂದು, ದುಷ್ಟರನ್ನು ಶಿಕ್ಷಿಸಿ, ಯೋಗ್ಯರನ್ನು ಪಾಲಿಸುತ್ತಾನಂತೆ! ಅಥವಾ ಆ ಮೊದಲು ದೇವರು ಬಂದರೂ ಬರಬಹುದು. ಅಂತೂ ಯಾವ ಸಂಸ್ಥೆ ಕಟ್ಟಬೇಕಿದ್ದರೂ, ಅದು ಉಳಿದು ಬೆಳೆಯಬೇಕಿದ್ದರೂ, ಯಾವ ಉಪದೇಶ ನೀಡಬೇಕಿದ್ದರೂ, ದೇವರು ಮಾತ್ರವೇ ಸಮರ್ಥನು! ಉಳಿದವರು ಏನುಮಾಡಿದರೂ, ಏನು ಹೇಳಿದರೂ ಫಲವಿಲ್ಲ.

ಪರಮಾತ್ಮನ ಅವತಾರವೆಂಬ ಸಿದ್ಧಾಂತವನ್ನೇ ಹಾಸ್ಯಮಾಡಲು ನಾನು ಹೀಗೆ ಬರೆಯುತ್ತಿಲ್ಲ. ಭಾರತದ ಮಹಾನ್ ಅವತಾರಿ ಪುರುಷರನ್ನೆಲ್ಲಾ ಪರ ಮಾತ್ಮನೆಂದು ನಾನು ಪೂಜಿಸುತ್ತೇನೆ. ಆದರೆ ಭಾರತೀಯ ಜನತೆಯು ಪರ ಮಾತ್ಮನ ಅವತಾರವಾಗುವುದೆಂಬ ಸತ್ಯವನ್ನು ತೀರಾ ದುರುಪಯೋಗಪಡಿಸಿ, ಹೀಗೆ ಅವೈಜ್ಞಾನಿಕ, ಅಸಂಸ್ಕೃತ ಮನೋಭಾವಕ್ಕೆ ಬಂದುಮುಟ್ಟಿದೆ ಎಂಬು ದನ್ನು ತೋರಲಿಕ್ಕಾಗಿ ಬರೆದೆ.

ಈ ಒಂದು ಕಾರಣದಿಂದಾಗಿ, ಒಂದು ವೇಳೆ ಯಾವುದಾದರೂ ಸಂಘ ಸಂಸ್ಥೆಯು ಒಬ್ಬ ಮುಂಖಡನ ನೇತೃತ್ವದಲ್ಲಿ ಪ್ರಕಾಶ ಮಾನವಾಗಿ ಬೆಳಗಿದರೂ ಅವನ ಮರುದಿನಕ್ಕೆ ಅದು ಸಜೀವವಾಗಿ ಉಳಿಯುವುದಿಲ್ಲ. ಏಕೆಂದರೆ, ಆ ಸಂಸ್ಥೆಯ ಅನುಯಾಯಿಗಳಿಗೇನೇ ಮುಂದೆ ಆ ಸಂಸ್ಥೆ ಉಳಿದೀತು ಎಂಬ

ವಿಶ್ವಾಸವಿಲ್ಲ. ತಾವಂತೂ ಆ ಕುರಿತಾಗಿ ಏನೂ ಜವಾಬ್ದಾರಿ ವಹಿಸುವುದೇ ಇಲ್ಲ. ಈ ರೀತಿಯಲ್ಲಿ ಭವ್ಯವಾಗಿ ಬೆಳಗಿದ ಸಂಸ್ಥೆಗಳನ್ನು ತಮ್ಮ ಕಣ್ಣೆದುರಲ್ಲಿಯೇ ಜೀವ ಜೀವ ಹೂಳುತ್ತಾರೆ ಮುಂದಿನವರು.

ನಮ್ಮ ದೇಶದಲ್ಲಿ, ಕೆನಡಾದಲ್ಲಿ, ಅಥವಾ ಯುರೋಪಿನಲ್ಲಿ ಹೀಗಾಗುವುದನ್ನು ನೋಡಿರುವೆಯೇನು? ಅಲ್ಲಿ ಒಬ್ಬನ ತಲೆಮಾರಿನಲ್ಲಿ ಉದಯಿಸಿದ ಸಂಸ್ಥೆಯು ಅವನ ಮರುದಿನಕ್ಕೆ ಪ್ರಜಾಪ್ರಭುತ್ವವಾದಿಗಳಾದ ಇತರರ ಸಹಭಾಗಿತ್ವದಲ್ಲಿ ಇನ್ನಷ್ಟು ಪ್ರಜ್ವಲಿತವಾಗಿ ಬೆಳಗುವುದು. ಈ ಎಲ್ಲ ಸಂಗತಿಗಳನ್ನು ನಾನೇಕೆ ತಿಳಿಸುತ್ತೇನೆ ಗೊತ್ತೇ? ಇಂತಹ ತಪ್ಪು ಧೋರಣೆಗಳ ಪರಿಣಾಮವಾಗಿ ಜನತೆಯಲ್ಲಿ ಬೌದ್ಧಿಕ ಪರಾವಲಂಬನ ಮತ್ತು ಆ ಮೂಲಕ ಅಪ್ರಾಮಾಣಿಕ ವರ್ತನೆ ಬೆಳೆಯಲು ಹೇಗೆ ಕಾರಣವಾಯಿತು, ಎಂಬುದನ್ನು ತೋರಿಸಲಿಕ್ಕಾಗಿ. ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡಾದರೂ ಈ ಸುಧಾರಣೆಯನ್ನು ಸಮಾಜದಲ್ಲಿ ತರಬಹುದೆಂದರೆ ಅಂತಹ ದಾರಿ ಹೇಳುವವನು, ದೇವರ ಅವತಾರ ಹೌದೇ ಅಲ್ಲವೇ ಎಂಬುದು ನಿರ್ಣಯವಾಗಬೇಕು.

ಇದು ತಪ್ಪು ಸಿಲ್ವರ್. ತನ್ನ ಮತ್ತು ಸಮಾಜದ ಉನ್ನತಿಗಾಗಿ ಅವತಾರ ಉದಯಿಸುವ ದಿನವನ್ನೇ ಎದುರು ನೋಡುತ್ತಾ ಆಲಸ್ಯವಾಗಿ ಕುಳಿತಿರುವುದರಿಂದ ಮಾನವನ ಆಧ್ಯಾತ್ಮಿಕ ಮತ್ತು ಶೀಲದ ಬೆನ್ನು ಮುರಿದು ಬಿಡುವುದು. ಹಾಗಾಗಬಾರದು. ಆದರೆ ಪರಮಾತ್ಮನು ಮಾನವರ ಮೇಲಿನ ಕರುಣೆಯಿಂದ ಸ್ವಾಮಿ ಏಸುವಿನಂತೆ, ಅಲ್ಲವಾದರೆ ಹಿಂದೂ ಧರ್ಮದ ಶ್ರೀರಾಮ, ಶ್ರೀ ಕೃಷ್ಣರಂತೆ ಭೂಮಿಗಿಳಿದು ಬಂದರೆ ಆತನು ಪೂಜಿಸಲ್ಪಡಲಿ! ಆತನ ದಾರಿಯು ಅನುಸರಿಸಲ್ಪಡಲಿ! ಆತನ ಅನುಗ್ರಹದಿಂದ ವ್ಯಕ್ತಿ ಮತ್ತು ಮೂಹಗಳು ದಿವ್ಯತೆಗೇರಲಿ! ಆದರೆ ಈ ಜಡತೆಯೇಕೆ?

ಇದೆಲ್ಲಾ ಹೀಗೇಕೆ ಎಂದರೆ ಜನರಿಗೆ ತಮ್ಮ ಬುದ್ಧಿಯ ನಿರ್ಣಯದಲ್ಲಿ ವಿಶ್ವಾಸವಿಲ್ಲದಿರುವುದೇ ಕಾರಣವೆಂದು ನನ್ನಭಿಪ್ರಾಯ. ತನ್ನ ಬುದ್ಧಿಗೆ ಮತ್ತು ಹೃದಯಕ್ಕೆ ಒಪ್ಪಿಗೆಯಾಗುವ ಮತ್ತು ಮಾನವ ಕಲ್ಯಾಣಕ್ಕೆ ಬೇಕಾದ ವಿಚಾರವನ್ನು ಒಬ್ಬಾತನು ನಮ್ಮ ಮುಂದಿಟ್ಟರೆ ಆತನ ತತ್ವವನ್ನನುಸರಿಸಲು ಯಥಾರ್ಥವಾಗಿ ಬೇರಾವುದೂ ಅಗತ್ಯವಿಲ್ಲ. ಆದರೆ ಭಾರತದಲ್ಲಿ ಹಾಗೆ ನಡೆಯುವುದಿಲ್ಲ. ಭಾರತದ ಈ ಮನೋಭೂಮಿಕೆ ಬದಲಾಗದೆ ಉಳಿದರೆ ಇಂದು ಮಾತ್ರವಲ್ಲ, ಮುಂದೆಯೂ ಭಾರತಕ್ಕೆ ಗಂಡಾಂತರವಿದೆ.

ನಾನು ಕಲ್ಕತ್ತದಲ್ಲಿದ್ದಾಗ ಒಂದು ಸ್ವಾರಸ್ಯವಾದ ಘಟನೆ ನಡೆಯಿತು. ಆ ಪಟ್ಟಣದ ಹೊರವಲಯದ ಹಳ್ಳಿಯನ್ನು ಸಂದರ್ಶಿಸುವುದಕ್ಕಾಗಿ ನಾನು ಸೀಲ್ಡಾ ಸ್ಟೇಷನು ಹತ್ತಿ ಬಳಿಯ ಒಂದು ಊರಿಗೆ ಹೋಗಿದ್ದೆ. ಊರು ನೋಡಿ ಮರಳುವುದಕ್ಕಾಗಿ ರೈಲ್ವೇ ಸ್ಟೇಷನಿನಲ್ಲಿ ಕಾಯುತ್ತಿದ್ದೆ. ಗಾಳಿಗೆ ಮೈಯೊಡ್ಡಿ, ಹೊರಗೆ ಇಟ್ಟಿದ್ದ ಆಸನವೊಂದರಲ್ಲಿ ಕುಳಿತೆ. ನನ್ನ ಪಕ್ಕದಲ್ಲಿ ಇನ್ನೊಬ್ಬ ಮಧ್ಯಮ ವಯಸ್ಸಿನ ಸುಶಿಕ್ಷಿತ ಮಹನೀಯ ಕುಳಿತಿದ್ದ.

ಸ್ಟೇಷನು (ಹೆಸರು ಮರೆತು ಹೋಯಿತು) ಬಹಳ ಚಿಕ್ಕದಾಗಿರಲಿಲ್ಲ. ನೂರಾರು ಜನರು ರೈಲಿಗೆ ಹೋಗುವವರಿದ್ದರು. ನೆಲವು ಕಾಂಕ್ರೀಟು ಹಾಕಿದ್ದಾಗಿತ್ತು.

ಅಷ್ಟರಲ್ಲಿ ಒಬ್ಬ ಹಳ್ಳಿಯವನಂತೆ ಕಾಣುವ ಅವಿದ್ಯಾವಂತ ರೈತನು ನಮ್ಮ ಬಳಿಯೇ ನಡೆಯುತ್ತಾ ಅದೇ ಕಾಂಕ್ರಿಟ್ ಪ್ಲೇಟ್ ಫಾರ್ಮಿಗೇನೇ ವೀಳ್ಯ ತಿಂದ ಎಂಜಲನ್ನು ಉಗುಳಿದ. ನೆಲವು ಬಹಳ ಕೊಳಕಾದ್ದು ನೋಡಿ ನಾನು ಮನನೊಂದು ಇಂಗ್ಲಿಷಿನಲ್ಲಿ "ಹಾಗೆ ಮಾಡಬಾರದು–ದೂರ ಉಗುಳಬೇಕು" ಎಂದು ಹೇಳಿದೆ. ಆ ಬಡ ರೈತನಿಗೆ ಪಾಪ ಅರ್ಥವೇ ಆಗಲಿಲ್ಲ. ಆತನು ನನ್ನ ಬಿಳಿ ಮೈಬಣ್ಣ ನೋಡಿ ಅದನ್ನು ಮೆಚ್ಚುತ್ತಾ ಬೆಪ್ಪನಂತೆ ಬಾಯಿತೆರೆದು ಸುಮ್ಮನಿದ್ದ. ನನ್ನ ಬಳಿ ಕುಳಿತ ಮಹನೀಯನ ಕೂಡೆ ಆತನಿಗೆ ತಿಳಿಯವ ಬಂಗಾಳಿ ಭಾಷೆಯಲ್ಲಿ ವಿವರಿಸುವಂತೆ ವಿನಂತಿಸಿದೆ.

ಆದಕ್ಕೆ ಆ ಮಹನೀಯ ಏನು ಹೇಳಿದ ಗೊತ್ತೇ? "ಹಾಗೆ ಎಲ್ಲರೂ ಉಗುಳುತ್ತಾರೆ ತಡೆದು ಫಲವಿಲ್ಲ. ಇಲ್ಲಿಯ ರೂಢಿಯೇ ಹಾಗೆ" ಎಂದುಬಿಟ್ಟ. ಆಗ ನಾನು 5 ಮಿನಿಟುಗಳ ಒಂದು ಸಂಕ್ಷಿಪ್ತ ಉಪನ್ಯಾಸ ಮಾಡಿದೆ. ಉಗುಳಿದ ರೈತನು ಎತ್ತಲೋ ನಡೆದ. ನಮ್ಮ ಹೆಮ್ಮೆಯ ಸಂಯುಕ್ತ ಅಮೇರಿಕಾದಲ್ಲಿ ಸಾರ್ವಜನಿಕ ಸ್ಥಳದಲ್ಲೆಲ್ಲೂ ಯಾರೂ ಉಗುಳುವುದೇ ಇಲ್ಲ. ಉಗುಳುವವರು ತಮ್ಮ ಟವೆಲು ಅಥವಾ ಟ್ಯೋಲೆಟ್ ಪೇಪರ್ ತೆಗೆದು ಅದಕ್ಕೆ ಉಗುಳಿ, ಕಸದ ಬುಟ್ಟಿಗೆ ಒಗೆಯುತ್ತಾರೆ; ಇಲ್ಲವೇ ಮನೆಯಲ್ಲಿ ತೊಳೆಯುತ್ತಾರೆ, ಎಂದು ವಿವರಿಸಿದೆ. ಅಲ್ಲದೆ, ನಿಧಾನವಾಗಿ ಸಮಾಜವನ್ನು ಇಂತಹ ವಿಷಯದಲ್ಲಿ ಶುದ್ಧೀಕರಿಸಲು ಯತ್ನಿಸಬೇಕು, ಎಂದು ಕರೆಕೊಟ್ಟೆ.

ನಾನು ವರ್ಣಿಸುತ್ತಿದ್ದಂತೆಯೇ ಆ ಮಹನೀಯನು ಅನೇಕ ಸಲ ಆಕಳಿಕೆ ತೆಗೆದುಬಿಟ್ಟ. ನನ್ನ ಮಾತು ಮುಗಿದಾಗ ದೆವ್ವದಂತೆ ನಕ್ಕುಬಿಟ್ಟ. ಗಂಟಲು ಕೆರಸಿ, ಕೆಮ್ಮಿ, ಬಂದ ಕಫ ಸಮೇತವಾದ ಎಂಜಲನ್ನು ನನ್ನ ಮುಖಕ್ಕೇ ಉಗುಳುವವನಂತೆ, ಆತನೆದುರಿಗೆ ತಿರಸ್ಕಾರದಲ್ಲಿ ಉಗುಳಿದ. ನನ್ನ ಮಾತಿಗೆ ಅದು ಪ್ರತ್ಯಕ್ಷ ಉತ್ತರವಾಗಿತ್ತು. ಆ ಮೇಲೆ ಮಾತನಾಡಿದ. ಭಾರತದ ಯಾವುದೇ ಕ್ರಮ ಹಾಗೆ ಬದಲಿಸಲು ಸಾಧ್ಯವಿಲ್ಲವಂತೆ. ಬದಲಿಸಬೇಕೆಂದು ಹೇಳಿದರೂ ಯಾರೂ ಕೇಳುವವರಿಲ್ಲವಂತೆ. ಮತ್ತೆ ಅದೆಲ್ಲಾ ಮುಖ್ಯ ಸಂಗತಿಯೂ ಅಲ್ಲವಂತೆ. ದಿಙ್ಮೂಢನಾದ ನಾನು "ಹೇಗಿದ್ದರೂ ವಿದ್ಯಾವಂತರಾದರೂ ಸುಸಂಸ್ಕೃತ ಕ್ರಮವನ್ನು ಇಟ್ಟುಕೊಳ್ಳಬಹುದಲ್ಲ" ಎಂದು ಕೇಳಿದೆ. ಆಗ ಕೋಪಿಸಿಕೊಂಡ ಆ ಮಹನೀಯ "ನಿಮ್ಮ ಕ್ರಮ ನಿಮಗೆ; ನಮ್ಮ ಕ್ರಮ ನಮಗೆ; ಭಾರತದಂತಹ ಉಜ್ವಲ ಚರಿತ್ರೆಯಿರುವ ನಾಡಿಗೆ ಬುದ್ಧಿ ಹೇಳಲು ನೀವಾರು!" ಎಂದು ಕೇಳಿಬಿಟ್ಟ. ಇನ್ನು ಮಾತು ವ್ಯರ್ಥವೆಂದು ನಾನು ಸುಮ್ಮನಾದೆ.

ಭಾರತದ ಸನಾತನ ಸಂಸ್ಕೃತಿ, ಹಿಂದೂ ಧರ್ಮ ಮತ್ತು ಭಾರತದ ಮಹಾಪುರುಷರ ಕುರಿತಾಗಿ ನಾನೆಷ್ಟು ಹೆಮ್ಮೆ ಪಡುತ್ತಿದ್ದೇನೋ ಅಷ್ಟೇ ಮಟ್ಟದಲ್ಲಿ ಭಾರತದ ಇಂದು ಪ್ರಚಲಿತವಿರುವ ಸಮಾಜಕ್ಕಾಗಿ ನಾನು ನಾಚುತ್ತೇನೆ.

ಭಾರತದ ಆದ್ಯಂತ ಸಾರ್ವಜನಿಕ ಸ್ಥಳಗಳಲ್ಲಿ ವಿದ್ಯಾವಂತರೂ ಹೀಗೆ ಉಗುಳುವುದನ್ನೂ, ಪವಿತ್ರ ಸ್ಥಳಗಳನ್ನು ಮಲಿನ ಗೊಳಿಸುವುದನ್ನೂ ನೋಡಿದ್ದೇನೆ. ಅನೇಕ ಜನ ಅದು ತಪ್ಪೆಂದು ಒಪ್ಪಿಕೊಳ್ಳುತ್ತಾರೆ. ಆದರೆ ತಮ್ಮ ಜೀವನದಲ್ಲಿ ಅಂತಹ ಒಂದು ಸಣ್ಣ ಸುಧಾರಣೆಯನ್ನೂ ಜಾರಿಗೆ ತರುವುದಿಲ್ಲ. ಕಾರಣ ಎಲ್ಲರೂ ಹಾಗೆ ಮಾಡುತ್ತಾರಲ್ಲ! ತಾನೇಕೆ ಬಿಡಬೇಕು ಎಂದು! ಎಂದರೆ ಸ್ವಂತ ಬುದ್ಧಿಯ ಉಪಯೋಗವು ಸೊನ್ನೆಯಾಯಿತು.

ಬಹು ಸಂಖ್ಯಾಕರಿಂದ ಸ್ವಂತಂತ್ರವಾಗಿ, ತನ್ನನ್ನು ತಾನು ಬದಲಾಯಿಸಿಕೊಳ್ಳಲು ಭಾರತೀಯ ಸಮಾಜದ ಜನರು ಸಿದ್ಧರಿಲ್ಲ. ಅಪ್ರಮಾಣಿಕ ವರ್ತನೆಯ ವಿಷಯಕ್ಕೂ ಈ ಮಾತು ಅನ್ವಯಿಸುವುದರಿಂದ ಈ ಘಟನೆಯನ್ನು ನಾನು ಬರೆದೆ.

ಅಮೇರಿಕಾ ಮತ್ತಿತರ ದೇಶಗಳಲ್ಲೂ ಜನ ಸಾಮಾನ್ಯರಲ್ಲಿ ಈ ಸ್ಥಿತಿಯಿಲ್ಲವೆಂದಲ್ಲ. ಆದರೆ ನಮ್ಮಲ್ಲಿ ಸುಧಾರಣೆಯ ಸಮಸ್ಯೆಯು ಭಾರತದಂತೆ ಸುಳಿಗುಂಡಿಯಾಗಿರುವುದಿಲ್ಲ. ಹೊಸ ವಿಚಾರವನ್ನು ಅಧ್ಯಯನ ಮಾಡಿ,

ತೃಪ್ತಿಕರವೂ ಲಾಭದಾಯಕವೂ ಆಗಿ ಕಂಡರೆ ನಾವದನ್ನು ಶೀಘ್ರವಾಗಿ ಅನುಸರಿಸುತ್ತೇವೆ.

ಮಾನವನಲ್ಲಿ ನಾವು ಬಯಸುವ ಸರ್ವ ಶ್ರೇಷ್ಠ ಗುಣಗಳೆಲ್ಲಾ ಭಾರತೀಯರಲ್ಲಿ ಹಿಂದೆ ಶತಶತಮಾನಗಳ ತನಕವೂ ರೂಢಮೂಲವಾಗಿ ಬೆಳೆದುಬಂದಿತ್ತು. ಆದರೆ ಹಿಂದಿನ ನನ್ನ ಪತ್ರದಲ್ಲಿ ನಾನು ವಿಶ್ಲೇಶಿಸಿದಂತೆ, ಕಾಲಾನುಭಾಗದಲ್ಲಿ ಹಿಂದೂ ಧರ್ಮದ ಕೆಲವು ತತ್ವಗಳ ದುರುಪಯೋಗವಾಗಿ ಭಾರತೀಯ ಜನಾಂಗವು ಅನೇಕ ವಿಧವಾದ ಕಷ್ಟ ಕಾರ್ಪಣ್ಯಗಳಿಗೆ ಒಳಗಾದ್ದರಿಂದ ತಾತ್ಕಾಲಿಕವಾಗಿ ಈಗ ನಷ್ಟಚೇತನರಾಗಿದ್ದಾರೆ. ಹಾಗೆಂದು ಕೆಲವೊಂದು ರಂಗಗಳಲ್ಲಿ ಇಂದು ಈ ನಾಡಿನಲ್ಲಿ ಪ್ರಗತಿಯಾಗುತ್ತಿಲ್ಲ ಎಂದಲ್ಲ.

ಇನ್ನೊಂದು ಘಟನೆ. ಭಾರತಕ್ಕೆ ಬಂದು ಆಗ ಕೇವಲ 15 ದಿನಗಳಾಗಿದ್ದುವು. ನಾನು ಒಂದು ನಗರದಿಂದ ಇನ್ನೊಂದು ನಗರಕ್ಕೆ ವಿಮಾನ ಮೂಲಕ ಅಥವಾ ಉಗಿ ಬಂಡಿಯಲ್ಲಾದರೆ, ಫಸ್ಟ್ ಕ್ಲಾಸಿನಲ್ಲಿ ಪ್ರಯಾಣ ಬೆಳೆಸುತ್ತಿದ್ದೆ. ಒಂದು ದಿನ ಢಿಲ್ಲಿಯಿಂದ ಕಲ್ಕತ್ತಕ್ಕೆ ಹೋಗುವಾಗ ಭಾರತದ ಪ್ರಸಿದ್ಧ ಮೂರನೆ ತರಗತಿಯ ಡಬ್ಬಿಯಲ್ಲಿ ಹೋಗೋಣವೆನಿಸಿತು. ಹಾಗೆಯೇ ಮಾಡಿದೆ. ಆ ದಿನದ ಇತರ ಅನುಭವ ಇನ್ನೊಮ್ಮೆ ಬರೆಯುತ್ತೇನೆ. ಭಾರತೀಯರ ತಿಳಿಗೇಡಿತನದ ಒಂದು ಉದಾಹರಣೆ ಮಾತ್ರ ಈಗ ಬರೆಯುತ್ತೇನೆ.

ನಾನು ಕೂತ ಡಬ್ಬಿಯಲ್ಲಿ "ಸಾರ್ಡಿನು"ಗಳಂತೆ ಜನರು ಹೇರಲ್ಪಟ್ಟಿದ್ದರು. ನಾನು ಭಾರತೀಯ ಪ್ರಯಾಣಿಕರ ಗುರುತುಮಾಡಿ ಇಂಗ್ಲಿಷಿನಲ್ಲಿ ಮಾತನಾಡುತ್ತಿದ್ದೆ. ಆಗ ನಾನು ಕುಳಿತ ಡಬ್ಬಿಯಲ್ಲಿ ಅನೇಕ ಜನರ ಒಂದು ಸಂಗಡವು ಟಿಕೇಟು ತೆಗೆದಿರಲಿಲ್ಲವೆಂದು ನನಗೆ ಗೊತ್ತಾಯಿತು. ವಿಚಾರಿಸಿದಾಗ, ಅದೊಂದು ರೂಢಿಯೆಂದೂ, ಉತ್ತರ ಹಿಂದೂ ಸ್ಥಾನದಲ್ಲಿ ಇಷ್ಟವಿದ್ದವರು ಮಾತ್ರ ಟಿಕೇಟು ತೆಗೆಯುತ್ತಾರೆಂದೂ ಅಭಿಪ್ರಾಯವಾಯಿತು.

ಇದನ್ನು ತಿಳಿದು ನನಗೆ ಸಖೇದಾಶ್ಚರ್ಯವಾಯಿತು. ಈ ಕುರಿತಾಗಿ ಸುಮ್ಮನಿರಬಾರದೆಂದು ತುಂಟ ಬುದ್ಧಿಯವನಾದ ನನಗೆ ಕಂಡಿತು. ನಾನು ಸ್ಟೇಷನಿನಲ್ಲಿ ಇಳಿದು ಸ್ಟೇಶನುಮಾಸ್ತರರ ಕೂಡೆ ವಿಷಯ ನಿವೇದನೆ ಮಾಡಿದೆ. ಅದಕ್ಕವರು "ಆಗಲಿ; ಆಗಲಿ; ವಿಚಾರಿಸುತ್ತೇನೆ" ಎಂದು ಸುಮ್ಮನಾದರು. ಒಬ್ಬ ಟಿಕೇಟು ಪರೀಕ್ಷಕನನ್ನು ಕಂಡು ಅವನ ಕೂಡೆಯೂ ಹೇಳಿದೆ. ಅವನೊಂದಿಗೆ ಇದ್ದ ಇನ್ನೊಬ್ಬ ಟಿಕೇಟು ಪರೀಕ್ಷಕನು ನಗಾಡುತ್ತಾ ಆತನೊಡನೆ

'ಸುಮ್ಮನಿರು' ಎಂಬಂತೆ ಸನ್ನೆಮಾಡಿದ. ಆದರೆ ಮೊದಲನೆಯವನು "ಇರಲಿ ನೋಡಿ ಬರುತ್ತೇನೆ" ಎಂದುಕೊಂಡು ನನ್ನೊಂದಿಗೆ ಹೊರಟೇ ಬಿಟ್ಟ. ನಾನು ಗಾಡಿಯ ನಂಬರು ಹೇಳಿ ಚಾ ಕುಡಿಯಲೆಂದು ಬೇರೆ ಕಡೆಗೆ ಹೋದೆ. ಚಾ ಕುಡಿದು ಬಂದಾಗ ಗಾಡಿಯಲ್ಲಿ ದೊಡ್ಡ ಗುಲ್ಲೇ ಗುಲ್ಲು. ಟಿಕೇಟು ಪರೀಕ್ಷ ಕನು ದಕ್ಷಿಣ ಭಾರತದವನೆಂದೂ, ಈ ಉದ್ಯೋಗಕ್ಕೆ ಹೊಸಬನೆಂದೂ, ಮತ್ತೆ ತಿಳಿಯಿತು.

ಎಲ್ಲರೂ ಕೆಳಗಿಳಿದು ಟಿಕೇಟು ತೆಗೆದುಕೊಂಡು ಮೇಲೆ ಬರುವಂತೆ ಆ ತನು ಒತ್ತಾಯಿಸುತ್ತಿದ್ದ. ಅಲ್ಲವಾದರೆ ತನ್ನ ಕೈಯಲ್ಲೇ ದುಡ್ಡು ಕೊಡಿ ಎಂಬುದಾಗಿ ಹೇಳಿದ. ಅದಕ್ಕೆ ಪ್ರಯಾಣಿಕರೆಲ್ಲ ಒಟ್ಟಾಗಿ ಆತನನ್ನು ಸಿಕ್ಕಾ ಬಟ್ಟೆ ಬೈದು ಬಿಟ್ಟರು. "ಹೋಗು ಹೊರಗೆ ನಡೆ, ನಾಯಿ ಮಗ! "ಎಂಬು ದಾಗಿ ಹೇಳಿ ಬಿಟ್ಟರು.

ಅವನು ನೇರವಾಗಿ ಇಳಿದು ಸಬ್ ಇನ್ಸ್‌ಪೆಕ್ಟರರನ್ನು ಕರೆತಂದನು. ಆದರೆ ಕುಳಿತ ವ್ಯಕ್ತಿಗಳನ್ನು ನೋಡಿ ಸಬ್‌ಇನ್ಸ್‌ಪೆಕ್ಟರರು ತಣ್ಣಗಾಗಿ "ನೋಡಿ, ಗಲಾಟೆ ಮಾಡಬೇಡಿ" ಎಂದಷ್ಟೇ ಹೇಳಿ ಹೋದರು. ಪ್ರಯಾಣಿಕರಲ್ಲಿ ಕೆಲವರು ಧಾಂಡಿಗರು (ಎಲ್ಲರೂ ವಿದ್ಯಾವಂತರಂತೆ ಕಾಣುತ್ತಿದ್ದರು) ರೈಲಿನಿಂದ ಕೆಳಗಿ ಳಿದು, ಆ ಟಿಕೇಟು ಪರೀಕ್ಷಕನನ್ನು ರೈಲಿನ ಒಳಗೆ ಎಳೆದು ತಂದು ಸರೀ ಹೊಡೆಯ ತೊಡಗಿದರು.

ತಡೆಯುವವರಾರೂ ನನಗೆ ಕಾಣಿಸಲಿಲ್ಲ. ನಾನೇ ಮುಂದಾದೆ. ಆಗ ಏನಾಯಿತು ಗೊತ್ತೇ? "ಈ ಬಿಳಿ ಮುಖದ ಮಂಗನೇ ಈ ಟಿ. ಟಿ. ಸಿ. ಯನ್ನು ಕರಕೊಂಡು ಬಂದವನೆ"ಂದು ನನ್ನ ಮೇಲೂ ಒಬ್ಬಿಬ್ಬರು ಕೈಮಾಡಿ ದರು. ನಾನು ಕೈ ಕುಡುಹಿ, ಆತನನ್ನು ಅವರ ಹಿಡಿತದಿಂದ ಬಿಡಿಸಲು ಯತ್ನಿಸಿದೆ.ಆಗ ನನಗೂ ಆ ಟಿಕೇಟು ಪರೀಕ್ಷಕನಿಗೂ ಎಕ್ಕಡದಿಂದಲೇ ಹೊಡೆದು ಬಿಟ್ಟರು. ನಾನು ಏನು ಹೇಳಿದರೂ ಫಲವಾಗಲಿಲ್ಲ.

ನನ್ನನ್ನೂ ಆತನನ್ನೂ ಬಂಡಿಯ ಬಾಗಿಲಿಗೆ ಕೊಂಡೊಯ್ದು ರೈಲು ಹೊರಡುತ್ತಲೇ ಪ್ಲೇಟ್‌ಫೋರ್ಮಿಗೆ ನಮ್ಮನ್ನು ತಳ್ಳಿಬಿಟ್ಟರು. ನಮ್ಮ ಬೊಬ್ಬೆ ಯು ವಿಫಲವಾಯಿತು. ನನ್ನ ಒಂದು ಸಣ್ಣ ಕೈಚೀಲ ಮತ್ತು ಬೆಡ್ಡಿಂಗ್ ರೈಲಿನಲ್ಲೇ ಉಳಿಯಿತು. ನನ್ನ ಪೆಟ್ಟಿಗೆ ಇತ್ಯಾದಿ ಬ್ರೇಕ್ ವೇನಿನಲ್ಲಿ ಇಟ್ಟ ಕಾರಣ ಮತ್ತೆ ಸಿಕ್ಕಿತು.

ರೈಲು ಹೋದೊಡನೆಯೇ ಸಬ್ ಇನ್ಸ್‌ಪೆಕ್ಟರರನ್ನು ಕಂಡು ನಾವು ದೂರಿಟ್ಟೆವು. ನಿರ್ವಿಕಾರ ಸ್ಥಿತಿಯಲ್ಲಿದ್ದ ಸಬ್ ಇನ್ಸ್‌ಪೆಕ್ಟರರು "ಎಲ್ಲವನ್ನೂ ಬರೆದು ಕೊಡಿ, ನಾನು ವಿಚಾರಿಸುತ್ತೇನೆ" ಎಂದರು. ಬರೆದು ಕೊಟ್ಟು ಜೋಲು ಮುಖ ಹಾಕಿ ನಾವು ಹೊರಟೆವು. ಆಗ ಒಳಗಿನಿಂದ ಒಂದು ಕಾಗದ ಹರಿದು ಚೂರು ಮಾಡಿದ ಶಬ್ದ ಮತ್ತು ಗಹಗಹಿಸುವ ನಗೆ ಮಾತ್ರ ಕೇಳಿಬಂತು. ಬರಹ ಮೂಲಕ ಕೊಟ್ಟ ನಮ್ಮ ಅರ್ಜಿಗೆ ಈ ತನಕವೂ ನನಗೆ ಉತ್ತರ ಬಂದಿಲ್ಲ.

ಸ್ಟೇಶನ್ ಮಾಸ್ಟರರ ಕೂಡೆ ಹೇಳಿದ್ದಕ್ಕೆ ತಲೆ ತುರಿಸಿಕೊಂಡು "ಹೌದು ಈ ಕಡೆ ಕೆಲವು ತುಂಟರಿದ್ದಾರೆ. ಬಹಳ ಜಾಗ್ರತೆ ಬೇಕಾಗುತ್ತದೆ" ಎಂದು ಹೇಳಿ ಮೆಲ್ಲನೆ ಒಳಗೆ ನುಸುಳಿ ಬಿಟ್ಟರು.

ದಕ್ಷಿಣ ಭಾರತದ ಆ ಟಿ. ಟಿ. ಸಿ.– ಅವರ ಹೆಸರು ರಮೇಶ್ ಎಂದು– ನಂತರ ನನಗೆ ಪತ್ರ ಬರೆದು ತಾನು ದಕ್ಷಿಣ ಭಾರತಕ್ಕೇ ವರ್ಗಾಯಿಸಿಕೊಂಡೆ ಎಂಬುದಾಗಿ ಪತ್ರ ಬರೆದರು.

ಭಾರತೀಯರನ್ನು ಕ್ಷಮಿಸುವಂತೆ ಆ ಉದಾತ್ತ ಯುವಕನು ನನ್ನ ಕೂಡೆ ಆಗ್ರಹ ಪೂರ್ವಕ ಬಾಯಲ್ಲಿ ವಿನಂತಿಸಿದ್ದಲ್ಲದೆ, ಪತ್ರದಲ್ಲಿ ಪುನಃ ಕೇಳಿಕೊಂಡಿದ್ದನು.

ಭಾರತದಲ್ಲಿಂದು ಸಾಮೂಹಿಕ ಮಟ್ಟದಲ್ಲಿ ನಡೆಯುತ್ತಿರುವ ಅಪ್ರಾಮಾಣಿಕ ವರ್ತನೆಗೂ, ಕೆಲವು ರಂಗಗಳಲ್ಲಿರುವ ದೌರ್ಜನ್ಯಕ್ಕೂ ಇದೊಂದು ಉದಾಹರಣೆಯಾಗಿದೆ.

ನನ್ನ ಮಿತ್ರ ಮನಮೋಹನ್‌ರ ಮಿತ್ರರೊಬ್ಬರ ಪರಿಚಯು ನನಗಾಯಿತು. ಅವರು ಗಾಂಧೀ ವಾದಿಗಳು–ಅಂದರೆ ಸತ್ಯ ಅಹಿಂಸೆ ಎಂಬ ತತ್ವಗಳ ಪ್ರತಿಪಾದಕರು.

ನನಗೂ ಅವರಿಗೂ ಇತ್ತೀಚೆಗೆ ಭಾರತದ ಕುರಿತು ವಿಮರ್ಶೆ ನಡೆಯಿತು. "ನೀವು ಸತ್ಯ ಮತ್ತು ಅಹಿಂಸೆಯೆಂಬ ತತ್ವಗಳನ್ನು ಜನತೆಗೆ ಬೋಧಿಸುವ ಬದಲು ಪ್ರಾಮಾಣಿಕ ಜೀವನ, ವ್ಯವಹಾರದ ಶುದ್ಧತೆ ಮತ್ತು ರಾಷ್ಟ್ರೀಯ ಜಾಗೃತಿಯ ಕುರಿತಾಗಿ ಜನರಿಗೇಕೆ ಬೋಧಿಸುವುದಿಲ್ಲ?" ಎಂದು ನಾನು ಪ್ರಶ್ನಿಸಿದೆ. "ಸತ್ಯ ಅಹಿಂಸೆ ಎಂದಾಗ ನೀವು ಹೇಳಿದ್ದೆಲ್ಲಾ ಬಂದೇ ಬರುವು

ದಲ್ಲ!" ಎಂದವರು ಆಶ್ಚರ್ಯಚಕಿತರಾಗಿ ಪ್ರಶ್ನಿಸಿದರು. "ಹೌದು ಬರುವುದು. ಆದರೆ ನೀವು ಹೇಳುವುದು ಒಬ್ಬ ಸಂತನ ಆದರ್ಶ. ಅದನ್ನು ಬೋಧಿಸುತ್ತಾ ಹೋಗುವುದರಿಂದ ಜನರು ಕಪಟಿಗಳಾಗುತ್ತಾರೆ" ಎಂದೆ, ನಾನು. ಹೇಗೆ ಎಂದು ಕೇಳಿದ್ದಕ್ಕೆ ನನ್ನ ಸಿದ್ಧಾಂತ ನಾನು ವಿವರಿಸಿದೆ. "ಎಟಕದ ಆದರ್ಶವನ್ನು ಸಾಮಾನ್ಯರ ಮುಂದೆ ಇಟ್ಟಾಗ, ಅವರು ಎಲ್ಲವನ್ನೂ ತೊರೆದು ಬಿಟ್ಟು ಸ್ವೈರ ವರ್ತನೆಗೆ ತೊಡಗುತ್ತಾರೆ. ಅದಕ್ಕೆ ಬದಲಾಗಿ, ಕನಿಷ್ಠ ಮಟ್ಟದ ವ್ಯವಹಾರ್ಯವಾದ ಆದರ್ಶವನ್ನು ಅವರ ಮುಂದೆ ಇಡಿ–ಆಗ ಅವರು ಶೀಘ್ರವಾಗಿ ಸ್ವೀಕರಿಸುತ್ತಾರೆ" ಎಂದು ಹೇಳಿ, ಸಂಯುಕ್ತ ಅಮೇರಿಕದ ಸಾಮಾಜಿಕ ಉನ್ನತಿಗಾಗಿ ಬೆಂಜಮಿನ್ ಫ್ರಾಂಕ್ಲಿನ್ ಮಾಡಿದ ಸೇವೆಯ ಉದಾಹರಣೆ ನಾನು ಕೊಟ್ಟೆ.

ಅದಕ್ಕೆ ಅವನು ಒಪ್ಪಲಿಲ್ಲ. "ಹೇಳುವ ತತ್ವ ದೊಡ್ಡದೇ ಹೇಳಬೇಕು —ಜನ ಕೂಡಿದಷ್ಟು ಮಾಡುತ್ತಾರೆ." ಎಂದಾತ ಮಾತು ನಿಲ್ಲಿಸಿದ.

ಪುಣ್ಯ ಪುರುಷರಾದ ಮಹಾತ್ಮಾ ಗಾಂಧೀಜಿಯವರು (ಅವರ ಮೇಲಿನ ಪೂಜ್ಯ ಭಾವನೆಯಿಂದಲೇ ಬರೆಯುತ್ತಿದ್ದೇನೆ.) ಜನತೆಗೆ ಸತ್ಯ ಅಹಿಂಸೆಗಳನ್ನು ಬೋಧಿಸುವ ಬದಲು, ನಾವು ಇಂದು ಆಚರಿಸುವ ಸಾಮಾಜಿಕ ನ್ಯಾಯ ಮತ್ತು ಪ್ರಾಮಾಣಿಕತೆಯ ತತ್ವವನ್ನೂ ಮತ್ತು ಭಕ್ತಿಯನ್ನೂ ಮಾತ್ರವೇ ಮೊದಲ ಹಂತವಾಗಿ ಭೋಧಿಸುತ್ತಿದ್ದರೆ, ಅವರು ಕಾಲವಾದ ಇಷ್ಟು ಬೇಗನೇ ಇಂತಹ ಮೋಸದ ಕೃತ್ಯಗಳು ಭಾರತದಲ್ಲಿ ಸಂಭವಿಸುತ್ತಿರಲಿಲ್ಲವೆಂದು ನನಗನಿಸುವುದು. ಅವರ ಉಚ್ಚ ತತ್ವಗಳನ್ನು ಅವರ ಕೆಲವು ಕೇಂದ್ರ ಅನುಯಾಯಿಗಳಿಗೆ ಮಾತ್ರ ಬೋಧಿಸಿ, ಅವರು ಆಚರಿಸುವಂತೆ ಮಾಡಬೇಕಾಗಿತ್ತು.

ಮನಮೋಹನ್‌ರ ಆ ಮಿತ್ರರ ಕುರಿತಾಗಿ ಮತ್ತೆ ನಾನು ವಿಚಾರಿಸಿದಾಗ, ಅವರು ಲಂಚಕೊಟ್ಟು ಸರಕಾರೀ ಕಾಡು ಕಡಿದು, ವೈಯಕ್ತಿಕ ಲಾಭಮಾಡಿ ಲಕ್ಷಾಧೀಶರಾಗಿದ್ದಾರೆ ಎಂಬುದಾಗಿ ತಿಳಿದುಬಂತು. ಅವರು ಗಾಂಧೀ ತತ್ವ ಹಿಡಿದುಕೊಂಡದ್ದೂ ಕೇವಲ ಸೋಗಿಗಾಗಿ ಮಾತ್ರ.

ಭಾರತದಲ್ಲಿ ಆಚರಣೆ ಹೇಗೂ ಇರಲಿ–ವೇದಿಕೆಯ ಮೇಲೆ ಗಾಂಧೀ ತತ್ವವನ್ನೇ ಹೇಳಬೇಕು–ಅದಕ್ಕೇ ಬೆಲೆ. ಅವನ ವೈಯಕ್ತಿಕ ಜೀವನವು ಎಷ್ಟು ಹೇಸಿಯಾಗಿದೆ ಎಂದು ಯಾರೂ ನೋಡುವುದಿಲ್ಲ.

ನಡೆ ಮತ್ತು ನುಡಿಗೆ ಇಷ್ಟು ಅಭ್ಯಂತರವಿರುವುದು ಯಾವುದೇ ರಾಷ್ಟ್ರಕ್ಕೆ ಆರೋಗ್ಯಕರವೆಂದು ನನಗನಿಸುವುದಿಲ್ಲ. ನಾನದನ್ನು ಆತ್ಮವಂಚನೆ (Hypocrisy) ಎಂದು ಕರೆಯುತ್ತೇನೆ.

ನೀನೀಗ ಕಿಲಕಿಲನೆ ನಗಲೂ ಬಹುದು. ಭಾರತವನ್ನು ಟೀಕಿಸುವುದನ್ನೇ ಒಂದು ವೋಜಾಗಿ ಇಟ್ಟುಕೊಂಡಿರುವ ಪತ್ರಿಕೆಗಳನ್ನೇ ಓದುವವನಲ್ಲವೇ ನೀನು! ಅದರೆ ನೆನಪಿಟ್ಟುಕೋ—ನಮ್ಮ ಸಂಯುಕ್ತ ಅಮೇರಿಕವು ಸ್ವಾತಂತ್ರ್ಯ ಪಡೆದು ಇಂದಿನ ಸ್ಥಿತಿಗೆ ಬರಲು ಹೆಚ್ಚು ಕಡಿಮೆ ಎರಡು ಶತಮಾನ ಹಿಡಿಯಿತು. ಐರೋಪ್ಯ ದೇಶಗಳಿಂದು ಐದಾರು ಶತಮಾನಗಳ ಪರಿಯಂತರವೂ ಸ್ವಾತಂತ್ರ್ಯದ ಸೂರ್ಯಸ್ನಾನ ಮಾಡಿದವರಾಗಿದ್ದಾರೆ. ಭಾರತದ ಸ್ವಾತಂತ್ರ್ಯವು ಕೇವಲ ಒಂದೂವರೆ ದಶಕ ಪ್ರಾಯದ ಎಳೆಗೂಸು.

ಡಾ| ರಾಧಾಕೃಷ್ಣನ್, ಜವಾಹರಲಾಲ್ ನೆಹರು, ವಿನೋಬಾಜೀ, ಸ್ವಾಮಿ ಶಿವಾನಂದ, ಡಾ| ರಾಜೇಂದ್ರ ಪ್ರಸಾದ್ ಮೊದಲಾದ ಅನೇಕ ಮಹಾವ್ಯಕ್ತಿಗಳು, ಭಾರತೀಯ ಶೀಲವನ್ನು ಒಂದೆರಡು ದಶಕಗಳಲ್ಲಿ ಮೇಲ್ಮಟ್ಟಕ್ಕೆ ತಂದು ನಿಲ್ಲಿಸುವರೆಂದು ನನಗನಿಸುತ್ತಿದೆ. ಆದರೂ, ಶೀಲದ ಔನ್ನತ್ಯವನ್ನು ಸಾಧಿಸಿ, ದೇಶದ ಬಡ ಜನರ ಕಷ್ಟ ನಿವಾರಿಸಬಲ್ಲ ಒಂದು ವ್ಯಾವಹಾರಿಕ ಸಿದ್ಧಾಂತಗಳನ್ನೊಳಗೊಂಡ ಸಂಸ್ಥೆಯು ಭಾರತದಲ್ಲಿ ಉದಯಿಸುವುದು ಅತೀ ಅವಶ್ಯವಿದೆ ಎಂದು ನನಗನಿಸುತ್ತಿದೆ. ಅಲ್ಲ, ನನ್ನ ಮಾತನ್ನು ಕೇಳುವವರಿಲ್ಲವೆನ್ನು. ನನ್ನದು ಘೋರಾರಣ್ಯದಲ್ಲಿ ಕಿರಿಚಾಟ. ಆದರೆ ಲೋಕಕ್ಕೆಲ್ಲ ಒಡೆಯನೊಬ್ಬನೇ ತಾನೇ! ಅವನಿಗೇ ನನ್ನ ಅರ್ಜಿ ಸಲ್ಲಿಸಿ ಬಿಡುತ್ತೇನೆ. ಏಕೆಂದರೆ ಸಂಸ್ಕೃತಿಯು, ಧರ್ಮದ ಪರಾಕಾಷ್ಠೆಗೇರಿದ ಭಾರತ, ಹಾಳಾಗುವುದನ್ನು ನಾನು ನೋಡಲಾರೆ ಸಿಲ್ವರ್.

ನೀನು ಎಷ್ಟು ತುಂಟನಾದರೂ, ಅತಿ ದೊಡ್ಡ ಪ್ರಜಾಪ್ರಭುತ್ವವಾದಿ ರಾಷ್ಟ್ರವಾದ ಭಾರತದ ಕುರಿತು ಅಂತರಂಗದಲ್ಲಿ ಸದಭಿಪ್ರಾಯವುಳ್ಳವನಾಗಿರುವೆಯೆಂದು ನಾನು ನಂಬಿದ್ದೇನೆ. ನಿನ್ನ ಹೃದಯವು ಇನ್ನೂ ಪರಿವರ್ತನೆಯಾಗುವ ಬಗ್ಗಾಗಿ ನಿತ್ಯ ದೊರೆ ಏಸುವನ್ನು ಪ್ರಾರ್ಥಿಸುತ್ತಿದ್ದೇನೆ.

ಸಿಲ್ವರ್, ನೋಡು ಬರೆಬರೆದು ಕೈ ಸೋತಿತು. ಮೈ ಪುನಃ ಬಿಸಿಯೇರಿದಂತೆ ಕಾಣುತ್ತಿದೆ. ಒಂದೆರಡು ದಿನ ವಿಶ್ರಾಂತಿ ಪಡಕೊಳ್ಳಬೇಕಿತ್ತು.

ಆದರೆ ಪ್ರೇಮ ಬಿಡಲೊಲ್ಲದು! ನನ್ನ ಮೇಲಿನ ನಿನ್ನ ಅವ್ಯಾಜ ಪ್ರೇಮ ನೆನಸಿ ನಾನು ಯಾವಾಗಲೂ ಸ್ಫೂರ್ತಿ ಪಡೆಯುತ್ತೇನೆ. ಇರಲಿ, ಗೆಳೆಯ, ನಿನ್ನ ಅನುಮತಿಯಿಂದ ಈಗ ವಿರಮಿಸುತ್ತೇನೆ. ನಿನ್ನ ಶ್ರೀಮತಿಗೆ ನನ್ನ ವಂದನೆ ತಿಳಿಸು. ಕೇನ್ನಿಗೆ ನನ್ನ ಪ್ರೇಮ ತಿಳಿಸು. ಮಿಠಾಯಿಯ ದಾರಿ ನೋಡಿ ನೋಡಿ ಆ ಪುಟ್ಟ ಮಗು ಸೋತಿರಬಹುದು; ಪಾಪ! ಬೇಗನೇ ಕಳುಹಿಸು ತ್ತೇನೆಂದು ಹೇಳು ಆಗದೇ?

ನಿನ್ನ ಪ್ರೇಮದ ಮಿತ್ರ,
ಜೋನ್ ಓರ್‌ಮನ್.





ಬೊಂಬ್ಯಾ

ಪ್ರಿಯ ಸಿಲ್ವರ್,　　12-3-1962

ನಿನ್ನ 7—3—'62ರ ಪತ್ರವು ನಿನ್ನೆ ನನಗೆ ತಲಪಿತು. ಅದನ್ನು ಆಮೂಲಾಗ್ರವಾಗಿ ಎರಡೆರಡು ಸಲ ಓದಿದೆ. ಭಾರತದ ಕುರಿತಾಗಿ ನಿನ್ನ ಮನವು ಹೇಗೆ ಹರಿಯುತ್ತಿದೆ ಎಂಬುದಾಗಿ ತಿಳಿಯಲು ಯತ್ನಿಸಿದೆ. ಆದರೆ ನಾನು ಸಫಲನಾಗಲಿಲ್ಲ. ನಿನ್ನ ಪತ್ರದಲ್ಲಿ ಹಿಂದಿನಂತೆಯೇ ಅಲ್ಲಲ್ಲಿ ಅಣಕದ ಮಾತುಗಳನ್ನು ಕಂಡೆ. ಆದರೆ ಕುತೂಹಲದಿಂದ ಇಲ್ಲಿಯ ಕುರಿತಾಗಿ ಹಾಕಿದ ಪ್ರಶ್ನೆಗಳನ್ನೂ ನೋಡಿದೆ. ಮುಖ್ಯವಾಗಿ ಭಾರತದ ರಾಜಕೀಯ ಪಕ್ಷಗಳಲ್ಲಿಯೂ ಅಪ್ರಮಾಣಿಕತೆಯಿದೆಯೇ ಎಂಬ ನಿನ್ನ ಪ್ರಶ್ನೆ ನನಗೆ ತುಂಬಾ ಹಿಡಿಸಿತು. ಅಂತೂ ತಿಳಕೊಳ್ಳುವ ದೃಷ್ಟಿಯಾದರೂ ಇದೆಯೆಂದಾಯಿತು. ಆ ಕುರಿತಾಗಿ ನಿನಗೆ ಧನ್ಯವಾದಗಳು. ಏಸು ಪರಮಾತ್ಮನಿಗೆ ಕೃತಜ್ಞತೆಗಳು.

ನಿನ್ನ ಮಡದಿ ಮತ್ತು ಕೇನ್ನಿಯ ಶುಭಾಶಯಗಳಿಗೆ ತುಂಬಾ ಸಂತೋಷಪಟ್ಟೆ. ಮಗು ಕೇನ್ನಿಗೆ ಈಗಾಗಲೇ ಭಾರತೀಯ ಮಿಠಾಯಿಗಳ ಒಂದು ಕಟ್ಟನ್ನು ವಿಮಾನ ಪಾರ್ಸೆಲು ಮಾಡಿ ಕಳುಹಿಸಿದ್ದೇನೆ. ಪತ್ರ ಸಿಗುವ ಮೊದಲೇ ಅದು ತಲಪಬಹುದೆಂದು ಭಾವಿಸುತ್ತೇನೆ.

ಸಿಲ್ವರ್, ನೀನು ನಿನ್ನ ಮಿತ್ರ ಕೋಲ್‌ಮನ್‌ನ ಕುರಿತಾಗಿ ಏನೋ ಎಲ್ಲಬರೆದಿದ್ದೆಯಲ್ಲ! ನನಗದು ಪೂರ್ಣ ತಿಳಿಯಲಿಲ್ಲ. ಸ್ವಲ್ಪ ವಿವರವಾಗಿ ಬರೆಯಬಾರದೇ?

ಇಲ್ಲಿಯ ರಾಜಕೀಯ ಪಕ್ಷಗಳ ಕುರಿತಾಗಿ ಒಟ್ಟಾಗಿ ಮುಂದೆ ಬರೆಯುತ್ತೇನೆ. ಆದರೆ ಈಗ ಅದರ ಮೊದಲಾಗಿ ಭಾರತೀಯ ಸಮಾಜದ ಇನ್ನೊಂದು ಬದಿಯನ್ನು ಬರೆಯುತ್ತೇನೆ.

ನನ್ನ ಮಿತ್ರ ಮನಮೋಹನರ ಕೂಡೆ ಭಾರತದ ಅನೇಕ ಯೋಗ್ಯ ಹಾಗೂ ಶೀಲವಂತ ಸ್ತ್ರೀ ಪುರುಷರ ಭೇಟಿ ನನಗೆ ಮಾಡಿಸಬೇಕೆಂದು ಕೇಳಿಕೊಂಡಿದ್ದೆ. ವೈಯ್ಯಕ್ತಿಕ ಸಂಪರ್ಕದಿಂದ ಭಾರತದ ತಿರುಳನ್ನು ಇನ್ನೂ ಇನ್ನೂ ತಿಳಿಯುವ ಹುಚ್ಚು ನನಗೆ.

ನನ್ನ ಈ ಆಸೆ ಈಡೇರಿಸುವುದಕ್ಕಾಗಿ ಬೈಸಾರಿ ನನ್ನನ್ನು ಮನಮೋಹನರು ಅವರ ಸಹೋದ್ಯೋಗಿನಿ ಜಾನಕೀ ದೇವಿಯೆಡೆಗೆ ಕರೆದೊಯ್ದರು. ಅವರು ಎಮ್. ಎ., ಆಗಿ, ಮನಮೋಹನರಿರುವ ಕಾಲೇಜಿನಲ್ಲಿಯೇ ಲೆಕ್ಚರರ್ ಆಗಿ ದುಡಿಯುತ್ತಿದ್ದಾರೆ. ಬೊಂಬ್ಯಾಯ ಗಿರ್‌ಗಾವ್ ಎಂಬ ಭಾಗದಲ್ಲಿ ಒಂದು ಫ್ಲಾಟಿನಲ್ಲಿ ಅವರು ಬಹಳ ಸರಳ ಜೀವನ ನಡೆಸುತ್ತಿದ್ದಾರೆ.

ನಾನು ಸಂಕೋಚಪಟ್ಟುಕೊಂಡೇ ಮನಮೋಹನರೊಂದಿಗೆ ಕೊಠಡಿಯೊಳಗೆ ಕಾಲಿಟ್ಟೆ. ಶುದ್ಧ, ನಿಷ್ಕಳಂಕ ಮುಗುಳು ನಗೆಯೊಂದಿಗೆ ಭಾರತೀಯ ಪದ್ಧತಿಯಲ್ಲಿ ಆ ಮಹಿಳೆ ವಂದಿಸಿ, ಒಳಗೆ ಕರೆದೊಯ್ದು ಕುಳ್ಳಿರಿಸಿಕೊಂಡರು. ಆಕರ್ಷಕ ಇಂಗ್ಲೀಷಿನಲ್ಲಿ ಸುಮಧುರ ಕಂಠದಿಂದ ನಮ್ಮನ್ನು ಮಾತನಾಡಿಸಿದರು.

ಸ್ವಲ್ಪ ಕುಳ್ಳನೆ ದೇಹದ ಆಕೆ ತುಂಬಾ ಲಕ್ಷಣವಾಗಿದ್ದರು. ಗೌರವರ್ಣದ ದುಂಡಗಿನ ಮುಖ, ನೀಳವಾದ, ಮತ್ತು ಶ್ರೇಷ್ಠ ನಡತೆಯನ್ನು ಚಿತ್ರಿಸುವ ಮೂಗು, ಹೊಳೆಯುವ ಸ್ಥಿರವಾದ, ಅರ್ಥಪೂರ್ಣವಾದ ಕಣ್ಣುಗಳು, ವಿಶಾಲವಾದ ಹಣೆ, ಗುಂಗುರಾದ ದೀರ್ಘ ಕೇಶರಾಶಿ, ಇಂತಹ ಆಕಾರದಿಂದ ಸದಾ ಬಿಳಿ ಬಣ್ಣದ ರವಿಕೆ ಮತ್ತು ಸೀರೆಯನ್ನುಟ್ಟು ನಿರಾಭರಣ ಸುಂದರಿಯಾಗಿ ಆಕೆ ಮೆರೆಯುತ್ತಿದ್ದರು. ಅವರ ಕಿವಿಯಲ್ಲಾಗಲೀ, ಕೈಗಳಲ್ಲಾಗಲೀ ಕಂಠದಲ್ಲಾಗಲೀ, ಯಾವ ಅಲಂಕಾರವೂ ಇರಲಿಲ್ಲ. ಮೂಗಿನಲ್ಲಿ ಭಾರತೀಯ ಮಹಿಳೆಗಿರುವ ಮೂಗುತಿಯೂ ಇರಲಿಲ್ಲ.

ಇದರಿಂದ ನಾನು ಆಶ್ಚರ್ಯ ಚಕಿತನಾದೆ. ಹಣೆಯಲ್ಲಿ ತಿಲಕವೂ ಇಲ್ಲದುದನ್ನು ನೋಡಿ, ಇದು ಪಾಶ್ಚಾತ್ಯರಾದ ನಮ್ಮ ಅನುಕರಣೆ ಮಾಡುವ ಇನ್ನೊಂದು ಕೀಟವಾಗಿರಬಹುದೇ ಎಂಬ ಸಂಶಯವೂ ಬಾಧಿಸಿತು. ಆದರೆ ಅವರ ನಡೆ, ನಿಲುವುಗಳು ಹಾಗೂ ಗಾಂಭೀರ್ಯವಾದರೋ ಅವರು ಭಾರತೀಯ ಪರಂಪರೆಯ ಉಜ್ವಲ ರತ್ನವೆಂಬ ಅಭಿಪ್ರಾಯವನ್ನು ಒಡ ಮೂಡಿಸು

ತ್ತಿತ್ತು. ಸಂದರ್ಭವರಿತು ಪ್ರಶ್ನಿಸೋಣ ಎಂದುಕೊಂಡು ಸುಮ್ಮನಿದ್ದೆ.

ಜಾನಕೀದೇವಿ ಕ್ಷಮೆಯಾಚಿಸಿ, ಒಳನಡೆದು, ಸ್ವಲ್ಪ ಸಮಯದಲ್ಲಿ ನಮಗೆ ಒಂದು ಕಪ್ ಚಾ ಮತ್ತು ಸ್ವಲ್ಪ ಬಿಸ್ಕೆಟ್ ತಂದು ಮುಂದಿಟ್ಟರು. "ದಯವಿಟ್ಟು ಸ್ವೀಕರಿಸಿರಿ" ಎಂದು ನುಡಿದರು.

ಚಾ ಬಟ್ಟಲು ಬರಿದುಮಾಡಿ ನಾನು ಕೇಳಿದೆ. "ಶ್ರೀಮತಿ ಜಾನಕೀದೇವಿ, ಭಾರತೀಯ ಜೀವನ, ತತ್ವಗಳ ಅಧ್ಯಯನಕ್ಕಾಗಿ ಈ ಚಾರಿತ್ರಿಕ ನಾಡಿಗೆ ಬಂದಿದ್ದೇನೆ. ಅನೇಕರನ್ನು ಕಂಡು, ಅನೇಕ ವಿಷಯ ಸಂಗ್ರಹಿಸಿದ್ದೇನೆ. ಭಾರತೀಯ ಮಹಿಳೆಯ ಆದರ್ಶ ತಿಳಿಯುವ ಬಗ್ಗಾಗಿ ನಾನು ನಿಮ್ಮ ಕೂಡೆ ಕೆಲವು ಆಪ್ತ ಪ್ರಶ್ನೆಗಳನ್ನು ಕೇಳಬಹುದೇ ? " ಆಗ ನಸುನಗುತ್ತಾ ಆ ಮಹಿಳೆ ನುಡಿದರು. "ನಿಶ್ಚಯವಾಗಿಯೂ. ನನ್ನ ಜೀವನದಲ್ಲಿ ಗುಪ್ತವಾದ್ದೂ, ಅಡಗಿಸಿಡುವಂಥಾದ್ದೂ ಯಾವುದೂ ಇಲ್ಲ, ಮಿ. ಓರ್‌ಮನ್. ಬೇಕಾದ ಪ್ರಶ್ನೆ ಕೇಳಿರಂತೆ." ಧೈರ್ಯಪಟ್ಟು ನಾನು ಪ್ರಶ್ನೆಗಳ ಸುರಿಮಳೆ ಸುರಿಸಿದೆ. ನಮಗೆ ನಡೆದ ಪ್ರಶ್ನೋತ್ತರದ ಸಾರ ಮಾತ್ರ ನಿನ್ನ ಮುಂದಿಡುತ್ತೇನೆ.

ಜಾನಕೀ ದೇವಿಯು ಎರಡು ವರ್ಷಗಳಿಂದ ವಿಧವೆಯಂತೆ. ಆದ್ದರಿಂದಲೇ ಹಿಂದೂತ್ವದ ಸಂಕೇತಗಳಾದ ಮೂಗುತಿ ಮತ್ತು ತಿಲಕವನ್ನು ಕೂಡಾ ಆಕೆ ಧರಿಸದೇ ಇದ್ದರು. ಅವರ ಪತಿ ಒಬ್ಬ ನಿಷ್ಠಾವಂತ, ಶ್ರದ್ಧಾಳು ಡಾಕ್ಟರರಾಗಿದ್ದರು. ಬಿಡುವೇ ಇಲ್ಲದ ಉಪಯುಕ್ತ ಜೀವನ ಮಾಡಿ ತುಂಬಾ ಹಣ ಸಂಪಾದಿಸಿದ್ದರು. ಆದರೆ ಮೋಟಾರುಕಾರು ಅಪಘಾತದಲ್ಲಿ ಎರಡು ವರ್ಷಗಳಿಗೆ ಮೊದಲು ಅವರು ಗತಿಸಿಹೋದರು. ಅವರಿಗೆ ಸುಮಾರು ಐದು ವರ್ಷ ಪ್ರಾಯದ ಒಬ್ಬ ಮುದ್ದು ಮೊಗದ ಬಾಲಕ ಮಾತ್ರ ಇದ್ದಾನೆ. ಅವನು ನರ್ಸರಿ ಶಾಲೆಗೆ ಹೋಗುತ್ತಿದ್ದಾನೆ. ಜಾನಕೀ ದೇವಿಯ ಸಂಗಾತಿಯಾಗಿ ಅವರ ಒಬ್ಬ ತಮ್ಮ ಕಾಲೇಜು ವಿದ್ಯಾರ್ಥಿ ಇದ್ದಾನೆ. ತಮ್ಮ ಪತಿಯ ಫ್ಲ್ಯಾಟಿನಲ್ಲೇ ಆಕೆ ಜೀವನ ಸಾಗಿಸುತ್ತಿದ್ದಾರೆ.

"ನಿಮ್ಮ ಪತಿ ಹೋದರೂ, ನೀವೇಕೆ ಪುನಃ ವಿವಾಹವಾಗುವುದಿಲ್ಲ, ಜಾನಕೀ ದೇವಿ! " ಎಂದು ನಾನು ಪ್ರಶ್ನಿಸಿದೆ. "ಇನ್ನೂ ಅಂಥಾ ಸದವಕಾಶ ಸಿಕ್ಕಿಲ್ಲ. ಬೇಗನೇ ಆಗಬೇಕು" ಎಂಬ ಉತ್ತರ ಅವರಿಂದ ಬಂದೀತು ಎಂದು ನಾನು ಭಾವಿಸಿದ್ದೆ. ಭಾರತೀಯ ಉಚ್ಚ ವರ್ಣದವರು ಪುನರ್ವಿವಾಹವಾಗು

ವುದು ಶಾಸ್ತ್ರ ನಿಷಿದ್ಧವಾದರೂ, ಆಧುನಿಕ ವಿದ್ಯಾಭ್ಯಾಸ ಪಡೆದು ಬೊಂಬ್ಯಾಯಂಥಾ ಫ್ಯಾಶನ್ನಿನ ಬೃಹನ್ನಗರದಲ್ಲಿ ಒಂದು ಕಾಲೇಜಿನ ಪ್ರಾಧ್ಯಾಪಕಿಯಾಗಿರುವ ಈಕೆ ಈ ಆದರ್ಶಕ್ಕೆ ಅಂಟಿಕೊಂಡಿದ್ದಾರೆಂದು ಪಾಶ್ಚಾತ್ಯ ದೇಶದಲ್ಲಿ ಬೆಳೆದ ನಾನು ಭಾವಿಸಲು ಆಸ್ಪದವಿರಲಿಲ್ಲ. ಆದರೆ ಉತ್ತರ ಟಪ್ಪನೆ ಬಂತು." ನನ್ನ ಪತಿ ಹೋದ್ದಾದರೂ ಎಲ್ಲಿಗೆ? ನಾನು ವಿಧವೆಯೇನೋ ಹೌದು. ಆದರೆ ಅವರು ಇಲ್ಲಿಯೇ ಇದ್ದಾರಲ್ಲಾ ?" ಹೀಗೆಂದು ಆಕೆ ತನ್ನ ಎದೆಯೆಡೆಗೆ ಕೈ ಮಾಡಿ, ಆಶ್ಚರ್ಯದ ಭಾವ ತೋರಿದರು. ನಿಷ್ಕಾಪಟ್ಯದ ಮೂರ್ತಿಯಾಗಿತ್ತು ಆ ಸುಂದರ ಮುಖ.

"ಅಲಂಕಾರಿಕವಾಗಿ ನೀವು ಹಾಗನ್ನಬಹುದು, ಜಾನಕೀ ದೇವಿ. ಆದರೆ ಈಗ ನಿಮ್ಮ ಗಂಡನಿಲ್ಲವೆಂಬುದಂತೂ ಯಥಾರ್ಥವಷ್ಟೇ?" ಎಂದು ವಾದಕ್ಕೆ ತೊಡಗಿದೆ, ನಾನು. ಅದಕ್ಕವರು ಎಷ್ಟು ಮನಮುಟ್ಟುವಂತೆ ಉತ್ತರ ಕೊಟ್ಟರು ಗೊತ್ತೆ? "ಅವರ ಭೌತಿಕ ದೇಹ ಇಲ್ಲಿ ಇಲ್ಲದಿರಬಹುದು. ಆದರೆ ಅದು ಎಂದಾದರೂ ಹೋಗುವಂತಹುದೇ. ಅವರ ನಿಜ ಸ್ವರೂಪ ದೇವಮಯವಾದ್ದು. ಅದು ದೇವನ ಅಂಶ. ಸರ್ವಾಂತರ್ಯಾಮಿಯಾಗಿರುವ ಆತನ ಚೈತನ್ಯ ಇನ್ನೆಲ್ಲಿಗೆ ತಾನೇ ಹೋಗಬಹುದು ಮಿ. ಓರ್‌ಮನ್? ಭಾರತೀಯ ಮಹಿಳೆ ತನ್ನ ಪತಿಯಲ್ಲಿ ದೇವತ್ವವನ್ನು ಕಾಣುತ್ತಾಳೆ. ದೇವತ್ವಕ್ಕೆ ಅಳಿವಿದೆಯೇ?" ಇಂತಹ ಉತ್ತರ ನೋಡಿ ಯಾರಿಗೆ ತಾನೇ ಆನಂದದ ಉಬ್ಬರವಾಗದು ಸಿಲ್ವರ್?

ಈ ಮಹಿಳೆಯ ಜೀವನದ ಒಂದು ಹಾಳೆಯನ್ನು ನಮ್ಮ ಅಮೇರಿಕದ ಮಹಿಳೆಯರು ಅಧ್ಯಯನ ಮಾಡಿ ಅನುಸರಿಸಿದ್ದರೆ !....ಎಂಬ ಆಸೆ ನನಗಾಯಿತು. ಆದರೆ ನಾನು ಅಲ್ಲಿಗೇ ಸುಮ್ಮನಾಗಲಿಲ್ಲ.

ಹಾಗಿದ್ದರೆ ವಿಧವೆಯೆಂಬ ಕಾರಣಕ್ಕಾಗಿ ಅಲಂಕಾರವಾಗಲೀ, ತಿಲಕವಾಗಲೀ ಏಕೆ ತೊರೆಯಬೇಕಾಗಿತ್ತು ಎಂದು ನಾನು ಪ್ರಶ್ನಿಸಿದೆ. ಅದಕ್ಕವರ ಉತ್ತರ ಹೀಗೆ ಬಂತು. "ಹಿಂದೂ ಮಹಿಳೆ ತನ್ನ ಜೀವನದಲ್ಲಿ ಒಬ್ಬನನ್ನೇ ಪತಿಯೆಂದು ಸ್ವೀಕರಿಸಬೇಕೆಂಬ ಒಂದು ನಿಯಮವಿದೆ. ಗಂಡನು ಭೌತಿಕವಾಗಿ ನಮ್ಮಿಂದ ದೂರವಾದಾಗ, ನಮ್ಮಲ್ಲಿ ಶೃಂಗಾರ ದೃಷ್ಟಿ ಇರಬಾರದು; ಇತರರನ್ನು ನಾವು ಆಕರ್ಷಿಸುವಂತಿರಬಾರದು; ಪತಿಯಲ್ಲೇ ಪರಮಾತ್ಮನನ್ನೂ, ಪರಮಾತ್ಮನಲ್ಲೇ ಪತಿಯನ್ನೂ ಕಂಡು, ಆತ್ಮತೃಪ್ತಳಾಗಿ ಅಂತರಂಗಸಾಧನೆ ಮಾಡ

ಬೇಕು. ಆ ಸಾಧನೆಯು ಜೀವನಕ್ಕೆ ಬೇಕಾದಷ್ಟೇ ಅವಳ ವೇಷ ಭೂಷಣ, ಆಹಾರ ಪಾನೀಯ, ವಿಹಾರ ವಿಶ್ರಾಂತಿಗಳಿರಬೇಕು ಎಂಬ ನಿಯಮವಿದೆ. ಅದಕ್ಕಾಗಿ ನಾನು ಹೀಗಿದ್ದೇನೆ, ಮಿ. ಓರ್‌ಮನ್!" ಹೀಗಂದು ಅವರು ಕಿರಿದಾಗಿ ನಸುನಕ್ಕರು.

"ಇಂತಹ ಉದಾತ್ತ ತತ್ವವನ್ನು ನೀವು ಪಾಲಿಸುವುದಿದ್ದರೆ ನೀವು ಮದುವೆಯಾದರೂ ಏಕಾಗಬೇಕಿತ್ತು? ಪರಮಾತ್ಮನನ್ನೇ ಪತಿಯೆಂದು ಭಾವಿಸಿ ಸಾಧನೆ ಮಾಡುತ್ತಾ ಇರಬಾರದಿತ್ತೇ?" ಎಂದು ನಾನು ಮರು ಪ್ರಶ್ನೆ ಹಾಕಿದೆ. "ಅವ್ಯಕ್ತ ಚೇತನದ ಮಧುರತೆ ಅನುಭವಿಸಲು ಶಕ್ತಿ ಬರಲಿಲ್ಲ. ರೂಪ, ಗುಣ ನಾಮ ಸಹಿತವಾದ ಅಂತಹ ಒಂದು ಚೇತನದ ಭಾಗವನ್ನುನಾನು ಪತಿಯೆಂದು ಸ್ವೀಕರಿಸಬೇಕಾಗಿತ್ತು. ಆ ಚೇತನವನ್ನು ಸ್ವೀಕರಿಸಿದೆ. ಸಾಕಾರವಾಗಿ ಜೀವಕ್ಕಿಂತ ಮಿಗಿಲಾಗಿ ಪ್ರೀತಿಸಿದೆ. ನನ್ನ ದೈಹಿಕ ಆಸೆಗಳನ್ನು ಚುಟುಕಿನಲ್ಲಿಯೇ ಪೂರೈಸಿಕೊಂಡೆ. ನಾಮ, ರೂಪ, ಗುಣ ಸಹಿತವಾದ ಆ ದೇಹ ನನ್ನಿಂದ ತೊಲಗಿತು. ಆ ಆತ್ಮ ನನ್ನಲ್ಲೇ ಉಳಿಯಿತು. ಈಗ ಆ ಆತ್ಮದಲ್ಲೇ ಪತಿಯನ್ನೂ ಪರಮಾತ್ಮನನ್ನೂ ಐಕ್ಯತೆಯಿಂದ ಕಾಣುತ್ತಿದ್ದೇನೆ"–ಹೀಗೆ ಉತ್ತರ ಬಂತು ಆಕೆಯಿಂದ.

"ಎಲ್ಲಾ ಸರಿ, ಶ್ರೀಮತಿ ಜಾನಕೀ ದೇವಿ. ಆದರೆ ನಿಮ್ಮ ಸುಂದರ ದೇಹವು ಕಾಡಿನ ಹೂವಿನಂತೆ ಆಸ್ವಾದಿಸುವವರಿಲ್ಲದೆ, ಮೆಚ್ಚುವವರಿಲ್ಲದೆ ಬಾಡಿ ಹೋಗುವುದಲ್ಲ?" ಎಂದು ನಾನು ಕೆಣಕುವ ಪ್ರಶ್ನೆ ಹಾಕಿದೆ. ಆದರೆ ಆ ದೇವಿ ಕೋಪಿಸಲಿಲ್ಲ. ನಸು ನಗುತ್ತಲೇ ಆಕೆಯ ಉತ್ತರ ಬಂತು. "ಎಲ್ಲ ಹೂವನ್ನೂ, ಎಲ್ಲ ದೇಹವನ್ನೂ ಅಷ್ಟೇಕೆ ಎಲ್ಲವನ್ನೂ ಆ ಸ್ವಾದಿಸುವವನು ಆ ಸ್ವಾಮಿ! ಅವನು ಅದನ್ನು ಆಸ್ವಾದಿಸುತ್ತಿರಲು ಅದಕ್ಕೆ ಇನ್ನೊಬ್ಬನೇಕೆ ಬೇಕು? ಜಗದೊಡೆಯನಿಗಿಂತ ಚೆನ್ನಾಗಿ ನಮ್ಮನ್ನು ಮೆಚ್ಚುವವರು ಇನ್ಯಾರು ಮಿ. ಓರ್‌ಮನ್!" ನಾನು ನನ್ನ ಉದ್ಧಟತನಕ್ಕೆ ಕ್ಷಮೆಯಾಚಿಸಿದೆ.

ಆಕೆಯನ್ನು ನೋಡಿ, ಭಾರತೀಯ ಪರಂಪರೆ, ಭಾರತೀಯ ದರ್ಶನಗಳು ಆಕೆಯಲ್ಲಿ ಮೈವೆತ್ತಂತೆ ನನಗೆ ಕಂಡಿತು. ನನಗಾದ ಹರ್ಷ ಅಷ್ಟಿಷ್ಟಲ್ಲ. ನಾನು ಮುಂದೆ ಎಂದಾದರೂ ಮದುವೆಯಾಗುವುದಿದ್ದರೆ ಇಂತಹ ಸಾಧ್ವಿಯೋರ್ವಳನ್ನು ಎಂದುಕೊಂಡು ಮನದಲ್ಲೇ ನಿರ್ಣಯಿಸಿದೆ.

ನಾನೂ ಮನಮೋಹನರೂ ಆಕೆಯೊಡನೆ ಮತ್ತೆಯೂ ಅನೇಕ ವಿಷಯ

ಮಾತನಾಡಿದೆವು. ಆಕೆಯು ಲೋಕಾಧೀಶನನ್ನು ಪಡೆಯಲು ಮಾಡುತ್ತಿರುವ ಸಾಧನೆಗಳು, ಆಕೆಯ ಶುದ್ಧ ಸರಳ ಜೀವನ, ಭಾರತೀಯ ಪರಂಪರೆಯಲ್ಲಿ ಉಚ್ಚ ಆದರ್ಶವುಳ್ಳ ವಿದ್ಯಾರ್ಥಿಗಳ ಬಳಗವನ್ನು ಬೆಳೆಸಿ, ನವರಾಷ್ಟ್ರ ಸ್ಥಾಪಿಸಬೇಕೆನ್ನುವ ಆಕೆಯ ಮಹತ್ವಾಕಾಂಕ್ಷೆ—ಎಲ್ಲವನ್ನು ನೋಡಿ ನಾನು ಮೆಚ್ಚಿದೆ. ಮುಂದೆಯೂ ಪತ್ರಮುಖೇನ ಸಂಪರ್ಕವಿರಿಸಿಕೊಳ್ಳುವ ವಚನವನ್ನು ಪರಸ್ಪರರು ಇತ್ತು ನಾವಿಬ್ಬರೂ, ಆಕೆಯ ಪವಿತ್ರ ನಿಲಯದಿಂದ ಹೊರಹೊರಟೆವು. ನಾನು ಶುದ್ಧ ಜಲದಿಂದ ಮಿಂದು ಮಡಿಯಾದವನಂತೆ ಹೊರ ಪ್ರಪಂಚಕ್ಕೆ ಕಾಲಿಟ್ಟೆ.

ಪ್ರಿಯ ಸಿಲ್ವರ್, ನಾನು ಹೀಗೆಯೇ ಅನೇಕ ಮಹಿಳೆಯರನ್ನು ಕಂಡು ಮಾತನಾಡಿದ್ದೇನೆ. ಅವರಲ್ಲಿ ಆಧುನಿಕ ವಿದ್ಯಾಭ್ಯಾಸ ಪಡೆದವರೂ ಇದ್ದಾರೆ; ಏನೂ ಶಿಕ್ಷಣದ ಬೆಡಗಿನ ಸೋಗಿಲ್ಲದೆ, ಮುಗ್ಧೆಯರಾಗಿರುವ ಹಳ್ಳಿಯ ಹೆಂಗಳೆಯರೂ ಇದ್ದಾರೆ. ಅಂತಹವರನ್ನೂ ಭಾಷಾಂತರಕಾರರ ಮೂಲಕ ಮಾತನಾಡಿಸಿದ್ದೇನೆ. ಈ ಎಲ್ಲದರಿಂದ ಭಾರತೀಯ ಮಹಿಳೆಯ ಆದರ್ಶವೇನೆಂಬುದನ್ನು ನಮ್ಮ ಪಾಶ್ಚಾತ್ಯ ದೇಶಗಳ ಮಹಿಳೆಯರ ಆದರ್ಶಕ್ಕೆ ಹೋಲಿಸಿ ಕಂಡುಕೊಂಡಿದ್ದೇನೆ.

ಪಾಶ್ಚಾತ್ಯ ದೇಶಗಳಲ್ಲಿ ನಮ್ಮ ಹುಡುಗಿಯರು ಮತ್ತು ಪ್ರಬುದ್ಧ ಸ್ತ್ರೀಯರು ಗಂಡನನ್ನು ಶೃಂಗಾರ ಮತ್ತು ವಿಲಾಸದ ಸಹಭಾಗಿಯನ್ನಾಗಿ ಕಾಣುತ್ತಾರೆ; ಸಮಾನ ಭಾವದಿಂದ ಸುಖವನ್ನು ಅರಸುತ್ತಿರುತ್ತಾರೆ; ಪತಿ ತನ್ನನ್ನು ಮೋಹದ ರಾಣಿಯನ್ನಾಗಿ ಮಾಡಿಕೊಳ್ಳಬೇಕೆಂಬುದಾಗಿ ಭಾವಿಸುತ್ತಾರೆ. ಜೀವನದಲ್ಲಿ ಲೈಂಗಿಕ ಸುಖವೇ ಪ್ರಧಾನವಾದ್ದೆಂದು ಯೋಚಿಸುತ್ತಾರೆ. ಮನದಂತರಾಳದಲ್ಲಿ, ಲೈಂಗಿಕ ಸ್ವಾತಂತ್ರ್ಯವಿರಬೇಕೆಂದು ಬಯಸುತ್ತಾರೆ. ಪಾಶ್ಚಾತ್ಯ ಮಹಿಳೆ, ಸಾಮಾನ್ಯವಾಗಿ ತನ್ನ ಪತಿ, ತನ್ನ ಲೈಂಗಿಕ ಜೀವನದ ನಿಯಂತ್ರಣ ಮಾಡ ಹೊರಟಾಗ ಕೆರಳುತ್ತಾಳೆ. ಪತಿಯು ಅನೈತಿಕ ವ್ಯವಹಾರಕ್ಕೆ ಇಳಿದರಂತೂ, ತಾನೂ ಅಂತಹ ವ್ಯವಹಾರದಲ್ಲಿ ಸ್ಪರ್ಧೆ ಹೂಡಿ ತಾನು ಆತನಿಗಿಂತ ಕಡಿಮೆ ಶಕ್ತಿಯುವಳಲ್ಲ ಎಂದು ತೋರಿಸಿಕೊಳ್ಳುತ್ತಾಳೆ.

ದೀರ್ಘಕಾಲ ಹೀಗೆಯೇ ನಡೆದುದರ ಪರಿಣಾಮವಾಗಿಯೋ ಏನೋ, ನಮ್ಮ ಪುರುಷರೂ ಸ್ತ್ರೀಯರಲ್ಲಿ ಇಂತಹ ಮನೋಭಾವನೆಯನ್ನೇ ಬೆಳೆಸಲು ಅನುಕೂಲವಾಗುವ ರೀತಿಯಲ್ಲಿ ವ್ಯವಹರಿಸುತ್ತಿದ್ದಾರೆ.

ಇದೆಲ್ಲದರ ಕಾರಣವಾಗಿಯೇ ವಿವಾಹ ವಿಚ್ಛೇದದ ದುರಂತ ನಾಟಕಗಳು ನಮ್ಮಲ್ಲಿ ಇಷ್ಟೊಂದು ಬಹುಸಂಖ್ಯೆಯಲ್ಲಿ ಆಡಲ್ಪಡುತ್ತಿವೆ. ಮನೆ ಮನೆಯಲ್ಲಿ, ಮನ ಮನದಲ್ಲಿ, ಅಶಾಂತಿ, ತುಂಬಿ ತುಳುಕುತ್ತಿದೆ. ನಮಗಿರುವ ಭೌತಿಕ ಸಂಪತ್ತಿನ ಸೌಭಾಗ್ಯದಿಂದಲೂ, ನಮ್ಮ ಅಂತರಂಗದ ಕೊರಗು ಇನ್ನಷ್ಟು ವೃದ್ಧಿಸಲ್ಪಡುವುದಲ್ಲದೆ ಕಡಿಮೆಯಾಗುವಂತಿಲ್ಲ, ಸಿಲ್ವರ್.

ಭಾರತದ ಸ್ತ್ರೀಯ ಮನೋಧರ್ಮ ಇದಲ್ಲ- ಗಂಡನೆಂದಾಗ ಆಕೆಯ ಲ್ಲಿಯೂ ಪ್ರೇಮ ಮತ್ತು ಕಾಮಗಳ ಪುಳಕವಾದರೂ ಕೂಡಾ, ಆಕೆಯ ಮನೋ ಭೂಮಿಕೆಯ ಪ್ರಧಾನ ಭಾಗ ಗಂಡನೆಡೆಗೆ ಭಯ, ಭಕ್ತಿ ಮತ್ತು ಗೌರವದ್ದು. ಆಕೆಗೆ ಗಂಡನೆಂದರೆ ನಾಥನು, ಸ್ವಾಮಿಯು. ಅಷ್ಟೇಕೆ ತನ್ನ ಸರ್ವಸ್ವವು. ಹಿಂದೂ ಮಹಿಳೆ ತನಗೆ ತಿಳಿದೋ ತಿಳಿಯದೆಯೋ ಗಂಡನಲ್ಲಿ ದೇವತ್ವವನ್ನು ಗುರುತಿಸುತ್ತಾಳೆ. ಆದ್ದರಿಂದ ಆತನನ್ನು ಆಕೆ ಕೇವಲ ಶೃಂಗಾರ ವಿಲಾಸಗಳ ಜೊತೆಗಾರ, ಪಾಲುಗಾರ, ಅಥವಾ ಗೆಳೆಯನೆಂದು ಹಗುರವಾಗಿ ಭಾವಿಸುವಂತಿಲ್ಲ.

ಪತಿಯೇ ತಪ್ಪೆಸಗಿದಾಗ, ತನಗೆ ಹಿಂಸೆಯಿತ್ತಾಗ ಕೋಪಿಸಿಕೊಳ್ಳುವ ಸತಿ ಅಪರೂಪವಾಗಿ ಕಾಣಸಿಗುತ್ತಾಳೆ. ಬದಲಿಗೆ ಆಕೆ ಕೊರಗುತ್ತಾಳೆ; ದುಃಖಿಸುತ್ತಾಳೆ; ತನ್ನ ಭಾಗ್ಯವನ್ನು ಹಳಿದುಕೊಳ್ಳುತ್ತಾಳೆ. ಕಣ್ಣೀರು ಸುರಿಸಿ ಗಂಡನ ಪಾದ ತೊಳೆಯುತ್ತಾಳೆ.

ಹೀಗೆ ದಾರಿತಪ್ಪಿ ಹೋಗುವ ಪತಿಯ ಹೃದಯವನ್ನಾಕೆ, ನಿಸ್ಸೀಮ ಪ್ರೇಮ, ಸಹನೆ, ತ್ಯಾಗಗಳಿಂದ ಪರಿವರ್ತನೆಗೊಳಿಸಲೆಳಸುತ್ತಾಳೆ; ಗಂಡನ ಅರಿವಿಲ್ಲದೆಯೇ ದಾರಿಗೆ ಹಚ್ಚುತ್ತಾಳೆ; ಇಲ್ಲಿ ಹೆಂಡತಿಯಾಗಿರುವವಳು ಲೈಂ ಗಿಕ ಸ್ವಾತಂತ್ರ್ಯ ಬಯಸಿ, ಅನೈತಿಕತೆಗಿಳಿಯುವುದು ಮಹಾ ಪಾಪವೆಂದು ಪರಿಗಣಿಸಲ್ಪಡುತ್ತದೆ. ಬಹು ಸಂಖ್ಯಾಕ ಸ್ತ್ರೀಯರು, ಇಂತಹ ಒಂದು ದುಷ್ಟ ಸನ್ನಿವೇಶವನ್ನು ಕನಸಿನಲ್ಲಿಯೂ ಊಹಿಸಲು ಧೈರ್ಯಪಡುವುದಿಲ್ಲ. ತನ್ನ ಪ್ರಿಯತಮನು ಅನ್ಯ ಸ್ತ್ರೀಯನ್ನು ಬಳಸಿದಾಗಲೂ, ಆಕೆಯ ಹೃದಯ ಬೇಯ ಬಹುದು; ನೀರಾಗಬಹುದು, ಆಕೆ ಗಂಡನಲ್ಲಿ ಮುನಿಸನ್ನು ತೋರಬಹುದು; ಒಂದು ವೇಳೆ ಜಗಳಾಡಲೂಬಹುದು. ಆದರೆ ಆತನ ಕಾರ್ಯಕ್ಕೆ ಪ್ರತೀಕಾರ ವೆಂದುಕೊಂಡು, ಆಕೆಯು ಇನ್ನೊಬ್ಬನ ಬೆನ್ನು ಹಿಡಿಯುವುದಿಲ್ಲ.

ಎಂದರೆ ಭಾರತದೇಶದಲ್ಲಿ ವೈವಾಹಿಕ ಧರ್ಮವನ್ನು ಮೀರಿ ವ್ಯಭಿಚಾರ ನಡೆಯುವುದೇ ಇಲ್ಲವೆಂದಲ್ಲ. ಪುರುಷರು ವ್ಯಭಿಚಾರ ಮಾಡುವುದಿದೆ. ಸ್ತ್ರೀಯರೂ ಮಾಡುವುದೇ ಇಲ್ಲವೆಂದಲ್ಲ. ಗಂಡನನ್ನು ತೊರೆದು, ನಿರ್ಲಜ್ಜರಾಗಿ, ಪರಪುರುಷರೊಂದಿಗೆ ಸ್ವೇಚ್ಛೆಯಿಂದ ವ್ಯವಹರಿಸಿ, ಲೈಂಗಿಕ ಸ್ವಾತಂತ್ರ್ಯದಲ್ಲಿ ತನ್ನ ಮಹತ್ವ ತೋರುತ್ತೇನೆನ್ನುವ ಮಹಿಳೆಯರೂ ಇದ್ದಾರೆ. ಅಂತಹವರು ಭಾರತೀಯ ಚರಿತ್ರೆಗೆ, ಭಾರತೀಯಪರಂಪರೆಗೆ ಕಳಂಕಪ್ರಾಯರು. ಆದರೆ, ಆ ತೆರನಾದ ಹೆಂಗಳೆಯರು ಅಪರೂಪವೆಂದೇ ಹೇಳಬೇಕು. ಬಹುಸಂಖ್ಯಾಕರು ತಮ್ಮವೈವಾಹಿಕ ಧರ್ಮವನ್ನು ಪವಿತ್ರವಾಗಿ ಕಾಯ್ದುಕೊಳ್ಳುತ್ತಾರೆ.

ಹಾಗಿರುವುದರಿಂದಲೇ ಭಾರತದಲ್ಲಿ ನಮ್ಮ ದೇಶದಷ್ಟು, ಇಲ್ಲವೇ ಇತರ ಪಾಶ್ಚಾತ್ಯ ದೇಶಗಳಷ್ಟು ವಿವಾಹ ವಿಚ್ಛೇದಗಳು ಕಾಣುತ್ತಿಲ್ಲ. ಆ ದೃಷ್ಟಿಯಿಂದ ಇಲ್ಲಿಯ ಸಾಂಸಾರಿಕ ಜೀವನವು ಹೆಚ್ಚು ಸುಖಮಯವಾಗಿದೆ.

ಇಲ್ಲಿಯ ಪುರುಷರೂ ಸ್ತ್ರೀಯಿಂದ ಸರಿಯಾದ ವಿಶ್ವಾಸವನ್ನೂ ಪ್ರಾಮಾಣಿಕತೆಯನ್ನೂ ಬಯಸುತ್ತಾರಲ್ಲದೆ ಪತ್ನಿಯರು ತಮ್ಮ ಪೂರ್ಣ ಅಂಕೆಯೊಳಗಿರಬೇಕು ಎಂಬುದಾಗಿ ನಿರೀಕ್ಷಿಸುತ್ತಾರೆ. ತನ್ನ ಪತ್ನಿಯೊಂದಿಗೆ ಇತರ ಬೇರೆ ಯಾವನೇ ಗಂಡಸು ಪಿಸು ಮಾತನಾಡಿದರೇನೇ, ಆತನು ತೀವ್ರ ಸಂಶಯಕ್ಕೊಳಗಾಗಿ, ಆಕೆಯನ್ನು ಪೀಡಿಸಿಯೇ ಬಿಡುತ್ತಾನೆ. ತನ್ನ ಪತ್ನಿಯ ಕೈ ಹಿಡಿದುಕೊಂಡು, ಇತರ ಯಾವನೇ ನಡೆದರೂ, ಅವರಿಬ್ಬರ ಜೀವವೂ ಹೋಗಿಬಿಟ್ಟರೂ ಆಶ್ಚರ್ಯವಿಲ್ಲ. ಅಂದರೆ ಭಾರತೀಯ ಸಮಾಜದಲ್ಲಿ ಯಾವುದೇ ಸ್ತ್ರೀಯು ಪರ ಪುರುಷನೊಂದಿಗೆ ಅಂತಹ ಆತ್ಮೀಯ ಸಂಬಂಧವಿಟ್ಟುಕೊಳ್ಳುವಂತಿಲ್ಲ.

ನಮ್ಮ ಮಟ್ಟಿಗಿದು ಬಹಳ ಅತಿರೇಕವೆಂದು ತೋರಬಹುದಾದರೂ, ಈ ನಿಯಮದ ಕಾರಣದಿಂದಲಾಗಿ, ಭಾರತದಲ್ಲಿ ನಮ್ಮಷ್ಟು ವೈವಾಹಿಕ ಸಮಸ್ಯೆಗಳು ಬರುವುದಿಲ್ಲ. ತಂದೆ, ತಾಯಿ ಇಬ್ಬರಿಗೂ ಬೇಡವಾದ ನಿರ್ಗತಿಕ ಬಾಲಕ ಬಾಲಕಿಯರನ್ನು ಕಾಣುವ ಸಂದರ್ಭ ಇಲ್ಲಿ ಅಸ್ತಿರುವುದಿಲ್ಲ.

ಭಾರತದಲ್ಲಿ ಬಾಲಿಕೆಯರು, ಯುವಕರೊಂದಿಗೆ ನಮ್ಮ ದೇಶದಂತೆ, ಇಲ್ಲವೇ, ಯುರೋಪಿನ ಇತರ ರಾಷ್ಟ್ರಗಳಂತೆ ಸ್ವಚ್ಛಂದದಿಂದ ವ್ಯವಹರಿಸುವಂತಿಲ್ಲ. ಅಷ್ಟೇಕೆ, ಅವರು ಯುವಕರೊಂದಿಗೆ ಮಾತನಾಡಿದರೂ ಸಂಶ

ಯಕ್ಕೆ ಗುರಿಯಾಗುವರು. ಊರಲ್ಲಿ ಜನರು ಅವರ ಕುರಿತಾಗಿ ಪಿಸಿ ಪಿಸಿ ಮಾತನಾಡತೊಡಗುವರು.

ಹಾಗಿದ್ದರೆ ಅವರ ಪ್ರೇಮಿಯನ್ನು ಅವರು ಆರಿಸಿಕೊಳ್ಳುವುದೆಂತು? ಅವರು ವಿವಾಹವಾಗುವುದಾದರೂ ಹೇಗೆ ಎಂಬುದಾಗಿ ನೀನು ಪ್ರಶ್ನಿಸಬಹುದು. ಆದರೆ ಭಾರತದ ಪರಂಪರೆ ಪ್ರಕಾರ ಹೇಳುವುದಿದ್ದರೆ, ಇಲ್ಲಿ ಪಾಶ್ಚಾತ್ಯ ರೀತಿಯ ಪ್ರೇಮ ವಿವಾಹಕ್ಕೆ ಆಸ್ಪದವಿಲ್ಲ. ಇಲ್ಲಿ ಮುಖ್ಯವಾಗಿ ಬಳಕೆಯಲ್ಲಿರುವುದು ಪೂರ್ವ ನಿಯೋಜಿತ ವಿವಾಹಗಳು.

ಅಂದರೆ ವಧೂವರರ ಹೆತ್ತವರು, ತಮ್ಮ ಮಕ್ಕಳಿಗೆ ಯೋಗ್ಯವಾದ ಸಂಬಂಧವನ್ನು ಕಂಡು ಹಿಡಿದು ವಿವಾಹವನ್ನು ಏರ್ಪಡಿಸುತ್ತಾರೆ. ವಧೂವರರ ಮನೆತನ, ಅವರ ಚಾರಿತ್ರ್ಯ, ಅವರ ಸ್ಥಾನಮಾನ, ಸಂಪತ್ತು, ರೂಪ ಮತ್ತು ವಿದ್ಯೆ, ಉದ್ಯೋಗ ಮೊದಲಾದವುಗಳ ಕುರಿತು ಕೂಲಂಕಷ ವಿಮರ್ಶೆ ಮಾಡಿ, ತಮ್ಮ ಮಗ ಅಥವಾ ಮಗಳ ಯೋಗ್ಯತೆಗೆ ತಕ್ಕುದಾದ ವಧು ಅಥವಾ ವರನನ್ನು ಆರಿಸಿಕೊಳ್ಳುತ್ತಾರೆ.

ಮೊದಮೊದಲು, ಇಲ್ಲಿ ಬಾಲ್ಯ ವಿವಾಹ ರೂಢಿಯಲ್ಲಿತ್ತಾಗಿ, ವಧೂವರರ ಅಭಿಪ್ರಾಯ ಕೇಳುವ ಪ್ರಶ್ನೆಯೂ ಇರಲಿಲ್ಲವಂತೆ. ಎಷ್ಟೋ ಕಡೆಗಳಲ್ಲಿ ತೊಟ್ಟಿಲ ಶಿಶುಗಳಿಗೇ ವಿವಾಹವಾಗುತ್ತಿದ್ದ ಕಾಲ ಭಾರತದಲ್ಲಿತ್ತು ಎಂಬುದಾಗಿ ನೀನು ಕೇಳಿದರೆ ನಿನ್ನ ಹೃದಯದ ಬಡಿತ ನಿಂತುಬಿಡಲೂ ಸಾಕು.

ಆದರೆ ಈಗಲೀಗ ಒಂದು ಹೊಸ ಸಂಪ್ರದಾಯ ರೂಢಿಗೆ ಬಂದಿದೆ. ವರನು ವಧುವಿನ ಮನೆಗೆ ಬಂದು ಆಕೆಯನ್ನು ನೋಡುತ್ತಾನೆ. ಆಕೆ ಆತನಿಗೆ ಊಟ ಬಡಿಸುತ್ತಾಳೆ. ಅವಳ ಚಲನವಲನ, ಮುಖ ವರ್ಚಸ್ಸು, ನಡೆ ನುಡಿ ಪರೀಕ್ಷಿಸಲಾಗುತ್ತಿದೆ. ಸಂಗೀತ ಬಲ್ಲವಳಾದರೆ, ವರನೆದುರು ಆಕೆ ಸಂಗೀತ ನುಡಿಯಬೇಕು, ಹಾಡು ಹಾಡಬೇಕು. ಈ ಎಲ್ಲ ಸಂದರ್ಭಗಳಲ್ಲಿ ಆಕೆ ಆತನನ್ನು ಅಡಗಿ ನೋಡುತ್ತಿದ್ದು ತನಗೆ ಪತಿಯಾಗಲು ಈತನು ಯೋಗ್ಯನೇ ಎಂಬುದನ್ನೂ ಯೋಚಿಸುತ್ತಾಳೆ. ಕಟ್ಟಕಡೆಗೆ ವಧು, ವರ ಇಬ್ಬರೊಡನೆಯೂ, ಅವರ ಹೆತ್ತವರು, ಅವರ ಸ್ಥಿತಿ ಗತಿಯನ್ನೆಲ್ಲಾ ಬಣ್ಣಿಸಿ, "ನಿನಗೀ ನೆಂಟಸ್ತಿಕೆಯಾಗಬಹುದೇ?" ಎಂಬುದಾಗಿ ಕೇಳುತ್ತಾರೆ. ಅವರೊಪ್ಪಿದರೆ ವಿವಾಹ ನಡೆಯುತ್ತದೆ; ಇಲ್ಲವಾದರೆ ಇಲ್ಲ.

ಮೊದಮೊದಲು ವಧುವಿನ ಸಮ್ಮತಿಯು,ಆಕೆಯ ಮಂದಹಾಸದ ಮನದಿಂದಲೂ, ಅಸಮ್ಮತಿಯು ಕಣ್ಣೀರ ಕಾಲುವೆ ಹರಿಯುವುದರಿಂದಲೂ ಗುರು

ತಿಸಬೇಕಾಗಿತ್ತಂತೆ! ಆದರೆ ಈಗಲೀಗ ಹುಡುಗಿಯರೂ, ಹೆಚ್ಚು ಧೈರ್ಯ ಶಾಲಿನಿಯರಾಗಿ "ಆದೀತು", "ಆಗದು" ಎಂಬುದಾಗಿ ಬಾಯಲ್ಲೇ ಹೇಳು ವಷ್ಟು ಧೈರ್ಯ ಬೆಳೆದಿದೆಯಂತೆ !

ಇಲ್ಲಿಯ ಸುಭದ್ರವಾದ ವೈವಾಹಿಕ ಸಂಬಂಧಕ್ಕೆ ಈ ವಿಧವಾದ ಅನ್ವೇ ಷಣಾ ಕ್ರಮವೇ ಕಾರಣವೆಂದು ನನಗನಿಸುತ್ತಿದೆ. ಏಕೆಂದರೆ "ಪ್ರೇಮವು ಕುರುಡು" ಎಂಬ ಮಾತಿದೆಯಷ್ಟೆ! ಆದರೆ ಮೊದಲು ಯೌವನದ ಸೊಕ್ಕಿನಲ್ಲಿ ಶೃಂಗಾರ, ವಿಲಾಸಗಳ ಮಧ್ಯೆ ಯಾವುದನ್ನು ನಾವು ಪ್ರೇಮವೆಂದು ಕರೆಯು ತ್ತೇವೆಯೋ ಅದು ಸೇಕಡಾ ತೊಭಂತ್ತು ಭಾಗವು ಕಾಮ ಮಾತ್ರವಾಗಿಯೂ ಹತ್ತು ಭಾಗವು ಮಾತ್ರ ಪ್ರೇಮ ಮಿಶ್ರವಾಗಿಯೂ ಇದೆಯೆನ್ನಬಹುದು. ಆದ್ದರಿಂದ ಕಾಮವು ಕುರುಡಾಗಿದೆ ಎಂಬ ಮಾತು ಹೆಚ್ಚು ಸೂಕ್ತವಾಗುವುದು.

ಅರ್ಥಾತ್ ಕಾಮದ ಹೆಚ್ಚಳದಲ್ಲಿ ಸ್ತ್ರೀ ಪುರುಷರಿಗೆ, ತಮ್ಮಲ್ಲಿ ಕಾಮ ಪ್ರಚೋದನೆ ಮಾಡಿದ ಪುರುಷ ವ ಸ್ತ್ರೀಯರು ದೇವತಾ ಸ್ವರೂಪರಾಗಿಯೇ ಕಾಣುವರು. "ಡಾರ್ಲಿಂಗ್", "ಡಾರ್ಲಿಂಗ್" ಎಂದೇ ಇಬ್ಬರೂ ಕರೆದು ಕೊಂಡು, ಲೈಂಗಿಕ ಚೇಷ್ಟೆ ಮಾಡುವಾಗ ಇಬ್ಬರೂ ಪ್ರೇಮ ಪರಾಕಾಷ್ಠೆಗೇರಿದ ಮಹಾನುಭಾವರಾಗಿಯೇ ಕಂಡುಬರುತ್ತಾರೆ. ಅವರ ಕೊರತೆ ದುರ್ನಡತೆಗಳು ಆಗ ಹೊರ ಬರುವುದಿಲ್ಲ. ಆದರೆ ವಿವಾಹವಾಗಿ ಕಾಮದ ಮೊದಲ ಆಕರ್ಷಣೆ ತೊಲಗಿದೊಡನೆಯೇ ಇಬ್ಬರದೂ ಪರಸ್ಪರ ಸುಖಾಪೇಕ್ಷೆಯು ಜಾಸ್ತಿಯಾಗು ವುದು; ಆರ್ಥಿಕ, ಭೌತಿಕ ಆವಶ್ಯಕತೆಗಳು ಹೆಚ್ಚುವವು; ಲೈಂಗಿಕ, ಮಾನ ಸಿಕ ತೃಪ್ತಿ ತೊರೆಯುವುದಿಲ್ಲ. ಪರಸ್ಪರ ಕೊರತೆಗಳು ಎದ್ದು ತೋರುವವು. ಪರಿಣಾಮವಾಗಿ, ವೈವಾಹಿಕ ಧರ್ಮದಲ್ಲಿದ್ದೇ ಅನೈತಿಕತೆ ಪ್ರಾರಂಭವಾಗು ವುದು. ನಂತರದ ಫಲ—ವಿವಾಹ ವಿಚ್ಛೇದ. ಆದ್ದರಿಂದಲೇ ನಮ್ಮ ಕೆಲವು ಹುಡುಗಿಯರಿಗೆ ಮತ್ತು ಯುವಕರಿಗೆ ತಮ್ಮ ಉಡುಗೆಯ ಬಟ್ಟೆಬರೆ ಬದಲಿಸಿ ದಂತೆ ಜೀವನದ ಸಂಗಾತಿಯನ್ನೂ ಆಗಿಂದಾಗ ಬದಲಿಸಬೇಕೆಂದು ಕಾಣು ತ್ತಿರಲು ಕಾರಣ.

ಸಿಲ್ವರ್, ನನಗೆ ತಿಳಿದಿದೆ—ಲೈಂಗಿಕ ಸ್ವೇಚ್ಛಾಚಾರ ಬೇಕೆನ್ನುವ ನಿನಗೀ ಮಾತು ಸರಿದೋರಲಾರದು. ಆದರೆ ನನ್ನ ಸ್ವತಂತ್ರ ಅಭಿಪ್ರಾಯದಂತೆ ಭಾರತೀಯ ಪದ್ಧತಿಯ ಪೂರ್ವ ನಿಯೋಜಿತ ವಿವಾಹವೇ ನಿಜವಾದ ವಿವಾ ಹದ ಭದ್ರತೆಗೆ ಮತ್ತು ಅದರ ಯಥಾರ್ಥ ಪ್ರೇಮಕ್ಕೆ ತಳಪಾಯವಾಗಿದೆ.

ಕಪಟ ವ್ಯಕ್ತಿಗಳ ಪ್ರೇಮದ ನಟನೆಯಿಂದ ಪರಸ್ಪರ ಮೋಸಹೊಂದುವ ಸಂದರ್ಭವೇ ಇಲ್ಲಿರುವುದಿಲ್ಲ. ನಾನು ಕಂಡ ಎಲ್ಲಾ ಭಾರತೀಯ ಕುಟುಂಬಗಳ ವಿವಾಹವೂ ಇದೇ ತೆರನಾಗಿ ನಡೆದಿತ್ತಂತೆ. ಅವುಗಳಲ್ಲಿ ಹೆಚ್ಚಿನ ಕುಟುಂಬಗಳಲ್ಲೂ ಯಾವುದೇ ತೆರನಾದ ಕಲಹಗಳಿಲ್ಲ.

ಜಾನಕೀ ದೇವಿಯ ಉಜ್ವಲ ಜೀವನದ ಉದಾಹರಣೆಯೊಂದು ಸಾಲದೇ? ಅವಳದ್ದು ಪ್ರೇಮ ವಿವಾಹವೇ ಅಲ್ಲವಂತೆ. ಆದರೆ ಇಂದಿಗೂ ಅವಳಿಗಿರುವ ಪತಿ ಭಕ್ತಿ ಪತಿ ಪ್ರೇಮವೆಷ್ಟು ಉದಾತ್ತವಾದುದು! ಇಂದಿನ ಪ್ರೇಮ ವಿವಾಹವೆಂದು ಕರೆಯಲ್ಪಡುವ, ಕಾಮ ವಿವಾಹದಲ್ಲಿ ಇಂತಹ ಉಜ್ವಲ ಅಮರ ಪ್ರೇಮವನ್ನು–ದೈವೀಪ್ರೇಮವನ್ನು ನಿರೀಕ್ಷಿಸಲು ಸಾಧ್ಯವಿದೆಯೇ, ಹೇಳು, ಸಿಲ್ವರ್?

ಇನ್ನೊಂದು ವಿಷಯ ನೋಡು. ಸ್ತ್ರೀ ಪುರುಷರು ಒಟ್ಟಿಗೇ ಒಡನಾಡಿಕೊಂಡಿದ್ದರೆ, ಅವರ ನಡತೆ, ಶೀಲ ಕೆಡುವುದಿಲ್ಲ—ಸ್ತ್ರೀ ಪುರುಷರ ಪರಸ್ಪರ ಆಕರ್ಷಣೆ ಕಡಿಮೆಯಾಗುವುದು. ಆದ್ದರಿಂದ ಅಂತಹ ಸ್ವಾತಂತ್ರ್ಯ ನೀಡಬೇಕೆಂಬುದು ಪಾಶ್ಚಾತ್ಯ ಸಮಾಜದ ಧೋರಣೆ. ಆದರೆ ಭಾರತದಲ್ಲಿ ಪುರಾತನ ಕಾಲದಿಂದಲೂ ಇದಕ್ಕೆ ತದ್ವಿರುದ್ಧ ಸಿದ್ಧಾಂತವು ರೂಢಿಯಲ್ಲಿದೆ. ಯಾವುದರಿಂದ ಮನವು ವಿಕಾರ ಹೊಂದುವುದೋ ಅದರ ಬಳಿಯೇ ಇದ್ದಾಗ ಮನವು ಇನ್ನಷ್ಟು ವಿಕಾರ ಹೊಂದುವುದು. ಆದುದರಿಂದ ಚಿತ್ತ ಚಾಂಚಲ್ಯವನ್ನುಂಟು ಮಾಡುವ ಸನ್ನಿವೇಶಕ್ಕೆಡೆಕೊಡಬಾರದು ಎಂಬುದೇ ಭಾರತದ ಆಧ್ಯಾತ್ಮಿಕ ಮತ್ತು ಸಾಮಾಜಿಕ ನಿಯಮ. ಇದರ ತಳಹದಿಯು ಮನುವೇ ಮೊದಲಾದ ಧರ್ಮ ಶಾಸ್ತ್ರಗಾರರ ಸಿದ್ಧಾಂತದಲ್ಲಿ, ಪುರಾಣಗಳಲ್ಲಿ ಹಾಗೂ ವೇದ, ಗೀತೆ, ಉಪನಿಷತ್ತು ಮೊದಲಾದ ಗ್ರಂಥಗಳಲ್ಲಿದೆ.

ನೀನು ಏನೇ ಹೇಳು, ಸಿಲ್ವರ್. ಇದು ನೂರಕ್ಕೆ ನೂರು ಸತ್ಯ ಎಂದು ನನಗನ್ನಿಸುತ್ತಿದೆ. ಇಲ್ಲವಾದರೆ ನಮ್ಮ ದೇಶದಲ್ಲಿ ವಿದ್ಯಾರ್ಥಿ ವಿದ್ಯಾರ್ಥಿನಿಯರ ಲೈಂಗಿಕ ಸಮಸ್ಯೆಯು ಇಷ್ಟು ಭೀಕರವಾಗಿ ಬೆಳೆಯಲು ಕಾರಣವೇನು? "ಶೀಲವಂತ ಹುಡುಗಿಯರನ್ನು ನಮ್ಮ ದೇಶದಲ್ಲಿ ಆರಿಸಿಕೊಳ್ಳುವುದು ದುಸ್ಸಾಧ್ಯ" ವೆಂಬುದಾಗಿ ನಮ್ಮ ಮಿತ್ರ ಎಲ್ಲಿಸ್‌ನು ನಮ್ಮಿಬ್ಬರ ಕೂಡೆ ಜತೆಯಾಗಿ ಹೇಳಿದ್ದು ನಿನಗೆ ನೆನಪಿಲ್ಲವೇ? ಆ ದಿನ ನೀನೂ ಸೈಗುಟ್ಟಿದ್ದೆ. ಆದರೆ "ಶೀಲ ಶೀಲ ಎಂದುಕೊಂಡು ಅಷ್ಟು ತಲೆ ಬಡಕೊಳ್ಳಬೇಕೇಕೆ? ಮುಖ್ಯವಾಗಿ ಸುಖವಾಗಿರಬೇಕು" ಎಂಬುದು ನಿನ್ನ ಮತ್ತೊಂದು ಉತ್ತರವಾಗಿತ್ತು. ನಮ್ಮ ದೇಶದ

ಮಾನಸಿಕ ಚಿಕಿತ್ಸಾಲಯಗಳೂ, ಮಾನಸಿಕ ರೋಗಿಗಳೂ ಈ ಪ್ರಶ್ನೆಗೆ ಉತ್ತರ ಕೊಡುತ್ತಾರೆ. ಭಾರತದಲ್ಲಿ ನಲುವತ್ತಮೂರು ಕೋಟಿ ಜನರಿದ್ದರೂ, ಈ ದೌರ್ಬಲ್ಯದಿಂದ ಪೀಡಿತರಾದವರು ನಮ್ಮ ದೇಶದಷ್ಟು ಇಲ್ಲಿ ಕಾಣುವುದಿಲ್ಲ ಸಿಲ್ವರ್!

ಹೀಗಿದ್ದರೂ, ಈಗಿನ ಭಾರತದ ಸಾಮಾಜಿಕ ಚಿತ್ರವು ನಿಧಾನವಾಗಿ ವಿರೂಪಗೊಳ್ಳುತ್ತಿದೆ ಎಂಬುದನ್ನು ನೆನಸುವಾಗ ನಾನು ಕಣ್ಣೀರು ಸುರಿಸುವಂತಾಗುತ್ತಿದೆ. ಪೇಟೆ ಪಟ್ಟಣಗಳಲ್ಲಿ, ಅಷ್ಟೇಕೆ ಹಳ್ಳಿಗಳಲ್ಲಿ ವಾಸಿಸುತ್ತಿರುವ ಶ್ರೀಮಂತರೂ ಕೂಡಾ, ತಮ್ಮ ಬಾಲಕಿಯರಿಗೆ ಉಚ್ಚ ಶಿಕ್ಷಣ ಕೊಡಿಸಿದರೆ ತಮ್ಮ ಗೌರವವು ವೃದ್ಧಿಯಾಗುವುದೆಂಬ ಭ್ರಾಂತಿಯಿಂದ ಅದನ್ನು ಪ್ರೋತ್ಸಾಹಿಸುತ್ತಾರೆ. ತಮ್ಮ ಮಗಳಂದಿರಿಗೆ ಅದರಿಂದ ಪ್ರಯೋಜನವಿದೆಯೇ ಇಲ್ಲವೇ ಎಂಬುದನ್ನವರು ಯೋಚಿಸುವುದೇ ಇಲ್ಲ.

ಅಷ್ಟೆ ಅಲ್ಲ. ಸಿಲ್ವರ್, ಭಾರತೀಯ ಸಂಪ್ರದಾಯ, ಮತ್ತು ತತ್ವ ಶಾಸ್ತ್ರಗಳ ಹಿನ್ನೆಲೆಯಲ್ಲಿ ಅವರು ಶುದ್ಧ ಜೀವನ ಮಾಡಲು ಬೇಕಾದ ತರಬೇತಿ, ಎಚ್ಚರಿಕೆ ಒಂದನ್ನೂ ಅವರಿಗೆ ನೀಡುವುದಿಲ್ಲ. ಅದರ ಬದಲು, ಆಡಂಬರದ, ನಾಜೂಕಿನ, ಬೆಡಗು, ಬಿನ್ನಾಣದ ಜೀವನ ಮಾಡಲು ಕಲಿಸಿ ಕೊಡುತ್ತಾರೆ. ಅನೀತಿಯನ್ನೇ ಕಲಿಸಿಕೊಡುವ ಚಲಚಿತ್ರಗಳಿಗೂ ಕರಕೊಂಡು ಹೋಗಿ ಪ್ರೇಮವೆಂದೇ ಜನರು ಭ್ರಮಿಸುತ್ತಿರುವ ಕಾಮದ ರಾಜ್ಯಕ್ಕೆ ಸ್ವಚ್ಛಂದವಾಗಿ ಪ್ರವೇಶಿಸುವಂತೆ ಮಾಡುತ್ತಾರೆ. ಮನುಷ್ಯನ ಶೀಲಕ್ಕೆ ಅತಿ ಸುಲಭದ "ಇನ್ಶೂರೆನ್ಸ್" ಆಗಿರುವ ದೈವಭಕ್ತಿ ಬೆಳೆಸಲು ಪ್ರೋತ್ಸಾಹಿಸುವುದಿಲ್ಲ. ನಮ್ಮ ಪಾಶ್ಚಾತ್ಯರ ಹಿಮ್ಮಡಿಯನ್ನನುಸರಿಸಿ, ತಮ್ಮ ಹುಡುಗಿಯರೂ ಒಬ್ಬ ತರುಣ ಗೆಳೆಯ (Boy friend)ನನ್ನು ಆರಿಸಿಕೊಂಡರೆ ಪಿಟ್ಟೆನ್ನುವುದಿಲ್ಲ. ಪ್ರಾಯಶಃ ಪ್ರೇಮ ಬೆಳೆದು ಬಿಟ್ಟರೆ ಮದುವೆ ಮಾಡುವ ಸಮಸ್ಯೆ ಸುಲಭದಲ್ಲಿ ಪರಿಹಾರವಾಗುವುದು ಎಂದವರು ಭಾವಿಸುತ್ತಿದ್ದಾರೋ ಏನೋ ?

ಇದರ ಪರಿಣಾಮ ಮಾತ್ರ, ಭಾರತವಿಂದು, ಬೇರಾವ ವಿಷಯದಲ್ಲಿ ಅಲ್ಲವಾದರೂ, ಲೈಂಗಿಕ, ಹಾಗೂ ಶೃಂಗಾರ ವಿಚಾರಗಳಲ್ಲಿ ಪುಟ್ಟ ಸಂಯುಕ್ತ ಅಮೇರಿಕಾ ದೇಶವಾಗಲು ಪಣ ತೊಡಲು ಮುಂದಾಗುತ್ತಿರುವಂತೆ ಭಾಸವಾಗುತ್ತಿದೆ. ಭಾರತೀಯ ಪರಂಪರೆಯನ್ನು ಶಾಲಾ ಕಾಲೇಜುಗಳಲ್ಲಿ ಕಲಿಸಿಕೊಡುವ ಏರ್ಪಾಡುಗಳಾಗುತ್ತಿಲ್ಲ. ಇದರಿಂದ ನಿಜವಾಗಿ ನನಗೆ ನಾಚಿಕೆಯೆನಿಸುತ್ತಿದೆ, ಸಿಲ್ವರ್.

ಅಮೇರಿಕನರು, ಮತ್ತಿತರ ಪಾಶ್ಚಾತ್ಯರು ಸ್ವಚ್ಛಂದವಾಗಿ ವ್ಯವಹರಿಸಿದರೂ ಅದಕ್ಕೊಂದು ಅರ್ಥವಿದೆ. ಆದರೆ ಜಾನಕೀ ದೇವಿಯಂತಹ ಉಜ್ವಲ ರಾಷ್ಟ್ರ ತಾರೆಯರನ್ನು ಬೆಳೆಸುತ್ತಿರುವ ಭಾರತದಲ್ಲಿ ಅಂತಹ ನೀಚ ತತ್ವಕ್ಕೆ, ನಡವಳಿಕೆಗೆ ಸ್ಥಾನವೇ ಇಲ್ಲ. ಏನನ್ನುತ್ತಿ ?

ಸಿಲ್ವರ್, ನಿನ್ನ ಕುರಿತಾಗಿಯೇ ಹೇಳುವುದಿದ್ದರೂ, ನನಗೆ ಕಾಣುತ್ತಿದೆ; —ಆಧ್ಯಾತ್ಮಿಕ ಮೇಲ್ಮೆಗಳನ್ನು ಕಡೆಗಣಿಸಿ, ಶೀಲಕ್ಕೆ ಪ್ರಾಧಾನ್ಯತೆ ಕೊಡದೆ, ಸ್ತ್ರೀಯರ ಅಸಹಜ ಸಂಪರ್ಕವಿಟ್ಟುಕೊಂಡು ನೀನು ಮಾಡುತ್ತಿರುವ ವ್ಯವಹಾರಗಳಿಂದ ನೀನು ಬೇಗನೇ ಕಷ್ಟಕ್ಕೀಡಾಗಲಿದ್ದಿ ಎಂಬುದಾಗಿ. ನಾನು ವೈಯ್ಯಕ್ತಿಕವಾಗಿ ನಿನಗೆಷ್ಟು ತಿಳಿಸಿದರೂ ನೀನು ಅದಕ್ಕೆ ಮಾನ್ಯತೆ ಕೊಡಲಿಲ್ಲ. ಆದ್ದರಿಂದ ಈ ತನಕವೂ ಪತ್ರದಲ್ಲಿ ಆ ಕುರಿತಾಗಿ ತಿಳಿಸಲೇ ಇಲ್ಲ.

ಆದರೆ ನಿನ್ನ ಪ್ರೇಮದ ಶ್ರೀಮತಿಯು ಅದರಿಂದ ಒಂದಲ್ಲ ಒಂದು ದಿನ ನೊಂದುಕೊಳ್ಳುವಳು, ಖಂಡಿತ. ಅದರ ಪರಿಣಾಮವೇನಾಗಬಹುದೋ? ನಿನ್ನ ಶ್ರೀಮತಿಯು ಭಾರತದ ಜಾನಕೀ ದೇವಿಯಲ್ಲವೆಂಬುದನ್ನು ಮಾತ್ರ ನೀನು ನೆನಪಿನಲ್ಲಿಟ್ಟುಕೊಳ್ಳಬೇಕು!

ಇರಲಿ, ಮಿತ್ರಾ, ನಾನು ಬರೆದದ್ದು ಹೆಚ್ಚಾದರೆ ಕ್ಷಮಿಸಿಬಿಡು. ಈ ದಿನ ಒಬ್ಬರು ಮಿತ್ರರನ್ನು ಈಗಲೇ ಕಾಣಬೇಕಾದ ಅವಸರವಿರುವುದರಿಂದ, ಈ ಪತ್ರವನ್ನು ಇಲ್ಲಿಗೇ ಮುಗಿಸುತ್ತೇನೆ.

ಇಲ್ಲಿಯ ಸಾಮಾಜಿಕ ಸಮಸ್ಯೆಯ ಕುರಿತು ನಾನು ಇನ್ನೂ ಬರೆಯಲಿದೆ.

ನಾನು ಬೇಗನೇ ಮದ್ರಾಸಿಗೆ ತೆರಳುವವನಿದ್ದೇನೆ. ಆದ್ದರಿಂದ ಮುಂದಿನ ಪತ್ರ ಅಲ್ಲಿಂದಲೇ ನಿನಗೆ ಬರೆದರೂ ಆಶ್ಚರ್ಯವಿಲ್ಲ.

ನಿನ್ನ ಶ್ರೀಮತಿಗೆ, ಮುದ್ದು ಮಗಳು ಕೇನ್ನಿಗೆ ಮತ್ತು ಚಿಕ್ಕ ಮಗು ಎಂಡ್ರಿಗೂ ನನ್ನ ಪ್ರೇಮದ ಶುಭಾಶಯ ತಿಳಿಸುವೆಯಾ?

ಇತಿ, ನಿನ್ನ ಆಪ್ತಮಿತ್ರ,

**ಜೋನ್ ಓರ್‌ಮನ್.**

# ೨೫

ಮದ್ರಾಸು,

ಪ್ರಿಯ ಸಿಲ್ವರ್, 25–3–1962.

ನಿನ್ನ ತಾ. 15–3–'65ರ ಪತ್ರವು ನನಗೆ 18ನೇ ತಾರೀಕಿನಂದು ದೊರೆತಿತು. ಆದರೆ ತಾ.20ರಂದೇ ನಾನು ಮದ್ರಾಸಿಗೆ ಹೊರಟದ್ದರಿಂದ ಒಡನೆಯೇ ಪತ್ರ ಬರೆಯಲಾಗಲಿಲ್ಲ. ಇಲ್ಲಿಗೆ ಬಂದೂ ಈ ಕಳೆದ 3 – 4 ದಿನಗಳಲ್ಲಿ ನನ್ನ ಏರ್ಪಾಡುಗಳನ್ನು ಮಾಡಿಕೊಳ್ಳುವುದರಲ್ಲೇ ನನ್ನ ಸಮಯವೆಲ್ಲಾ ಹೋಯಿತು. ಹೀಗಾಗಿ ಇಷ್ಟು ತಡವಾಗಿ ಈಗ ಲೇಖನಿ ಹಿಡಿಯುತ್ತಿದ್ದೇನೆ.

ಕೋಲ್‌ಮನ್‌ನ ಕುರಿತಾಗಿ ನೀನು ಬರೆದ ವಿಷಯದಿಂದ ನಾನು ಅತೀವ ದುಃಖಿತನಾದೆ. ನಿನಗೆ ಅಷ್ಟು ವಿಶ್ವಾಸದ ಗೆಳೆಯನಾಗಿದ್ದ ಆತನು, ಇಂದು ನಿನ್ನ ಪತ್ನಿಯೊಡನೆ ಅತಿ ಸಂಶಯಕರವಾದ ರೀತಿಯಲ್ಲಿ ವ್ಯವಹರಿಸುತ್ತಿರುವುದು ಹಾಗು ನಿನ್ನ ಪತ್ನಿಗೂ ನಿನ್ನ ಮೇಲಿನ ಪ್ರೇಮವು ಇಳಿಮುಖವಾಗಿರುವುದು ವಿಸ್ಮಯಕರ ವಿಷಯವಾಗಿದೆ. ಆದರೆ ನಾನು ನನ್ನ ಹಿಂದಿನ ಪತ್ರದಲ್ಲಿ ಬರೆದಂತೆ, ನಿನ್ನ ಕೆಲವೊಂದು ದುರ್ನಡತೆಯೇ ಇಂತಹ ಸ್ಥಿತಿಯನ್ನು ಬರಮಾಡುತ್ತಲಿದೆ ಎಂದು ನನಗನಿಸುತ್ತಿದೆ. ನಿನ್ನ ಶ್ರೀಮತಿಯು ಜಾನಕಿದೇವಿಯಲ್ಲವೆಂಬುದನ್ನು ನೀನು ನೆನಪಿಡಬೇಕೆಂದು ನಾಸು ಆ ಪತ್ರದಲ್ಲೇ ಸೂಚಿಸಿದ್ದೇನೆ. ನೆನಪಿದೆಯಷ್ಟೆ?

ಆದರೆ ಜಾನಕೀ ದೇವಿಯ ಜೀವನಾದರ್ಶ ಕೇಳಿ, ತಿಳಿದು, ನಿನ್ನಲ್ಲಿ ಮೂಡಿದ ಶ್ರೇಷ್ಠ ಮಟ್ಟದ ಮೆಚ್ಚಿಕೆ ನನಗೆ ಬಹಳ ಸಂತೋಷವನ್ನಿತ್ತಿತು. ಆಕೆಯಂತೆಯೇ ನೀನಾದರೂ, ಸ್ವಲ್ಪ ಸಂಯಮವನ್ನು ಅಭ್ಯಾಸ ಮಾಡಿ, ಅಧ್ಯಾತ್ಮ ಸಾಧನೆಯೆಡೆಗೆ ಮುಂದೆ ಸಾಗಿದರೆ ಏಸುವು ಖಂಡಿತವಾಗಿ ನಿನ್ನನ್ನು

ರಕ್ಷಿಸುವನು ಎಂಬುದರಲ್ಲಿ ನನಗೆ ಸಂಶಯವಿಲ್ಲ. ನೀನೂ ಭಾರತಕ್ಕೆ ಬೇಗನೇ ಬರಬೇಕೆಂಬ ಆಸೆಪಟ್ಟುಕೊಂಡಿದ್ದಿ ಎಂಬ ಮಾತು ಓದಿಯಂತೂ ನನಗಾದ ಹರ್ಷ ಅಷ್ಟಿಷ್ಟಲ್ಲ. ಬಾ; ಬೇಗನೇ ಬಾ. ಸಾಧ್ಯವಾದರೆ ನಿನ್ನ ಶ್ರೀಮತಿಯನ್ನೂ ಕರೆದುಕೊಂಡೇ ಬಾ. ಅವಳ ಮನಸ್ಸು ಸದ್ವರ್ತನೆಗೆ ತಿರುಗುವಂತೆ ಮಾಡಲಾಗುವುದೋ ನೋಡೋಣ.

ನಿನ್ನ ದುಃಖದೆಡೆಯಲ್ಲಿಯೂ, ಭಾರತದ ಕುರಿತಾಗಿ ಇನ್ನೂ ಇನ್ನೂ ತಿಳಿಯಬೇಕೆಂದು ನೀನು ಬಯಸುವುದರಿಂದ ನಾನು ಹಿಂದಿನ ನನ್ನ ಪತ್ರದ ವಿಷಯವನ್ನೇ ಮುಂದರಿಸುತ್ತೇನೆ.

ಇಲ್ಲಿಯ ಸ್ತ್ರೀಯರು ತುಂಬಾ ಅಲಂಕಾರಪ್ರಿಯರು. ಸ್ವಲ್ಪವಾದರೂ ಅನುಕೂಲವಿದ್ದರೆ, ಅವರು ಬಣ್ಣಬಣ್ಣದ ಬೇರೆ ಬೇರೆ ವಿಧದ ಚಿತ್ರಗಳೋ ಆಕೃತಿಗಳೋ, ರೇಖೆಗಳೋ ಇರುವ ಸೀರೆಗಳನ್ನು (ಅಂದರೆ 48 ಇಂಚು ಅಗಲ ಸುಮಾರು 5ರಿಂದ 8 ಯಾರ್ಡು ವರೆಗೂ ಉದ್ದವಿರುವ ಬಟ್ಟೆ.) ಬಹಳ ಕಲಾತ್ಮಕವಾಗಿ ಉಟ್ಟುಕೊಂಡು ಸಾಧಾರಣವಾಗಿ ಮುಂಗೈ ತನಕವೂ ಇಳಿದು ದೇಹಕ್ಕೆ ಬಹಳ ತಾಗಿಕೊಂಡಿರುವ ರೀತಿಯ ರವಿಕೆ ಹಾಕಿಕೊಳ್ಳುತ್ತಾರೆ. ನೀನು ಸಂಯುಕ್ತ ಅಮೇರಿಕಾ ದೇಶದಲ್ಲಿ ಈ ರೀತಿಯ ಉಡುಪಿನಲ್ಲಿ ಭಾರತೀಯರಿರುವುದನ್ನು ನೋಡಿರುವೆಯೋ ಏನೋ? ಅನುಕೂಲವಿಲ್ಲದವರು ಬೇರೆ ಬೇರೆ ಬಣ್ಣದ ಸಾದಾ ಸೀರೆ ಉಡುತ್ತಾರೆ. ಇದರೊಂದಿಗಿರುವ ಚಿತ್ರಗಳನ್ನೂ ನೋಡಿ ತಿಳಿದುಕೋ.

ಈ ರವಿಕೆ ಎಂಬುದರಲ್ಲಿ ಅನೇಕ ರೀತಿಯ ಫ್ಯಾಶನುಗಳಾಗಿ ಈಗ ಈ ರೀತಿ ನಿಂತಿದೆಯೆಂಬುದಾಗಿ ನಾನು ತಿಳಿಯುತ್ತೇನೆ.

ಈ ಉಡುಪಿನಿಂದ ಸ್ತ್ರೀಯ ಮುಖ, ಕಂಠ, ಮುಂಗೈಯಿಂದ ಕೆಳಭಾಗದ ಕೈ, ಕಾಲಪಾದ ಇಷ್ಟು ಮಾತ್ರವೇ ಗೋಚರವಾಗುತ್ತವೆ ಹೊರತು ಉಳಿದ ಭಾಗಗಳು ಕಾಣುವುದಿಲ್ಲ. ಇದರಿಂದಲಾಗಿ ಸ್ತ್ರೀಯರ ಸೌಂದರ್ಯ ಎಷ್ಟು ವೃದ್ಧಿಯಾಗುವುದೆಂದು ನೀನು ನೋಡಿಯೇ ತಿಳಿಯಬೇಕು.

ಭಾರತದಲ್ಲಿ ಗಂಡಸು ದೇಹದ ಯಾವುದೇ ಭಾಗವನ್ನು ತೋರಿಬಿಟ್ಟರೂ ಅಷ್ಟು ದೊಡ್ಡ ಪ್ರಮಾದವೆನಿಸುವುದಿಲ್ಲ. ಆದರೆ ಸ್ತ್ರೀಯಾಗಿರುವವಳು ತನ್ನ ತೊಡೆಯನ್ನು ಕಾಣಿಸಿದರೂ ನಗೆಗೀಡಾಗುತ್ತಾಳೆ. ನಮ್ಮ ದೇಶದಲ್ಲಿ ಹಾಗೂ ಇತರ ಪಾಶ್ಚಾತ್ಯ ದೇಶಗಳಲ್ಲಿ ಪರಿಸ್ಥಿತಿಯು ಇದಕ್ಕೆ ತೀರ ವಿಪರೀತವಾಗಿದೆಯೆಂದು ನನ್ನ

ಅಭಿಪ್ರಾಯ. ಸ್ತ್ರೀಯು ತನ್ನ ದೇಹದ ಯಾವುದೇ ಭಾಗ ತೋರಿದರೂ ನಾವೇನೂ ಖಂಡಿಸುವುದಿಲ್ಲ. ಬದಲಿಗೆ ಆಕೆ ಬಹಳ ನಾಗರಿಕ ಸ್ತ್ರೀಯೆಂದು ಭಾವಿಸುತ್ತೇವೆ. ಗಂಡಸೊಬ್ಬನು ತನ್ನ ಕೈಕಾಲು ತೋರಿಬಿಟ್ಟರೆ ಆತನು ಪಶುಸಮಾನ ವ್ಯಕ್ತಿ ಯೆಂದು ತಿಳಿಯಲ್ಪಡುವನು.

ಭಾರತದ ಸ್ತ್ರೀಯರು ಅಲಂಕಾರ ಪ್ರಿಯರೆಂದಾಗ ಪಾಶ್ಚಾತ್ಯ ದೇಶಗಳ ಸ್ತ್ರೀಯರು ಅಲಂಕಾರಪ್ರಿಯರಲ್ಲವೇ ಎಂದು ನೀನು ಪ್ರಶ್ನಿಸಬಹುದು. ನಿಜಾ ರ್ಥದಲ್ಲಿ ಅಲ್ಲ ಎಂದೇ ನನ್ನ ಅಭಿಪ್ರಾಯ. ಚುಟುಕಿನಲ್ಲಿ ಹೇಳುವುದಿದ್ದರೆ ನಮ್ಮವರು ಲೈಂಗಿಕ ಉದ್ದೀಪನ ಪ್ರಿಯರು. ಪುರುಷರಲ್ಲಿ ಪಾಶವೀ ಲೈಂಗಿಕ ಭಾವ ಸ್ಫುರಣವಾಗಲು ಏನೆಲ್ಲಾ ಮಾಡಬೇಕೆಂದು ಅವರು ಭಾವಿಸುತ್ತಾರೋ ಅದನ್ನೆಲ್ಲಾ ಮಾಡುತ್ತಾರೆ. ತಮ್ಮ ದೇಹದ ಎಷ್ಟು ಭಾಗವನ್ನು ತೋರಲು ಸಾಧ್ಯವಾಗುವುದೋ ಅಷ್ಟನ್ನೂ ತೋರುವರು.

ಆದರೆ ಅದರಲ್ಲಿ ನಿಜವಾದ ಕಲಾತ್ಮಕತೆಯ ಅಲಂಕಾರವಿಲ್ಲ, ಸಿಲ್ವರ್. ಸ್ತ್ರೀಯು ತನ್ನೆದೆಯನ್ನು ಬಿಚ್ಚಿತೋರಿದರೆ ಅದೇನು ಸೌಂದರ್ಯ ನೀನೇ ಹೇಳು. ಕಾಡು ಜನರ ಹೆಂಗಳೆಯರೂ ಹಾಗೆಯೇ ಮಾಡುವುದಿಲ್ಲವೇ? ಸ್ತ್ರೀಯು ಲಜ್ಜೆ ಯನ್ನಿಟ್ಟುಕೊಂಡು, ತನ್ನ ಅಂಗಾಂಗಗಳನ್ನು ವಿಕ್ಟೋರಿಯಾ ರಾಣಿಯ ಕಾಲದ ಸ್ತ್ರೀಯರಂತೆ ಮುಚ್ಚಿಕೊಂಡರಲ್ಲವೇ ಸೌಂದರ್ಯವಿರುವುದು? ಕಲೆಯೇರು ವುದು? ಏನೋ ನನ್ನ ಅಭಿಪ್ರಾಯ ಹಾಗೆ.

ಭಾರತೀಯ ಮಹಿಳೆ ಸುಸಂಸ್ಕೃತವಾದ ವ್ಯಕ್ತಿಗಳ ಹೃನದಲ್ಲಿ ಸದ್ಭಾವ ದಿಂದ ಕೂಡಿದ ಮೆಚ್ಚಿಕೆ ಬೆಳೆಯುವಂತೆ ಮಾಡುತ್ತಾಳಾದರೆ, ನಮ್ಮ ಮಹಿಳೆ ಯರು ನಾಗರಿಕತೆಯ ಹೆಸರಲ್ಲಿ ಏನೋ ಎಲ್ಲಾ ಕುರೂಪದ ಪೋಷಾಕು ಗಳನ್ನು (ಅರ್ಧಪೋಷಾಕುಗಳೆನ್ನುವುದು ವಾಸಿ.) ಧರಿಸಿಕೊಂಡು ಪುರುಷರಲ್ಲಿ ಲೈಂಗಿಕ ಭಾವೋದ್ದೀಪನ ಮಾಡಿ ಸುಸಂಸ್ಕೃತರು ಹೇಸಿಕೊಳ್ಳುವಂತೆ ಮಾಡು ತ್ತಾರೆ.

ಇಲ್ಲಿಯ ಮಹಿಳೆಯರ ಮೈಯಲ್ಲಿ ಕಾಮನ ಬಿಲ್ಲಿನ ಎಲ್ಲಾ ಬಣ್ಣಗಳನ್ನೂ ಸುಲಭವಾಗಿ ನೋಡಬಹುದು. ಸೀರೆ, ರವಿಕೆಗಳಲ್ಲೇ ಅನೇಕ ಬಣ್ಣಗಳಿರು ವುದಲ್ಲದೆ, ಆಕೆಯ ತಲೆಗೂದಲು ಕಪ್ಪಿರುವುದು. ತಲೆಯಲ್ಲಿ ಮುಡಿಯಲೇ ಬೇಕಾದ ಹೂ ಅತಿ ವೈವಿಧ್ಯತೆಯಿಂದ ಕೂಡಿರುವುದು. ಕೈಚೀಲವೂ ಬೇರೆ ಬೇರೆ ಬಣ್ಣದ್ದು. ಹೀಗೆ ಭಾರತೀಯ ಮಹಿಳೆಯರ ಒಂದು ವಿಶಾಲ ಜನಸಂದಣಿ

ನೋಡಿದೆವಾದರೆ, ಅದು ಸಕಲ ಬಣ್ಣಗಳ ಒಂದು ಕೋಲಾಹಲವಾಗಿ ಕಾಣಿಸುವುದು. ಸತ್ಯ ಹೇಳುವುದಿದ್ದರೆ ಈ ಬಣ್ಣದ ಆಡಂಬರ ಅತಿಯಾಗಲಿಲ್ಲವೇ ಎಂಬ ಭಾವನೆಯೂ ಒಮ್ಮೊಮ್ಮೆ ನನಗೆ ಬರುವುದಿದೆ.

ಇದರಲ್ಲಿ ಒಂದು ದುಃಖದ ಮಾತೂ ಇದೆ. ಬೊಂಬ್ಯಾಯಂತಹ ಕೆಲವು ನಗರಗಳಲ್ಲಿ ಭಾರತೀಯ ಸ್ತ್ರೀಯರು ಇತ್ತೀಚೆಗೆ ಪಾಶ್ಚಾತ್ಯರ ಅನುಕರಣೆ ಮಾಡುತ್ತಾ ತುಟಿಗೆ ರಂಗು ಬಳಿದು, ಅರ್ಧನಗ್ನಾವಸ್ಥೆಯಲ್ಲೋ ಎಂಬಂತೆ ಸುತ್ತಾಡುವುದು ನನ್ನಲ್ಲಿ ತೀವ್ರ ಜುಗುಪ್ಸೆಯನ್ನುಂಟು ಮಾಡುವುದು. ಇಲ್ಲಿಯ ಕ್ರೈಸ್ತ ಸ್ತ್ರೀಯರಲ್ಲಿ ಬಹು ಸಂಖ್ಯಾಕರಂತೂ ಹಾಗೆಯೇ ಮಾಡುತ್ತಾರೆ.

ನಮ್ಮ ಛಳಿ ಪ್ರದೇಶದಲ್ಲಿ ನಾವು ಸ್ನಾನ ಮಾಡುವುದು 7–8 ದಿನಕ್ಕೊಮ್ಮೆಯಷ್ಟೆ! ಅದನ್ನೇ ಇಲ್ಲಿಯ ಈ ಉಷ್ಣ ಪ್ರದೇಶದ ಸ್ತ್ರೀ ಪುರುಷರೂ ಅನುಸರಿಸಿ, ಬೆವತ ವಾಸನೆ ನೀಗಾಡಿಸುವುದಕ್ಕೆ ಮುಖದ ತುಂಬಾ ಸ್ನೋ ಪೌಡರ್ ಬಳಿದುಕೊಂಡು ತಿರುಗಾಡುತ್ತಾರೆ. ನಮ್ಮ ಅನುಕರಣೆಯಿಂದ ಗೌರವ ಬರುವುದೆಂಬ ಹುಚ್ಚೇ ಇದಕ್ಕೆ ಕಾರಣ. ಭಾರತೀಯರನ್ನು ಕಂಡು ನಮಗೆ ಗೌರವ ಬರಬೇಕಿದ್ದರೆ, ಅವರ ಸಂಸ್ಕೃತಿಯ ಅತ್ಯುಚ್ಚ ಆದರ್ಶವನ್ನು ಅವರು ತೋರಿದಾಗಲೇ ಹೊರತಾಗಿ, ನಮ್ಮ ಅನುಕರಣೆ ಅವರು ಮಾಡಿದಾಗ ಮೆಚ್ಚುಗೆಯಾದರೂ ಹೇಗೆ ಬರಬೇಕು ಸಿಲ್ವರ್?

ಗೆಳೆಯಾ, ಒಂದು ವಿಷಯ ಮರೆತೇ ಬಿಟ್ಟೆ. ಇಲ್ಲಿಯ ಹೆಂಗಳೆಯರ ಚಿನ್ನ ಹಾಗೂ, ವಜ್ರ ವೈಢೂರ್ಯಗಳ ದಂಗು ಬಡಿಸುವ ಹುಚ್ಚನ್ನು ನಾನು ಚಿತ್ರಿಸದಿದ್ದರೆ ಹೆಡ್ಡನೆಂದೇ ಪರಿಗಣಿಸಲ್ಪಟ್ಟೇನು. ಇಲ್ಲಿಯ ಸ್ತ್ರೀಯರ ಮೈಯ್ಯಲ್ಲಿ ಚಿನ್ನವಿಲ್ಲದಿರುವುದೆಂದರೆ ಮಹಾ ಪಾಪವೇ ಸರಿ. ಪ್ರತಿಯೊಬ್ಬಳಿಗೂ, ಮೂಗಿಗೆ ಮೂಗುತಿ, ಕಿವಿಗೆ ಕುಂಡಲ, ಕಂಠಕ್ಕೆ ಹಾರ, ಕೈಗೆ ಬಳೆ ಇಷ್ಟು ಇರಲೇ ಬೇಕು. ಇದೂ ಅಲ್ಲದೆ ಅವರು ತಮ್ಮ ಗಂಡಂದಿರ ಕೂಡೆ ಜಗಳಾಡಿ, ಅವರು ಸಾಲ ಮಾಡಿಯಾದರೂ ಅನೇಕ ವಿಧದ ಒಡವೆಗಳನ್ನು ತಂದುಕೊಡುವಂತೆ ಮಾಡುತ್ತಾರೆ. ಮಧ್ಯಮ ವರ್ಗದವರು ಮತ್ತು ಶ್ರೀಮಂತರಂತೂ ತಮ್ಮ ಉಳಿತಾಯವನ್ನೆಲ್ಲಾ ಚಿನ್ನದ ಒಡವೆಗಳಲ್ಲಿಯೇ ವಿನಿಯೋಗಿಸುವುದಿದೆ.

ಬಡವರಾದರೂ ಏನಾದರೂ ಮಾಡಿ, ಯಾರ್‍ಯಾರ ಕೈಕಾಲು ಹಿಡಿದು, ಸಾಲ ಪಡೆದಾದರೂ ಒಡವೆ ಮಾಡಿಸಿಕೊಳ್ಳುತ್ತಾರೆ. ಕಡೆಗೆ ಭಂಗಾರದ

ಒಡವೆ ಎಷ್ಟಕ್ಕೂ ಮಾಡಿಸಲಾರದವರು ಬೆಳ್ಳಿಯ ಒಡವೆ ಮಾಡಿಸುತ್ತಾರೆ. ಅದೂ ಆಗದವರು ಗಿಲೀಟಿನದು, ಅಥವಾ ಹಿತ್ತಾಳಿಯದನ್ನು ಕೊಂಡುಕೊಳ್ಳುತ್ತಾರೆ. ಕೈ ಬಳೆಯಂತೂ ಗಾಜಿನದ್ದು ಬೇಕೇ ಬೇಕು.

ಭಾರತೀಯ ಮಹಿಳೆಯ ಜಗತ್ತು ಮಾತ್ರ ಬಹಳ ಚಿಕ್ಕದು. ಆ ಜಗತ್ತಿನಲ್ಲಿರುವವರೆಂದರೆ ಪತಿ, ಮಕ್ಕಳು, ಬಂಧು ಬಾಂಧವರು, ಆಪ್ತೇಷ್ಟರು, ನೆರೆ ಕರೆಯವರು ಮತ್ತು ಪರಿಚಯದವರು, ಇಷ್ಟೆ. ಉಳಿದವರಿಗೆ ಅಷ್ಟೇಕೆ ದೇಶಕ್ಕೂ, ಪ್ರಪಂಚಕ್ಕೂ, ಅಲ್ಲೇನೂ ಸ್ಥಾನವಿಲ್ಲ. ಆಕೆ ಸದಾ ತನ್ನ ಮನೆ, ತನ್ನ ಪತಿ ಮತ್ತು ಮಕ್ಕಳು, ತನ್ನ ಊಟ, ಉಡಿಗೆ ತೊಡಿಗೆಗಳು ಮೊದಲಾದ ವಿಷಯಗಳಲ್ಲೇ ನಿರತಳಾಗಿರುತ್ತಾಳೆ ಹೊರತಾಗಿ ರಾಷ್ಟ್ರೀಯ ಪ್ರಾಮುಖ್ಯತೆಯ ವಿಷಯಗಳನ್ನು ತಲೆಗೆ ಹಚ್ಚಿಕೊಳ್ಳುವುದಿಲ್ಲ. ಬೆಳಗಿನ ಉಪಹಾರಕ್ಕೇನು ಎಂಬ ಯೋಚನೆ ಬೆಳಗಾದರೆ ಮೊದಲಾಗುವುದು. (ಅಥವಾ ಮುಂಚಿನ ದಿನವೇ ಈ ಕುರಿತಾದ ಯೋಜನೆ ನಿಶ್ಚಯವಾಗಿರಬಹುದು.) ಉಪಹಾರ ತೀರಿತೆಂದರೆ ಮಧ್ಯಾಹ್ನ ಊಟದ ಯೋಚನೆ. ಅದೂ ಮುಗಿಯಿತೆಂದರೆ ರಾತ್ರಿಯ ಭೋಜನದ ಕುರಿತಾದ ಚಿಂತೆ. ಒಂದು ಮಗು ಅಳುವ ಕುರಿತು ವ್ಯಾಕುಲತೆ ಇನ್ನೊಂದು ಮಗುವಿಗೆ ಗಜ್ಜಿ; ಮತ್ತೊಂದಕ್ಕೆ ಜ್ವರ; ಉಳಿದ ಮಕ್ಕಳ ಜಗಳ ಪರಿಹಾರ—ಹೀಗೆಯೇ ಸಾಗುತ್ತದೆ ಅವಳ ಜೀವನ. ಹೆಚ್ಚಿನ ಸ್ತ್ರೀಯರೂ ವೃತ್ತ ಪತ್ರಿಕೆ ಓದುವುದಿಲ್ಲ. ಯಾವುದೇ ವೈಜ್ಞಾನಿಕ ವ ರಾಜಕೀಯ ಪುಸ್ತಕಗಳನ್ನೂ ನಮ್ಮ ಮಹಿಳೆಯರಂತೆ ಅವರು ಓದುವುದಿಲ್ಲ.

ಎರಡು ಯಾ ಜಾಸ್ತಿ ಇಲ್ಲಿಯ ಸ್ತ್ರೀಯರು ಒಟ್ಟು ಸೇರಿದರೆಂದರೆ ಅವರಲ್ಲಿ ಬರುವ ಗಹನವಾದ ವಿಷಯಗಳೆಂದರೆ ಮನೆಯಲ್ಲಿ ಮಾಡಿದ ಪದಾರ್ಥ, ಅವರವರ ಮತ್ತು ಪೈಕಿಯವರ ಚಿನ್ನ, ಸೀರೆ ವ ಇತರ ಅಲಂಕಾರಗಳ ವಿಷಯ; ಅಲ್ಲದೆ ನೆರೆಕರೆಯವರ ಕುರಿತಾದ ಅವಹೇಳನದ, ಮತ್ಸರದ ಮಾತುಗಳು. ದೇಶಕ್ಕೆ ಯಾವ ಗಂಡಾಂತರ ಬಂದರೂ, ಯಾವ ಅವ್ಯವಸ್ಥೆ ಆದರೂ, ಅವರ ವಿಮರ್ಶೆಯಲ್ಲಿ ಆ ಪ್ರಸ್ತಾಪ ಬರುವಂತಿಲ್ಲ.

ಭಾರತದ ಬಹು ಸಂಖ್ಯಾಕ ಸ್ತ್ರೀಯರಿಗೆ, ಕರವಸ್ತ್ರದ ಅವಶ್ಯಕತೆಯೇ ಇರುವುದಿಲ್ಲ. ಅವರು ಅಡಿಗೆ ಮಾಡುವ ಮಸಿಯನ್ನಾದರೂ ಅವರ ಸೀರೆಯಲ್ಲೇ ಉಜ್ಜುತ್ತಾರೆ. ಬೆವರುಜ್ಜುವುದೂ ಅದೇ ಸೆರಗಿನಲ್ಲೇ, ಸಿಂಬಳ ತೆಗೆಯುವುದೂ

ಆ ಸೀರೆಯ ತುದಿಯಲ್ಲೇ. ಇನ್ನು ಬಡವರಾದರಂತೂ ಕೇಳುವುದೇ ಬೇಡ. ಅನೇಕರಿಗೆ ಒಂದೇ ಬಟ್ಟೆ ಇರುವುದಿದೆ. ಆಗ ಅದನ್ನು ತೊಳೆಯುವುದಾದರೂ ಹೇಗೆ? ಸೀರೆಯ ಅರ್ಧ ಭಾಗ ಮೈಯಲ್ಲಿಟ್ಟು ಉಳಿದರ್ಧವನ್ನು ನೀರಿನಲ್ಲಿ ತೊಳೆಯುತ್ತಾರೆ. (ಸಾಬೂನು ಉಪಯೋಗಿಸುವವರೇ ಬಹಳ ಕಡಿಮೆ.)

ಅವರ ಸಾಮೂಹಿಕ ನೈರ್ಮಲ್ಯ ದೃಷ್ಟಿಯೂ ನಮ್ಮ ದೇಶಕ್ಕೆ ಹೋಲಿಸಿದರೆ ಅಯ್ಯೋ ಎನಿಸುವಂಥದು. ಪೇಟೆ ಪಟ್ಟಣಗಳಲ್ಲಾದರೆ, ಉಂಡ ಎಲೆ, (ಇಲ್ಲಿ ಬಾಳೆ ಮರದ ಉದ್ದ ಎಲೆಗಳನ್ನು ಕ್ಕೊಯ್ದು ಅದರಲ್ಲಿ ಊಟ ಮಾಡುತ್ತಾರೆ) ಅಥವಾ ಇತರ ಕಸ ಕೊಳೆಗಳನ್ನು ಬಿಸಾಡುವ ಅತಿ ಉತ್ತಮ ಸ್ಥಳವೆಂದರೆ ಬೀದಿ—ಅಲ್ಲಿ ನಮಗೆ ಭಾರತದ ಇಂದಿನ ಸಮಾಜದ ವಿಶ್ವರೂಪವೇ ಕಾಣಸಿಗುವುದು. ಮನೆಯಲ್ಲಿ ಗಾಜು ಒಡೆದರೆ ಬಿಸಾಡುವುದು ಬೀದಿಗೆ. ಮಕ್ಕಳಿಗೆ ಮಲಮೂತ್ರಶೋಧನೆಯಾಗಬೇಕಿದ್ದರೆ ತೋರಿಸುವುದು ಬೀದಿಯನ್ನು. ಅಥವಾ ಮನೆಯೊಳಗೆ ಮಲ ಮೂತ್ರ ಮಾಡಿದರೂ ಅದನ್ನು ಬಿಸಾಡುವುದು ಬೀದಿಗೆ.

ಹೀಗೆ ಭಾರತದ ಬೀದಿಗಳೆಂದರೆ, (ಪಟ್ಟಣಗಳ ಕೆಲವು ಪ್ರಮುಖ ಬೀದಿಗಳನ್ನುಳಿದು) ಮೂಗಿಗೆ ಕೈ ಹಿಡಿದು, ಕಣ್ಣು ಮುಚ್ಚಿ, ಕಾಲಿಗೆ ಕಬ್ಬಿಣದ ಬೂಟ್ಸು ಧರಿಸಿ (ಗಾಜಿನ ಚೂರು ತಾಗದಿರಬೇಕಿದ್ದರೆ)ಕೊಂಡು ನಡೆಯಬೇಕಾದ ಅಸ್ವಚ್ಛತಾ ಕೂಪಗಳು.

ಇಲ್ಲಿಯ ಬಡತನದಿಂದಲೇ ಆಗಿರಬೇಕು–ಇಲ್ಲಿ ಸಾರ್ವಜನಿಕ ಶೌಚಗೃಹಗಳನ್ನು ಕಾಣುವುದು ಬಹಳ ಅಪರೂಪವಾಗಿದೆ. ಒಂದು ವೇಳೆ ಅಲ್ಲಿ ಇಲ್ಲಿ ಒಂದೆರಡು ಇದ್ದರೂ, ಅದು ನಿಶ್ಚಯವಾಗಿಯೂ ಅಶೌಚಗೃಹವಾಗಿಯೇ ಇರುವುದು. ಅಂಥ ಕಕ್ಕಸಗಳ ಪ್ರವೇಶ ದ್ವಾರಗಳಲ್ಲೇ ಮಲದ ದರ್ಶನವಾಗುವುದು ಮೊದಲ ಚಿಹ್ನೆ. ನಂತರ ಅಲ್ಲಲ್ಲಿ ಕೊಳೆತು ಕೊಚ್ಚೆಯಾಗಿರುವ ಮೂತ್ರರಾಶಿ. ಅದನ್ನೆಲ್ಲಾ ತೊಳೆಯುವವರೂ ಇಲ್ಲ. ಕಕ್ಕಸಗಳು ಹೀಗಿದ್ದರೆ ನಾಗರಿಕರು ರಸ್ತೆಯನ್ನೇ ಶೌಚಗೃಹವಾಗಿ ಉಪಯೋಗಿಸಿದರೆ ತಡೆಯುವುದಾದರೂ ಹೇಗೆ?

ಅಂತೂ ರಸ್ತೆಯ ಅಕ್ಕ ಪಕ್ಕಗಳಲ್ಲೂ ಈ ಕೊಳಕೇ ನಮ್ಮ ಕಣ್ಣಿಗೆ ಬೀಳುವುದು. ಇಲ್ಲಿಯ ಅತಿ ಕರ್ತವ್ಯನಿಷ್ಠ ಭಂಗಿಗಳೆಂದರೆ ಕಾಗೆಗಳು ಮತ್ತು ನಾಯಿಗಳು. ಆ ಎರಡು ಪ್ರಾಣಿಗಳು ಅಲ್ಲವಾದರೆ ಭಾರತೀಯ ಪಟ್ಟಣಗಳ ಅವಸ್ಥೆಯೇನಾಗುತ್ತಿತ್ತೋ?

ಇಲ್ಲಿಯ ಸ್ಥಿತಿಗತಿ ಹೀಗಿದ್ದರೂ, ಇಲ್ಲಿಯ ಪ್ರಮುಖರಾಗಲೀ, ನಾಗರಿಕರಾಗಲೀ, ಈ ಕುರಿತಾಗಿ ಏನೂ ವ್ಯಥೆಯಲ್ಲಿ ಇಲ್ಲವೇ ಇಲ್ಲ. ಅದೆಲ್ಲಾ ಸಹಜವೆಂಬ ಭಾವದಲ್ಲೇ ಅವರಿರುತ್ತಾರೆ.

ಇದಕ್ಕೆಲ್ಲಾ ಕಾರಣ ಸಾರ್ವಜನಿಕ ಶೌಚ ಗೃಹಗಳ ಕೊರತೆಯು ಒಂದಾದರೆ, ಮನೆಯಲ್ಲಿ ಸ್ತ್ರೀಯರು ತಮ್ಮ ಮಕ್ಕಳಿಗೆ, ನೈರ್ಮಲ್ಯ ಮತ್ತು ರಾಷ್ಟ್ರೀಯ ಶಿಸ್ತಿನ ಕುರಿತಾದ ತರಬೇತಿ ಕೊಡದಿರುವುದು ಇನ್ನೊಂದು ಕಾರಣವಾಗಿದೆ. ಅದೇ ಮಕ್ಕಳು ದೊಡ್ಡವರಾದಾಗ ಅದೇ ಮನೋಭಾವನೆಯಲ್ಲೇ ಬೆಳೆಯುತ್ತಾರೆ.

ನಮ್ಮ ದೇಶದ ಸಾರ್ವಜನಿಕ ನೈರ್ಮಲ್ಯದ ಸ್ಥಿತಿಗೆ ಇದನ್ನು ಹೋಲಿಸಿದಾಗ ಇದನ್ನು ಏನೆಂದು ಕರೆಯಬೇಕೆಂದು ನನಗೆ ತಿಳಿಯುವುದಿಲ್ಲ. ಹೀಗೆ ಅಸ್ವಚ್ಛತೆ ಮಾಡಬಾರದೆಂಬುದು ಇಲ್ಲಿಯ ವಿದ್ಯಾವಂತರಿಗೆ ಕೂಡಾ ತಿಳಿಯುವುದಿಲ್ಲ—ಮಾತ್ರವಲ್ಲ ಇತರರು, ಅಂತಹ ಸುಧಾರಣೆಗೆ ಯತ್ನಿಸಿದರೆ ಓಡಿಸಿಬಿಡುತ್ತಾರೆ.

ಮೊನ್ನೆ ಇಲ್ಲಿ ಮದ್ರಾಸು ನಗರದಲ್ಲಿ ಹಾಗೆಯೇ ಆಯಿತು. ಬಳಿಯ ಅಂದರೆ ಸುಮಾರು 50 ಮೈಲು ದೂರದ ಆರ್ಕೋಣಂ ಎಂಬ ಸಣ್ಣ ಪೇಟೆಯಿಂದ ಹೈಸ್ಕೂಲು ವಿದ್ಯಾರ್ಥಿಗಳು ಮತ್ತು ಸಮಾಜ ಸೇವಕರ ಸಾಧಾರಣ 40 ಜನರ ಬಳಗವೊಂದು ಮದ್ರಾಸಿಗೆ ಬಂತು. ಮದ್ರಾಸಿನಲ್ಲಿ ವಿವಿಧ ತೆರನಾದ ವಸ್ತುಗಳಿಗೂ ಹಾಗೆಯೇ ಅತಿ ನಿಕೃಷ್ಟ ರೀತಿಯ ಕೊಳಕಿಗೂ ಹೆಸರಾದ ಕೊತವಾಲ್ ಮಾರ್ಕೆಟನ್ನು ನಾನು ಸಂದರ್ಶಿಸಲು ಹೋದೆ. ಅದೇ ದಿನ ಆ ಸಮಾಜಸೇವಕ ಬಳಗವೂ ಬಂದಿತ್ತು. ಅವರು ಆ ಮಾರ್ಕೆಟ್ಟಿನ ಬಳಿಯ ಬೀದಿಯನ್ನೆಲ್ಲಾ ಶುಚಿಮಾಡಿ, ಅಲ್ಲಿಯ ಜನರಿಗೆ ಶುಚಿತ್ವದ ತರಬೇತಿ ಕೊಡುವ ಉದ್ದೇಶವನ್ನಿಟ್ಟುಕೊಂಡಿದ್ದರು. ಒಬ್ಬ ತರುಣ ಮುಂದಾಳುವಿನ ನೇತೃತ್ವದಲ್ಲಿ ಅವರು ಬಹಳ ನಗುಮೊಗದಿಂದಲೂ ಉತ್ಸಾಹದಿಂದಲೂ ಕಾರ್ಯವೆಸಗುತ್ತಿದ್ದರು. ನನಗೆ ಅವರನ್ನೇ ನೋಡುತ್ತಾ ನಿಂತಿರೋಣ ಎನ್ನಿಸಿತು. ದಿನವಿಡೀ ಅವರು ದುಡಿದರೂ ಕೊತವಾಲ್ ಮಾರ್ಕೆಟ್ ಬಳಿಯ ನಾಗರಿಕರಾಗಲೀ, ವ್ಯಾಪಾರಿಗಳಾಗಲೀ, ಈ ಕಾರ್ಯವನ್ನು ಏನೋ ಸಂಶಯ ದೃಷ್ಟಿಯಿಂದಲೇ ನೋಡುತ್ತಿದ್ದರಲ್ಲದೆ ಏನೂ ಸಂತೋಷ ಪಟ್ಟಂತೆ ಕಾಣಲಿಲ್ಲ. ಸಹಕರಿಸುವ ಲಕ್ಷಣವಂತೂ ಲವಲೇಶವೂ ಕಾಣುತ್ತಿರಲಿಲ್ಲ.

ಒಬ್ಬ ಇಂಗ್ಲಿಷ್ ಬಲ್ಲ ಅಂಗಡಿಯವನ ಅಭಿಪ್ರಾಯ ತಿಳಿಯುವ ಬಗ್ಗಾಗಿ "ಅವರೇನು ಮಾಡುತ್ತಿದ್ದಾರೆ?" ಎಂದು ಕೇಳಿದೆ. ಅದಕ್ಕಾತನು ಸಿಡುಕಿಕೊಂಡು "ಅವರಿಗೆ ಮತ್ತೇನು ಕೆಲಸ? ತಿಂದದ್ದು ಸೊಕ್ಕಿದೆ" ಎಂದುಬಿಟ್ಟ. ಇತರರಿಗೆ ಕೇಡು ಬಗೆಯುವ ಕಾರ್ಯ ಮಾಡಿದವರ ಮೇಲೆ ಎಸೆಯುವ ಈ ಭೂ ಬಾಣ ಇಲ್ಲೇಕೆ ಬಂತು ಎಂಬುದಾಗಿ ತಿಳಿಯಲಿಲ್ಲ. "ಯಾಕೆ ಹಾಗನ್ನುತ್ತೀರಿ? ಅದು ಒಳ್ಳೆಯ ಕಾರ್ಯವಲ್ಲವೇ?" ಎಂದು ಪುನಃ ಪ್ರಶ್ನಿಸಿದೆ. ಅದಕ್ಕಾತ "ಏನು ಒಳ್ಳೆಯ ಕೆಲಸ ರಾಯರೇ? ನಿಮಗೆಲ್ಲಾ ಹೊರ ದೇಶದವರಿಗೆ ಅರ್ಥವಾಗುವುದಿಲ್ಲ. ಇದೆಲ್ಲಾ ಹೆಸರಿಗೆ ಬೇಕಾಗಿ ಮಾಡುವ ಕೆಲಸ. ಇವರ ಮನೆಯನ್ನಿವರು ಶುಚಿ ಮಾಡಿ ಮುಗಿಯಿತೇ?" ಎಂದು ಬಿಟ್ಟ. "ಆ ವಿಚಾರ ಬೇರೆ. ಮಾಡುವ ಕಾರ್ಯದಿಂದ ಹಾನಿಯೇನು?" ಎಂದು ನಾನು ಬಿಡದೆ ಸವಾಲು ಹಾಕಿದೆ. ಅದಕ್ಕೆ "ಈ ಹಳ್ಳಿಯ ಮಕ್ಕಳನ್ನು ಇಲ್ಲಿ ತಂದು ದಣಿಸುವುದು ಹಾನಿಯಲ್ಲದೆ ಮತ್ತೇನು? ಕೊತವಾಲ್ ಮಾರ್ಕೆಟು ಎಂದಾದರೂ ಸ್ವಚ್ಛವಾಗಲಿದೆಯೇ? ನನ್ನ ಅಜ್ಜನ ಕಾಲದಲ್ಲೂ ಅದು ಹೀಗೇ ಇತ್ತು. ಈಗಲೂ ಇದೆ. ಅದು ಮುಂದೆಯೂ ಹೀಗೆಯೇ ಇರುವುದು. ಅದನ್ನು ಬದಲಿಸಲು ಬ್ರಹ್ಮನಿಂದಲೂ ಸಾಧ್ಯವಿಲ್ಲ" ಎಂದು ಸಾರಿಬಿಟ್ಟನಾತ.

ಇಷ್ಟರಲ್ಲಿ ನನ್ನ ಲಕ್ಷ್ಯವೆಲ್ಲ ನನ್ನ ಮುಂದಿನ ದೊಡ್ಡ ಗುಲ್ಲಿನ ಕಡೆಗೆ ಹರಿಯಿತು. ಸುಮಾರು ಐವತ್ತು ಜನ ಕಾಲೇಜು ವಿದ್ಯಾರ್ಥಿಗಳ ದೊಡ್ಡ ಗುಂಪೊಂದು ರಂಪಾಟ ಮಾಡುತ್ತಾ ಬರುತ್ತಿತ್ತು. ಯಾವ ಜವಾಬ್ದಾರಿಯೂ ಇಲ್ಲದೆ ಏಳೆಂಟು ವರ್ಷ ಪ್ರಾಯದ ಮಕ್ಕಳಿಗಿಂತಲೂ ನಿಕೃಷ್ಟವಾಗಿ ವರ್ತಿಸುತ್ತಾ ಬರುತ್ತಿದ್ದರು. ಒಬ್ಬೊಬ್ಬರ ಕೈಯ್ಯಲ್ಲಿ ನಾಲ್ಕೋ, ಐದೋ, ಆರೋ ಕಿತ್ತಳೆ ಹಣ್ಣಿತ್ತು. ಅದನ್ನವರು ನಡೆಯುತ್ತಲೇ ತಿನ್ನುತ್ತಾ ಅದರ ಸಿಪ್ಪೆಯನ್ನು ಅವರ ಜತೆಯವರ ಮೇಲಿಗೋ, ರಸ್ತೆಯ ನಡುವಿಗೋ ಬಿಸಾಡುತ್ತಾ ಮುಂದೆ ಸಾಗುತ್ತಿದ್ದರು.

ಆಗ ಆ ಸಮಾಜ ಸೇವಕರ ಬಳಗದ ಕೆಲವರು ಬಂದು ಬಹಳ ವಿನಯದಿಂದ "ಸಿಪ್ಪೆಯನ್ನು ದಯವಿಟ್ಟು ಇಲ್ಲೇ ಬಳಿಯಿರುವ ಕಸದ ಡಬ್ಬಿಗಳಲ್ಲಿ ಹಾಕುವ ಕೃಪೆ ಮಾಡುತ್ತೀರಾ? ಈ ಬೀದಿಯ ನಿವಾಸಿಗಳು ನೈರ್ಮಲ್ಯದಿಂದಿರುವಂತೆ ಮಾಡೋಣ" ಎಂಬುದಾಗಿ ಕೇಳಿದರು. ಆಗ ಕಾಲೇಜು ವಿದ್ಯಾರ್ಥಿಗಳೆಲ್ಲಾ ಗಹಗಹಿಸಿ ನಕ್ಕು, ಆ ಸಮಾಜ ಸೇವಕರನ್ನು ಗೇಲಿ ಮಾಡುತ್ತಾ

ಮತ್ತಷ್ಟು ಅದೇ ರೀತಿ ಮಾಡತೊಡಗಿದರು. ಆಗ ಸಮಾಜ ಸೇವಕರ ಯುವಕ ಮುಖಂಡನು ಅವರ ಬಳಿ ಸಾರಿ "ನೀವು ಭಾರತದ ವಿದ್ಯಾವಂತ ಪ್ರಜೆಗಳಾಗಿ ಹೀಗೆ ಮಾಡಬಾರದು" ಎಂದು ವಿಧವಿಧವಾಗಿ ಕೇಳಿಕೊಂಡನು.

ಆದರೆ ಅವರ ಉತ್ತರ ಬೇರೆಯೇ. ಅವರ ಪೈಕಿ ಬಹಳ ಉನ್ಮತ್ತರಾದ ಒಬ್ಬಿಬ್ಬರು ಬೀದಿಯ ಪಕ್ಕದಲ್ಲಿ, ಆ ಸಮಾಜ ಸೇವಕರು ದಿನವಿಡೀ ದುಡಿದು, ರಾಶಿ ಹಾಕಿದ ಕಸದ ತಿಪ್ಪೆಯನ್ನೆಲ್ಲಾ ತೆಗೆದು ಬಹಳ ಸತ್ಕಾರ್ಯ ಮಾಡಿದರೆಂಬ ಪೌರುಷದಿಂದ ಸಿಕ್ಕಸಿಕ್ಕಲ್ಲಿಗೆ ಬಿಸುಡ ತೊಡಗಿದರು. ಆಗ ಉಳಿದ ಕಾಲೇಜು ವಿದ್ಯಾರ್ಥಿಗಳೂ ಅದನ್ನೇ ಅನುಸರಿಸಿ ಕೋಲಾಹಲವಾಯಿತು. ಅವರು ಹುಚ್ಚರಂತೆ, ಅತ್ತಿತ್ತ ಓಡಾಡುತ್ತಾ ಅಲ್ಲೇ ಇದ್ದ ಬುಟ್ಟಿಗಳಲ್ಲಿ ಕಸತುಂಬಿ ರಸ್ತೆಯಲ್ಲೆಲ್ಲಾ ಹರಡ ತೊಡಗಿದರು. ಕೆಲವರು ಆ ಸಮಾಜ ಸೇವಕರ ಮೇಲಿಗೂ ಬಿಸುಡಲು ಹೇಸಲಿಲ್ಲ.

ಇದನ್ನೆಲ್ಲಾ ನೋಡಿದ ಸಮಾಜ ಸೇವಕ ಮುಖಂಡನು ಕೋಪದಿಂದ ಸಂತಪ್ತನಾಗಿದ್ದರೂ, ಎಲ್ಲವನ್ನೂ ತಡೆಹಿಡಿದು ಶಾಂತಿ ಮತ್ತು ಪ್ರೇಮಗಳಿಂದ ನಿಂತಲ್ಲೇ ಕದಲದೆ ನಿಲ್ಲುವಂತೆ ತನ್ನ ಅನುಯಾಯಿಗಳಿಗೆ ಆಜ್ಞೆಯಿತ್ತು ಬಿಟ್ಟ. ಆ ಪಟ್ಟಣದ ಕಾಲೇಜು ವಿದ್ಯಾರ್ಥಿಗಳ ಅನಾಚಾರಕ್ಕೆ ಎಷ್ಟು ಚಂದವಾದ ಪ್ರತಿಸ್ಪರ್ದಿಗಳಾಗಿದ್ದರು ಆ ಹಳ್ಳಿಯ ಹೈಸ್ಕೂಲಿನ ವಿದ್ಯಾರ್ಥಿಗಳು ಮತ್ತು ಆ ಹಳ್ಳಿಯ ಸಮಾಜ ಸೇವಕರು!

ಹೀಗೆ ಅವರು ಸುಮ್ಮನೆ ನಿಂತಮೇಲೆ ಆ ಕಾಲೇಜು ವಿದ್ಯಾರ್ಥಿಗಳ ಬಳಗವು ಬಹಳ ಸಾರ್ಥಕತೆಯ ಭಾವದಿಂದ ಸುಂಟರ ಗಾಳಿಯಂತೆ ಹೊರಟು ಹೋಯಿತು. ಇಷ್ಟೆಲ್ಲ ನಡೆಯುವಾಗಲೂ ಬೀದಿಯ ನಿವಾಸಿಗಳಾಗಲೀ, ವ್ಯಾಪಾರಿಗಳಾಗಲೀ, ಮುಂದೆ ಬಂದು ತಡೆಯಲಿಲ್ಲ. ಕೆಲವರು ಗಹಗಹಿಸಿ ನಗುತ್ತಿದ್ದರು. ಇನ್ನು ಕೆಲವರು ಪ್ರೇಕ್ಷಕರಾಗಿ ನೋಡುತ್ತಿದ್ದರು.

ಎಲ್ಲ ಕಳೆದ ನಂತರ ಆ ಬಡ ಸಮಾಜ ಸೇವಕರು ಮಧ್ಯರಾತ್ರಿ ತನಕವೂ ಶ್ರಮಿಸಿ ಅವರ ಕಾರ್ಯ ಪೂರೈಸಿದರು. ನಾನೂ ಕನಿಕರದಿಂದ ಅವರೊಂದಿಗೆ ಸೇರಿ ದುಡಿದೇ ಬಿಟ್ಟೆ. ಅವರೆಲ್ಲ ನನ್ನ ಆತ್ಮೀಯ ಮಿತ್ರರಾಗಿ ಬಿಟ್ಟರು. ಈ ನಾಚಿಕೆಗೇಡಿನ ಘಟನೆ ನೋಡಿ, ಭಾರತವು ಹಿಂದೆ ಸುಮ್ಮನೆ ಪಾರತಂತ್ರ್ಯಕ್ಕೆ ಬಲಿ ಬೀಳಲಿಲ್ಲ ಎಂದು ನನಗನಿಸಿತು. ಭಾರತದ ವಿಶ್ವ ವಿದ್ಯಾಲಯಗಳಿಂದ ಆಶ್ರಯ ಪಡೆಯುವ ಭಾರತೀಯ ಕಾಲೇಜುಗಳಲ್ಲಿ ಕಲಿಯುವ

ಈ ಯುವಕರಿಗೆ ಸಿಗುವ ತರಬೇತಿ ಇದುವೇ ಏನು? ಹೀಗಾದರೆ ಮುಂದೆ ಭಾರತದ ಅವಸ್ಥೆಯೇನಾದೀತು ಎಂದುಕೊಂಡು ಪುನಃ ನನ್ನನ್ನು ಶೋಕವಾವರಿಸಿತು. "ತ್ಯಾಗವೆಸಗುತ್ತೇವೆ; ಸೇವೆ ಮಾಡುತ್ತೇವೆ; ನಿಮಗಾಗಿ ದುಡಿಯುತ್ತೇವೆ" ಎಂದುಕೊಂಡು ಕೆಲ ಜನರು ಮುಂದೆ ಬರುವಾಗಲೂ, ಅವರಿಗೆ ಸಹಕಾರ ನೀಡಿ ಪ್ರೋತ್ಸಾಹ ನೀಡುವ ಮಾತಂತಿರಲಿ! ಅವರನ್ನು ಗೇಲಿ ಮಾಡಿ ಹೊಡೆದಟ್ಟುವ ಈ ಭಾರತೀಯ ಮನೋಭಾವವೇನು? ಎಂದು ತಿಳಿಯದೆ ನಾನು ಕಂಗಾಲಾಗಿಬಿಟ್ಟೆ. ನಮ್ಮ ಅಮೇರಿಕದಲ್ಲಾಗಿದ್ದರೆ ಅಂತಹ ಸೇವೆಯೆಸಗುವ ತಂಡಕ್ಕೆ ಹೂಮಾಲೆಯಿಕ್ಕಿ, ಧನ ಸಹಾಯವಿತ್ತು ಗೌರವಿಸುತ್ತಿದ್ದರು.

ತೀವ್ರವಾದ, ಯುಗ ಯುಗಾಂತರಗಳ ಬಡತನದಿಂದ, ಭಾರತೀಯರು, ಸೌಂದರ್ಯಕ್ಕೂ, ಕುರೂಪಕ್ಕೂ ಇರುವ ವ್ಯತ್ಯಾಸ ಹಾಗೂ, ಶುಚಿಗೂ, ಅಶುಚಿಗೂ ಇರುವ ಭೇದವನ್ನು ಮರೆತು ಬಿಟ್ಟಿದ್ದಾರೆ. ಆದ್ದರಿಂದ ಅಶುಚಿಯ ವಾತಾವರಣದಲ್ಲೇ ಇರುವುದು ಅವರಿಗೆ ಒಗ್ಗಿ ಹೋಗಿರಬೇಕು. ಅದನ್ನು ಸುಧಾರಿಸಲು ಬರುವವರೆಲ್ಲ ಬಹುಶಃ ಅಪರ ರಾಜ್ಯಕ್ಕೆ ಧಾಳಿ ಮಾಡುವ ಆಕ್ರಮಣಗಾರರೆನ್ನುವ ಭಾವನೆ ಅವರದ್ದು. ಅಂತೂ, ಸಿಲ್ವರ್, ಆ ರಾತ್ರೆಯಿಡೀ ನನಗೆ ನಿದ್ದೆಯೇ ಬೀಳಲಿಲ್ಲ.

ಭವ್ಯವಾದ ಭಾರತೀಯ ಪರಂಪರೆ, ತತ್ವ ಮತ್ತು ಉತ್ತಮ ಸಮಾಜ ಜೀವನದ ಅಡಿಗಲ್ಲುಗಳೊಂದು ಕಡೆ! ಅತಿ ನಿಕೃಷ್ಟ ರೀತಿಯ ವೈಯ್ಯಕ್ತಿಕ ಮತ್ತು ಸಾಮೂಹಿಕ ವರ್ತನೆಯೊಂದು ಕಡೆ–ಇದಕ್ಕೆಲ್ಲಾ ತಾಳ ಮೇಳ ತಿಳಿಯದೆ ಯೋಚಿಸಿ ಯೋಚಿಸಿ ಸೋತು ಸುಣ್ಣವಾದೆ.

ಮುಂದೆಯಾದರೂ ಇಂತಹ ಸಾಮೂಹಿಕ ದುಸ್ಥಿತಿಯನ್ನು ಇಲ್ಲಿ ಹೇಗೆ ನಿವಾರಿಸಬಹುದೆಂಬುದು ನನಗೆ ತಿಳಿಯದ ವಿಷಯವಾಗಿದೆ. ಇಲ್ಲಿಯ ಮುಖಂಡರಿಗಂತೂ ಅದು ಮೊದಲೇ ತಿಳಿಯದ ವಿಷಯ. ಈ ಮಹಾ ಭೀಕರ ಸಮಸ್ಯೆಗಳನ್ನೇ ತಲೆದಿಂಬಾಗಿಟ್ಟು ಗೊರಕೆ ಹೊಡೆಯುತ್ತಾರೆ–ಭಾರತೀಯ ನಾಯಕರು! ಅಬ್ಬ! ಏನಜ್ಞಾನ!

ಇರಲಿ, ಗೆಳೆಯ ಸಾಕು. ನಾನು ಏನನ್ನೋ ಹೇಳ ಹೊರಟು ಎಲ್ಲಿಗೋ ಬಂದು ನಿಂತೆ. ಭಾರತದ ಸ್ತ್ರೀ ಸಮಾಜದ ಕುರಿತು ಬರೆಯ ತೊಡಗಿ, ಇಲ್ಲಿ ಬಂದು ನಿಂತೆ. ಏನೆನ್ನಲಿ ದುರದೃಷ್ಟ? ಹಿಂದೆ ನಿನಗೆ ಭಾರತದ ಮೇಲೆ

ತಿರಸ್ಕಾರವಿರುವಾಗ ಭಾರತದ ಶ್ಲಾಘನೆ ಬರೆದೆ. ನಿನಗೆ ಗೌರವ ಬರುತ್ತಿರುವಾಗ ನಾನು ಹಳಿಯಹೊರಟೆ. ಇದೆಲ್ಲಾ ಏಕೆ ಯದ್ವಾ ತದ್ವಾ ಎಂದು ಭಾವಿಸಬೇಡ.

ಭಾರತವನ್ನು ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುವ ನನಗೆ ಈ ದೇಶದ ಕುರಿತು ಎಷ್ಟು ಕಟುವಾದ ಟೀಕೆಯನ್ನೂ ಮಾಡುವ ಹಕ್ಕಿದೆ ಎಂಬುದು ನನ್ನ ಭಾವನೆ. ಯಾವನೇ ಭಾರತೀಯನ ದೇಶಪ್ರೇಮದೊಂದಿಗೆ ನನ್ನ ಭಾರತ ಪ್ರೇಮವನ್ನು ಒರೆಗೆ ಹಚ್ಚಿ ನೋಡಲಿ, ಸಿಲ್ವರ್. ಆದರೆ ನಾನು ಸ್ವತಃ ನನ್ನನ್ನೇ ಟೀಕಿಸಿದಂತೆಯೇ ಭಾರತೀಯ ಸಮಾಜದ ಕುಂದುಕೊರತೆಗಳನ್ನೂ ನಾನು ನೋಡಲೇ ಬೇಕು. ಇಂತಹ ಹಿಮಾಲಯ ಗಾತ್ರದ ಕೊರತೆ ಉಳಿದರೆ ಭಾರತವು ಪುನಃ ದೇದೀಪ್ಯಮಾನವಾಗಿ ಬೆಳಗುವ ಬಗೆಯೆಂತು?

ನನ್ನ ಹಿಂದಿನ ಪತ್ರದಲ್ಲಿ ವಿವಾಹ ಬದ್ಧ ಸ್ತ್ರೀಯರು ಲೈಂಗಿಕ ಸ್ವೇಚ್ಛಾಚಾರಕ್ಕೆ ಬಹಳ ಅಪರೂಪವಾಗಿ ಮಾತ್ರ ಇಳಿಯುತ್ತಾರೆ–ಬಹು ಸಂಖ್ಯಾಕರು ಶುದ್ಧ ಜೀವನ ಮಾಡುತ್ತಾರೆ ಎಂದು ಬರೆದಿದ್ದೆ. ಆದರೆ ಸಿಲ್ವರ್, ಇಲ್ಲಿಯಷ್ಟು ಸಾರ್ವಜನಿಕ ವೇಶ್ಯಾ ಗೃಹಗಳು ಪ್ರಾಯಶಃ ಜಗತ್ತಿನ ಬೇರಾವ ದೇಶದಲ್ಲೂ ಇರಲಾರದು.

ಸಾರ್ವಜನಿಕ ವೇಶ್ಯಾ ಗೃಹವೆಂದರೆ, ವೇಶ್ಯೆಯಾಗಿದ್ದು ದೇಹ ಮಾರುವುದನ್ನೇ ಒಂದು ವೃತ್ತಿಯಾಗಿಟ್ಟುಕೊಂಡಿರುವವರ ಮನೆ ಅಥವಾ ಅಂಗಡಿ ಎಂಬರ್ಥ. ಇಂತಹ ಗೃಹಗಳಲ್ಲಿ ಒಬ್ಬರೋ ಇಬ್ಬರೋ ಯಾ ಜಾಸ್ತಿ ವೇಶ್ಯೆಯರು, ದಿನ ರಾತ್ರೆ ವಿಟ ಪುರುಷರನ್ನು ಬರಮಾಡುತ್ತಾ ಅವರನ್ನು ರಮಿಸಿ, ದುಡ್ಡು ಪಡೆಯುತ್ತಾರೆ. ಅನೇಕ ರೀತಿಯ ಭಯಂಕರವಾದ ಲೈಂಗಿಕ ರೋಗಗಳಿಗೆ ತುತ್ತಾದವರೆಂದು ಪ್ರಸಿದ್ಧರಾದ ಈ ಸ್ತ್ರೀ ರಕ್ಕಸಿಯರು, ಪ್ರತಿ ದಿನ ಅನೇಕ ಆರೋಗ್ಯವಂತ ಪುರುಷರನ್ನು ಪೂರ್ಣ ಕೆಡಿಸಿ, ಭಯಂಕರ ರೋಗದಿಂದ ಪೀಡಿತರಾಗುವಂತೆ ಮಾಡುವರು.

ಬೊಂಬ್ಯಾ, ಕಲ್ಕತ್ತಾ, ಮದ್ರಾಸು, ಢೆಲ್ಲಿ, ಬೆಂಗಳೂರು ಮೊದಲಾದ ಮಹಾ ನಗರಗಳಲ್ಲೂ, ಇತರೆ ಚಿಕ್ಕ ನಗರಗಳಲ್ಲೂ ಕೆಲವೊಂದು ಬೀದಿಗಳೇ ಈ ಸ್ತ್ರೀಯರಿಗಾಗಿ ಮೀಸಲಾಗಿಟ್ಟಿವೆ. ಅವುಗಳಲ್ಲಿ ಯಾರಾದರೂ ನಡೆದು ಹೋದರೆಂದರೆ ಈ ಸ್ತ್ರೀಯರು ಕರೆದೇ ಬಿಡುತ್ತಾರೆ. ರಾತ್ರೆ ಏಕಾಂಗಿಯಾಗಿ ಯಾರಾದರೂ ನಡೆದರೆ ಒಳಗೆ ಬಲಾತ್ಕಾರದಿಂದ ಕೊಂಡೊಯ್ಯಲೂ ಅವರು ಹೇಸುವುದಿಲ್ಲ.

ಟ್ರಾಮು, ಬಸ್ಸುಗಳಲ್ಲಿ ಹೋಗುವ ವೇಳೆ, ಅವರು ಕೃತ್ರಿಮ ವೇಷಗ ಳನ್ನು ಮಾಡಿ, ಬಣ್ಣ ಬಣ್ಣದ ಲೈಟು ಹಾಕಿ, ಬಾಗಿಲಲ್ಲಿ ನಿಂತು, ದೇಹ ಮಾರಲು ಕಾಯುತ್ತಿರುವ ಆ ಹೃದಯ ವಿದ್ರಾವಕ ದೃಶ್ಯವು ನಮ್ಮ ಕಣ್ಣಿಗೆ ಬೀಳುವುದು. ಆಧ್ಯಾತ್ಮಿಕತೆಯ ಭವ್ಯ ಸಂದೇಶವನ್ನು ಕಹಳೆಯೂದಿ ಜಗ ತ್ತಿನ ದಿಗ್ದಿಗಂತಗಳಲ್ಲಿ ವ್ಯಾಪಿಸುವಂತೆ ಮಾಡಿದ ಭಾರತದಲ್ಲಿ ಇಂದು ಈ ನೀಚ ಪೈಶಾಚಿಕ ವ್ಯಾಪಾರ ನಡೆಯುತ್ತಿರುವುದನ್ನು ನೋಡಿ ನನ್ನ ಮನಸ್ಸೇಕೋ ತಲ್ಲಣಗೊಳ್ಳುವುದು, ಗೆಳೆಯ.

ಈ ವೇಶ್ಯಾ ವೃತ್ತಿಗೆ ಬಹಳ ದೊಡ್ಡ ಹಿನ್ನೆಲೆಯಿದೆ. ಅದು ಇಂದಿನ ಭಾರತೀಯ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟಿದೆ.

ಅನೇಕರು ಹೊಟ್ಟೆ ಹೊರೆಯುವುದಕ್ಕಾಗಿ ವೇಶ್ಯಾ ವೃತ್ತಿಗಿಳಿಯುತ್ತಾರೆ. ಇನ್ನು ಕೆಲವರು ಕೆಲ ಪುರುಷರಿಂದ ಕಾನೂನು ಬಾಹಿರವಾಗಿ ಅನುಭೋಗಿಸ ಲ್ಪಟ್ಟು ಮಕ್ಕಳಾದ ಮೇಲೆ ತಿರಸ್ಕೃತರಾಗುತ್ತಾರೆ. ಅಂತಹವರನ್ನು ಸಮಾಜ ಛೀಗಳೆಯುತ್ತದೆ. ಅವರು ಅನಾಥರಾಗಿ, ಆಶ್ರಯ ರಹಿತರಾಗಿ ಅಂಡಲೆ ಯುತ್ತಾರೆ. ತಂದೆಯಿಲ್ಲದ ಮಗುವನ್ನೆತ್ತಿಕೊಂಡು ಬಂದ ಮಹಿಳೆಗೆ ಭಾರತದ ಜನ ಸ್ವಾಗತ ಕೊಡುವುದಿಲ್ಲ. ಆದರೆ ಆಕೆಯೇ ವೃತ್ತಿಪರ [Professional] ವೇಶ್ಯೆಯಾಗಿ ಬಂದರೆ, ಅವಳಿಗೆ ಮಾನ್ಯತೆ ದೊರೆತರೆ ವಿಶೇಷವಿಲ್ಲ! ಆದ್ದರಿಂದ ಅಂಥವಳನ್ನು ಭಾರತೀಯ ಸಮಾಜವು ತೀವ್ರ ಹಸಿವು, ನಿರ್ಗತಿಕತನಗಳ ಲ್ಲಿಟ್ಟು ಆಕೆ ವೃತ್ತಿಪರ ವೇಶ್ಯೆಯಾಗಿ ಮಾರ್ಪಟ್ಟು ತನ್ನ ಜೀವನವನ್ನೇ ಸುಟ್ಟು ಸೂರೆಗೈದು, ಅನ್ಯರ ಜೀವನವನ್ನೂ ಸುಡಲು ಬದ್ಧ ಕಂಕಣಳಾದ ತಜ್ಞ ವೇಶ್ಯೆ ಯಾಗುವಂತೆ ಕುತ್ತಿಗೆ ಹಿಡಿದು ನೂಕುತ್ತದೆ. ಕ್ರೂರವಾದ, ಮತಿಹೀನವಾದ ಹಿಂದೂ ಸಮಾಜದಲ್ಲಿ ಮುಗ್ಧರಾಗಿ ಪತಿತೆಯರಾದ ಸ್ತ್ರೀಯರಿಗೆ ಉಳಿಗಾಲ ವಿಲ್ಲ. ಅವರಿಗೆ ಶುದ್ಧ ಬದುಕು ಸಾಗಿಸಿ ಮಾನವತಿಯರಾಗಿ ಬಾಳುವ ಹಕ್ಕಿಲ್ಲ.

ಇನ್ನು ವೇಶ್ಯೆಯರ ಸುಂದರಿಯರಾದ ಮಗಳಂದಿರುತ್ತಾರೆ. ಅವರ ಒಲವು ಮೊದಲಿಗೇ ವೇಶ್ಯಾ ವೃತ್ತಿಯಲ್ಲಿದ್ದರೆ ವಿಶೇಷವಿಲ್ಲ. ಒಂದು ವೇಳೆ, ಅವರು ಮರ್ಯಾದೆಗಾಗಿ, ವಿವಾಹವಾಗಿ ಬಾಳುತ್ತೇನೆ ಎಂದು ಬಗೆದರೆ, ಅವರ ತಾಯಂದಿರು, ಅವರನ್ನು ಬೈದು, ಭಂಗಿಸಿ, ಹಣಕ್ಕಾಗಿ, ವೇಶ್ಯೆಯಾ ಗಿಯೇ ಜೀವಿಸುವಂತೆ ಮಾಡುತ್ತಾರೆ.

ಕೆಲವು ಸ್ತ್ರೀಯರು ಅತಿ ಕಾಮಿಗಳಾಗಿ, ಅಥವಾ ಶ್ರೀಮಂತಿಕೆಯನ್ನು

ಗಳಿಸುವುದಕ್ಕಾಗಿಯೇ ಈ ನೀಚ ವೃತ್ತಿಗಿಳಿಯುವವರಿದ್ದಾರೆ. ಅತಿ ದುಃಖ ದಾಯಕವಾದ ಇನ್ನೊಂದು ವರ್ಗವಿದೆ, ಸಿಲ್ವರ್. ಇದನ್ನು ಕೇಳಿದರೆ, ನಿನಗೂ ಕಣ್ಣೀರು ಬಾರದಿರುವುದಿಲ್ಲ.

ಹಳ್ಳಿಗಳಿಂದ ಎಷ್ಟೋ ನಿರಪರಾಧಿ, ನಿಷ್ಕಲ್ಮಷ ಬಾಲಿಕೆಯರನ್ನು ಕೆಲಸ ಕೊಡಿಸುತ್ತೇನೆಂಬ ಸುಳ್ಳು ಆಶ್ವಾಸನೆ ಕೊಟ್ಟು, ಕರಕೊಂಡುಬಂದು ಬೊಂಬಾಯಿ ಯಂತಹ ಶಹರುಗಳಲ್ಲಿ, ಇತರರಿಗೆ ಮಾರಿ ಬಿಡುತ್ತಾರೆ. ಹೌದು ಹಿಂದೆ ದಸ್ಯುಗಳನ್ನು ವಿಕ್ರಯಿಸಿದಂತೆಯೇ ನಿರ್ದಯವಾಗಿ ವಿಕ್ರಯಿಸಿ ಬಿಡುತ್ತಾರೆ. ದೊಡ್ಡ ಶಹರುಗಳಲ್ಲಿ ಎಷ್ಟೋ ವೇಶ್ಯಾ ಗೃಹಗಳು ಬೇರೊಬ್ಬನ ಒಡೆತನದಲ್ಲಿ ರುವುದಿದೆ. ಆತನು ಅನೇಕ ವೇಶ್ಯೆಯರನ್ನು ಗುಲಾಮರಂತೆ ಇಟ್ಟುಕೊಂಡು ಅವರ ಮೂಲಕ ಲಕ್ಷಗಟ್ಟಲೆ ದುಡ್ಡು ಸಂಪಾದನೆ ಮಾಡುತ್ತಾನೆ. ಅಂತಹ ವೇಶ್ಯಾ ಸಾಹುಕಾರರು ಈ ಬಡ ಬಾಲಿಕೆಯರನ್ನು ಕೊಂಡುಕೊಂಡು, ತಾವು ಬೇಕಾದಂತೆ ಅನುಭೋಗಿಸಿ, ಈ ವೇಶ್ಯಾ ಗೃಹದ ಗಾಣಕ್ಕೆ ಕಟ್ಟಿಬಿಡುತ್ತಾರೆ. ಅದನ್ನೆಲ್ಲ ಕಣ್ಣಾರೆ ನೋಡುತ್ತಿರುವ ಸಮಾಜದ ಗಣ್ಯ ವ್ಯಕ್ತಿಗಳು ಏನನ್ನೂ ಮಾಡದೆ ಬಹಳ ಬುದ್ಧಿವಂತರೆಂಬಂತೆ ನಸುನಗುತ್ತಾ ಮುಂದೆ ಸಾಗುತ್ತಾರೆ. ಆ ಹತಭಾಗ್ಯ ಬಾಲಿಕೆಯರು ವಧಾಸ್ಥಾನಕ್ಕೆ ಕೊಂಡೊಯ್ಯಲ್ಪಡುವ ಪಶು ಗಳಂತೆ ನೀತಿಯ ವಧಾಸ್ಥಾನಕ್ಕೆ ಎಳೆಯಲ್ಪಡುತ್ತಾರೆ.

ಅಂಥವರ ಬದುಕು ಪೂರ್ಣ ನಾಶವಾದಂತೆಯೇ ಸರಿ. ಅವರಿಗೆ ಪುನಃ ಊರಿಗೆ ತೆರಳುವಂತಿಲ್ಲ. ನಾಗರಿಕರಾಗಿ ಬಾಳುವಂತಿಲ್ಲ. ಸ್ವತಃ ಉತ್ಪತ್ತಿಯನ್ನೂ ಮಾಡುವಂತಿಲ್ಲ. ಕೇವಲ ಯಜಮಾನನ ಆನಂದಕ್ಕಾಗಿ ದೇಹವನ್ನು ಮಾರುತ್ತಾ ಹೋಗಬೇಕು ಅವರ ಜೀವನಕ್ರಮ ಗ್ರಹಿಸಿದರೆ, ಮೈಯೆಲ್ಲಾ ಹುಣ್ಣಾಗುವುದು, ಸಿಲ್ವರ್. ಆ ಹೆತ್ತವರು ಎಂತಹ ಹೆಡ್ಡುತನ ಮಾಡಿರಬೇಕು? ದೂರದ ಊರಿಗೆ ಉದ್ಯೋಗಕ್ಕಾಗಿಯೆಂದೇ ಕಳುಹಿಸುವುದಿದ್ದರೆ ಯಾರ್ಯಾರ ಕೂಡೆ ಕಳುಹಿಸ ಬಹುದೇ?

ಈ ಸಾಮೂಹಿಕ ವ್ಯಭಿಚಾರಕ್ಕೆ ನಿಜವಾದ ಆಶ್ರಯದಾತರು, ಬಡತನ ದಿಂದ ಬಳಲಿ-ಉದ್ಯೋಗಕ್ಕಾಗಿ ಬೃಹತ್ ನಗರಗಳಿಗೆ ತೆರಳಿ, ಅಲ್ಲಿ ದೊರೆಯುವ ಅಲ್ಪ ವೇತನದಿಂದ ವಿವಾಹವಾಗಿ ಸಂಸಾರ ಸಾಗಿಸುವ ಧೈರ್ಯವಿಲ್ಲದೆ, ಇಂದ್ರಿ ಯ ತೃಪ್ತಿಗಾಗಿ ಈ ಪಾಪಕೂಪಕ್ಕೆ ಬೀಳುವ ಬಡ ಅವಿವಾಹಿತ ಯುವಕರು. ಅವರ ಜೀವನವೆಂದರೆ ಅದೊಂದು ಬೇರೆಯೇ ದುರಂತ ಕತೆ. ಇವರಲ್ಲದೆ, ಕೇವಲ

ಶೃಂಗಾರಕ್ಕಾಗಿ, ಅತಿ ಕಾಮತೃಪ್ತಿಗಾಗಿ ಇಂತಹ ವೇಶ್ಯೆಯರನ್ನು ಬಳಸಿ, ಜೀವನವನ್ನು ಸುಟ್ಟು ಸೂರೆ ಮಾಡಿ, ಧರ್ಮಪತ್ನಿಗೂ ರೋಗ ತಾಗಿಸಿ, ಅವಳನ್ನೂ ಸೊರಗಿಸುವವರೂ ಇದ್ದಾರೆ.

ದಾಂಪತ್ಯ ಕ್ರಮದ ವಿಷಯದಲ್ಲಿ ಜಗತ್ತಿಗೇ ಆದರ್ಶವಾಗಿರುವ ಭಾರತದ ಗೃಹಿಣಿಯರೊಂದು ಕಡೆ. ಅವರಿಗೆ ಉತ್ತರ ಧ್ರುವ ದಕ್ಷಿಣ ಧ್ರುವಗಳಷ್ಟು ಅಂತರವಿರುವ ಈ ವೇಶ್ಯಾ ಸಮೂಹವೊಂದು ಕಡೆ. ಈ ಎರಡೂ ಯಾಕಾಗಿ ಭಾರತದಲ್ಲಿ ಏಕಕಾಲದಲ್ಲಿ ಒಟ್ಟಾಗಿ ಬದುಕುತ್ತಿವೆ ನನಗೆ ತಿಳಿಯದಾಗಿದೆ.

ಭವ್ಯವೂ, ದಿವ್ಯವೂ, ಮಂಗಳಕರವೂ ಆದ ನಾಲ್ಕು ವೇದಗಳನ್ನೂ ನೂರೆಂಟು ಉಪನಿಷತ್ತುಗಳನ್ನೂ, ಬ್ರಹ್ಮಸೂತ್ರಗಳನ್ನೂ, ಅಧ್ಯಾತ್ಮ ರಾಜ್ಯದ ಮುಕುಟದಂತಿರುವ ಭಗವದ್ಗೀತೆಯನ್ನೂ ರಚಿಸಿ, ಜಗತ್ತಿನ ಮೂಲೆ ಮೂಲೆಗೂ ಸನಾತನ ಹಿಂದೂ ಧರ್ಮದ ಅನಂತವಾದ ಮಹಾ ಸಂದೇಶವನ್ನು ಸಾರಿದ ಭಾರತದಲ್ಲಿಂದು ಮಹಿಳೆಯರ, ಮುಗ್ಧ ಬಾಲಿಕೆಯರ ವ್ಯಾಪಾರವಾಗುತ್ತಿದೆ. ನಿಷ್ಪಾಪ ಯುವಕರು ದಾರಿದ್ರ್ಯದಿಂದ ಮದುವೆಯಾಗಲಾರದೆ ಇಂದ್ರಿಯ ತೃಪ್ತಿಗಾಗಿ ವೇಶ್ಯಾ ಗೃಹಗಳನ್ನು ಸೇರುತ್ತಾರೆ. ಸಹಸ್ರಾರು ಮುನಿಪುಂಗವರು ಋಷಿಗಳು, ಸಾಧುಸಂತರು, ಮಹಾತ್ಮರು, ಅನ್ನೇಕ ಅವತಾರೀ ಪುರುಷರನ್ನು ಕೂಡಾ ಗರ್ಭದಲ್ಲಿ ಹೊತ್ತು ವಿಶ್ವಕ್ಕೆ ನೀಡಿ, ಅದ್ಭುತ ಪ್ರಕಾಶ ಬೀರಿದ ಪುಣ್ಯ ಭೂಮಿಯಲ್ಲಿಂದು ಇಂತಹ ದುರ್ಗತಿಯ ಜೀವನವೂ ಸಾಗುತ್ತಿದೆ. ಇದೇಕೆ ಹೀಗಾಯಿತು?

ಇಲ್ಲಿಯ ಗೃಹಿಣಿಯರು, ಸಮಾಜ ಸೇವಕರು ಮತ್ತು ರಾಷ್ಟ್ರೀಯ ಧುರೀಣರು ಇತರ ಸ್ತ್ರೀಯರ ಮತ್ತು ದರಿದ್ರರ ಕುರಿತಾಗಿ ತೀವ್ರವಾದ ಔದಾಸೀನ್ಯದಲ್ಲಿರುವುದೇ ಇದಕ್ಕೆ ಕಾರಣವಲ್ಲವೆಂದು ಹೇಗೆ ಹೇಳಬೇಕು? ಇರಲಿ, ಸಿಲ್ವರ್, ಈ ದುಃಖಮಯ ಸನ್ನಿವೇಶವನ್ನು ಇಲ್ಲಿಗೇ ನಿಲ್ಲಿಸುತ್ತೇನೆ. ದೇಶದ ಜನತೆಗೆ ದೇಶ ಬೇಡವಾದರೆ ನಾವು ಪರದೇಶೀ ಪರಕೀಯರು ಏನು ತಾನೇ ಮಾಡಲು ಸಾಧ್ಯವಿದೆ?

ಈ ಎಲ್ಲಾ ಮಾತುಗಳಿಂದ ಅಮೇರಿಕಾ ದೇಶ ಮತ್ತು ಇತರ ಪಾಶ್ಚಾತ್ಯ ದೇಶಗಳ ಸ್ತ್ರೀಯರ ಲೈಂಗಿಕ ಸ್ವೇಚ್ಛಾಚಾರವನ್ನು ಸಮರ್ಥಿಸುತ್ತಿದ್ದೇನೆಂಬ ಅರ್ಥವನ್ನು ಖಂಡಿತ ನೀನು ಮಾಡಬಾರದು. ಅದು ಪೂರ್ಣ ಖಂಡನೀಯವಾಗಿದೆ. ಯಾವುದೇ ನಾಗರಿಕ ದೇಶಕ್ಕೂ ಅಂತಹ ಪಶು ಸಹಜ ಜೀವನವಾಗಲೀ,

ವಿವಾಹ ವಿಚ್ಛೇದಗಳಾಗಲೀ ಭೂಷಣವಲ್ಲ. ಇದರ ತುಲನಾತ್ಮಕ ವಿಮರ್ಶೆ ಹಿಂದಿನ ಪತ್ರವಲ್ಲೇ ಬರೆದಿದ್ದೇನಷ್ಟೆ?

ಭಾರತೀಯ ಸ್ತ್ರೀಯರು ಪಾಶ್ಚಾತ್ಯರಷ್ಟು ಕಾರ್ಯನಿರತರೆನ್ನಬರುವುದಿಲ್ಲ. ಬಡ ಜನರು ಮತ್ತು ಮಧ್ಯಮ ವರ್ಗದ ಸ್ತ್ರೀಯರು, ತಮ್ಮ ಮನೆ ಕೆಲಸಗಳನ್ನೇನೋ ತಾವೇ ಮಾಡಿಕೊಳ್ಳುತ್ತಾರೆ. ಆದರೆ ಮನೆ ಕೆಲಸ ಮಾಡಿ ಉಳಿದ ಸಮಯದಲ್ಲಿ ಬೇರೇನಾದರೂ ಉಪವೃತ್ತಿ ಮಾಡಿ ಆರ್ಥಿಕ ಅಭಿವೃದ್ಧಿ ಮಾಡುವ ಗೋಜಿಗೇ ಅವರು ಹೋಗುವುದಿಲ್ಲ. ಬಡ ಜನರಿಗಾದರೆ ಕೂಲಿ ಕೆಲಸಕ್ಕೆ ತೆರಳಿ ಬಹಳ ಉತ್ಪತ್ತಿ ಮಾಡುವುದು ಸಾಧ್ಯವಿದೆ. ಆದರೂ ಅವರು ಹಾಗೆ ಮಾಡುವುದಿಲ್ಲ. ಇಲ್ಲಿಯ ಅನೇಕ ಗಂಡುಸರ ದೃಷ್ಟಿಯಲ್ಲಿ ಅವರ ಸ್ತ್ರೀಯರು ಇತರರಲ್ಲಿಗೆ ಕೂಲಿ ಕೆಲಸಕ್ಕೆ ಹೋಗುವುದಾಗಲಿ, ಮನೆಯಲ್ಲೇ ಏನಾದರೂ ಕೆಲಸ ಮಾಡುತ್ತಾ ಇರುವುದಾಗಲೀ, ಘನಸ್ಥಿಕೆಯ ಕಾರ್ಯವಲ್ಲ.

ಆದ್ದರಿಂದ ಮನೆಯಲ್ಲಿಸುಮ್ಮನೇ ಹೇನು ಕೊಲ್ಲುವ ಕೆಲಸ ಮಾಡುತ್ತಾ, ಊರ ಸುದ್ದಿಗಳನ್ನು ಮಾತನಾಡುತ್ತಾ ಚಿರಕಾಲ ಬದುಕುವ ಜೀವಿಗಳೆಂಬಂತೆ ಈ ಸ್ತ್ರೀಯರು ಇರುವುದು ಕಾಣಬರುವುದು. ನಿರಂತರವಾಗಿ ಉದ್ಯೋಗ ಶೀಲರಾಗಿರುವ ಆ ಗುಣವೇ ಅವರಲ್ಲಿ ಕಂಡು ಬರುವುದಿಲ್ಲ.

ಬಹು ಸಂಖ್ಯಾಕ ಸ್ತ್ರೀಯರಿಗೆ ಮನೆಯ ಸೌಂದರ್ಯದ ಮತ್ತು ಸ್ವಚ್ಛತೆಯ ಮೂಲ ಪಾಠಗಳೂ ತಿಳಿದಿರುವುದಿಲ್ಲ. ಅವರಲ್ಲಿ ಬಹು ಸಂಖ್ಯಾಕರ ವಿದ್ಯಾ ವಿಹೀನತೆಯೇ ಅದಕ್ಕೆ ಕಾರಣವಾಗಿರಲೂಬಹುದು. ಮನೆ ಬಳಿಯೇ ರಾಶಿ ರಾಶಿ ಹೊಲಸು ಇದ್ದರೂ, ಅದನ್ನು ಸ್ವಚ್ಛಪಡಿಸಿ, ಚೊಕ್ಕಟವಾಗಿಡಬೇಕು ಎಂದವರಿಗೆ ಕಾಣುವುದಿಲ್ಲ. ಅಡಿಗೆ, ಮಕ್ಕಳಿಗೆ ಮೊಲೆಯೂಡಿಸುವುದು ಮತ್ತು ಉಣಬಡಿಸುವುದನ್ನು ಬಿಟ್ಟರೆ ಬೇರೆ ಯಾವ ಕೆಲಸವೂ ಮಾಡಬೇಕಾದ್ದಿದೆ ಎಂಬುದಾಗಿ ಅವರಿಗೆ ಕಾಣುವುದಿಲ್ಲ. ಜಪಾನೀ ಸ್ತ್ರೀಯರಂತೆ ಪ್ರತಿಯೊಂದು ಬಿಸಾಡುವ ವಸ್ತುವನ್ನೂ ಹೇಗೆ ಸದುಪಯೋಗ ಮಾಡಿ ಆರ್ಥಿಕ ಅಭಿವೃದ್ಧಿ ಪಡೆಯಬಹುದು ಎಂದು ಯಾರೂ ಯೋಚಿಸುವುದಿಲ್ಲ. ಅಂತೂ ಭಾರತದ ಸ್ತ್ರೀಯರಲ್ಲಿ ಯುಗ ಯುಗಾಂತರದ ಹಿಮಾಲಯ ಗಾತ್ರದ ಜಡತೆ ವ್ಯೈವೆತ್ತಿದೆ ಎಂದು ನನಗೇನೋ ಭಾಸವಾಗುತ್ತಿದೆ.

ಶ್ರೀಮಂತ ಸ್ತ್ರೀಯರಾದರೆ, ಹೆಚ್ಚಿನವರೂ ಮನೆಕೆಲಸವನ್ನೂ ಮಾಡುವುದಿಲ್ಲ–ಸಮಾಜ ಸೇವೆಯ ಕಾರ್ಯವನ್ನೂ ಎಸಗುವುದಿಲ್ಲ. ಅನೇಕ ಮಜೂರರನ್ನು ಮನೆಯಲ್ಲಿಟ್ಟುಕೊಂಡು, ತಮ್ಮ ಸೌಕರ್ಯಗಳನ್ನು ಪಡಕೊಳ್ಳುತ್ತಾರೆ. ದಿನವಿಡೀ ಹರಟುವುದರಲ್ಲಿಯೋ, ತಿನ್ನುವುದರಲ್ಲಿಯೋ, ತಿನ್ನುವ ಯೋಚನೆಯಲ್ಲಿಯೋ, ಶೃಂಗಾರದಲ್ಲಿಯೋ, ಆಟಗಳಲ್ಲಿಯೋ, ಕಾದಂಬರಿಗಳ ವಾಚನದಲ್ಲಿಯೋ ವಿನಿಯೋಗಿಸುತ್ತಾರೆ ವಿನಹ ಯಾವುದೇ ಸತ್ಕಾರ್ಯದಲ್ಲಿ ನಿರತರಾಗುವುದಿಲ್ಲ.

ನಮ್ಮ ಸಂಯುಕ್ತ ಅಮೇರಿಕದಲ್ಲಿಸಮಾಜ ಸೇವೆ ಮಾಡಬೇಕು ಎಂದರೆ ಆಸ್ಪದವಿಲ್ಲ. ದರಿದ್ರರಿಗೆ ಆರ್ಥಿಕ ನೆರವು ನೀಡೋಣ ಎಂದರೆ ದರಿದ್ರರಾರು? ಆರ್ಥಿಕ ನೆರವು ಸ್ವೀಕರಿಸುವವರಾರು? ಸಮಾಜದಲ್ಲಿ ಯಾವ ಭೌತಿಕ ಅಭಿವೃದ್ಧಿಯನ್ನು ಸಾಧಿಸಲು ಉಳಿದಿದೆ? ಬಹಳ ಮಟ್ಟಿಗೆ ಯಾವುದೂ ಉಳಿದಿಲ್ಲ. ಅಲ್ಲಿ ಮೂಲಭೂತ ಅವಶ್ಯಕತೆಗಳೆಲ್ಲ ಹೆಚ್ಚಿನಂಶ ಪೂರೈಸಲ್ಪಟ್ಟಿವೆ. (ನಮಗೆ ಬೇಕಾದ್ದು ಅಧ್ಯಾತ್ಮ ತತ್ವ–ನಿಜ ಪ್ರೇಮದ ಸೂತ್ರ–ನಿಜ ಸುಖದ ದಾರಿ.)

ಆದ್ದರಿಂದ ನಮ್ಮ ದೇಶದಲ್ಲಿ ಮಾನವೀಯತೆಗಾಗಿ ಶ್ರಮಿಸಬೇಕೆನ್ನುವವರು, ಯಾವ್ಯಾವುದೋ ದೇಶಕ್ಕೆ ತೆರಳಿ, ಜೀವನವೆಲ್ಲಾ ಸವೆದು ಸೇವೆ ಮಾಡುತ್ತಾರೆ.

ಆದರೆ ಭಾರತದಲ್ಲಿ ಹಾಗಲ್ಲ. ಲಕ್ಷೋಪಲಕ್ಷ ಸ್ತ್ರೀ ಪುರುಷರು ದೊಡ್ಡ ಸೈನ್ಯವನ್ನು ಸ್ಥಾಪಿಸಿ, ಸೇವೆಯೆಸಗುವುದಿದ್ದರೂ ಎಡೆಯಿದೆ (ಜನರು ತಾತ್ಕಾಲಿಕವಾಗಿ ತಂದೊಡ್ಡುವ ಎಡರುತೊಡರಿನ ಸುದ್ದಿ ಬಿಡು–ಅವರು ನಂತರ ಪರಿವರ್ತಿತರಾದಾರು). ಎಷ್ಟೆಷ್ಟೋ ಶ್ರೀಮಂತರು ತಮ್ಮ ಧನ ಬಲದ ದೊಡ್ಡ ಭಾಗವನ್ನು ತಮ್ಮ ಭಾಂಧವರ ಶ್ರೇಯಸ್ಸಿಗಾಗಿ ವಿನಿಯೋಗಿಸಿ, ತಪ್ಪುದಾರಿ ತುಳಿಯುತ್ತಿರುವ ಬಡಜನರನ್ನು ಯೋಗ್ಯವಾದ ಸುಖ ಜೀವನಕ್ಕೆ ತಂದು ನಿಲ್ಲಿಸಬಹುದು.

ಆದರೆ ಅಮೇರಿಕದ ರಾಕ್‌ಫೆಲ್ಲರ್, ಫೋರ್ಡ್, ಕಾರ್ನೆಗಿಯಂತಹವರು ಭಾರತದಲ್ಲಿ ಒಬ್ಬರಾದರೂ ಬೇಕಲ್ಲ? ಬಡ ದೇಶವಾದರೂ, ಇಲ್ಲಿ ತಮ್ಮ ದುಡ್ಡನ್ನು ಯಾವ್ಯಾವುದಕ್ಕೋ ಪೋಲು ಮಾಡುತ್ತಾರೆ. ದೀನದಲಿತರ ಶ್ರೇಯಸ್ಸಿಗಾಗಿ ನಯಾ ಪೈಸೆಯನ್ನೂ ವಿನಿಯೋಗಿಸುವುದಿಲ್ಲ. ಅವರ ಸೇವೆಗಾಗಿ ಒಂದೇ ಒಂದು ನಿಮಿಷವನ್ನೂ ವಿನಿಯೋಗಿಸುವುದಿಲ್ಲ. ಸ್ತ್ರೀ ಪುರುಷರಿಬ್ಬ

ರಿಗೂ ಈ ಮಾತು ಅನ್ವಯಿಸುವುದು.

ಹಾಗಿದ್ದರೆ, ಭಾರತದ ಮಹಿಳೆಯರಾದ್ದರಿಂದ ಅಧ್ಯಾತ್ಮ ಸಾಧನೆಯಲ್ಲಿ ಸಮಯ ಕಳೆಯುತ್ತಾರೇನೋ ಎಂದು ನೀನು ಭಾವಿಸಬಹುದು. ವಿಧಿವತ್ತಾಗಿ ಅಧ್ಯಾತ್ಮ ಸಾಧನೆ ಮಾಡುವ ಹೆಂಗಳೆಯರು ಬಹಳ ಅಪರೂಪ. ಹಿಂದೆ ವೇದ ಕಾಲದಲ್ಲಿ ಇಲ್ಲಿಯ ಸ್ತ್ರೀಯರಿಗೆ ವೇದಾಧಿಕಾರ ಮತ್ತು ಉಪನಯನದ ಸಂಸ್ಕಾರದ ಕ್ರಮ ಕೂಡಾ ಇತ್ತೆಂದು ಸಂಶೋಧನೆಯಿಂದ ನಮಗೆ ತಿಳಿಯುವುದಾದರೂ ಇಂದು ಅದ್ಯಾವುದೂ ಅವರಿಗಿಲ್ಲ. ಇಂದು ಹಿಂದೂ ಪುರುಷರಿಗಿರುವ ಸಂಧ್ಯಾವಂದನೆಯೂ ಅವರಿಗಿಲ್ಲ. ನಮ್ಮ ಕ್ರಿಶ್ಚನ್ ರೀತಿಯ ಪ್ರಾರ್ಥನಾ ಪದ್ಧತಿಯನ್ನೂ ಅವರು ಅನುಸರಿಸುವುದಿಲ್ಲ. ಯಾರೂ ಕೂಡಾ ಜಪ, ನಾಮಃ ಸ್ಮರಣೆ, ಇಲ್ಲವೇ ಧ್ಯಾನ ಮಾಡಬಹುದು ಎಂಬ ನಿಯಮವಿದೆ. ಹಾಗಿದ್ದರೂ ಯಾರೂ ಅಂತಹ ಪುಣ್ಯ ಕಾರ್ಯದಲ್ಲಿ ಭಾಗಿಯಾಗುವುದು ಕಂಡು ಬರುವುದಿಲ್ಲ.

ಆದರೆ ಬ್ರಾಹ್ಮಣರಾದ ಹಿಂದೂ ಹೆಣ್ಣು ಮಕ್ಕಳು ಬೆಳಿಗ್ಗೆ ಮತ್ತು ಬೈಸಾರಿ. ದೇವರ ಕೋಣೆಯೆಂದು ಕರೆಯಲ್ಪಡುವ ಅವರ ಮನೆಯ ಭಾಗಕ್ಕೆ ತೆರಳಿ, ಒಂದು ಹಣತೆಯನ್ನಿರಿಸಿ, ಒಮ್ಮೆ ದೇವರಿಗೆ ನಮಸ್ಕರಿಸುವುದಿದೆ. ಬಡ ಜನರಿಗೆ ಇದೂ ಇರುವುದು ಅಪರೂಪವಾಗಿದೆ.

ಹೀಗಿದ್ದರೂ, ಕೆಲವು ಪೇಟೆಗಳ ಮನೆಗಳಲ್ಲಿ ಸ್ತ್ರೀಯರು ಭಜನೆಯೆಂದು ಕರೆಯಲ್ಪಡುವ ಕಾರ್ಯಕ್ರಮದಲ್ಲಿ ದಿನದ ಒಂದೆರಡು ಗಂಟೆ ವಿನಿಯೋಗಿಸುವುದಿದೆ.

ಬೊಂಬ್ಯಾ, ಮದ್ರಾಸಿನಂತಹ ಪಟ್ಟಣಗಳಲ್ಲಾಗಲಿ ಅಥವಾ ಚಿಕ್ಕ ಪಟ್ಟಣಗಳಲ್ಲೇ ಆಗಲಿ, ದೈವಭಕ್ತಿಯ ಕುರಿತಾದ ಉಪನ್ಯಾಸ ಜನ ಕೇಳುವುದಿಲ್ಲ. ಸಮೂಹಿಕ ಭಜನೆಯಲ್ಲಿ ಹೆಚ್ಚು ಜನರು ಭಾಗವಹಿಸುವುದಿಲ್ಲ. ಅಧ್ಯಾತ್ಮ ತತ್ವದ ನಾಡಿನಲ್ಲಿ ಅಧ್ಯಾತ್ಮ ವಿಮರ್ಶೆ ನಡೆಯುವ ದೃಶ್ಯ ಕಂಡು ಬರುವುದಿಲ್ಲ. ಆದರೆ ಸಿನೆಮಾ ನಟಿಯೋರ್ವಳು ಬರುತ್ತಾಳೆಂದರೆ, ರಸ್ತೆಯಿಡೀ ವಾಹನಗಳ ಪ್ರವಾಹವೇ ಬಂದಾಗುವಷ್ಟು ಅಸಂಖ್ಯ ಜನ ಸೇರುವರು. ಅಮೇರಿಕಾ ದೇಶದ ಹುಚ್ಚು ಇವರಿಗೂ ಬಡಿಯುತ್ತಿದೆ. ಸ್ತ್ರೀಯರಮನೋಭಾವನೆಯೂ ಇಂತಹ ವಿಷಯಗಳಲ್ಲಿ ಪುರುಷರಂತೆಯೇ ರೂಪಿತವಾಗುತ್ತಿದೆ.

ಇಂದು ಭಾರತದಾದ್ಯಂತ ಯುವಕ ಯುವತಿಯರಾದ ಜನರಿಗೆ ರುಚಿಸುವ ವಿಷಯವೆಂದರೆ, ದುಡ್ಡು, ದುಡ್ಡು ಮಾಡುವ ವಕ್ರ ಮಾರ್ಗಗಳು, ಇಂದ್ರಿಯ

ಸುಖಜೀವ ವಿಷಯಗಳು, ಸಿನೆಮಾದಂತಹ ಮನರಂಜನೆಗಳು, ಅನ್ಯರನ್ನು ಅವಹೇಳನ ಮಾಡುವ ಮಾತುಗಾರಿಕೆಗಳು, ಇಷ್ಟೆ. ಅವರಲ್ಲಿ, ಅಧ್ಯಾತ್ಮಕ್ಕಾಗಲೀ, ಸಮಾಜ ಸೇವೆಗಾಗಲೀ, ರಾಷ್ಟ್ರೀಯ ಜಾಗೃತಿಗಾಗಲೀ, ಸ್ಥಾನ ಕಾಣುವುದಿಲ್ಲ.

ಸಿಲ್ವರ್, ಇಲ್ಲಿಯ ಸ್ತ್ರೀಯರು ನಿಯಂತ್ರಣವಿಲ್ಲದೆ ಮಕ್ಕಳಿಗೆ ಜನ್ಮವೀಯುತ್ತಾರೆ. ಒಬ್ಬೊಬ್ಬಳು ತಾಯಿ ನಾಲ್ಕೈದು ಹಡೆಯುವುದೆಂಬುದು ಸಾಮಾನ್ಯ ಮಾತು. 8-10ರ ಗಡಿ ಮುಟ್ಟುವ ಹೆಂಗಳೆಯರೂ ಇದ್ದಾರೆ. ಹನ್ನೆರಡಕ್ಕೆ ಕಡಿಮೆಯಾಗದಂತೆ ಮಕ್ಕಳನ್ನು ಪ್ರಸವಿಸುವವರೂ ಇದ್ದಾರೆ. 44 ಕೋಟಿಗೆ ಮುಟ್ಟಿದ ಜನಸಂಖ್ಯೆ ಗಗನಕ್ಕೇರುತ್ತಿದೆ. ಸರಕಾರದ ಯೋಜನೆಗಳನ್ನೆಲ್ಲಾ ಅಡಿಮೇಲು ಮಾಡುತ್ತಿರುವ ದಾರಿದ್ರ್ಯವು ಪೂರ್ಣ ಪರಿಹಾರದ ದಾರಿಯಲ್ಲಿದ್ದಂತೆ ಕಾಣುವುದಿಲ್ಲ.

ಸರಕಾರವು ಸಂತತಿ ನಿಯಂತ್ರಣದ ಕುರಿತು ಬಹಳ ಪ್ರಚಾರ ಮಾಡುತ್ತಿದ್ದರೂ ಅದಿನ್ನೂ ಜನಪ್ರಿಯವಾಗಿಲ್ಲ. ಆದರಿಂದ ಭ್ರೂಣಹತ್ಯೆಯೆಸಗಿದಂತಾಗುವುದು ಎಂಬುದು ಒಂದು ಅಭಿಪ್ರಾಯವಾದರೆ, ಹಾಗೆ ಮಾಡಲು ನಾಚಿಕೊಳ್ಳುವವರು ಇನ್ನನೇಕರು. ಹೊಸತಾದ ಯಾವುದನ್ನೂ ಸ್ವೀಕರಿಸಲೊಲ್ಲದ ಮತ್ತೊಂದು ಗುಂಪೂ ಇದೆ. ಸಂತತಿ ನಿಯಂತ್ರಣ ಮಾಡಿದ್ದರಿಂದ ದೇಹಕ್ಕೆ ಕೆಡುಕಿದೆ ಎಂಬ ಭಯವೂ ಹಲವರಿಗಿದೆ. ಅಂತೂ ಭಾರತದ ಸಂತಾನೋತ್ಪಾದನೆಯು ಚೈನಾ ಒಂದನ್ನು ಬಿಟ್ಟರೆ ಅತಿ ಶೀಘ್ರವಾಗಿ ಸಾಗುತ್ತಿದೆ.

ಇಲ್ಲಿ ಹಿಂದುಗಳದ್ದು ಇನ್ನೊಂದು ಆಕ್ಷೇಪವಿದೆ. "ಕ್ರೈಸ್ತರು ಮತ್ತು ಮುಸ್ಲಿಮರು ಸಂತತಿ ನಿಯಂತ್ರಣ ಮಾಡಲು ಮುಂದಾಗುವುದಿಲ್ಲ. ನಾವು ಮಾತ್ರವೇ ಹಾಗೆ ಮಾಡಿಬಿಟ್ಟರೆ ಇನ್ನು ಐವತ್ತು ವರ್ಷಗಳಲ್ಲಿ ಹಿಂದುಗಳು ಅಲ್ಪ ಸಂಖ್ಯಾಕರಾಗಲಾರರೇ?" ಎಂಬುದು. ಈ ಭಯಕ್ಕೆ ನಿಜವಾಗಿಯೂ ಎಡೆಯಿದೆ. ಒಂದು ಬದಿಯಿಂದ ಸಹಸ್ರಾರು ಹಿಂದುಗಳು ಪ್ರತಿ ವರ್ಷವೂ ಮತಾಂತರ ಹೊಂದುತ್ತಿರುವಾಗ, ಸಂತತಿ ನಿಯಂತ್ರಣವೂ ನಡೆದುಬಿಟ್ಟರೆ ಹಿಂದೂ ಸಮಾಜವು ಕಿರಿದಾಗದೆಂದು ಹೇಗೆ ಹೇಳುವುದು ?

ಸಿಲ್ವರ್; ಇನ್ನೊಂದು ಸ್ವಾರಸ್ಯದ ಸಂಗತಿಯಿದೆ. ಇಲ್ಲಿ ಮಕ್ಕಳಿಲ್ಲದವರಿಗೆ ಸದ್ಗತಿಯಿಲ್ಲ ಎಂಬ ಒಂದು ಶಾಸ್ತ್ರದ ಮಾತನ್ನು ಗಟ್ಟಿಯಾಗಿ ನಂಬಿಬಿಡುತ್ತಾರೆ. ಆದ್ದರಿಂದ ಮಕ್ಕಳಿಲ್ಲದವರೆಲ್ಲ ಇಲ್ಲಿ ಅತಿ ದುಃಖಿಗಳು. ಅವರು

ಬಹಳ ಕರುಣೆಯಿಂದ ನೋಡಲ್ಪಡತಕ್ಕ ಜೀವಿಗಳೆಂದು ಇತರರು ಭಾವಿಸುತ್ತಾರೆ. ಅವರು ಮಹಾ ಹತಭಾಗ್ಯರೆಂದು ತಿಳಿಯಲ್ಪಡುತ್ತಾರೆ.

ಆದ್ದರಿಂದ ಮಕ್ಕಳಾಗದವರು, ಅನುಕೂಲವಿದ್ದರೆ, ಎಷ್ಟು ಹಣವನ್ನಾದರೂ ವಿಸಿಯೋಗಿಸಿ, ಸಂತಾನ ಪ್ರಾಪ್ತಿಗಾಗಿ ಯತ್ನಿಸುತ್ತಾರೆ. ಯಾವ ಕಪಟ ಸನ್ಯಾಸಿಗೂ ಮರೆಹೊಗುತ್ತಾರೆ. ಯಾವ ದೇವರಿಗೂ ಹರಕೆ ಹೊರುತ್ತಾರೆ. ಎಷ್ಟು ಚಿಕಿತ್ಸೆ ಬೇಕಾದರೂ ಮಾಡಿಸುತ್ತಾರೆ. ಕಟ್ಟಕಡೆಗೆ ಯಾವುದೂ ಆಗದಿದ್ದರೆ ಇನ್ನೊಬ್ಬರ ಮಕ್ಕಳನ್ನಾದರೂ ದತ್ತಕ್ಕೆ ತೆಗೆದುಕೊಳ್ಳುತ್ತಾರೆ.

ಮಕ್ಕಳಲ್ಲಿಯೂ ಗಂಡು ಮಗುವಾದರೆ ಹೆಚ್ಚು ಸಂತಸ ಪಡುತ್ತಾರೆ. ಹೆಣ್ಣು ಮಗುವಿಗೆ ಇಲ್ಲಿ ಬೆಲೆ ಕಡಿಮೆ.

ಗುಜರಾತಿನಲ್ಲಿ ಮಕ್ಕಳಾಗದ ದಂಪತಿಗಳನ್ನು ಬಹಳ ತಿರಸ್ಕಾರದಿಂದ ನೋಡುತ್ತಾರಂತೆ. ವಿವಾಹವಾಗಿ, ಜನ ಒಂದು ವರ್ಷ ಕಾಯುತ್ತಾರೆ. ಅಷ್ಟರೊಳಗೆ ಆ ನವವಧು ಹಡೆದರೆ ಆಯಿತು. ಇಲ್ಲವಾದರೆ ಅವಳು ಬಂಜೆ ಎಂದು ಪ್ರಚಾರ ಮಾಡಿಬಿಡುತ್ತಾರೆ.

ಇದಕ್ಕಾಗಿ ಗುಜರಾತಿನಲ್ಲಿ ಹೆಂಡತಿ ಬಸುರಾಗದಿದ್ದರೆ, ನೀತಿಯನ್ನು ನೋಡದೆ ಹೆಂಡತಿ ಇತರರಿಂದಲಾದರೂ ಗರ್ಭವತಿಯಾಗುವಂತೆ ಮಾಡಿಸಿಕೊಳ್ಳುವವರಿದ್ದಾರಂತೆ. ಇಲ್ಲವಾದರೆ ಆ ದಂಪತಿಗಳ ಸಾಮಾಜಿಕ ಜೀವನವು ಅಸಹ್ಯವಾಗುವುದು.

ಇದೆಂತಹ ಕಟ್ಟಳೆ ಎಂಬುದಾಗಿ ನಾನು ಅತ್ಯಾಶ್ಚರ್ಯಪಟ್ಟೆದ್ದೆ. ಈ ಸುದ್ದಿ ಕೇಳಿದ ಮೊದಲಲ್ಲಿ ನಾನು ನಂಬಲೂ ಇಲ್ಲ. ಆದರೆ ಒಂದು ದಿನ ಒಂದು ಘಟನೆ ನಡೆಯಿತು.

ನಾನು ಬೊಂಬ್ಯಾಯಲ್ಲಿದ್ದಾಗ ಒಂದು ದಿನ ಮನಮೋಹನ್‌ರ ಮನೆಗೆ ಹೋಗಿದ್ದೆ. ಆಗ ಅವರಲ್ಲಿ, ರತನ್‌ಲಾಲ್ ಎಂಬ ಆವರ ಬಂಧುವೊಬ್ಬರು ಪಿಸು ಪಿಸು ಮಾತನಾಡುತ್ತಿದ್ದರು. ನಾನು ಬಂದೊಡನೆಯೇ ಮಾತು ನಿಂತಿತು. ಮನಮೋಹನ್‌ರು ನನ್ನ ಕೂಡೆ ಉಪಚಾರದ ಎರಡು ಮಾತು ಮಾತನಾಡಿ, ಕ್ಷಮೆ ಕೇಳಿ ಒಳನಡೆದು ಆ ರತನ್‌ಲಾಲರ ಕೂಡೆ ವೈಯ್ಯಕ್ತಿಕವಾಗಿ ಮಾತನಾಡಿ ಕಳುಹಿಸಿಕೊಟ್ಟರು.

ಅವರು ತೆರಳಿದ ನಂತರ,ಸಲುಗೆಯಿಂದ "ಏನು ಗುಪ್ತ ವಿಷಯ"ವೆಂದು ನಾನು ಕೇಳಿತಿಳಿದೆ. ಆ ರತನ್‌ಲಾಲರಿಗೆ ವಿವಾಹವಾಗಿ ವರ್ಷ ಮೂರಾಯಿತು.

ಪತ್ನಿ ಗರ್ಭವತಿಯಾಗಲಿಲ್ಲ. ಅನೇಕ ಡಾಕ್ಟರರಿಗೆ ತೋರಿಸಿಯಾಯಿತು. ಪುಣ್ಯ ಕ್ಷೇತ್ರಗಳ ಸಂಚಾರವೂ ಆಯಿತು. ಊಹುಂ; ಫಲವಾಗಲಿಲ್ಲ. ಇವರ ಕುಟುಂಬದ ಕುರಿತು ಅವಹೇಳನಕ್ಕೆ ಮೊದಲಾಯಿತು. ಒಬ್ಬೊಬ್ಬರೇ ಬಂಧುಗಳು ಈ ಬಂಜೆ ದಂಪತಿಗಳಿಗೆ ಬಹಿಷ್ಕಾರ ಹಾಕಿದರು. ಆಗ, ರತನ್ ಲಾಲರು ತನ್ನ ಗುಣವತಿಯಾದ ಪತ್ನಿಗೆ ಈ ಉಪಾಯವನ್ನು ಸೂಚಿಸಿದರಂತೆ– ಹೇಗಾದರೂ ಮಾನ ಉಳಿಸುವ ಬಗ್ಗಾಗಿ. ಆದರೆ ಪತಿವ್ರತಾ ಶಿರೋಮಣಿ ಯಾದ ಆಕೆ ಜೀವ ಕ್ಕೊಯ್ದರೂ ಅನ್ಯ ಪುರುಷರ ಮೈಮುಟ್ಟುವುದಕ್ಕೆ ಒಪ್ಪಲೊ ಲ್ಲಳು. ಪರಿಸ್ಥಿತಿ ಭೀಕರವಾಗತೊಡಗಿ, ಆಪ್ತರಾದ ಮನಮೋಹನ್‌ರ ಕೂಡೆ ಸಮಾಲೋಚನೆಗಾಗಿ ಬಂದಿದ್ದರಂತೆ. ಅದಕ್ಕೆ ಮನಮೋಹನ್‌ರು "ಬಂ ದದ್ದು ಬರಲಿ—ಸಮಾಜಕ್ಕೆ ಬೆದರಿ ಹಿಂದೂ ಧರ್ಮದ ಮೂಲ ಶಿಸ್ತಿಗೆ ಮೀರಿ ನಡೆಯುವುದೇತಕ್ಕೆ? ಅಲ್ಲಿಯ ವ್ಯಾಪಾರ ಮುಚ್ಚಿ ಬೊಂಬ್ಬಾಗೆ ಬಂದು ಬಿಡಿ; ನಿಶ್ಚಿಂತೆಯಿಂದಿರಬಹುದು; ಇಲ್ಲಿ ವ್ಯಾಪಾರ ಬೆಳೆಸಲು ನಾನು ನೆರವಾಗುತ್ತೇನೆ" ಎಂದು ಆಶ್ವಾಸನೆಯಿತ್ತರಂತೆ.

ಆದರೆ ಏನು ವಿಪರೀತ? ಎರಡೇ ದಿನಗಳಲ್ಲಿ ಮನಮೋಹನರಿಗೆ ರತನ್ ಲಾಲರ ಪತ್ನಿ ವಿಷಪಾನ ಮಾಡಿ ಆಸುನೀಗಿದಳೆಂದು ತಂತಿ ಬಂತು! ಏನೆನ್ನ ಬೇಕು ಸಿಲ್ವರ್! ಇದು ಈಗಿನ ಹಿಂದೂ ಸಮಾಜ! ತನ್ನಿಂದಾಗಿ ಗಂಡನ ಮಾನ ವೇಕೆ ಹೋಗಬೇಕೆಂದು ದುಃಖಿಸಿ, ಆಕೆ ಜೀವ ತ್ಯಾಗಮಾಡಿದಳು.

ಇಲ್ಲಿ ಇಂತಹ ಸಾಮೂಹಿಕ ದುರವಸ್ಥೆಗಳನ್ನು ತಿದ್ದಿ ಸುಧಾರಣೆ ಮಾಡಲು ಯಾರಾದರೂ ಹೊರಟರೆಂದರೆ ಅವರೇ ತಿರಸ್ಕೃತರಾಗುವರು– ಬಹಿಷ್ಕೃತರಾಗುವರು.

ಹೀಗೆ ಸಂತಾನವಿಲ್ಲದೆ ಸಾಯಬಾರದು ಎಂಬ ಈ ಧೋರಣೆಯಿಂದಲೇ ಭಾರತದಲ್ಲಿ ಸಮಾಜಸೇವೆಯೆಸಗುವ ಸನ್ಯಾಸಿಗಳೆಡೆಗೆ ಮತ್ತು ಅವಿವಾಹಿತ ರಾಗಿ ತ್ಯಾಗಜೀವನ ಮಾಡುವವರೆಡೆಗೆ ಅತಿ ತೀವ್ರ ರೀತಿಯ ತಿರಸ್ಕಾರ ರೂಪು ಗೊಂಡಿದೆ. ಆ ಎಲ್ಲಾ ಕತೆ ಬಹು ಸ್ವಾರಸ್ಯವಾಗಿದೆ. ಆದರೆ ವಿಷಾದಕರವಾ ಗಿದೆ. ಪತ್ರ ಈಗಲೇ ಬಹಳ ದೀರ್ಘವಾಗಿ ಬೆಳೆಯಿತು, ಗೆಳೆಯಾ. ಆದ್ದರಿಂದ ಈ ಸಲ ಇಷ್ಟಕ್ಕೇ ನಿಲ್ಲಿಸುವೆ.

ಸಿಲ್ವರ್, ನಿನ್ನ ಮುದ್ದು ಮಗು ಕೇನ್ನಿಯ ವಿಚಾರ ಬರೆಯಲು ಮರೆತೇ

ಹೋಯಿತು. ಆಕೆ ಹೇಗಿದ್ದಾಳೆ? ಅವಳಿಗೆ ನನ್ನ ಪ್ರೇಮವನ್ನು ತಿಳಿಸು. ಮಗು ಏಂಡ್ರಿಯೂ ಕ್ಷೇಮವೆಂದು ಭಾವಿಸುತ್ತೇನೆ. ನಿಮ್ಮೊಳಗೆ ವಿರಸ ಬಂದು ಬಿಟ್ಟರೆ ಈ ಮಕ್ಕಳ ಗತಿಯೇನೋ ಎಂದು ಭಯಪಡುತ್ತಿದ್ದೇನೆ. ಆದ್ದರಿಂದಲೇ ನಿನ್ನ ಪತ್ರ ಬಂದಂದಿನಿಂದ ನಿಮಗಿಬ್ಬರಿಗೂ ಜ್ಞಾನೋದಯವಾಗಿ ನಿಮ್ಮದು ಸುಖ ಸಂಸಾರವಾಗಿಯೇ ಸಾಗುವಂತೆ ಪ್ರಭು ಏಸುವಿನಲ್ಲಿ ದಿನಾ ಪ್ರಾರ್ಥಿಸುತ್ತಿದ್ದೇನೆ. ನೀನೂ ಈ ಕುರಿತಾಗಿ ಬಿಡದೆ ಪ್ರಾರ್ಥಿಸಬೇಕೆಂದು ಒತ್ತಾಯದ ಕರೆಯೊಯುತ್ತೇನೆ. ನಿನ್ನ ಶ್ರೀಮತಿಗೆ ನನ್ನ ವಂದನೆ ಆಗತ್ಯ ತಿಳಿಸು.

ಇತಿ, ನಿನ್ನ ಆಪ್ತಮಿತ್ರ,

**ಜೋನ್ ಓರ್‌ಮನ್.**



# ೬

ಮದ್ರಾಸು,

ಪ್ರಿಯ ಸಿಲ್ವರ್, 6-4-1962.

ನನ್ನ ಹಿಂದಿನ ದೀರ್ಘ ಪತ್ರಕ್ಕೆ ಉತ್ತರವಾಗಿ, ಈ ಸಲ ನಿನ್ನಿಂದ ಕೇವಲ ನಾಲ್ಕು ಗೆರೆಯ ಚೀಟು ಮಾತ್ರ ಬಂತೇಕೆ ಎಂಬ ಚಿಂತೆಯಲ್ಲಿ ನಾನಿದ್ದೇನೆ. ಸದಾ ತನ್ನ ಪ್ರೇಮಪೂರಿತ ಹೃದಯದ ಕವಾಟವನ್ನು ತಡವಿಲ್ಲದೆಯೇ ತೆರೆಯುತ್ತಿದ್ದ ನನ್ನಗೆಳೆಯ ಸಿಲ್ವರ್‌ನನ್ನು ಈ ಸಲ ಅದ್ಯಾವ ಬಂಧನ ತಡೆಯಿತು? ಬಹುಶಃ ಹೃದಯದಲ್ಲಿ ಶಾಂತಿಯ ಕೊರತೆಯಿಂದ ಹಾಗಾಗಿರಬಹುದೇ?

ನಾವು ಭೌತಿಕ ನೆಲೆಯ ಸುಖಗಳನ್ನು ನಂಬಿಕೊಂಡಿದ್ದರೆ, ನಿಜವಾದ ಆತ್ಮತೃಪ್ತಿ, ಆತ್ಮಶಾಂತಿ ದೊರಕುವಂತಿಲ್ಲ. ಆಧ್ಯಾತ್ಮಿಕ ಕ್ಷೇತ್ರದಲ್ಲಿ ಮೇಲ್ಮಟ್ಟದ ಆನಂದದ ಮಾತಂತೂ ದೂರವೇ ಉಳಿಯಿತು. ಭೌತಿಕ ವಾದವನ್ನು ಹೊಂದಿಕೊಂಡಿರುವ ವ್ಯಕ್ತಿಗೆ ಸುಖಕ್ಕೆ ಬೇಕಾದ್ದೆಲ್ಲಾ ದೊರೆಯುವುದೆಂತು ? ದೊರೆತರೂ ಸುಖವುಳಿಯುವುದೆಂತು? ಆದಕ್ಕಾಗಿ, ಮನುಷ್ಯನ ನಿಜವಾದ ಮತ್ತು ನೈಜವಾದ ಸುಖ, ಆನಂದಗಳಿಗಾಗಿ ಪರಮಾತ್ಮನ ನೆಲೆಗೆ ಏರಬೇಕು— ಏರಲು ಯತ್ನಿಸಬೇಕು ಎಂಬುದು ಭಾರತೀಯ ವೇದಾಂತದ ತತ್ವಸಾರ.

ನನಗರಿವಿಲ್ಲದೆಯೇ ಭಾರತದ ಈ ದಿವ್ಯ ನೆಲಕ್ಕೆ ಎಳೆಯಲ್ಪಟ್ಟ ನಾನು ಈ ತತ್ವಸಾರವನ್ನು ಮೆಚ್ಚಿ ತಲೆದೂಗತೊಡಗಿದ್ದೇನೆ—ಮನ ಸೋತಿದ್ದೇನೆ. ಪಾಶ್ಚಾತ್ಯರಾದ ನಮ್ಮ ಅತಿ ಭೌತಿಕವಾದವು ಅದೇಕೋ ಒಗ್ಗದಂತಾಗಿದೆ.

ನೀನಂತೂ 'ಅತಿ ಭೌತಿಕವಾದಿ'ಯೆಂಬ ನಾಮಧೇಯವನ್ನೊಪ್ಪಿಕೊಳ್ಳ ದವನಾದರೂ, ಅದಕ್ಕೆ ತಕ್ಕವನೆಂಬುದನ್ನು ಯಾರೂ ಅಲ್ಲಗಳೆಯಲು ಸಾಧ್ಯ ವಿಲ್ಲ. ನಿನ್ನ ಕಣ ಕಣಗಳನ್ನೂ ತಿಳಿದ ನಾನಂತೂ ಅದನ್ನು ಘಂಟಾಘೋಷ ವಾಗಿ ಸಾರಲೇಬೇಕು.

ನಿನ್ನ ಆ ಸ್ವಭಾವದಿಂದ ಜನಿತವಾದ ಅತಿ ಚಪಲತೆಯಿಂದ ನಿನ್ನ ಇಂದಿನ ದುಃಖಗಳು ಉದ್ಭವವಾದುವು. ಗೆಳೆಯಾ, ನನ್ನ ಮಾತುಗಳಿಂದ ನೊಂದು ಕೊಳ್ಳಬೇಡ. ಬದಲಿಗೆ ನಿನ್ನ ವ್ಯಕ್ತಿತ್ವದ ಒಳ ನೋಟಕ್ಕೆ ತೊಡಗಿ ಸತ್ಯವನ್ನು ಕಂಡುಕೊ. ಅದರ ಪರಿವರ್ತನೆಗೆ ಯತ್ನಿಸಿ ನಿಜವಾದ ಅಮರ ಅನುಭವಗಳ ಪಾಲುಗಾರನಾಗಲು ಸಾಧ್ಯವಾಗುವುದೋ ನೋಡು. ಅದರ ಮೊದಲ ತರಬೇತಿ ಬೇಕಿದ್ದರೆ ಭಾರತದ ಈ ನೆಲಕ್ಕೆ ಬಂದಿಳಿ. ಈ ನಾಡಿನ ಮಹಾತ್ಮರ ಉಪದೇಶಗಳಿಂದ ಹೊಸ ಸಂಸ್ಕಾರಗಳನ್ನು ಗಳಿಸಿಕೊಳ್ಳಬಹುದು.

ಸಿಲ್ವರ್, ನಿನ್ನ ಕ್ಲೇಶಗಳೆಡೆಯಲ್ಲಿಯೂ ನಿನ್ನನ್ನು ವ್ಯಂಗ್ಯವಾದ ಚುಚ್ಚು ಮಾತುಗಳಿಂದ ನೋಯಿಸುತ್ತಿದ್ದೇನೆ ಎಂದು ಭಾವಿಸಬೇಡ. ನಿನ್ನ ಭ್ರಮನಿರ ಸನದೆಡೆಯಲ್ಲಾದರೂ, ನಿನ್ನಪಥವನ್ನು ನೀನು ಬದಲಿಸಿ, ಹೊಸ ಜೀವನ ಕ್ರಮ ವನ್ನು ಅನುಸರಿಸುವೆಯೇನೋ ಎಂಬೊಂದು ದೂರದ ಆಶೆಯಿಂದ ಹೀಗೆಲ್ಲಾ ಹರಟಿ ಬರೆದೆ.

ಇನ್ನು ಪುನಃ ಭಾರತದ ಕುರಿತಾದ ವಿವರಣೆಗೇನೆ ನಾನು ಮರಳುತ್ತೇನೆ ಮಿತ್ರಾ.

ನಾವು ಪಾಶ್ಚಿಮಾತ್ಯರು ಅತಿ ಭೌತಿಕವಾದಿಗಳಾದಂತೆಯೇ ಭಾರತೀ ಯರು ಹಿಂದೆ ಅತಿ ದೈವಿಕವಾದಿಗಳಾಗಿದ್ದರು. 'ಪ್ರಪಂಚ ತೊರೆಯಬೇಕು- ಪರಮಾರ್ಥ ದೊರೆಯಬೇಕು' ಇದು ಭಾರತೀಯ ಬುದ್ಧಿ ಜೀವಿಗಳ ಅಪ್ಪೇಕೆ ಎಲ್ಲರ ಸಾಮಾನ್ಯ ಮಾನಸಿಕ ಹಿನ್ನೆಲೆಯಾಗಿತ್ತು.

ಹಿಂದೆ ಪರಮಾತ್ಮನನ್ನು ಪಡೆಯಲು ಹಿಂದುವು ಎಷ್ಟು ಕಾತರನಾಗಿದ್ದ ನೆಂದರೆ, ಆತನು ಯಾವ ತ್ಯಾಗಕ್ಕೂ, ಕಷ್ಟ ಸಹಿಷ್ಣುತೆಗೂ ಸಿದ್ಧನಾಗಿದ್ದನು. ಪ್ರಪಂಚದ ಎಲ್ಲ ಸುಖ ಭೋಗಗಳನ್ನೂ ತ್ಯಜಿಸಿ, ತಪಸ್ಸನ್ನಾಚರಿಸಲು ಅಸಂಖ್ಯ ಜನರು ಮುಂದಾಗುತ್ತಿದ್ದರು.

ಆದ್ದರಿಂದಲೇ ಸತ್ಯಾನ್ವೇಷಣೆಯ ಪಥವಾಗಿ, ತ್ಯಾಗದ ಕುರುಹಾಗಿ

ಸನ್ಯಾಸವೆಂಬ ಪದ್ಧತಿಯು ವೇದಕಾಲದಿಂದಲೇ ಭಾರತದಲ್ಲಿ ರೂಢಿಯಲ್ಲಿ ಬಂತು.

ಸನ್ಯಾಸವೆಂದರೆ, ಚಿತ್ತೈಕಾಗ್ರದಿಂದ ಅಂತರಂಗದಲ್ಲಿ ಆತ್ಮಾನುಭವ ಮಾಡಿಕೊಳ್ಳುವ ಕಠಿಣ ದೀಕ್ಷೆ ವಹಿಸುವುದು. ಸನ್ಯಾಸಿಯಾಗುವಾತನು, ಯೋಗ್ಯ ಉಪದೇಶ ನೀಡಬಲ್ಲ ಗುರುವೊಬ್ಬನನ್ನು ಆಶ್ರಯಿಸಿ, ಆತನ ನೇತೃತ್ವದಲ್ಲಿ ಈ ಕ್ರಾಂತಿಕಾರಕ ಹೆಜ್ಜೆಯಿಡುತ್ತಾನೆ. ಸನ್ಯಾಸಿಯು ತನ್ನ ಕುಟುಂಬ, ಬಂಧು ಬಾಂಧವರು ಅಣ್ಣ ತಮ್ಮಂದಿರು—ಅಷ್ಟೇಕೆ? ತಂದೆ ತಾಯಂದಿರ ಸಂಪರ್ಕವನ್ನು ಕೂಡಾ ತ್ಯಜಿಸಿ, ಎಲ್ಲಾ ಶೃಂಗಾರಸುಖ, ಅಭಿಮಾನ, ಅಸೂಯೆ, ಆಸೆ, ಆಕಾಂಕ್ಷೆ ಮತ್ತು ಲಜ್ಜೆ, ಲಾಸ್ಯಗಳನ್ನೆಲ್ಲಾ ತೊರೆದು ವ್ರಜ ಹೋಮವೆಂಬ ಸಣ್ಣ ಯಜ್ಞ ರೂಪದ ಕ್ರಿಯೆಯನ್ನಾಚರಿಸಿ, ಗುರು ಸನ್ನಿಧಿಯಲ್ಲಿ, ತಲೆ ಬೋಳಿಸಿ, ದಿಗಂಬರನಾಗಿ ತೆರಳಬೇಕು. ಅಲ್ಲಿಗೆ ಪ್ರಪಂಚಕ್ಕೂ ಆತನಿಗೂ ಇದ್ದ ಹಿಂದಿನ ಸಂಬಂಧಗಳೆಲ್ಲ ಕದಲಿ ಹೋಗುವವು. ಆತನು ಗುರುವಿನ ಬಳಿಗೆ ತೆರಳಿ, ಆತನಿಂದ 'ಓಂಕಾರದ' ಉಪದೇಶ ಪಡಕೊಂಡು ಕಾವಿ ಬಟ್ಟೆ ಧರಿಸಿ, ಸಾಧನೆಯ ದಿವ್ಯ ಪಥದಲ್ಲಿ ಮುಂದೆ ಸಾಗುತ್ತ, ಊರಿಂದೂರಿಗೆ ಕಾಮ ವಿವರ್ಜಿತನಾಗಿ ಅಲೆಯಬೇಕು. ತನ್ನದೆಂಬ ಏನನ್ನೂ ಇಟ್ಟುಕೊಳ್ಳದೆ, ತುಳಿದ ನೆಲವನ್ನೇ ನೆಲೆಯಾಗಿ, ಬಾನನ್ನೇ ಛಾವಣಿಯಾಗಿ ನೆನಸುತ್ತಾ ನಿಂತಲ್ಲಿ ನಿಲ್ಲದೆ, ಕುಳಿತಲ್ಲಿ ಕುಳ್ಳಿರದೆ, ಯಾರನ್ನೂ ತನ್ನವರೆಂಬುದಾಗಿ ಭಾವಿಸದೆ, ಪರಕೀಯರೆಂಬುದಾಗಿ ತಿರಸ್ಕರಿಸದೆ, ಮೋಹದ ಮಾಯಾ ಜಾಲದಿಂದ ಬಿಡುಗಡೆ ಹೊಂದಿ,ಅಡಿಗಡಿಗೆ ಪರಶಿವನನ್ನೇನೆಚ್ಚಿಕೊಂಡು, ಆತನನ್ನೇ ಧ್ಯಾನಿಸುತ್ತಾ, ಆತನೇ ಪರಮಗತಿಯೆಂದು ನಂಬಿ ನಲಿಯುತ್ತ ಆತನಲ್ಲೇ ಒಂದಾಗಿ ಬದುಕಿ ಬಾಳಬೇಕು. ಹೊರಗೆಲ್ಲ ಕತ್ತಲೆಯಾಗಿ, ಒಳಗೆಲ್ಲ ಬೆಳಕಾಗಿ, ಬಾಹ್ಯವೆಲ್ಲ ಕುರೂಪವಾಗಿ, ಅಂತರ್ಯವೆಲ್ಲ ಸುರೂಪವಾಗಿ, ರಸಾತೀತ ರಸಲೋಕದಲ್ಲಿ ವ್ಯವಹರಿಸುತ್ತ ಜ್ಯೋತಿರ್ಮಯನಾಗಿ ಬೆಳಗಬೇಕು. ಯಾವುದಕ್ಕಾಗಿಯೂ ದುಃಖಿಸದೆ, ಯಾವುದರಿಂದಲೂ ಸುಖಿಸದೆ, ಮಾನಹಾನಿಗೆ ಕುಗ್ಗದೆ, ಮರ್ಯಾದೆ ಬಂತೆಂದು ಹಿಗ್ಗದೆ, ಉಣಿಸಿಲ್ಲವೆಂದು ಮರುಗದೆ, ಊಟ ದೊರೆಯಿತೆಂದು ಕುಣಿಯದೆ, ಸಮಚಿತ್ತತೆಯ ದಿವ್ಯತೆಯಲ್ಲಿ ಪರಮಾತ್ಮ ಪ್ರಾಪ್ತಿಗಾಗಿ ಜೀವಧಾರಣೆ ಮಾಡಿಕೊಂಡಿರಬೇಕು.

ಸಿಲ್ವರ್, ಭಾರತೀಯ ಸನ್ಯಾಸಕ್ಕಿಂತ ಕಠಿಣ ಸಾಧನೆಯಿಲ್ಲ. ಅದಕ್ಕಿಂತಲೂ ಮಿಗಿಲಾದ ತಪಸ್ಸಿಲ್ಲ; ಅದಕ್ಕಿಂತ ಹಿರಿದಾದ ದೇವರ ರಾಜ್ಯಕ್ಕೆ ತೆರಳುವ

ದಿವ್ಯ ಪಥವಿಲ್ಲ. ಅವರ ಜೀವನಕ್ಕೆ ಹೋಲಿಸಿದರೆ ಕ್ರೈಸ್ತ ಸನ್ಯಾಸಿಗಳೆನಿಸುವ ಪಾದರಿಗಳ ಜೀವಿತವೆಂದರೆ ಅರಮನೆಯ ಆವಾಸವೇ ಸರಿ. ಬೇಕಷ್ಟು ಭದ್ರತೆಯಿರುವ ಆಶ್ರಮದಲ್ಲಿ ನೆಲಸಿ, ಮೈತುಂಬಾ ವಿಶಿಷ್ಟವಾದ್ದೇ ಆದರೂ ಘನಸ್ಥಿಕೆಯಿಂದ ಕೂಡಿದ ಉಡುಪನ್ನು ಧರಿಸಿ, ಮದ್ಯ ಮಾಂಸಗಳಿಂದ ಕೂಡಿದ ರುಚಿ ರುಚಿಯಾದ ಭಕ್ಷ್ಯ ಭೋಜ್ಯಗಳನ್ನು ತಿನ್ನುತ್ತಾ, ಆಧುನಿಕ ಭೌತಿಕ ಅನುಕೂಲತೆಗಳನ್ನೆಲ್ಲಾ ಅನುಭವಿಸುತ್ತಾ, ಪರಹಿತಕ್ಕಾಗಿಯೇ ಆದರೂ, ಸುಖವಾಗಿ ಬಾಳುವ ನಮ್ಮ ಪಾದರಿಗಳಂತಲ್ಲ ಭಾರತದ ನಿಜ ಸನ್ಯಾಸಿ.

ಪರಮಾತ್ಮನನ್ನು ಪಡೆಯುವ ರಾಜ ಮಾರ್ಗವು ಸನ್ಯಾಸವಾದರೆ, ಲೋಕ ಕಲ್ಯಾಣದ ಪರಮೋಚ್ಚ ಗುರಿಯನ್ನು ಸಾಧಿಸುವ ದಾರಿಯೂ ಸನ್ಯಾಸದ ಜ್ಯೋತಿರ್ಮಯ ಸ್ಥಿತಿಯೆಂಬುದು ಭಾರತದ ಪ್ರಾಚೀನ ನಿಲುಮೆ.

ಆದ್ದರಿಂದಲೇ ಹಿಂದೂ ಧರ್ಮದಲ್ಲಿ, ಅದರ ತತ್ವ, ಸಿದ್ಧಾಂತಗಳಲ್ಲಿ ಸನ್ಯಾಸಕ್ಕೆ ಅಪೂರ್ವವಾದ ಪ್ರಾಧಾನ್ಯತೆಯಿದೆ. ಕೆಲವರು ಚಿಕ್ಕಂದಿನಿಂದಲೇ ಬಾಹ್ಯ ವ್ಯವಹಾರಕ್ಕಿಳಿಯದೆ, ನೇರವಾಗಿ ಸನ್ಯಾಸಕ್ಕೇರಬೇಕೆಂಬುದು ಈ ಧರ್ಮದ ಆದರ್ಶವಾಗಿದೆಯಲ್ಲದೆ, ಎಲ್ಲ ಮಾನವರೂ, ಜೀವನದ ಕಟ್ಟಕಡೆಯ ಹಂತದಲ್ಲಿ ಸನ್ಯಾಸ ಸ್ವೀಕರಿಬೇಕೆಂಬುದು ಅದರ ದಿವ್ಯ ಸಿದ್ಧಾಂತ. ಅದಕ್ಕಾಗಿಯೇ ವ್ಯಾವಹಾರಿಕ ಪ್ರಪಂಚದಲ್ಲಿರುವ ಪ್ರತಿಯೊಬ್ಬನಿಗೂ ಈ ಧರ್ಮವು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ,ಸನ್ಯಾಸ, ಎಂಬ ನಾಲ್ಕು ಹಂತಗಳನ್ನು ವಿಧಿಸಿದೆ.

ಬ್ರಹ್ಮಚರ್ಯವೆಂದರೆ, ಶೀಲ ಸಂಪನ್ನನಾಗಿ, ಗುಣದ ನಿಧಿಯಾಗಿ, ಗುರುವಿನ ಸನ್ನಿಧಿಯಲ್ಲಿ ಆತನ ಆಶ್ರಮದಲ್ಲೇ ಇದ್ದುಕೊಂಡು, ಆತನನ್ನು ಸೇವೆಮಾಡುತ್ತಾ, ಆತನಿಂದ ವೇದ, ಶಾಸ್ತ್ರ, ವೇದಾಂತ,ವಿಜ್ಞಾನ, ಸಂಸ್ಕೃತ ಸಾಹಿತ್ಯ, ವ್ಯಾಕರಣ, ಕಾವ್ಯ ಮೊದಲಾದ ಅನೇಕ ವಿದ್ಯಾಸಂಪತ್ತನ್ನು ಪಡೆಯುತ್ತಾ ಪರಮಾತ್ಮನ ಸಾಧನೆ ಮಾಡುವ ಆಚರಣೆಯಲ್ಲಿರುವುದು ಎಂದರ್ಥ. ಗೃಹಸ್ಥನೆಂದರೆ, ಗುರು ಸನ್ನಿಧಿಯಲ್ಲಿ ಸಕಲ ವಿದ್ಯೆ ಪೂರೈಸಿ, ಗುರುದಕ್ಷಿಣೆ ಸಲ್ಲಿಸಿ, ಅನುಕೂಲೆಯೂ, ಗುಣವತಿಯೂ ಆದ ಕುಮಾರಿಯೋರ್ವಳನ್ನು ವಿವಾಹವಾಗಿ, ವೈವಾಹಿಕ ಜೀವನ ಮಾಡುತ್ತಾಲೋಕ ಹಿತಾರ್ಥವಾಗಿಯೂ, ಪರಮಾತ್ಮ ಪೂಜಾರ್ಥವಾಗಿಯೂ ಬದುಕುವುದೆಂದರ್ಥ. ವಾನಪ್ರಸ್ಥ ಎಂದರೆ, ಸುಮಾರು ಇಳಿವಯಸ್ಸಿನಲ್ಲಿ ಮಕ್ಕಳೆಲ್ಲ ಬಲಿತು ಸ್ವತಂತ್ರರಾದ ಮೇಲೆ, ಸತಿ

ಪತಿಯರಿಬ್ಬರೂ ಗೃಹಕೃತ್ಯ ಬಿಟ್ಟು ಅಲ್ಲಿಯ ಭದ್ರತೆ ಮತ್ತು ಆಶಾಪಾಶಗಳನ್ನೂ ತೊರೆದು ಕಾನನಕ್ಕೆ ತೆರಳಿ, ಪರಮಾತ್ಮನಲ್ಲೇ ಮನಸ್ಸನ್ನು ಕೂಡಿಸಿಕೊಂಡು, ಸತಿಪತಿಯರ ನಡುವಿನ ಕಾಮ, ಮೋಹಗಳನ್ನು ಅಳಿಸಿ, ಜತೆಯಾಗಿ ಸಾಧನೆ ಮಾಡುವುದೆಂದರ್ಥ. ಕಡೆಯ ಹಂತವಾದ ಸನ್ಯಾಸದಲ್ಲಿ ಸತಿ, ಪತಿಯರೊಳಗಿನ ಎಲ್ಲ ಸಂಬಂಧವೂ ಅಳಿದು ಹೋಗಿ ಇಬ್ಬರೂ ತಮ್ಮ ದಿವ್ಯವಾದ ಚರಮ ಯಾತ್ರೆಯಲ್ಲಿ ಸ್ವತಂತ್ರರಾಗಿ ನಡೆದು ಪ್ರಪಂಚದ ಆದಿಶಕ್ತಿಯಾದ ಪ್ರಕೃತಿಯ ಮಡಿಲಲ್ಲಿ ಹಾಯಾಗಿ ವಿರಮಿಸುತ್ತ, ಆಕೆ ನೀಡಿದ್ದನ್ನೇ ತೃಪ್ತಿಯಿಂದ ಸ್ವೀಕರಿಸಿ, ಮೇಲೆ ನಾನು ವರ್ಣಿಸಿದಂತೆ ದೇಹದ ಬಂಧನ ಕಳಚಿ ಹೋಗುವ ತನಕವೂ ತಪೋಧನರಾಗಿ, ತೇಜಸ್ವಿಗಳಾಗಿ ಜೀವನ ಸಾಗಿಸಿ, ಕೈವಲ್ಯವನ್ನು ಪಡೆಯುತ್ತಾರೆ.

ಪ್ರತಿಯೋರ್ವ ಮಾನವನೂ ತನ್ನ ಜೀವನದ ಮಹಾಯಾತ್ರೆಯಲ್ಲಿ ಈ ಪರಮ ಹಂತಕ್ಕೆ ಮುಟ್ಟಿ ಧನ್ಯನಾಗಲೇ ಬೇಕೆಂಬುದು ಹಿಂದೂ ಧರ್ಮದ ಉದಾತ್ತ ನಿರೀಕ್ಷಣೆಯಾಗಿದೆ.

ಕೆಲವರಂತೂ, ಗೃಹಸ್ಥ, ವಾನಪ್ರಸ್ಥ ಎಂಬ ಮಧ್ಯದ ಎರಡು ತ್ರಾಸದಾಯಕವೂ ದಾರಿಗೆಡಿಸಲು ಆಸ್ಪದವುಳ್ಳುದೂ ಆದ ಹಂತಗಳನ್ನು ಲಂಘಿಸಿ, ಅಂದರೆ ಅದಕ್ಕೆ ಕಾಲನ್ನೇ ಇಡದೆ, ನೇರವಾಗಿ ಸನ್ಯಾಸವನ್ನೇ ಸ್ವೀಕರಿಸಿ, ಆಜೀವ ಪರ್ಯಂತ ಸನ್ಯಾಸಿಗಳಾಗಿ ಜೀವನ ಸಾಗಿಸಿ, ಪರಮ ಪುರುಷರಾಗಿ ಬಾಳುತ್ತಿದ್ದರು.

ಆದ್ದರಿಂದ ಹಿಂದೆ ಭಾರತೀಯ ಸಮಾಜದಲ್ಲಿ ಸನ್ಯಾಸಿಗಳನ್ನು ಗೌರವಿಸದವರಿರಲಿಲ್ಲ. ಸ್ತ್ರೀಯರಿಗಂತೂ, ಸ್ತ್ರೀಯರನ್ನೇ ಗೆದ್ದ ವೀರ ಪುರುಷರಾದ ಸನ್ಯಾಸಿಗಳನ್ನು ಕಂಡರೆ ಪರಮ ಭಕ್ತಿ–ಅಗಾಧ ಗೌರವ. ಅಂತಹ ಸನ್ಯಾಸಿಯನ್ನು ಮನೆ ಗೆಬರಮಾಡಿ ಆದರಿಸದವರಿರಲಿಲ್ಲ.—ಭಿಕ್ಷೆ ನೀಡದವರಿರಲಿಲ್ಲ.

ಆದರೆ, ಕಾಲಾನುಭಾಗದಲ್ಲಿ ಹಿಂದೆಯೇ ನಾನು ವರ್ಣಿಸಿದಂತೆ ಹಿಂದೂ ಧರ್ಮವು ಅವನತಿಯನ್ನೈದಿ, ನಿಜ ಸಾಧನೆಯು ಮೂಲೆಪಾಲಾದಾಗ, ಸನ್ಯಾಸಿಗಳಿಗೆ ದೊರೆಯುವ ಗೌರವಾದರಗಳನ್ನು ಮನಗಂಡು ಹೊಟ್ಟೆ ಹೊರೆಯುವುದಕ್ಕಾಗಿಯೇ ಎಷ್ಟೋ ಜನರು ಸನ್ಯಾಸಿಗಳಾಗತೊಡಗಿದರು. ಸನ್ಯಾಸಿಯು ಪರಿಶುದ್ಧಾತ್ಮನೆಂದು ಬಗೆದು ತನ್ನೆಡೆಗೆ ಬಂದ ನಿಷ್ಕಳಂಕ ಸ್ತ್ರೀಯರನ್ನು ವಂಚಿಸಿ ಮಾನ ಕೆಡಿಸುವುದಕ್ಕಾಗಿಯೂ ಅನೇಕರು ಸನ್ಯಾಸಿಗಳ ವೇಷ ತೊಟ್ಟುಕೊಂಡರು.

ಕಾಲಾನುಭಾಗದಲ್ಲಿ ಈ ಸನ್ಯಾಸಿಗಳಲ್ಲಿ ಯೋಗ್ಯರಾದ ಅನೇಕರಿಗೆ ಅನೇಕ ಧಾರ್ಮಿಕ ಅಧಿಕಾರಗಳು ಸ್ಥಾಪಿಸಲ್ಪಟ್ಟು ಅವರು ರಾಜಭೋಗಗಳನ್ನು ಪಡೆಯುತ್ತಿದ್ದರು. ಆದರೆ ಭಾರತದ ದುರದೃಷ್ಟ ನೋಡು. ಅವರ ಮುಂದಿನ ತಲೆಮಾರಿನ ಸನ್ಯಾಸಿಗಳಲ್ಲಿ ಕೆಲವರು ಕೇವಲ ಆ ಭೋಗದಾಸೆಯಿಂದ ಅಂಥ ಧಾರ್ಮಿಕ ಕೇಂದ್ರಗಳಿಗೆ ಸೇರಿಕೊಂಡು, ಹೆಸರಿಗೆ ಮಾತ್ರ ಸನ್ಯಾಸಿಯಾಗಿದ್ದು, ಒಳಗಿಂದೊಳಗೇ ತೀರಾ ಅನೈತಿಕ ಜೀವನ ಮಾಡುತ್ತಾ ಜನರನ್ನು ಆರ್ಥಿಕವಾಗಿಯೂ ಇತರ ರೀತಿಗಳಿಂದಲೂ ವಂಚಿಸತೊಡಗಿದರು.

ಇದೆಲ್ಲದರ ಪರಿಣಾಮವಾಗಿ ಹಿಂದೆ ಸನ್ಯಾಸಕ್ಕಿದ್ದ ಮೇಲ್ಮೆ ಹೋಗಿ ಇತ್ತೀಚೆಗೆ ಹಿಂದೂ ಸಮಾಜದಲ್ಲಿ ಸನ್ಯಾಸಕ್ಕೆ ಹಾಗೂ ಸನ್ಯಾಸ ಎಂಬ ಹೆಸರಿಗೇ ಒಂದು ತೀವ್ರ ರೀತಿಯ ತಿರಸ್ಕಾರ ಬರತೊಡಗಿದೆ. ಸನ್ಯಾಸ ಎಂದರೇ ಮೋಸ ಎಂಬುದಾಗಿ ಭಾವಿಸುವ ಜನರಿಗೇನೂ ಕಡಿಮೆಯಿಲ್ಲ.

ಈಗಲೂ ಕೂಡಾ, ಭಾರತದಲ್ಲಿ ದುಡಿಯದೆ, ಕಷ್ಟಪಡದೆ, ಹೊಟ್ಟೆ ಹೊರೆಯುವ ಹಾಗೂ, ಊರಿಂದೂರಿಗೆ ರೈಲಿನಲ್ಲಿ ಪ್ರಯಾಣ ಮಾಡುವ ಏಕ ಮಾತ್ರ ರಾಜಮಾರ್ಗವು ಸನ್ಯಾಸದ ವೇಷವಾಗಿದೆ. ಆದ್ದರಿಂದ ಆ ವೇಷ ಧರಿಸಿದವರಿಂದು ಮಿಲಿಯಗಟ್ಟಲೆಯಲ್ಲಿ ಭಾರತದಲ್ಲಿದ್ದಾರೆ. ಇವರೆಡೆಯಲ್ಲಿ ಸೇಕಡಾ ಕೆಲವೇ ಮಂದಿ ನಿಜವಾದ ಸನ್ಯಾಸಿಗಳಾಗಿದ್ದಾರೆ; ಉಳಿದವರೆಲ್ಲಾ ಶುದ್ಧ ಕಪಟಿಗಳು, ವಂಚಕರು, ದ್ರೋಹಿಗಳು. ಕೆಲವರಂತೂ ಕೊಲೆಗಡುಕರು ಕೂಡಾ ಆಗಿದ್ದಾರೆ.

ಸಿಲ್ವರ್, ಇಲ್ಲಿಯು ಸನ್ಯಾಸದ ಕುರಿತಾದ ಶ್ಲಾಘನೆ ನಾನು ಮಾಡಿದೆ ನಿಜ; ಅದರೆ ಅದರಲ್ಲಿ ಒಂದು ಕೊರತೆಯೂ ಇದೆ ಎಂದು ನಾನು ಭಾವಿಸುತ್ತೇನೆ. ಭಾರತದ ಸನ್ಯಾಸಿಗಳು ಹಿಂದಿನಿಂದಲೂ ಕೂಡಾ, ಆಧ್ಯಾತ್ಮ ಸಾಧನೆಯ ಒಂದೇ ಗುರಿಯಿಟ್ಟುಕೊಂಡವರಲ್ಲದೆ, ಸಮಾಜದ ಮತ್ತು ದೇಶದ ಸಾಮೂಹಿಕ ಸೇವೆಯನ್ನೇ ಗುರಿಯಾಗಿಟ್ಟುಕೊಂಡು, ಆದಕ್ಕಾಗಿಯೇ ಜೀವಿತವನ್ನು ಮೀಸಲಾಗಿಟ್ಟ ಉದಾಹರಣೆಗಳು ತೀರಾ ಕಡಿಮೆ. ದೇಶದ ದುರ್ವಿಧಿಯೆಂಬಂತೆ ಅದೇ ಪರಂಪರೆ ಹಿಂದೂ ದೇಶದ ಸನ್ಯಾಸಿಗಳಲ್ಲಿ ಬೆಳೆದು ಬಂತು.

ದೇಶಕ್ಕಾಗಿ, ಜನತೆಯ ಒಳಿತಿಗಾಗಿ ದುಡಿಯದಿರುವುದು ಮಾತ್ರವಲ್ಲ– ಇತ್ತೀಚೆಗೆ ಕಪಟಾರಚಣೆಯ,ವಂಚನೆಯ ಜೀವನಮಾಡಿ ಉದರಂಭರಣ ಮಾಡುವುದು-ಈ ಎರಡೂ ಕಾರಣಗಳಿಂದ ಭಾರತೀಯ ಸನ್ಯಾಸಿಯಿಂದು ತನ್ನದೇಶ

ದಲ್ಲೇ ತಿರಸ್ಕಾರಕ್ಕೆ ಈಡಾಗಿದ್ದಾನೆ. ಇದು ತೀವ್ರ ದುಃಖದ ಸಂಗತಿಯೆಂದು ನಿನಗನಿಸುವುದಿಲ್ಲವೇ ಸಿಲ್ವರ್? [ಅಲ್ಲ–ನಿನಗೆ ಸನ್ಯಾಸವೆಂದರೇ ಆಗದು ಅಲ್ಲವೆ?]

ಇದರಿಂದ ಉಂಟಾದ ದುಷ್ಪರಿಣಾಮವೆಂದರೆ ಭಾರತದ ಯುವಕರು ಸಾಕಷ್ಟು ಸಂಖ್ಯೆಯಲ್ಲಿ ಸನ್ಯಾಸದೆಡೆಗೆ ಆಕರ್ಷಿತರಾಗುವುದಿಲ್ಲ. ದೇಶಕ್ಕಾಗಿ, ಸಮಾಜಕ್ಕಾಗಿ ದುಡಿಯುವ ಉದ್ದೇಶದಿಂದ ಸನ್ಯಾಸ ಜೀವನಕ್ಕೆ ಪ್ರವೇಶಿಸು ವವರು ಅತ್ಯಲ್ಪ.

ಇಲ್ಲಿಯ ಸ್ಥಿತಿಗತಿ ನೋಡುವಾಗ, ನಮ್ಮ ಸಂಯುಕ್ತ ಅಮೇರಿಕಾದಲ್ಲಿ ಹಾಗೂ ಇತರ ಅನೇಕ ದೇಶಗಳಲ್ಲಿ ಕ್ರೈಸ್ತ ಧರ್ಮದ ಆಶ್ರಯದಲ್ಲಿ ಎಷ್ಟೋ ಯುವಕರು ನಮ್ಮದೇ ರೀತಿಯಲ್ಲಿ ಸನ್ಯಾಸ ದೀಕ್ಷೆ ಸ್ವೀಕರಿಸಿ, ಪಾದರಿಗಳಾಗಿ, ಮಾನವ ಜನಾಂಗದ ಕಲ್ಯಾಣಕ್ಕಾಗಿ ಹೋರಾಡಲು, ಆ ಮಹಾ ಧ್ಯೇಯ ಕ್ಕಾಗಿ ಜೀವನ ಸವೆಯಿಸಲು ಬರುವುದರ ಮಹತ್ವ ನಮಗೆ ತಿಳಿಯದಿರದು.

ಅಮೇರಿಕಾದಿಂದ, ಎಷ್ಟು ಮಂದಿ ಮಿಲಿಯಾಧೀಶರ ಮಕ್ಕಳು, ಪಾದರಿ ಗಳಾಗಿ ಸೇರಿ, ಭಾರತದ ದೂರದ ಅಸ್ಸಾಮಿನ ಗುಡ್ಡಗಾಡು ಪ್ರದೇಶದಲ್ಲಿ ಮತಾಂತರ ಮಾಡುವ ಉದ್ದೇಶದಿಂದಲೇ ಆದರೂ ಕಷ್ಟತರವಾದ ಜೀವನ ಮಾಡುತ್ತಾ ಹೋರಾಡುತ್ತಿಲ್ಲ! ಭಾರತದಲ್ಲಿ ಜನರ ಉನ್ನತಿಗಾಗಿ, ತಮ್ಮ ಧರ್ಮದ ಉನ್ನತಿಗಾಗಿ ಜೀವನಾರ್ಪಣೆ ಮಾಡುವ ಅಂತಹ ಉದಾಹರಣೆಯು ಎಷ್ಟು ಅಪರೂಪ!

ಭಾರತದಲ್ಲಿ ಬೇರೆ ಬೇರೆ ದೇಶದ, ಅನೇಕ ಪಂಗಡಗಳಿಗೆ ಸೇರಿದ ಕ್ರೈಸ್ತ ಪಾದರಿಗಳು ಮಿಶನರಿಗಳಾಗಿ ತಮ್ಮಧರ್ಮದ ಉತ್ಕರ್ಷಕ್ಕಾಗಿ ಅವ್ಯಾಹತವಾಗಿ ದುಡಿಯುತ್ತಿದ್ದಾರೆ. ಅಷ್ಟೇಕೆ— ಸಹಸ್ರಾರು ಭಾರತೀಯ ಕ್ರೈಸ್ತ ಮಿಶನರಿ ಗಳೂ ತಾವು ಪವಿತ್ರವೆಂದು ಭಾವಿಸುವ ಈ ಕಾರ್ಯದಲ್ಲಿ ಜೀವನ ಸವೆಸುತ್ತಿ ದ್ದಾರೆ.

ಸಿಲ್ವರ್, ಆದರೆ, ಈ ಪಾದರಿಗಳು ಬಹಳ ಸಮೀಪ ದೃಷ್ಟಿಯುಳ್ಳವರೂ ಸಂಕುಚಿತ ಧರ್ಮಾಂಧತೆಯುಳ್ಳವರೂ ಆಗಿದ್ದಾರೆಂಬುದು ವಿಷಾದಕರವಾಗಿದೆ. ಏಕೆಂದರೆ ಹಿಂದೂ ಧರ್ಮ ನಾಶವಾದರೆ, ಕ್ರೈಸ್ತ ಧರ್ಮ ಬೆಳೆಯುವುದು ಎಂದ ವರು ಭ್ರಾಂತಿ ಪಟ್ಟಿದ್ದಾರೆ! ಅತಿ ವೈಜ್ಞಾನಿಕ ಸತ್ಯದ ಮೇಲೆ ನಿಂತಿರುವ, ಸಕಲ ಧರ್ಮಗಳಿಗೂ ತಾಯಂತಿರುವ ಹಿಂದೂಧರ್ಮವು ಅಳಿದರೆ ನಾಸ್ತಿ

ಕತೆಗೆ ಗೊಬ್ಬರವಿಟ್ಟಂತೆ ಎಂಬುದೂ, ಹಿಂದೂ ಧರ್ಮವು ಬೆಳೆದರೆ ಆಸ್ತಿ ಕತೆಯು ಸಹಸ್ರ ತೋಳನ್ನು ಪಡೆದಂತೆ ಎಂಬುದೂ ಅವರಿಗೆ, ಆ ಪಾದರಿಗಳಿಗೆ ಪಾಪ! ತಿಳಿಯುವುದೇ ಇಲ್ಲ. ಅವರಿಗೆ ಅವರ ಸೆಮಿನರಿಗಳಲ್ಲಿ ಏನನ್ನು ಹೇಳಲು ಕಲಿಸುತ್ತಾರೋ, ಅದನ್ನೇ ಕಂಠಪಾಠಮಾಡಿ ಗಿಳಿಯಂತೆ ಕಂಡ ಕಂಡವರಲ್ಲಿ ಹೇಳಿ ಬಿಡುತ್ತಾರೆ. ವಿಚಾರ, ಅನುಭಾವ, ಮಹಾಭಾವ, ಭಾವಾತೀತ ತನ್ಮಯತೆ, ಸಮಾಧಿ, ನಿರ್ವಿಕಲ್ಪ ಸಮಾಧಿ—ಒಂದೂ ಅವರಿಗೆ ತಿಳಿದಿಲ್ಲ. "ತಪ್ಪು ಮಾಡಿದರೆ ಒಂದು ದಿನ ದೇವರ ಮುಂದೆ ಉತ್ತರವಾದಿಯಾಗಿ ನಿಲ್ಲಬೇಕು; ದೇವರ ರಾಜ್ಯಕ್ಕೆ ಪ್ರವೇಶವಿಲ್ಲ"— ಇಷ್ಟೆ ಅವರು ಕಲಿತ ಕಂಠಪಾಠದ ಮಾತು. ದೇವರೆಲ್ಲಿ? ದೇವರ ರಾಜ್ಯಕ್ಕೆ ಪ್ರವೇಶವೆಂದರೇನು? ಒಂದೂ ಅವರಿಗೆ ತಿಳಿಯದು. ಶಬ್ದದ ಸೀಮೆಯಿಂದಾಚೆಗೆ ಅದಕ್ಕಿರುವ ಅರ್ಥ ಅವರಿಗೆಲ್ಲಿ ತಿಳಿಯಬೇಕು ಪಾಪ!

ಅದರ ವಿವರಣೆ ಕೊಡಲು ಹಿಂದೂ ಧರ್ಮದ ಸಿಂಹವಾಣಿಯೇಬೇಕು. ಸ್ವತಂತ್ರ ವಿಚಾರ ಮತ್ತು ಅಧ್ಯಾತ್ಮ ಸಾಧನೆಯಲ್ಲಿ ಪ್ರಯೋಗ ಮಾಡುವುದಕ್ಕೆ ಸ್ವಾತಂತ್ರ್ಯ ನೀಡದ ಕ್ರೈಸ್ತ ಧರ್ಮದಲ್ಲಿ, ಅದರ ಅನುಯಾಯಿಗಳು ಈ ಮಹಾ ಸತ್ಯಗಳನ್ನು ಹೇಗೆ ತಿಳಿದುಕೊಳ್ಳಬೇಕು? ಎಲ್ಲಿ ತಿಳಿದುಕೊಳ್ಳಬೇಕು?

ಸರ್ವಧರ್ಮ ಸಮನ್ವಯದ ವೈಜ್ಞಾನಿಕ ಸಿದ್ಧಾಂತ ಬೀರಿ,ಎಲ್ಲ ಧರ್ಮದ ಅರ್ಥವನ್ನೂ ಸ್ಪಷ್ಟಗಾಣಿಸುವ ಮಹಾಮಾತೆ ಹಿಂದೂ ಧರ್ಮವನ್ನು ಬುಡ ಕಡಿಯಲು ನೋಡುವ ಕ್ರೈಸ್ತ ಸಮಾಜ ಹಾಗೂ ಅದರ ಪಾದರಿಗಳ ಅವಿವೇಕಕ್ಕೇನನ್ನಬೇಕು? ಉಪನಿಷತ್ತು, ಬ್ರಹ್ಮಸೂತ್ರಗಳು ಮತ್ತು ಭಗವದ್ಗೀತೆಗಳನ್ನು ಆಧುನಿಕ ವಿಜ್ಞಾನದ ಜಗತ್ತಿಗೆ ದಿವ್ಯ ಕಾಣಿಕೆಯೆಂದು ಭಾವಿಸಲ್ಪಡುವಂತೆ ನೀಡಿ, ಎಟೋಮಿಕ್ ವಿಜ್ಞಾನಿಗಳೂ ಭಾರತೀಯ ದಾರ್ಶನಿಕರ ಮಹಾ ಆಧ್ಯಾತ್ಮಿಕ ಸಂಪತ್ತಿಗೆ ತಲೆದೂಗುವಂತೆ ಮಾಡಿದ ಹಿಂದೂ ಧರ್ಮವು ಪವಡಿಸಿರುವ ನಾಡಿಗೇನೇ ಬಂದು, ಏನೇನೋ ಹರಟೆ ಒದರುವಂತೆ ಮಾಡಿ, ಹೆಡ್ಡರೆನಿಸಿಕೊಳ್ಳುವ ಈ ಪಾದರಿಗಳಿಗೇನನ್ನಬೇಕು? ಹಿಂದೂಧರ್ಮದ ಸಿದ್ಧಾಂತವೇನೆಂಬುದರ ಗಂಧ ಗಾಳಿ ಕೂಡಾ ಓದುವ ತಾಳ್ಮೆಯಿಲ್ಲದೆ, ಅವರು ಊಹಿಸಿಕೊಂಡ ಅಲ್ಲ ಸಲ್ಲದ ಯಾವುದೋ ಕಾಲ್ಪನಿಕ ಸಿದ್ಧಾಂತಗಳೇ ಹಿಂದೂ ಸಿದ್ಧಾಂತಗಳೆಂದು ಭಾವಿಸಿ, ಗಾಳಿಯಲ್ಲಿ ಗುದ್ದಾಡಿದಂತೆ, ಅವುಗಳನ್ನು ಟೀಕಿ

ಸುತ್ತಾ "ಹಿಂದೂಧರ್ಮ, ಹಾಗೆ, ಹೀಗೆ!" ಎನ್ನುವ ಮೂರ್ಖತನಕ್ಕೇನನ್ನ ಬೇಕು? ಇದನ್ನೆಲ್ಲಾ ನೋಡಿ ಕ್ರೈಸ್ತರ ಬಗ್ಗೆ ನಾನೇ ನಾಚಿ ತಲೆ ಬಾಗುತ್ತೇನೆ. ಹಿಂದೂಧರ್ಮದಲ್ಲಿರುವ ಉದಾತ್ತತೆ, ಸರ್ವಧರ್ಮಸಮನ್ವಯತೆ ಮತ್ತು ಉದಾರತೆಗಳು ನಮ್ಮ ಕ್ರೈಸ್ತ ಧರ್ಮದಲ್ಲಿಯೂ ಇದ್ದಿದ್ದರೆ!

ಆದರೆ ಸಿಲ್ವರ್, ಹೆಡ್ಡರಾಗಿಯಾದರೂ, ಅವರು ನಂಬಿದ ಮಹಾ ಕಾರ್ಯ ಮಾಡಲು, ಅವರು ಮಾಡುತ್ತಿರುವ ಅಸದೃಶ ತ್ಯಾಗ, ಅವರ ಸಹನೆ, ಅವರ ಧೈರ್ಯಗಳನ್ನು ಯಾರೇ ಆದರೂ ಅಷ್ಟೇಕೆ, ಹಿಂದುವೂ ಕೂಡಾ ಮೆಚ್ಚಲೇ ಬೇಕು.

ನೋಡು, ಸಿಲ್ವರ್, ಈ ಸಹಸ್ರಗಟ್ಟಲೆಯಲ್ಲಿ, ಲಕ್ಷಗಟ್ಟಲೆಯಲ್ಲಿರುವ ಕ್ರೈಸ್ತ ಪಾದರಿಗಳು ಮಾಡುವ ಕಾರ್ಯ ಮತ್ತು ಅವರ ತ್ಯಾಗಕ್ಕೆ ಹೋಲಿಸಿದಾಗ, ಹಿಂದೂ ಸಮಾಜದ ಕುರಿತಾಗಿ ಎಲ್ಲ ಹಿಂದೂ ಅಭಿಮಾನಿಗಳಿಗೆ ಅಯ್ಯೋ ಎನಿಸುವುದು.

ಏಕೆಗೊತ್ತೆ? ನಾನು ಹಿಂದೆಯೇ ಬರೆದ ಪರಿಸ್ಥಿತಿಗಳಿಂದಲೋ ಏನೋ, ಹಿಂದೂ ಸಮಾಜದಲ್ಲಿ, ಜನಾಂಗದ ಸೇವೆಯನ್ನೇ ಪ್ರಧಾನ ಲಕ್ಷವಾಗಿಟ್ಟು ಕೊಂಡು ಮಿಶನರಿ ಜೀವನ ಅಂದರೆ ಸನ್ಯಾಸಿ ಜೀವನ ಮಾಡಲು ಯಾರೂ ಮುಂದೆ ಬರುವುದಿಲ್ಲ. ಒಂದುವೇಳೆ ಯಾರಾದರೂ ಮುಂದೆ ಬಂದರೂ ಇಂದು ಹಿಂದೂ ಸಮಾಜವು ಅವನನ್ನು ಭ್ರಷ್ಟನನ್ನಾಗಿ ತಿಳಿಯುವುದೇ ವಿನಹ ಇಷ್ಟನ ನ್ನಾಗಿ ತಿಳಿಯುವುದಿಲ್ಲ.

ಅಂತಹವನಿಗೆ ಏನಾದರೂ ಉಪಟಳ ಕೊಟ್ಟು, ಒಂದೋ ಆತನು ಸನ್ಯಾಸ ದೀಕ್ಷೆಯ ನಿರ್ಣಯ ಬದಲಿಸುವಂತೆ, ಇಲ್ಲವೇ ಸಮಾಜ ಬಿಟ್ಟೋಡಿ ಆತನು ಕಾಡನ್ನು ಸೇರುವಂತೆ ಮಾಡಿ ಬಿಡುತ್ತಾರೆ. ಹೀಗೆ ಮಾಡಿ ಸಮಾಜದ ಪ್ರಮು ಖರು ಗೆಲುವಿನ ನಗೆ ಬೀರಿ ಪೌರುಷ ತೋರುತ್ತಾರೆ.

ಪೂಜ್ಯ ಸ್ವಾಮಿ ವಿವೇಕಾನಂದರು ಸ್ಥಾಪಿಸಿದ ರಾಮಕೃಷ್ಣ ಮಿಶನ್ ಎಂಬ ಸನ್ಯಾಸಿ ಸಂಸ್ಥೆಯು ಇದೆಯೆನ್ನು. ಅವರು ತುಂಬಾ ಅತ್ಯುತ್ತಮ ಸೇವಾಕಾರ್ಯ ಮಾಡುತ್ತಿದ್ದಾರೆ. ಆದರೆ ಇಲ್ಲಿರುವ ಕೇವಲ ಒಂದುಕೋಟಿ ಕ್ರೈಸ್ತರಿಗಾಗಿ ದಶ ಸಹಸ್ರ ಸಂಖ್ಯೆಯಲ್ಲಿ ಇರುವ ಕ್ರೈಸ್ತ ಪಾದರಿಗಳನ್ನು ಹೋಲಿ ಸಿದರೆ, 44 ಕೋಟಿಯಿರುವ ಹಿಂದೂ ಸಮಾಜಕ್ಕೆ ರಾಮಕೃಷ್ಣ ಮಿಶನಿನ ಕೇ ವಲ ಕೆಲವೇ ನೂರು ಸನ್ಯಾಸಿಗಳಿದ್ದರೆ ಸಾಕೇನು? ಸಾಲದು; ಎಷ್ಟಕ್ಕೂ

ಸಾಲದು.

ಸಮಾಜದ ಸೇವೆಗೆ–ದೇಶದ ಸೇವೆಗೆ– ಹಿಂದೂ ಧರ್ಮದ ಪುನರುತ್ಥಾನಕ್ಕೆ ಬದ್ಧ ಕಂಕಣರಾಗಿರುವ ಮಿಲಿಯಗಟ್ಟಲೆ ಹಿಂದೂ ಮಿಶನರಿಗಳ, ಸನ್ಯಾಸಿಗಳ ಒಂದು ದೊಡ್ಡ ಸೈನ್ಯವೇ ಇಂದು ತಯಾರಾಗಬೇಕು. ಅವರು ಕ್ರೈಸ್ತರಂತೆ, ಆದರೆ ದುರಭಿಮಾನವಿಟ್ಟುಕೊಳ್ಳದೆ ಬಾಹ್ಯತಃ ಅವರಂತೆಯೇ ವಿದ್ಯೆ, ಸಮಾಜಸೇವೆ, ಅನಾಥ ರಕ್ಷಣೆ, ಆರ್ಥಿಕಾಭಿವೃದ್ಧಿ, ಶೀಲ ಸಂವರ್ಧನೆ, ಆಧ್ಯಾತ್ಮಿಕ ಪುನರುತ್ಥಾನ, ಬಡವರಿಗೆ, ಅಜ್ಞಾನಿಗಳಿಗೆ ಧರ್ಮಬೋಧೆ, ಬಡ ಮಕ್ಕಳಿಗೆ ಅನ್ನದಾನ, ಅನ್ಯರನ್ನು ಹಿಂದೂ ಧರ್ಮಕ್ಕೆ ಮತಾಂತರ ಮಾಡುವುದು, ಮೊದಲಾದ ಸರ್ವಕ್ಷೇತ್ರಗಳಿಗೂ ಪ್ರವೇಶಿಸಿ ನವ ಹಿಂದೂ ಸಮಾಜವನ್ನು ಕಟ್ಟಬೇಕು. ನಾನು ಕ್ರೈಸ್ತನಾಗಿ ಹೀಗೆಲ್ಲಾ ಹಿಂದೂ ಧರ್ಮಕ್ಕೆ ಶುಭ ಕಾಮನೆ ನೀಡುವುದು–ಅದೂ ಇಷ್ಟು ತೀವ್ರವಾಗಿ–ಒಂದು ರೀತಿಯಿಂದ ತಪ್ಪೇ ಸರಿ. ಆದರೆ, ಸತ್ಯವನ್ನು ಹೇಗೆ ಕಾಣದಿರಲಿ ಸಿಲ್ವರ್?

ಆದ್ದರಿಂದ, ಹಿಂದೂ ಧರ್ಮದ ಕುರಿತಾದ ನನ್ನ ವಿಚಾರ ಸರಣಿಗಳನ್ನು ಧೈರ್ಯದಿಂದ ಮುಂದರಿಸಿ ಬಿಡಲೇ? ಅನ್ಯರ ಮೇಲೆ ಧಾಳಿ ಮಾಡಲೆಳಸದ ಬಲಿಷ್ಠ ಹಿಂದೂ ಸಮಾಜವನ್ನು ಕಟ್ಟಲು ಈ ಸನ್ಯಾಸಿಗಳು ನೆರವಾಗಬೇಕು. ಇಂದು ಹಿಂದೂ ಧರ್ಮವನ್ನು ಬೆಳೆಸುವುದು, ಬಂದೂಕಿನಿಂದಲ್ಲ, ಕತ್ತಿ ಗುರಾಣಿಗಳಿಂದಲ್ಲ, ದೊಣ್ಣೆ ಭರ್ಚಿಗಳಿಂದಲ್ಲ, ಕವಾಯತು ಕುಸ್ತಿಗಳಿಂದಲ್ಲ–ಆದರೆ ದೇಶಕ್ಕಾಗಿ, ಅಧ್ಯಾತ್ಮ ತತ್ವಕ್ಕಾಗಿ, ಮಾನವ ಕಲ್ಯಾಣಕ್ಕಾಗಿ ಜೀವನಾರ್ಪಣೆ ಮಾಡಿದ, ಪ್ರಾಣಾರ್ಪಣೆ ಮಾಡಲು ಸಿದ್ಧರಿರುವ ಲಕ್ಷೋಪ ಲಕ್ಷ ಅಧ್ಯಾತ್ಮವಾದಿ ಸೈನಿಕರಿಂದ–ಅಂದರೆ ಸನ್ಯಾಸಿಗಳಿಂದ.

ಆದ್ದರಿಂದ ಇಂದು ಹಿಂಡೂ ಸಮಾಜಕ್ಕೆ ಬೇಕಾದ್ದು ಹಿಂದೂ ತತ್ವವನ್ನು. ಯಥಾರ್ಥವಾಗಿ ಜೀವಿಸುವ ಮಹಾತ್ಯಾಗಿಗಳ ಸುಸಂಘಟಿತ ಸೈನ್ಯ.

ಆದರೆ ತಮಾಷೆ ನೋಡು, ಸಿಲ್ವರ್. ಅಂತಹ ಒಂದೇ ಒಂದು ಜೀವಿಯೂ, ತನ್ನ ಸಮಾಜದಲ್ಲಿ ಉಳಿಯದಂತೆ ಆದಷ್ಟು ಜಾಗ್ರತೆ ವಹಿಸುತ್ತಾನೆ ಪ್ರತಿಯೊಬ್ಬ ಹಿಂದುವು ಕೂಡಾ. ವೈಯ್ಯಕ್ತಿಕವಾಗಿಯೂ, ಸಾಮೂಹಿಕವಾಗಿಯೂ, ಹಿಂದುಗಳಿಗೆ, ಇಂಥ ಮಹಾದೀಕ್ಷೆ ತೆಗೆದು ಕೊಂಡವರ ಮೇಲೆ ಏನೇನೂ ಅಭಿಮಾನವಿಲ್ಲ. ಅಷ್ಟೇ ಏಕೆ ಅಂಥವರ ಮೇಲೆ ಹಿಂದೂಗಳು

ಕೂಡಿದಷ್ಟು ದ್ವೇಷ, ತಿರಸ್ಕಾರಗಳನ್ನೇ ತೋರುತ್ತಾರೆ. ಅಂತಹ ದೀಕ್ಷಾ ಬದ್ಧ ವ್ಯಕ್ತಿಗಳಿದ್ದರೆ ಅವರ ಉತ್ಕೃಷ್ಟ ಸೇವೆ ಮತ್ತು ತ್ಯಾಗಗಳ ಜೀವನದ ಸತ್ಫಲವು ತಮಗೇ ದೊರೆಯುವುದು ಎಂಬುದವರ ತಲೆಗೇ ಹೋಗುವಂತಿಲ್ಲ.

ಸಿಲ್ವರ್, ಪ್ರಪಂಚದಲ್ಲಿ ಇಂತಹ ಹುಚ್ಚರೂ ಇದ್ದಾರೇನು? ಯಾವುದೇ ಹಿಂದೂ ಗೃಹಸ್ಥನಿಗೆ ತನ್ನ ಮಗನು "ನಾನು ಸನ್ಯಾಸಿಯಾಗುತ್ತೇನೆ" ಎನ್ನುವುದಕ್ಕಿಂತ ಕರ್ಣ ಕಠೋರವಾದ ಮಾತು ಇನ್ನೊಂದಿಲ್ಲ. ಸನ್ಯಾಸಿಯಾಗಲೆಳಸುವ ಮಗನು ಕುಲವನ್ನು ಕೆಡಿಸಿ, ಕುಲಕಂಟಕ, ಕುಲಕುಠಾರನಾದನೆಂದೇ ಅರ್ಥ. ಅದಕ್ಕಾಗಿ ಹೆತ್ತವರು ಅತೀವವಾಗಿ ದುಃಖಿಸುತ್ತಾರೆ. ಆತನು "ಸರಿದಾರಿಗೆ" ಬರುವಂತೆ ಬೇಕಾದ ಹರಕೆ ಹೊತ್ತುಕೊಳ್ಳುತ್ತಾರೆ. ಒಂದು ವೇಳೆ ಆತನು ನೀತಿಕೆಟ್ಟರೂ ಹೆತ್ತವರು ಅಷ್ಟೊಂದು ಗಾಬರಿಯಾಗುವುದಿಲ್ಲ. ಹೆತ್ತವರಿಗೇ ದ್ರೋಹವೆಸಗಿದರೂ ಅವರು ಕಂಗಾಲಾಗುವುದಿಲ್ಲ. ಸನ್ಯಾಸಿಯಾಗುತ್ತಾನೆ—ಜನತೆಗಾಗಿ ಸೇವಾ ಜೀವನ ಜೀವಿಸುತ್ತಾನೆ ಎಂದರೆ ಯಾವುದೋ ಮಹಾ ಪಾಪದ ಫಲವನ್ನು ತಾವುಣ್ಣುತ್ತಿದ್ದೇವೆ ಎಂಬುದಾಗಿ ಭಾವಿಸುತ್ತಾರೆ.

ಕ್ರೈಸ್ತ ಸಮಾಜದಲ್ಲಿ ಮಗನು "ನಾನು ಪಾದರಿಯಾಗುತ್ತೇನೆ" ಎಂದರೆ ಹೆತ್ತವರೂ ಬಂಧುಗಳೂ ಆನಂದ ಕೋಲಾಹಲದಲ್ಲಿ ಮುಳುಗುವುದು ನಿನಗೆ ತಿಳಿದೇ ಇದೆ. ಮೊನ್ನೆ ನೀನೇ ಬರೆದೆಯಲ್ಲ ! ನಮ್ಮ ಮಿತ್ರ ಕೆನ್ನಿಸನ್‌ನ ತಮ್ಮ ಪಾದರಿಯಾಗುತ್ತೇನೆ ಎಂದಾಗ, ಆತನೂ, ಆತನ ಹೆತ್ತವರೂ ಬಂಧುಗಳೂ ಬಹಳ ಸಂತಸದುಬ್ಬರದಿಂದ ಏನೆಲ್ಲಾ ಪಾರ್ಟಿ ಮಾಡಿದ್ದು.

ಇಲ್ಲಿ ಹಿಂದೂಗಳು ಯಾವಾಗಲೂ ಅಚ್ಚರಿಪಡುತ್ತಾರೆ "ಭಾರತದಲ್ಲಿ ಕೇವಲ ಒಂದು ಕೋಟಿ ಕ್ರೈಸ್ತರಿದ್ದರೂ,ಅವರು ಬಹಳ ಪ್ರಭಾವಶಾಲಿಗಳಾಗಿದ್ದಾರೆ. ಜಗತ್ತಿನಲ್ಲಿ ಇಂದು ಅವರಷ್ಟು ಬಲಿಷ್ಠರು ಯಾರೂ ಇಲ್ಲ; ಎಂತಹ ಆಶ್ಚರ್ಯ!" ಎಂದು. ಅದರ ಗುಟ್ಟೇ ಕ್ರೈಸ್ತ ಪಾದರಿಗಳಲ್ಲಿದೆ ಎಂದರೆ ಅವರು ಸರ್ವಥಾ ನಂಬುವುದಿಲ್ಲ. "ಅದೆಲ್ಲ ಸುಮ್ಮನೆ; ಕ್ರೈಸ್ತರ ಬುದ್ಧಿವಂತಿಗೆ ಮತ್ತು ಒಗ್ಗಟ್ಟೇ ಅದಕ್ಕೆ ಕಾರಣ !" ಎಂದು ಬಿಡುತ್ತಾರೆ. ಒಗ್ಗಟ್ಟು ಬರಬೇಕಿದ್ದರೆ, ಎಲ್ಲರ ಮೇಲೂ ಪ್ರೇಮದ ಅಧಿಕಾರ ವ್ಯಾಪ್ತಿಯಿರುವ ತ್ಯಾಗಿಗಳಾದ ಪಾದರಿಗಳು ಬೇಕೇ ಬೇಕು ಎಂಬುದು ಅವರಿಗೆ ತಲೆಗೆ ಹೋಗುವುದಿಲ್ಲ.

ಮೊನ್ನೆ ನನಗೆ ಇಲ್ಲೇ ಮದ್ರಾಸಿನಲ್ಲಿ ಒಬ್ಬ ಹಿಂದೂ ಬ್ರಾಹ್ಮಣ ಯುವಕನು ಕಾಣಸಿಕ್ಕಿದನು. ಆತನು ತಂಜಾವೂರು ಜಿಲ್ಲೆಯಿಂದ ಓಡಿ ಬಂದವನಂತೆ.

ಸನ್ಯಾಸಿಯಾಗಿ, ಹಿಂದೂ ಧರ್ಮಕ್ಕಾಗಿಯೂ, ದೇಶಕ್ಕಾಗಿಯೂ ದುಡಿಯು ತ್ತೇನೆ ಎಂದಾಗ ಹೆತ್ತವರು ಒಪ್ಪಲಿಲ್ಲವಂತೆ. ಮದುವೆಯಾಗಲೇಬೇಕೆಂದು ಒತ್ತಾಯಿಸಿದರಂತೆ. ಅವನು ಸಮ್ಮತಿಸದಿರಲು ಬಲವಂತದಿಂದ ಮದುವೆ ಮಾಡಲು ಹುಡುಗಿ ನಿಶ್ಚಯಿಸಿ, ಎಲ್ಲಾ ಏರ್ಪಾಡು ಮಾಡಿ ನಾಲ್ಕೈದು ದಿನ ಗಳಲ್ಲಿ ಮದುವೆ ಎಂದು ನಿಶ್ಚಯಿಸಿದರಂತೆ. ಆತನು ಹೇಳದೆ ಕೇಳದೆ ಓಡಿ ಮದ್ರಾಸಿಗೆ ಬಂದು ಬಿಟ್ಟ. ಆತನಿಗೆ ಋಷೀಕೇಶಕ್ಕೆ ಹೋಗಿ ಸ್ವಾಮಿ ಶಿವಾ ನಂದರಿಂದ ಸನ್ಯಾಸ ಸ್ವೀಕಾರ ಮಾಡಬೇಕೆಂಬ ಆಶೆಯುಂತೆ. ಎಲ್ಲಾ ಕತೆ ಕೇಳಿ ನಾನು ಬಹಳ ದುಃಖಿತನಾದೆ. ಹಿಂದುಗಳ ಮನೋಭಾವದ ಪರಿ ಚಯ ನನಗೆ ಮೊದಲೇ ಇತ್ತು. ಮೊನ್ನೆಯ ಘಟನೆಯಿಂದ ಅದು ಇನ್ನಷ್ಟು ನಿಚ್ಚಳವಾಯಿತು.

ಹಿಂದೂ ಸಮಾಜದ ಈ ದುರವಸ್ಥೆಗೆ ಆ ಯುವಕನು –ಗಿರೀಶ್ ಎಂದು ಆತನ ಹೆಸರು—ಬಹಳ ನೊಂದುಕೊಳ್ಳುತ್ತಾನೆ. ಕ್ರೈಸ್ತ ಪಾದರಿಗಳ ಮಿಶನರಿ ಸಂಸ್ಥೆಗಳಂತೆಯೇ, ವ್ಯಾಪಕವಾದ ಮಿಶನರಿ ಸಂಸ್ಥೆಯೊಂದನ್ನು ಸ್ಥಾಪಿಸಲೇ ಬೇಕು ಎಂಬುದಾತನ ಮಹತ್ವಾಕಾಂಕ್ಷೆ. ಆ ಸಂಸ್ಥೆಯ ಸದಸ್ಯರು ಪೂರ್ಣವಾಗಿ ಸನ್ಯಾಸಿಗಳಾಗಿದ್ದು ಸಮಾಜದ ಮಧ್ಯದಲ್ಲಿದ್ದು, ಅದರ ಸರ್ವತೋಮುಖ ಉನ್ನತಿಗಾಗಿ ಮತ್ತು ದೇಶಪ್ರೇಮ ಪಾರಮಾರ್ಥಿಕತೆಗಳಿಂದ ಬೆಳಕು ಪಡೆದ ನವ ಜನಾಂಗದ ಸೃಷ್ಟಿಗಾಗಿ, ಹೋರಾಡಬೇಕು—ಹಿಂದೂ ಮತದಿಂದ ಅನ್ಯಮತ ಗಳಿಗೆ ಆಗುವ ಮತಾಂತರವನ್ನು ತಡೆಯಬೇಕು, ಹರಿಜನರನ್ನು ಮೇಲೆತ್ತ ಬೇಕು ಮತ್ತು ತಾವಾಗಿ ಹಿಂದೂ ಮತಕ್ಕೆ ಸೇರುತ್ತೇವೆನ್ನುವ ಉತ್ಸಾಹಿಗಳಿಗೆ ಹಿಂದೂ ಧರ್ಮದ ದೀಕ್ಷೆ ಕೊಡಬೇಕು ಎನ್ನುತ್ತಾನೆ ಆತ. ಎಮ್. ಎ., ಪದವಿ ಧರನಾಗಿ, ತತ್ವಶಾಸ್ತ್ರದಲ್ಲಿ ಪಿ. ಎಚ್. ಡಿಗೆ ಪ್ರಯತ್ನ ಮಾಡುತ್ತಿದ್ದವನಂತೆ. ಬಹಳ ಓಜಸ್ವಿಯೂ, ಪ್ರತಿಭಾಶಾಲಿಯೂ, ವಾಗ್ಮಿಯೂ ಆದ ಯುವಕನಾತ. ಇನ್ನೊಬ್ಬ ವಿವೇಕಾನಂದನಾಗಿ ಆತನು ಮಾರ್ಪಡಲೂ ಸಾಕು–ಯಾರು ಬಲ್ಲರು?

ಇಂದಿಗೂ, ಯಥಾರ್ಥವಾದ ತ್ಯಾಗಿಗಳೂ, ಸನ್ಯಾಸಿಗಳೂ ಭಾರತದಲ್ಲಿ ಅನೇಕರಿದ್ದಾರೆ, ಸಿಲ್ವರ್. ಆದರೆ ಅವರು ಜನಾಂಗದ ಕಲ್ಯಾಣಕ್ಕಾಗಿ ಜೀವನ ಧಾರೆಯೆರೆಯುತ್ತಿಲ್ಲ. ವೈಯ್ಯಕ್ತಿಕವಾದಿಗಳಾಗಿ ತಮ್ಮ ಆತ್ಮ ಸಾಕ್ಷಾತ್ಕಾರ ವೊಂದನ್ನೇ ಗುರಿಯಾಗಿಟ್ಟುಕೊಂಡು ನಿಷ್ಠೆಯಿಂದ ಜೀವಿಸುತ್ತಿದ್ದಾರೆ. ಅವ

ರೆಲ್ಲಾ ತಮ್ಮ ಚೇತನದ ಸ್ವಲ್ಪಾಂಶವನ್ನೇ ಸಮಾಜದ ಉನ್ನತಿಗೆ ಉಪಯೋಗಿಸಿದರಾದರೆ ಭಾರತವು ಬಹಳ ಪ್ರಗತಿಯನ್ನು ಪಡೆದೀತು. ಹಿಂದೂ ಸಮಾಜದಲ್ಲಿ ನವಚೇತನ ಸಂಚಾರವಾದೀತು.

ಭಾರತದ ಯಥಾರ್ಥ ಸಾಧುಸಂತರು ಮತ್ತು ಸನ್ಯಾಸಿಗಳನ್ನು ಸಂಘಟಿಸಿ, ಅವರ ಮೂಲಕ ರಾಷ್ಟ್ರೀಯ ಜಾಗೃತಿ ಸಾಧಿಸಲು ಹಾಗೂ, ಅನೀತಿಯುತರಾದ ಸನ್ಯಾಸಿ ವೇಷದಲ್ಲಿರುವ ವ್ಯಕ್ತಿಗಳು ಸಮಾಜ ವಂಚನೆಯ ಕಾರ್ಯಮಾಡುವುದನ್ನು ತಡೆಯಲು ಭಾರತದ ಕೇಂದ್ರ ಸರಕಾರದ ಸಚಿವರಾದ ಶ್ರೀ ಗುಲ್ಜಾರಿಲಾಲ್ ನಂದಾರವರು ಭಾರತದ ಸಾಧು ಸಮಾಜವೆಂಬ ಒಂದು ಸಂಸ್ಥೆಯನ್ನು ರಚಿಸಿ, ಸಾಧುಗಳೆಲ್ಲಾ ತಮ್ಮ ಹೆಸರನ್ನು ರಿಜಿಸ್ಟರು ಮಾಡಿಸಬೇಕೆಂದು ಕರೆಯಿತ್ತಿದ್ದಾರೆ. ಆದರೆ ಈ ವರೇಗೂ ಆದರಿಂದ ಏನೂ ಸತ್ಪರಿಣಾಮ ದೊರೆತಂತೆ ಕಾಣುವುದಿಲ್ಲ. ಕಾರಣ, ಆ ಸಾಧು ಸನ್ಯಾಸಿಗಳನ್ನು ರಾಷ್ಟ್ರೀಯ ಮಟ್ಟದಲ್ಲಿ ಸಂಘಟಿಸಲು ಒಬ್ಬ ಸನ್ಯಾಸಿಯೇ ಬೇಕು ಹೊರತಾಗಿ, ಎಷ್ಟೇ ಅಧಿಕಾರವಿದ್ದರೂ ಪ್ರಾಪಂಚಿಕ ಜೀವನ ಮಾಡುತ್ತಿರುವ ಮಂತ್ರಿಯೊಬ್ಬನಿಂದ ಆಗುವ ಬಗೆ ಹೇಗೆ?

'ಭಾರತದ ವಿದ್ಯಾರ್ಥಿ ವೃಂದದಲ್ಲಿ ಮತ್ತು ಯುವಕ ಸಮಾಜದಲ್ಲಿ ದೇಶದ ಭೀಕರ ಸಮಸ್ಯೆಗಳಿಗಾಗಿ ಕೊರಗುವ ಮತ್ತು ಅವನತ ಸ್ಥಿತಿಯಲ್ಲಿರುವ ಹಿಂದೂ ಬಳಗಕ್ಕಾಗಿ ಒಂದು ರೀತಿಯಲ್ಲಿ ದುಃಖಿಸುವವರು ಈಗ ಹಲವರಿದ್ದಾರೆ. ಈ ಸಮಸ್ಯೆಗಳನ್ನು ಪರಿಹರಿಸಿ, ಭಾರತವನ್ನು ಉಜ್ವಲತೆಯ ಸ್ಥಿತಿಗೇರಿಸುವ ಸಲುವಾಗಿ ಜೀವನ ನಡೆಸಬೇಕೆಂದೂ, ಅದಕ್ಕಾಗಿ ಅವಿವಾಹಿತ ಸೇವಾ ಜೀವನ ನಡೆಸಬೇಕೆಂದೂ ಅವರು ಬಯಸುತ್ತಾರೆ. ಅಂತಹ ತ್ಯಾಗದ ತೃಷ್ಣೆಯಿಂದ ಅವರು ಬಳಲುತ್ತಾರೆ.

ಆದರೆ ಅವರ ಮಾತಾಪಿತರು, ಬಂಧು ಬಳಗದವರು, ಸಮಾಜದ ಪ್ರಮುಖರು ಎಲ್ಲರೂ ಸುಸಂಘಟಿತರಾಗಿ, ಅವರನ್ನು ಎದುರಿಸಿ, ಚಾಣಾಕ್ಷತೆಯಿಂದ, ಅವರ ಮನ ಒಲಿಸಿಯೋ, ಬಲಾತ್ಕಾರ ಹೇರಿಯೋ, ಬಲೋದ್ಬಂಧನ ಮಾಡಿಯೋ, ಅವರ ನಿರ್ಣಯದ ಬೆನ್ನು ಮುರಿಯುತ್ತಾರೆ. ಒಂದು ವೇಳೆ ಅವರು ಸೋತರೆಂದರೆ, ನಿರಾಶರಾಗಿ, ಕೋಪಾವಿಷ್ಟರಾಗಿ, ಸಿಕ್ಕಸಿಕ್ಕಲ್ಲಿ ಅವರಿಗೆ ಖಂಡನೆ ಮಾಡುತ್ತಾ ಅವರು ಮಾಡುವ ಸೇವಾ ಕಾರ್ಯಗಳಿಗೆ ಅಡಚಣೆಗಳನ್ನೊಡ್ಡುತ್ತಾರೆ.

ಅಂತಹ ದುರದೃಷ್ಟಕಾರಿ ಯುವಕರನ್ನು ಸಮಾಜವು ತುಚ್ಛೀಕಾರದಿಂದ ನೋಡುವುದು; ಹೀನಾಯದ ಮಾತುಗಳು, ಅಣಕದ ಮಾತುಗಳು, ಅವರನ್ನು ಸದಾ ಎದುರಿಸುವವು.

ಹಿಮಾಲಯದೋಪಾದಿಯ ವಿರೋಧವನ್ನು ಕಡೆಗಣಿಸಿ, ದೇಶಕ್ಕಾಗಿ ಜೀವನಾರ್ಪಣೆ ಮಾಡಲು ಸಮರ್ಥರಾಗುವ ಯುವಕರೆಷ್ಟು ಮಂದಿ? ಸಮಾಜಕ್ಕೆ ಭಯಪಡದ ಯುವಕರಾರು? ಒಂದುವೇಳೆ ಯಾರಾದರೂ, ಸಮಾಜದ ಕೇಳಿಕೆಗೆ ಬೆಲೆಕೊಡದೆ, ಧ್ಯೇಯ ಸಾಧನೆಯನ್ನು ಮುಂದರಿಸಿದರಾದರೆ, ಅವರು ತಮ್ಮ ರಕ್ಷಣೆಗಾಗಿ, ದೂರದ ಗಿರಿ ಕಾನನಗಳಿಗೋ, ಹಿಮಾಲಯದ ತಪ್ಪಲಿಗೋ ತೆರಳಬೇಕಾಗುವುದು.

ಅನ್ಯಾಯ, ವಂಚನೆಗಳಿಂದ ತುಂಬಿದ ಭಾರತೀಯ ಸಮಾಜಕ್ಕೆ ಶಕ್ತವಾದ, ಉಜ್ವಲವಾದ ಮುಂದಾಳ್ತನ ಇಂದು ದೊರೆತಿಲ್ಲ. ತ್ಯಾಗದ ಪರಾಕಾಷ್ಠೆಗೇರಿದ ಒಬ್ಬ ತಪಸ್ವಿಯು ಮಾತ್ರವೇ ಸಮಾಜದ ಜನರನ್ನು ತಿದ್ದಬಹುದು; ಹೊರತಾಗಿ ಒಬ್ಬ ಗೃಹಸ್ಥನು ಪರಿಣಾಮಕಾರಿಯಾಗಿ ತಿದ್ದುವಂತಿಲ್ಲ.

ಸಮಾಜವನ್ನು ಪುನರ್‍ರೂಪಿಸಲು ಇಲ್ಲಿಯ ತಪಸ್ವಿಗಳೆಲ್ಲ ಒಂದಾಗಿ, ಪ್ರಭಾವಶಾಲೀ ವಿದ್ಯಾ ಸಂಸ್ಥೆಗಳನ್ನು ನಡೆಸಿ, ವಿದ್ಯಾರ್ಥಿಗಳನ್ನು ತರಬೇತುಗೊಳಿಸಿ, ಅವರು ಭಾವೀ ಭಾರತದ ಪ್ರಾಮಾಣಿಕ ಮುಂದಾಳುಗಳಾಗುವಂತೆ ಮಾಡಬೇಕು. ದೇಶದ ಮನವನ್ನು ರೂಪಿಸಲು ವಿದ್ಯಾ ಸಂಸ್ಥೆಗಳಷ್ಟು ಸುಲಭ ಸಾಧನೆಗಳು ಬೇರಿಲ್ಲ. ರಾಜಕೀಯ ಪ್ರಚಾರಗಳಿಂದ ಉದ್ದುದ್ದ ಭಾಷಣಗಗಳಿಂದ, ಪರಸ್ಪರ ಗುದ್ದಾಟಗಳಿಂದ, ಅಸಂಖ್ಯ ಶಾಸನಗಳ ರಚನೆಯಿಂದ ಇದನ್ನು ಸಾಧಿಸಲು ಸಾಧ್ಯವಾಗುವುದಿಲ್ಲ.

ಭಾರತದಲ್ಲಿ ನಮ್ಮ ಕ್ರೈಸ್ತರಷ್ಟು ಪ್ರಭಾವಶಾಲಿ ಸಮಾಜವಿಲ್ಲ. 38 ಕೋಟಿ ಹಿಂದುಗಳು 1 ಕೋಟಿ ಕ್ರೈಸ್ತರಿಗೆ ತಲೆಬಾಗಿ, ಸೋಲುವ ಸನ್ನಿವೇಶಗಳು ಎಷ್ಟೋ ಸಂಭವಿಸುತ್ತವೆ. ಇದಕ್ಕೆ ಕಾರಣ ಜೆಸುವಿಟ್ ಮೊದಲಾದ ಕ್ರೈಸ್ತ ಮಿಶನರಿಗಳು ನಡೆಸುವ ವಿದ್ಯಾ ಸಂಸ್ಥೆಗಳ ಪ್ರಭಾವವೇ ಆಗಿದೆ.

ಇನ್ನೊಂದು ವಿಷಯವಿದೆ, ಸಿಲ್ವರ್. ಭಾರತೀಯರ ಆದರ್ಶ ಚಿತ್ರ ಕಾರ್ನೆಗಿ, ಫೋರ್ಡ್, ರೋಕ್‍ಫೆಲ್ಲರ್‍ರಂತಹ ಮಹಾ ತ್ಯಾಗಿಗಳಾದ ಶ್ರೀಮಂತರದಲ್ಲ. ಸಮಾಜಕ್ಕೆ ಅಥವಾ ದೇಶಕ್ಕೆ ಏನೂ ಸೇವೆ, ಉಪಕಾರ, ಎಸಗದಿದ್ದರೂ ಇತರರಿಗೆ ಉಪದ್ರವ ಕೊಡದೆ, ಶ್ರೀಮಂತನಾಗಿ, ಆರ್ಥಿಕವಾಗಿ ಪರಿಪುಷ್ಟ ಜೀವನ ಮಾಡುತ್ತ, ಪತ್ನೀಪುತ್ರರೊಂದಿಗೆ ಶೀವಿಯಿಂದ ಬಾಳುತ್ತ,

ಆಳುಕಾಳುಗಳನ್ನಿಟ್ಟು, ಸಿಂಧಿ ದನಗಳನ್ನೂ, ಆಲ್‌ಸೇಶಿಯನ್ ನಾಯಿಗಳನ್ನೂ ಸಾಕುತ್ತ, ಕಾರನ್ನಿಟ್ಟುಕೊಂಡು ಇತರರನ್ನು ತಲೆಬಾಗಿಸುವಂತೆ ಮಾಡುವಾತನೇ ಭಾರತೀಯ ಸಮಾಜದ ಆದರ್ಶ ಚಿತ್ರ. ರೋಕ್‌ಫೆಲ್ಲರ್ ಮತ್ತಿತರರಂತೆ ತ್ಯಾಗ ಮಾಡುವ ಆ ಜೀವನದ ಮಹತ್ವ ಭಾರತದಲ್ಲಿ ಮನಗಾಣಲ್ಪಡುವುದಿಲ್ಲ.

ಅಲ್ಲದೆ ಬಂಧುವಾಗಿ ಸ್ವೀಕರಿಸಿದ ಅಥವಾ ಬಂಧುವಾಗಿ ಸಂಭವಿಸಿದ ವ್ಯಕ್ತಿಗೆ ಒಬ್ಬಾತನು ತನ್ನ ಸೊತ್ತುಗಳನ್ನು ಬಿಟ್ಟುಕೊಟ್ಟರೆ ಮೆಚ್ಚುವವರಿದ್ದಾರೆ. ಆದರೆ ದೇಶಕ್ಕಾಗಿ, ದೊಡ್ಡ ವಿದ್ಯಾ ಸಂಸ್ಥೆಗಳಿಗಾಗಿ ತ್ಯಾಗ ಮಾಡಲು ಮುಂದಾಗುವಾತನನ್ನು ಸಮಾಜವು ಕುತೂಹಲ ಮತ್ತು ಆಶ್ಚರ್ಯಗಳಿಂದಲೂ ಅತಿ ಅಣಕದ ಸ್ಥಿತಿಯಿಂದಲೂ ಮಾತ್ರವೇ ನೋಡುತ್ತಿದೆ. ಗೌರವಾದರಗಳ ಭಾವ-ಅಲ್ಲಿ ಉದಿಸುವುದಿಲ್ಲ.

ನಮ್ಮ ಸಂಯುಕ್ತ ಅಮೇರಿಕಾದಿಂದ ದಾನವಾಗಿಯೇ ಹೊರ ದೇಶಗಳಿಗೆ ಪ್ರತಿ ವರ್ಷ ಹರಿಯುತ್ತಿರುವ ದಶ ಸಹಸ್ರ ಮಿಲಿಯ ಸಂಖ್ಯೆಯ ಡಾಲರುಗಳನ್ನು ಇಲ್ಲಿಯ ಸ್ಥಿತಿಗೆ ಹೋಲಿಸಿದಾಗ ನನಗೇಕೋ ಹೃದಯವೇದನೆಯಾಗುತ್ತಿದೆ. ಭಾರತದಲ್ಲಿ ಅಭೂತಪೂರ್ವವಾದ ದಾರಿದ್ರ್ಯವಿದೆ. ಆದರೆ ಶ್ರೀಮಂತರಲ್ಲಾದರೂ ಈ ಉದಾರತೆಯೇಕಿಲ್ಲ? ಈ ಪ್ರಶ್ನೆಗೆ ಉತ್ತರವಿಲ್ಲ. ಸನ್ಯಾಸ ಮತ್ತು ತ್ಯಾಗ ಜೀವನಕ್ಕಿರುವ ವಿರೋಧವೂ ಇದೇ ಮನಸ್ಥಿತಿಯಿಂದ ಬಂದಿರಬೇಕು.

ಹೀಗಿದ್ದರೂ ಮಿಲಿಯಗಟ್ಟಲೆ ಸನ್ಯಾಸಿಗಳೂ, ಸಾಧುಗಳೂ ಇಲ್ಲಿದ್ದಾರಲ್ಲ? ಇದರರ್ಥವೇನು? ಇಲ್ಲಿಯ ದುಡಿತದ ಕುರಿತಾದ ಔದಾಸೀನ್ಯವೇ ಇದಕ್ಕೆ ಕಾರಣವೆನ್ನಬೇಕು. ದುಡಿತದಿಂದ ಸಿಗುವ ನಾಲ್ಕೈದು ರೂಪಾಯಿಗಳಿಗಿಂತಲೂ, ಇಲ್ಲಿ ಭಿಕ್ಷಾಟನೆ ಮಾಡುತ್ತಾ ಸಾಧುವೇಶದಿಂದಿರುವ ದಿಂಡಾಳುಗಳಿಗೆ ಧರ್ಮಾರ್ಥ ಸಿಗುವ ಬಿಡಿ ಕಾಸುಗಳು ಹೆಚ್ಚು ಆಕರ್ಷಕವಾಗುತ್ತವೆ. ಇಂತಹ ಸನ್ಯಾಸಿಗಳಲ್ಲಿ ಒಬ್ಬನು ನನಗೆ ಇತ್ತೀಚೆಗೆ ಬೊಂಬ್ಯಾಯಲ್ಲಿ ಸಿಕ್ಕಿದ್ದನು. "ನನಗೆ ಬೇಗನೇ ಮದುವೆಯಾಗಿ ಸುಖ ಸಂಸಾರ ಹೂಡುವ ಯೋಗವಿದೆಯೆಂದು ಭವಿಷ್ಯವಾದಿಯೋರ್ವನು ಹೇಳಿದ್ದಾನೆ"ಎಂಬುದಾಗಿ ಸಂತೋಷದಿಂದ ಹೇಳಿ ತನ್ನ ಸನ್ಯಾಸದ ದುರವಸ್ಥೆಯೆಡೆಗೆ ಕನಿಕರ ಪಡುತ್ತಾ ಮುಂದಿನ ಸುಖ ಜೀವನದ ಕುರಿತು ಆನಂದಪಡತೊಡಗಿದನಾತ. ಇಂತಹ ಸನ್ಯಾಸಿಗಳು ಎಷ್ಟು ನೀತಿವಂತರಾದಾರು? ಆವರನ್ನು ನೋಡಿ ಭಾರತೀಯ ಸಮಾಜದ ಧೋರಣೆಯೂ ಸರಿಯಾದ್ದೇನೋ ಎಂದು ಒಮ್ಮೊಮ್ಮೆ ನಾನು ಆಶ್ಚರ್ಯಪಡುವುದಿದೆ.

ಹಿಂದೆ ಸೈಂಟ್ ಫ್ರಾನ್ಸಿಸನು ಕಟ್ಟಿ, ಇಂದು ವಿಶ್ವದಾದ್ಯಂತ ಹಬ್ಬಿಕೊಂಡಿರುವ ಮಿಶನರಿ ಸಂಸ್ಥೆಯಂತಹ ಒಂದೇ ಒಂದು ಬೃಹತ್ ಮಿಶನರಿ ಸಂಸ್ಥೆ ಮಾಡಲು ಭಾರತೀಯರಿಗೇಕೆ ಸಾಧ್ಯವಾಗಿಲ್ಲ? ಹೋಲಿಕೆಯಲ್ಲಿ ಬಹಳ ಕಿರಿದಾದ ಕೇವಲ ರಾಮಕೃಷ್ಣ ಮಿಶನ್‌ನಲ್ಲಿ ಮಾತ್ರವೇ ಭಾರತವು ಎಂದೆಂದೂ ತೃಪ್ತಿಪಟ್ಟುಕೊಂಡಿರಬೇಕೇ? ಅಂತಹದೇ ಬೇರೆ ಸಂಸ್ಥೆಗಳು, ಆದರೆ ಬಹಳ ವ್ಯಾಪಕ ಕ್ಷೇತ್ರದಲ್ಲಿ ಸ್ಥಾಪಿತವಾಗಬೇಡವೇ?

ಇದು ಭಾರತೀಯ ವಿದ್ವಜ್ಜನರಿಗೆ, ಇಲ್ಲಿಯ ಪ್ರಮುಖರಿಗೆ ಈ ಬಡ ಓರ್ಮನ್‌ನ ದೊಡ್ಡ ಸವಾಲು. ಆದರೆ ಈ ಸವಾಲಿಗೆ ಉತ್ತರ ಕೊಡುವವರಾರು?

ಸಿಲ್ವರ್, ಈ ಎಲ್ಲ ಮಾತು ಕೇಳಿ ನಾನು ಭಾರತೀಯ ಪದ್ಧತಿಯ ಸನ್ಯಾಸಿಯಾಗಿ ಬಿಡುತ್ತೇನೆ ಎಂದು ನೀನು ಭ್ರಮಿಸಬೇಕಿಲ್ಲ. ನನಗೆ ಅಂತಹ ಆತ್ಮಶಕ್ತಿಯಿಲ್ಲ. ನಾನು ಬೇಗನೆ ಭಾರತದಲ್ಲೇ ಜಾನಕಿದೇವಿಯಂತಹ ಸಾಧ್ವಿಯೋರ್ವಳನ್ನು ಮದುವೆಯಾದರೆ ಆಶ್ಚರ್ಯವಿಲ್ಲ. ಆದರೆ ನಮ್ಮ ಸಂಯುಕ್ತ ಅಮೇರಿಕದ ಮಾಟಗಾತಿಯರಂತೂ ನನಗೆ ಖಂಡಿತ ಬೇಡ, ಸಿಲ್ವರ್.

ನಾನು ವಿವಾಹವಾಗುವುದಿದ್ದರೂ, ಇಂತಹ ತ್ಯಾಗಜೀವನವು ಸಮಾಜದ ಸರ್ವತೋಮುಖ ಏಳಿಗೆಗೆ ಬೇಕೇ ಬೇಕು ಎಂದು ಮನೆ ಮಾಡಿನಿಂದ ಸಾರುವವನು ನಾನು. ಇರಲಿ, ಇದೆಲ್ಲಾ ಹರಟೆಯೇ ಹೊರತು ನನ್ನ ಮಾತುಗಳಿಗೆ ಬೆಲೆಯೆಲ್ಲಿದೆ?

ಇಗೋ ಗೆಳೆಯಾ, ನನ್ನ ಮದ್ರಾಸಿನ ಹೊಸ ಮಿತ್ರರಾದ ವೆಂಕಟ್ರಾಮನ್ ನನ್ನ ಜೊತೆಯಲ್ಲಿ ಗಾಳಿ ಸಂಚಾರಕ್ಕೆ ಮೆರೀನಾಕ್ಕೆ ಹೋಗಲು ಕಾರು ತೆಗೆದು ಕೊಂಡು ಬಂದೇ ಬಿಟ್ಟರು. ಇಲ್ಲಿಯೇ ನಿಲ್ಲಿಸಲೇ? ನಿನಗೆ ಬರೆದಷ್ಟೂ ವಿಷಯ ಮುಗಿಯಲೊಲ್ಲದು. ಆದರೇನು ಮಾಡಲಿ? ಸಮಯ ಸಂಕೋಚ. ಅಲ್ಲ ಇಂತಹ ದೀರ್ಘ ಹರಟೆ ಓದುವ ತಾಳ್ಮೆ ನಿನಗಾದರೂ ಬೇಕಲ್ಲ?

ಅಲ್ಲಿ ಎಲ್ಲರಿಗೂ ನನ್ನ ಪ್ರೇಮ ತಿಳಿಸು, ಸಿಲ್ವರ್. ಬೇಗನೇ ದೀರ್ಘ ಪತ್ರ ಬರೆ. ಈ ಪತ್ರದ ಕುರಿತು ನಿನ್ನ ಪ್ರತಿಕ್ರಿಯೆಗಳನ್ನೂ ಬರೆ.

ಇತಿ, ನಿನ್ನ ಆಪ್ತಮಿತ್ರ,

**ಜೋನ್ ಓರ್‌ಮನ್.**

# ೭

ಮದ್ರಾಸು,

ಪ್ರಿಯ ಸಿಲ್ವರ್, 15–4–1962.

ನಿನ್ನ ದೀರ್ಘವಾದ ಓಲೆ ದೊರೆತಿತು, ಗೆಳೆಯ. ಅದನ್ನು ಓದುತ್ತಾ ಹೋದಂತೆ, ಬೇಡಬೇಡವೆಂದರೂ ಕಣ್ಣುಗಳಿಂದ ಒಂದೇ ಸವನೆ ಧಾರಾಕಾರ ವಾಗಿ ನೀರಿಳಿಯ ತೊಡಗಿತು. ನನ್ನ ಆತ್ಮೀಯ ಗೆಳೆಯನಾದ ನಿನ್ನ ದುಃಖ ನೋಡಿದಾಗ ನನಗೆ ಹೃದಯದಲ್ಲಿ ಅನುಕಂಪವೇಳದಿದ್ದೀತೇ ?

"ಯಾವ ಜೀವನವನ್ನು ಪ್ರೇಮದ ರಸಪಿಂಡವೆಂದು ಭಾವಿಸಿದ್ದೆನೋ ಅದೇ ಇಂದು ದ್ವೇಷದ, ವಿಷಪಿಂಡವಾಗಿ ತೋರುತ್ತಿರುವಾಗ ಹೇಗೆ ತಾನೇ ಸಹಿಸಲಿ ಜೋನ್? " ಎಂಬುದಾಗಿ ಬರೆದ ನಿನ್ನ ವಾಕ್ಯ ನೋಡಿ ನಾನು ಮಕ್ಕಳಂತೆ ಬಿಕ್ಕಿಬಿಕ್ಕಿ ಅತ್ತುಬಿಟ್ಟೆ. ನಿನಗೂ ನಿನ್ನ ಶ್ರೀಮತಿಗೂ ಸಂಸಾರ ವನ್ನೂ, ಪ್ರೇಮವನ್ನೂ ಸರಿಪಡಿಸಿಕೊಂಡು ಬಾಳಲಾಗುವಂತಹ ಶಕ್ತಿ ಬರಲಿ ಎಂದು ಸ್ವಾಮಿ ಏಸುವನ್ನು ಪ್ರಾರ್ಥಿಸಿದೆ. ಆದರೆ ನನ್ನಂತಹ ಕ್ಷುದ್ರ ಜೀವಿಯ ಪ್ರಾರ್ಥನೆಗೆ, ನಿನ್ನ ಜೀವಮಾನದ ಮೇಲೆಯೇ ಪರಿಣಾಮ ಮಾಡುವಂತಹ ಶಕ್ತಿ ಹೇಗೆ ಬರಬೇಕು?

ಆದರೆ ನನಗೆ ಇಂದಲ್ಲ, ಸಿಲ್ವರ್–ನಾನು ಸಂಯುಕ್ತ ಅಮೇರಿಕಾದಿಂದ ಭಾರತಕ್ಕೆ ಹೊರಡುವಾಗಲೇ ಆಕೆಯ ಸ್ಥಿತಿಗತಿ ನೋಡಿ ಅದೇಕೋ ಅಂಜಿಕೆ ಯಾಗಿತ್ತು.

ಆದರೆ ನೀನಾದರೂ ಉತ್ತಮ ಜೀವನ ಮಾಡಬೇಕೆಂದು ನನ್ನಾಸೆ ಯಿತ್ತು. ನೀನು ಉತ್ತಮನಾದರೆ, ನಿನ್ನ ಆದರ್ಶದಿಂದ ಆಕೆಯೂ ಉತ್ತಮ

ಳಾಗಬಹುದೆಂದು ನನ್ನ ಬಯಕೆಯಿತ್ತು.

ನಿನ್ನ ಜೀವನಕ್ಕೆ ಗೊತ್ತುಗುರಿಯಿಲ್ಲದೆ ನೀನು ಸ್ವೇಚ್ಛಾಚಾರದಲ್ಲಿರುವಾಗ –ಇದನ್ನೇ ಆಕೆಯೂ ಕಲಿತರೆ ಗತಿಯೇನು ಎಂದು ಭಯ ಪಡುತ್ತಿದ್ದೆ. ಅದಕ್ಕಾಗಿಯೇ ನಿನ್ನನ್ನು ಆಗಾಗ ಎಚ್ಚರಿಸುತ್ತಿದ್ದುದು. ಆದರೆ ಮಾಡಬಹುದೇನು? ನಿನ್ನ ಹೆಜ್ಜೆಯಲ್ಲೇ ಅವಳು ನಡೆದಳು. ನೀನು ಪರಸ್ತ್ರೀಯರನ್ನು ಕಟ್ಟಿಕೊಂಡೆಯಾದರೆ ಆಕೆ ಪರ ಪುರುಷರನ್ನು ಒಲಿಸತೊಡಗಿದಳು.

ನಿನಗೆ ಆಕೆಯ ಮೇಲೆ ಮತ್ತೆಯೂ ಪ್ರೇಮವಿತ್ತು. ನನಗೆ ತಿಳಿದಿತ್ತು. ಆದರೆ ಆಕೆಯ ಮನವು ನಿನ್ನಿಂದ ದೂರವಾಗತೊಡಗಿರಬೇಕು.

ಅಲ್ಲವಾದರೆ, ಇಂದು ಮನೆಯಲ್ಲಿ ನಿನಗೆ ಅಡುಗೆ ಮಾಡಿಕೊಡುವವರೇ ಇಲ್ಲವಾಗಬೇಕಿದ್ದರೆ...............ಅವಳಿಗೂ ಹೋಟೆಲಲ್ಲಿ ಊಟ–ನಿನಗೂ ಹೋಟೆಲಲ್ಲಿ ಊಟ....ಏನೆನ್ನಬೇಕು ! ಅಲ್ಲ........ಆ ಪುಟ್ಟ ಮಗು ಕೇನ್ನಿಯನ್ನು ನೋಡಿಯಾದರೂ ಅವಳು ನಿಜ ಪ್ರೇಮದ ಮಹತ್ವ ತಿಳಿಯುವುದಿಲ್ಲವೆಂದರೆ ಇನ್ನೇನನ್ನಬೇಕು ? ಇತ್ತೀಚೆಗೆ ಗಂಡು ಮಗುವಿಗೆ ಜನ್ಮವಿತ್ತ ಆಕೆ, ಆ ಮಗುವಿನ ವಿಷಯವನ್ನು ಚಿಂತಿಸದೆ, ಅದನ್ನು ಯಾವುದೋ ಸಂಸ್ಥೆಯಲ್ಲಿ ಬಿಟ್ಟು ಹೀಗೆ ಷೋಕಿ ಮಾಡುತ್ತಾ ತಿರುಗಾಡುವುದೆಂದರೆ ಇದಕ್ಕೆ ಮಿತಿಯಿಲ್ಲವೇ ?

ಮನೆಯಲ್ಲಿ ಒಂದು ದಿನ ಶಾಂತಿಯಿಲ್ಲ ಎಂಬುದಾಗಿ ನೀನು ಬರೆದಿದ್ದಿ. ಹೇಗಿರಬೇಕು ಶಾಂತಿ ! ನಿನಗವಳು ಎಷ್ಟೊಂದು ಚಿತ್ರಹಿಂಸೆ ಕೊಡುತ್ತಿರಬಹುದೆಂಬುದನ್ನು ನಾನು ಊಹಿಸಬಲ್ಲೆ.

ಅಲ್ಲ ಸಿಕ್ಕಿ ಸಿಕ್ಕಿದ ಪರ ಪುರುಷರನ್ನು ಮನೆಗೆ ಕರತರುವುದೆಂದರೆ ಏನನ್ನಬೇಕು ! ನನಗೆ ಗೊತ್ತು—ಕೇವಲ ನಿನ್ನ ಗೌರವ ಕಾಪಾಡಿಕೊಳ್ಳುವುದಕ್ಕಾಗಿ ನಿನ್ನ ಮನೆಯ ಗುಟ್ಟನ್ನು ನೀನು ಹೊರಗೆ ಹಾಕುತ್ತಿಲ್ಲ.

ಇರಲಿ, ಸಿಲ್ವರ್, ಪ್ರಪಂಚವೇ ಹಾಗೆ. ನಾವು ಪಡುವ ಸುಖಕ್ಕಿಂತಲೂ ಎಷ್ಟೋ ಮಡಿ ಹೆಚ್ಚಾಗಿ ಪ್ರಪಂಚವು ನಮಗೆ ದುಃಖವನ್ನು ನೀಡುವುದು. ಆ ದುಃಖವನ್ನು ಮನಸ್ಸಿಗೆ ತಾರದೆ, ಪರಮಾತ್ಮ ತತ್ವವನ್ನೇ ಚಿಂತಿಸಬೇಕೆಂಬುದು ಹಿಂದೂ ಸಿದ್ಧಾಂತ. ಅದರಿಂದಲೇ ಮನಸ್ಸಿಗೆ ಮಹತ್ತರವಾದ ಶಾಂತಿಯು ಲಭಿಸುವುದು.

ಭಾರತದಲ್ಲಿ ಸನ್ಯಾಸದ ಕುರಿತಾಗಿ ಬರೆದ ನನ್ನ ಪತ್ರದಿಂದ ನೀನು

ಖಂಡಿತ ರೋಸಿ ಹೋಗುವೆಯೆಂದು ನಾನು ಭಾವಿಸಿದ್ದೆ. "ನಿನ್ನ ಪತ್ರದಲ್ಲಿ ಭಾರತೀಯ ಸನ್ಯಾಸದ ಕುರಿತಾಗಿ ಬರೆದ ಮಾತುಗಳು ನನ್ನ ನೊಂದ ಮನ ವನ್ನು ಬಹಳವಾಗಿ ತೀಡಿದುವು" ಎಂಬುದಾಗಿ ಬರೆದ ನಿನ್ನ ಲಿಖಿತ ನೋಡಿ ದುಃಖದೆಡೆಯಲ್ಲಿಯೂ ನಾನು ಆನಂದದ ತನ್ಮಯತೆಯಿಂದ ಕಣ್ಣು ಮುಚ್ಚಿ ಬಿಟ್ಟೆ. ನನ್ನ ಸಿಲ್ವರ್ ನಿಜವಾಗಿಯೂ ಭಾರತೀಯ ತತ್ವ ಶಾಸ್ತ್ರವನ್ನು ಮೆಚ್ಚ ತೊಡಗಿರುವನೇ ? ನನ್ನ ಮನದಲ್ಲಿ ಆಗಾಗ ಮರುಕಳಿಸುವ ಪ್ರಶ್ನೆಯಿದು.

"ಬರೆ; ಇನ್ನೂ ಬರೆ. ಭಾರತದ ಕುರಿತು ನನ್ನ ಅಭಿರುಚಿ ಕೊನರಿದೆ" ಎಂಬುದಾಗಿ ನೀನು ಬರೆದಿದ್ದಿ. ಆದ್ದರಿಂದ ನಾನು ಬರೆಯಲೇ ಬೇಕು.

ಆದರೆ ಸಿಲ್ವರ್, ನಾನು ಇಲ್ಲಿಯ ಉತ್ತಮವಾದ್ದನ್ನು ಮಾತ್ರವೇ ಬರೆ ದರೆ ಏನು ಫಲ? ಇಲ್ಲಿರುವ ಕೆಡುಕನ್ನೂ ನಾವು ಕಾಣಬೇಕು. ಟೀಕಿಸುವು ದಕ್ಕಾಗಿ ಅಲ್ಲ. ಕೊರತೆಯನ್ನು ನೀಗಿಸಿ, ಸತ್ಯ ಸ್ಥಾಪನೆ ಮಾಡುವುದಕ್ಕಾಗಿ. ನಾವು ಪರಕೀಯರಾದರೇನು? ನಾವೇಕೆ ಇಷ್ಟವಿದ್ದರೆ ಇಲ್ಲೇ ದುಡಿಯಬಾರದು? ನಾವು ಹೊಸದೇನನ್ನೂ ಹೇಳಬೇಕಾಗಿಲ್ಲ. ಅವರ ಕೂಡೆ ಇರುವ ಸಂಪತ್ತನ್ನೇ ಅವರಿಗೆ ಬಿಚ್ಚಿ ತೋರಿಕೊಟ್ಟರಾಯಿತು.

ಇಲ್ಲಿರುವ ಕೆಲವೊಂದು ಸಮಸ್ಯೆಗಳನ್ನು ಪರಿಹರಿಸಿದೆವಾದರೆ, ವಿಶ್ವ ಬಾಂಧವ್ಯ ಮತ್ತು ವಿಶ್ವ ಶಾಂತಿಯನ್ನೇರ್ಪಡಿಸಿ, ನವ ಮಾನವ್ಯದ ಸೃಷ್ಟಿಯ ಕೇಂದ್ರವನ್ನಾಗಿ ಭಾರತವನ್ನೇ ಆರಿಸಿಕೊಳ್ಳಬಹುದು.

ಏಕೆ ಗೊತ್ತೆ? ಮಾನವನ ನಿಜವಾದ ಐಕ್ಯತೆ ಮತ್ತು ಮಧುರ ಬಾಂಧ ವ್ಯಗಳ ಮೂಲ ಪ್ರಪಂಚವಾದವಲ್ಲ--ಅಧ್ಯಾತ್ಮ ವಾದ. ಅಧ್ಯಾತ್ಮವೆಂದರೆ ತಿಳಿಗೇಡಿತನದ ಕಾರ್ಯ ಮಾಡುತ್ತಾ ಹೋಗುವುದು— ಪಾಪ ಪರಿಹಾರಕ್ಕೆ ಇಗರ್ಜಿಗೆ ಹೋಗುವುದು–ಹೀಗಲ್ಲ. ಭಾರತದಲ್ಲಿಯೂ ಇದೆ ಆ ಕ್ರಮ. ಇನ್ನೊಬ್ಬನಿಗೆ ದ್ರೋಹವೆಸಗಿ ಪಾಪ ಪರಿಹಾರಕ್ಕಾಗಿ ದೇವಾಲಯದಲ್ಲಿ ಪೂಜೆ ಪುರಸ್ಕಾರಗಳನ್ನು ಮಾಡಿಸಿ ಬಿಡುವುದು. ಮನಸ್ಸಿನಲ್ಲಿ ದುಷ್ಟ ಚಿಂತನೆಗಳನ್ನು ಮಾಡುತ್ತಾ ಜಪ ಮಾಡುವುದು—ಇದು ಅಧ್ಯಾತ್ಮವಲ್ಲವೆಂಬುದು ನನ್ನ ವಾದ.

ಅಧ್ಯಾತ್ಮವೆಂಬುದು ಅಂತರಂಗದ ಒಂದು ಸ್ಥಿತಿ. ಅದೊಂದು ಪಕ್ವತೆ— ಸಿಲ್ವರ್, ಅದೊಂದು ರಸಪರಿಪಾಕ. ಮಾನವ ಜೀವಿಯೆಡೆಗೆ ಅನುಕಂಪ ವಿಲ್ಲದ ಹೃದಯದಲ್ಲಿ ಅಧ್ಯಾತ್ಮವೆಲ್ಲಿ ಬಂತು ?

ಇಂತಹ ದೈವೀಸ್ಥಿತಿಯಲ್ಲಿ ಪ್ರಧಾನ ಭಾಗವು, ತ್ಯಾಗವಿರಲೇಬೇಕು ಸಿಲ್ವರ್. ಮಹಾತ್ಮಾ ಯೇಸು ಸ್ವಾಮಿಯನ್ನೇ ನೋಡು. ತ್ಯಾಗದ ಪರಾಕಾಷ್ಠೆಯೇ ಆತ! ಹೊರಗಿನ ಪ್ರಪಂಚವನ್ನೇ ನೆಚ್ಚಿಕೊಂಡು ಅದರಲ್ಲೇ ಸರ್ವಸ್ವವನ್ನು ಕಾಣುವ ಮನುಷ್ಯನು ತ್ಯಾಗಕ್ಕೆ ಸಮರ್ಥನಾಗಬಲ್ಲನೇ?

ಭಾರತೀಯ ಜನಾಂಗದ ಬಾಹ್ಯಸ್ಥಿತಿಯು ಇಂದು ಹೇಗೆಯೇ ಇರಲಿ, ಸಿಲ್ವರ್. ಆದರೆ ಒಳಗಿನಿಂದ ಆ ಆಧ್ಯಾತ್ಮಿಕ ಸ್ಥಿತಿಯ ಒಂದು ಸಿದ್ಧತೆ ಈ ಜನಾಂಗದಲ್ಲಿದ್ದಂತೆ ಇನ್ಯಾವ ಜನಾಂಗದಲ್ಲೂ ಇಲ್ಲ. ನಿಜವಾದ ಮಹತ್ತರ ಸ್ಥಿತಿಗೆ ಮುಟ್ಟಿದ ತ್ಯಾಗಿಯನ್ನೂ, ಸನ್ಯಾಸಿಯನ್ನೂ ಕಂಡಾಗ ಇಂದಿಗೂ, ಭಾರತದ ಜನ ಹುಚ್ಚರಾಗಿ ಬಿಡುತ್ತಾರೆ. ಅಂತರಂಗದಲ್ಲಿ ಹುದುಗಿಕೊಂಡಿರುವ ಆ ಒಂದು ತೃಷ್ಣೆಯನ್ನದು ತೋರುತ್ತದೆ. ಹಿಂದಿನ ಅನೇಕಾನೇಕ ಋಷಿ ಪುಂಗವರ, ಪುಣ್ಯ ಪುರುಷರ ಆ ರಕ್ತವು ಇಂದೂ ಭಾರತೀಯರ ಧಮನಿಗಳಲ್ಲಿ ಕ್ಷೀಣವಾಗಿಯೇ ಆದರೂ ಪ್ರವಹಿಸುತ್ತಿದೆಯೋ ಏನೋ?

ಪಾಶ್ಚಾತ್ಯ ಪ್ರಪಂಚ ವಾದವೇ ಇಂದು ಭಾರತೀಯ ರಕ್ತದಲ್ಲಿರುವ ಯೋಗ್ಯತೆಯ ಪರಮ ಶತ್ರುಗಳಲ್ಲೊಂದು. ಇಲ್ಲಿಯ ಅನೇಕ ಕೊರತೆಗಳನ್ನು ಹೋಗಲಾಡಿಸಲು, ನಮ್ಮ ಅನುಭವವೇನೋ ಅವರಿಗೆ ಬೇಕೇ ಬೇಕು. ಆದರೆ ನಮ್ಮ ಪ್ರಪಂಚ ವಾದದಿಂದ ನೇರವಾದ ಆಘಾತವಿದ್ದೇ ಇದೆ.

ಅದು ಹೇಗೂ ಇರಲಿ. ಒಂದು ವಿಷಯ ನಿಶ್ಚಯ. ಆಧ್ಯಾತ್ಮಿಕ ಪ್ರಪಂಚದ ಕೇಂದ್ರವೇ ಈ ದೇಶ. ಆದ್ದರಿಂದ ಇಲ್ಲಿಂದಲೇ ಎಲ್ಲಾ ವಿಚಾರ ಪ್ರವಾಹ ಹೊರಡಬೇಕು.

ಹಾಗಾಗಬೇಕಿದ್ದರೆ ನಾವು ಇಲ್ಲಿಯೇ ದುಡಿಯಬೇಕು. ಇಲ್ಲಿಯ ಗನಿಗಳಲ್ಲೇ ಅಗೆದಗೆದು ದಿವ್ಯ ಮನೋಹರ ವಜ್ರಗಳನ್ನು ಹೊರಗೆ ತೆಗೆಯಬೇಕು.

ನೋಡು, ಸಿಲ್ವರ್, ಅದನ್ನೆಲ್ಲಾ ಗ್ರಹಿಸಿಬಿಟ್ಟೆನೆಂದರೆ ಸಾಕು—ಮೈನವಿರೇಳುವುದು. ದೇಹದಲ್ಲಿ ವಿದ್ಯುತ್ಸಂಚಾರವಾಗುವುದು. ಬದುಕಿದರೆ ಬದುಕಬೇಕು—ಈ ಆದರ್ಶಕ್ಕಾಗಿ ಎಂಬುದಾಗಿ ಒಳಗಿನ ಕೂಗು ಕೇಳಿ ಬರುವುದು.

ಹೀಗೆ ಈ ಉದ್ದೇಶವನ್ನು ನಾವು ಸಾಧಿಸುವಂತೆ ಮಾಡಲು, ಅಥವಾ

ಭಾರತೀಯರೇ ಆದರೂ ಸಾಧಿಸುವಂತೆ ಮಾಡಲು ಕೊರತೆಗಳ ಕುರಿತಾದ ಸತ್ಯ ವಿಮರ್ಶೆಯಾಗಲೇ ಬೇಕು. ಸತ್ಯದರ್ಶನವಿಲ್ಲದೆ ಸತ್ಯದ ಅನುಭವವಾಗು ವಂತಿಲ್ಲ. ಆದ್ದರಿಂದಲೇ, ಇನ್ನೂ ಇನ್ನೂ ಇಲ್ಲಿಯ ಕೊರತೆಗಳನ್ನು ನಿನಗೆ ಬಣ್ಣಿಸುತ್ತೇನೆ.

ಸಿಲ್ವರ್, ಕ್ಷಮಿಸಿಬಿಡು, ಯಾವುದೋ ಎತ್ತರದ ಭಾವನಾರಾಜ್ಯಕ್ಕೆ ಏರಿಬಿಟ್ಟೆ. ಇನ್ನು ಕೆಳಗಿಳಿದು, ಪುನಃ ಎಲ್ಲವನ್ನೂ ಬಣ್ಣಿಸುತ್ತೇನೆ.

ಮೊನ್ನೆ ಒಂದು ಸ್ವಾರಸ್ಯದ ಘಟನೆ ನಡೆಯಿತು. ನಾನೂ ಮದ್ರಾಸಿನ ನನ್ನ ಗೆಳೆಯ ಸೀತಾರಾಮ್ ಎಂಬವನೂ ಜತೆಯಾಗಿ ಮದ್ರಾಸಿನ ಪ್ರಸಿದ್ಧ ಮೂರ್ ಮಾರ್ಕೆಟಿನ ಹಿಂದುಗಡೆ ಇರುವ ಉದ್ಯಾನದೆಡೆಗೆ ನಡೆದೆವು. ಆ ಉದ್ಯಾನದ ಹೊರವಲಯದಲ್ಲಿ ಒಂದು ಸುಂದರವಾದ ಕಲ್ಲಿನ ವಿಗ್ರಹವಿದೆ. ಅದನ್ನೇ ನೋಡಿದೆ.

ಒಬ್ಬಳು ಸುಂದರ ಭಾರತೀಯ ಸ್ತ್ರೀ ಲಜ್ಜೆಯಿಂದ ಮೈ ಬಳುಕಿ ನಿಂತಿದ್ದಳು. ಕೈಯಲ್ಲಿ ಒಂದು ಮುದ್ದು ಮಗು ಕುಳಿತಿತ್ತು. ಬಳಿಯಲ್ಲೇ ಇನ್ನೊಂದು ಮಗು ನಿಂತು ತಾಯ ಇನ್ನೊಂದು ಕೈಯನ್ನು ಹಿಡಕೊಂಡಿತ್ತು. ಆ ಪ್ರತಿಮೆ ಯನ್ನು ಸ್ಥಾಪಿಸಿದ ಶಿಲಾನ್ಯಾಸವನ್ನು ನೋಡಿದೆ. ಅಲ್ಲಿ ಸಮೃದ್ಧಿ (Prosperity) ಎಂಬುದಾಗಿ ಬರೆದಿತ್ತು. ನನಗೆ ತುಂಬಾ ಹರ್ಷವಾಯಿತು. ಆದರೆ ನನ್ನ ಕಣ್ಣು ಸಹಜವಾಗಿಯೇ ಕೆಳಗೆ ಹರಿಯಿತು. ಆಗ ನನ್ನ ಎದೆ ಧಸಕ್ಕೆಂದಿತು. ಏನು ಗೊತ್ತೆ? ಒಬ್ಬಳು ಬಡಕಲು ದೇಹದ ಭಿಕ್ಷುಕಿ, ಆ ಪ್ರತಿಮೆಯ ತಳಪಾಯದ ಕಲ್ಲಿನಲ್ಲಿ ಎದುರು ಮುಖ ಮಾಡಿ ಮೈ ಮುದುಡಿಸಿ ಮಲಗಿದ್ದಳು. ಮಾನವ ಲೋಕದ ದುಃಖವೆಲ್ಲಾ ಆ ಬಡವೆಯ ಮುಖದಲ್ಲಿ ಒಡ ಮೂಡಿದಂತಿತ್ತು. ದೇಹ ಬಡಕಲಾಗಿತ್ತು. ಹೊಟ್ಟೆ ಸುಕ್ಕುಬಿದ್ದು ಒಳ ಸೇರಿ ಹೋಗಿತ್ತು.

ಆ ಸನ್ನಿವೇಶದ ಸ್ವಾರಸ್ಯ ಸೀತಾರಾಮನಿಗೂ ತಿಳಿಯಿತು. "ನೋಡಿ ಓರ್ಮನ್! ನಮ್ಮ ಹಣೆ ಬರಹ! ಸಮೃದ್ಧಿಯನ್ನು ಸೂಚಿಸುವ ಪ್ರತಿಮೆಯ ಕಾಲ್ಬುಡದಲ್ಲಿ ಈ ಭಿಕ್ಷುಕಿ!" ಎಂದು ಬಿಟ್ಟು ನಗತೊಡಗಿದನು. ನಗೆ ಬರುವಂತಿತ್ತು—ಸನ್ನಿವೇಶ. ಆದರೆ ನನಗೆ ಬರಲಿಲ್ಲ. ಭಾರತದ ಭೀಕರ, ಕರಾಳ ಬಡತನವನ್ನು ಅದಕ್ಕೆ ಸಂಬಂಧಪಟ್ಟ ಇಲ್ಲಿಯ ಸಕಲ ಸಾಮಾಜಿಕ, ಆರ್ಥಿಕ,

ಮಾನಸಿಕ ಸಮಸ್ಯೆಗಳನ್ನೂ ತಿಳಿದುಕೊಂಡಿದ್ದ ನನಗೆ ನಗೆ ಬರಲಿಲ್ಲ. ಕಣ್ಣು ಒದ್ದೆಯಾಯಿತು. ಎಂಜಲು ನುಂಗಿ, ಆ ಮಿತ್ರನಿಗೆ ತಿಳಿಯದಂತೆ ಮುಖ ಒರಸಿ, ಆತನನ್ನು ಎಳೆದು ಬೇರೆಡೆಗೆ ನಡೆದುಬಿಟ್ಟೆ. ನನಗೇಕೋ ಆ ದೃಶ್ಯ ಅಸಹನೀಯವಾಯಿತು. ಯಾವಾತನೋ ಕ್ರೂರ ಶಿಲ್ಪಿ, ಭಾರತದ ಈ ಪವಿತ್ರ ಭೂಮಿಯನ್ನು ತನ್ನ ಕೃತಿಯಿಂದ ಗೇಲಿ ಮಾಡುತ್ತಿರುವಂತೆ ನನಗೆ ಆಗ ಭಾಸವಾಗಿರಬೇಕು!

ನಮ್ಮ ಸಂಯುಕ್ತ ಅಮೇರಿಕಾ ದೇಶದಲ್ಲಿ ಒಬ್ಬಾನೊಬ್ಬ ಕಾಲಿಗೆ ಬೂಟ್ಸು ಇಲ್ಲದೆ ನಡೆದನಾದರೆ ಆತನು ಬಹಳ ಗರೀಬನೆಂದು ನಾವು ಎಣಿಸುತ್ತೇವೆ. ಕಂಠಕ್ಕೆ ಟೈಯಿಲ್ಲದೆ ಸಭೆ, ಸಮಾರಂಭಗಳಿಗೆ ಬಂದನಾದರೆ ಆತನು ಕೇವಲ ಬಡವನೆಂದಾಯಿತು. ಆತನ ಪೋಷಾಕಿನಲ್ಲಿ ಒಂದೆರಡು ಚಿಕ್ಕ ತೂತಿದ್ದರೆ, ಅಥವಾ ಸಾಕಷ್ಟು ಇಸ್ತ್ರಿಗಳಿಲ್ಲವಾದರೆ ಸಹಾನುಭೂತಿಯಿರುವವರು "ಅಯ್ಯೋ ಪಾಪ! ಬಡವ!" ಎನ್ನುತ್ತೇವೆ. ತನ್ನ ಗೆಳೆಯ ಗೆಳತಿಯರನ್ನು ಆಗಾಗ ಮನೆಗೆ ಬರಮಾಡಿ, ಅವರಿಗೆ ಉಪಚಾರ ನೀಡಲಾರದವನು–ಇತರರ ಮನೆಗೆ ಹೋಗಿ ಅವರ ಆಮಂತ್ರಣ ಸ್ವೀಕರಿಸದವನು ಕಡು ಬಡವನೆಂದೇ ಅರ್ಥ! 3–4 ಕೋಣೆಗಳಿರುವ ಹಳೇ ಮನೆಯಲ್ಲಿ ವಾಸಿಸುವವನನ್ನು ನೋಡಿ "ಇಸ್ಸಿ! ಇದೂ ಒಂದು ಮನೆಯೇ!" ಎಂದು ಹೇಳುತ್ತೇವೆ. ಆಗಾಗ ಸಂಯುಕ್ತ ಅಮೇರಿಕಾ ದೇಶದ ವಿವಿಧ ಭಾಗಗಳನ್ನು ಸಂಚರಿಸಲಾರದವನ ಜೀವನ ವ್ಯರ್ಥ! ಎಂದು ಭಾವಿಸುತ್ತೇವೆ. ಸ್ವಂತ ಮೋಟಾರು ಕಾರಿಲ್ಲದೆ ಸಾರ್ವಜನಿಕ ಬಸ್ಸು ವ ರೈಲುಗಳಲ್ಲೇ ಪೇಟೆ ಪಟ್ಟಣಗಳಲ್ಲಿ ತಿರುಗಾಡುವಾತನು ಕೇವಲ ಗರೀಬನೆಂದು ಗಣಿಸುತ್ತೇವೆ. ಸಿಲ್ವರ್, ನಮ್ಮಲ್ಲಿ ದಾರಿದ್ರ್ಯದ ಲಕ್ಷಣ ಹೀಗೆ.

ಆದರೆ, ಇಲ್ಲಿ ನೋಡು. ಅಂಥವರೆಲ್ಲಾ ದರಿದ್ರರೆಂದು ತಿಳಿಯಲ್ಪಡುವುವುದಿಲ್ಲ. ಅಂಥವರನ್ನು ಇಲ್ಲಿಯ ಶ್ರೀಮಂತರು ಮಧ್ಯಮ ವರ್ಗದವರೆಂದೂ, ಬಡವರು, ಶ್ರೀಮಂತರೆಂದೂ ಕರೆಯುತ್ತಾರೆ.

ಹಾಗಾದರೆ ಇಲ್ಲಿಯ ಗರೀಬರೆಂದರೆ ಹೇಗಪ್ಪಾ ಎಂದು ನೀನು ಅಚ್ಚರಿ ಪಡಬಹುದು. ಅಷ್ಟೇಕೆ ನಾನು ಅದನ್ನು ಬಣ್ಣಿಸಿ ಬಿಟ್ಟರೆ ನೀನು ಬೆಚ್ಚಿಯೂ ಬೀಳಬಹುದು. ಆದರೆ ಹೇಳಿಬಿಡುತ್ತೇನೆ ಕೇಳು.

ಬೊಂಬ್ಯಾ, ಕಲ್ಕತ್ತ, ನ್ಯೂ ಡೆಲ್ಲಿ, ಮದ್ರಾಸು, ಲಕ್ನೌ, ಕಾನ್‌ಪುರ್,

ನಾಗಪುರ, ಬೆಂಗಳೂರು, ಹೈದರಾಬಾದಿನಂತಹ ದೊಡ್ಡ ನಗರಗಳಲ್ಲಿರುವ ಹೊಲಗೇರಿ ಪ್ರದೇಶ (Slum area)ಗಳನ್ನು ಬಣ್ಣಿಸುತ್ತೇನೆ, ನೋಡು. ಈ ತೆರನಾದ ಪ್ರದೇಶಗಳಲ್ಲಿ ಹೆಚ್ಚುಕಡಿಮೆ 4 ಯಾ 5 ಫೀಟು ಅಗಲ, 5 ಯಾ 6 ಫೀಟು ಉದ್ದ, 3ಯಾ 4 ಫೀಟು ಎತ್ತರದ ಮನೆಯ ಆಕಾರದ ರಚನೆಗಳಿರುತ್ತವೆ. ಅವುಗಳಿಗೆ ಮಣ್ಣಿನ ಮುದ್ದೆಗಳನ್ನೋ ಮಣ್ಣಿನ ಒರಟು ಹಸಿ ಇಟ್ಟಿಗೆಗಳನ್ನೋ ಗೋಡೆಗಳ ರೂಪದಲ್ಲಿ ಇಟ್ಟಿರಲೂಬಹುದು; ಅದೂ ಇಲ್ಲದೆ ಕೇವಲ ಹಳೆಯ ಡಬ್ಬಿಯ ತುಂಡುಗಳಿಂದಲೇ ಮಾಡಿರಲೂ ಬಹುದು. ಮಾಡಿಗೆ ಸಿಮೆಂಟು, ಕಾಂಕ್ರೀಟಿನ ಸುದ್ದಿ ಬಿಡು–ಕೇವಲ ಹಂಚಿನ ಛಾವಣಿಯೂ ಇರುವುದಿಲ್ಲ. ಕತ್ತರಿಸಿದ ಹರಕು ಗೋಣಿಗಳನ್ನೋ, ಮಣ್ಣು ಹಿಡಿದು ತೂತಾದ ಡಬ್ಬಿಯ ತುಂಡುಗಳನ್ನೋ, ಯಾವುದಾದರೂ ಎಲೆಗಳನ್ನೋ ಮುಚ್ಚಿ ಮಾಡು ತಯಾರಿಸುತ್ತಾರೆ. ಪ್ರವೇಶದ್ವಾರ ಬಿಟ್ಟು, ಆದಕ್ಕೆ ಬೇರೆ ಬೆಳಕು ಗಾಳಿಗಳಿಲ್ಲ. ತಾಯಿ ಭೂಮಿಯ ಮಣ್ಣು ಹೊರತಾಗಿ ನೆಲಕ್ಕೆ ಬೇರೇನೂ ಇರುವುದಿಲ್ಲ.

ಇಂತಹ ಬಿಲಗಳಲ್ಲಿ (ಇವುಗಳನ್ನು ಗುಡಿಸಲುಗಳೆಂದು ಕರೆಯಲೂ ಸಾಧ್ಯವಿದೆಯೇ?) ಒಂದು ಕುಟುಂಬದ ಇಡೀ ಜನ ವಾಸಿಸುತ್ತಾರೆ—ಅಲ್ಲಿ ದಿನಗಳೆಯುತ್ತಾರೆ. ರಾತ್ರಿ ಆದರೊಳಗೆ ಹೇಗೆ ಮಲಗುತ್ತಾರೆ ಅಥವಾ ಹೊರಗೆ ತುಂಬಿರುವ ಕೊಳಕಿನಲ್ಲಿ ಮಲಗುತ್ತಾರೋ ಎಂಬುದನ್ನು ನೋಡುವ ಸಾಹಸವನ್ನು ಮಾಡಲೂ ನನ್ನಿಂದಾಗಲಿಲ್ಲ. ಅದಕ್ಕೆ ಬೇಕಾದ ಎದೆಗಾರಿಕೆ ನನಗಿಲ್ಲ.

ಅಂತಹ ಹೊಲಗೇರಿ ಪ್ರದೇಶಗಳ ಈ ಬಿಲಗಳಿಗೆ ಪಾಯಿಖಾನೆಗಳಿಲ್ಲ—ನೀರಿನ ನಳ್ಳಿಗಳಿಲ್ಲ; ಭೂಗತ ಚರಂಡಿಗಳಿಲ್ಲ. ಅನೇಕ ಕಡೆಗಳಲ್ಲಿ ಕೊಳೆತು ನಾರುವ ಕೊಚ್ಚೆ ನೀರು ಅಲ್ಲಲ್ಲಿ ನಿಂತಿರುತ್ತದೆ. ಇರುವ ಕೆಲವು ಚರಂಡಿಗಳ ಸ್ಥಿತಿ ಗ್ರಹಿಸಿದರೆ, ಅಬ್ಬಾ! ಎನಿಸುವುದು. ಆ ಚರಂಡಿಗಳೇ ಅನೇಕರಿಗೆ ಸಾರ್ವಜನಿಕ ಪಾಯಿಖಾನೆಗಳು. ಬೆಳಗಾಗುವ ಮೊದಲೇ ಸಾರ್ವಜನಿಕ ರಸ್ತೆಯಲ್ಲಿ ಅಥವಾ ರಸ್ತೆ ಬದಿಯಲ್ಲಿ ಕುಳಿತು ಮಲಶೋಧನೆ ಮಾಡಲು ಸಂಕೋಚವಾಗುವವರೆಲ್ಲ ಈ ಚರಂಡಿಗಳನ್ನೇ ಉಪಯೋಗಿಸುತ್ತಾರೆ.

ಈ ಭೂಮಿಯ ಮೇಲೆ ಮಾನವನಿಂದ ರಚಿತವಾದ ಅತಿ ಅಸಹ್ಯಕರವಾದ ಪ್ರದೇಶಗಳನ್ನು ನೋಡಬೇಕಿದ್ದರೆ, ಈ ಹೊಲಗೇರಿ ಪ್ರದೇಶಗಳನ್ನು ನೋಡಬೇಕು. ಅತೀವ ದುಃಖದಾಯಕ ದೃಶ್ಯ ನೋಡಬೇಕಿದ್ದರೆ ಇವುಗ

ಳನ್ನು ಸಂದರ್ಶಿಸಬೇಕು.

ಅಡುಗೆಗೆ ಬೇಕಾದ ನೀರಿಗಾಗಿ ಒಂದೆರಡು ಫರ್ಲಾಂಗು ದೂರದಲ್ಲಿರುವ ನಳ್ಳಿಗೆ ಹೋಗಿ, ಕಾಲು ಗಂಟೆಯೋ ಅರ್ಧ ಗಂಟೆಯೋ ಕಾದು ಕುಳಿತು ನೀರು ತರಬೇಕಾಗುತ್ತದೆ. ನಳ್ಳಿಯ ನೀರಿಗಾಗಿ ಆ ಬಡ ಮಹಿಳೆಯರು ಪಡುವ ಪಾಡೇನು? ಅದಕ್ಕಾಗಿ ಬರುವ ಹೋರಾಟ ಕಾದಾಟಗಳೇನು? ಸಂಯುಕ್ತ ಅಮೇರಿಕಾ ದೇಶದಲ್ಲಿ ಕೇವಲ ಒಂದು ಕೊಡ ನೀರಿಗಾಗಿ ಅರ್ಧ ಗಂಟೆ ಕಾದು ನಿಲ್ಲುವ ಪ್ರಸಂಗವನ್ನು ಊಹಿಸುವುದಕ್ಕಾದರೂ ಸಾಧ್ಯವಿದೆಯೇ? ಇಲ್ಲ. ಸಿಲ್ವರ್, ಎಂತಹ ಬಡವನಿಗಾದರೂ ಈ ರೀತಿಯ ಪ್ರಸಂಗ ಬರಲಾರದು.

ಈ ಹೊಲಗೇರಿ ಪ್ರದೇಶಗಳೆಂದರೆ ಪಾಪ ಕೂಪಗಳು. ಇಲ್ಲಿರುವ ಜನರು ಮನುಷ್ಯತ್ವದಿಂದ ಎಷ್ಟು ದೂರ ಸರಿದಿರುತ್ತಾರೆಂದರೆ, ರಾತ್ರಿಯಲ್ಲಿ ಆ ಪ್ರದೇಶದಲ್ಲಿ ಸಂಚರಿಸುವ ಒಬ್ಬ ಹೊಸಬನನ್ನು ಕೇವಲ ಒಂದೆರಡು ರೂಪಾಯಿಗಳಿಗಾಗಿ ಕುತ್ತಿಗೆ ಹಿಸುಕಲೂ ಹೇಸದವರು ಇಲ್ಲಿ ಇರುತ್ತಾರೆ.

ದಾರಿದ್ರ್ಯದ ಕೇಂದ್ರಸ್ಥಾನಗಳಾದ ಇಂತಹ ಹೊಲಸು ಪ್ರದೇಶಗಳಲ್ಲಿ ಯಥಾರ್ಥವಾಗಿಯೂ ನೀತಿಮತ್ತೆಯನ್ನು ಕಾಪಾಡಿಕೊಳ್ಳುವುದೆಂದರೆ ಕಷ್ಟವೇ ಸರಿ. ಸೌಂದರ್ಯಕ್ಕಲ್ಲಿ ಸ್ಥಾನವಿಲ್ಲ. ಮಾನವೀಯತೆಗಲ್ಲಿ ಎಡೆಯಿಲ್ಲ. ನೈಜ ಜೀವನಕ್ಕಲ್ಲಿ ಆಸ್ಪದವಿಲ್ಲ.

ಇಂತಹ ಹೊಲಗೇರಿ ಪ್ರದೇಶಗಳನ್ನು ಏಕೆ ಸರಕಾರವಾದರೂ ಸಹಿಸುತ್ತಿದೆ ಎಂಬ ಪ್ರಶ್ನೆ ಬರಬಹುದು. ಅವುಗಳ ನಿರ್ಮೂಲನಕ್ಕೆ ಬೇಕಾದ ಕಾನೂನುಗಳಿವೆ. ಅದೇ ಪ್ರಕಾರ ಅತ್ಯುತ್ಸಾಹದಿಂದ ಒಮ್ಮೊಮ್ಮೆ ಅಂತಹ ಪ್ರದೇಶಗಳಿಂದ ಈ ಮಾನವ ಬಿಲಗಳನ್ನು ತೆಗೆದು ಬಿಸುಡುವುದೂ ಇದೆ.

ಆದರೆ ಆಗ ಸಹಸ್ರಾರು ಜನರ ಗೋಳು ಹೇಳತೀರದು. ಅವರು ಹೋಗುವುದಾದರೂ ಎಲ್ಲಿಗೆ? ಅವರಿಗೆ ಆಶ್ರಯವನ್ನಾರು ಕೊಡಬೇಕು? ಅವರಿಗೆ ಉತ್ತಮ ಕಟ್ಟಡಗಳನ್ನು ಕಟ್ಟಿಕೊಟ್ಟು ಅವರೂ ಮಾನವರಂತೆ ಜೀವಿಸಲು ಬೇಕಾದ ಏರ್ಪಾಡು ಮಾಡುವವರ್ಯಾರು? ಅದಕ್ಕಾಗಿ ಒಂದು ಕಡೆಯಲ್ಲಿ ತೆಗೆದು ಬಿಸುಡಲ್ಪಟ್ಟ ಈ ಹೊಲಗೇರಿಗಳು ಕ್ಷಿಪ್ರವಾಗಿ ಬೇರೆ ಕಡೆಗಳಲ್ಲಿ ತಲೆ ಎತ್ತುತ್ತವೆ. ಇಂತಹ ಮಾನವೀಯ ಯೋಜನೆಗಳಿಗೆ ಸರಕಾರದ ಕೈಯ್ಯಲ್ಲಿ ದುಡ್ಡಿಲ್ಲ. ಶ್ರೀಮಂತ ಸಾಹುಕಾರರು ಲಕ್ಷಗಟ್ಟಲೆ ಬಾಡಿಗೆ ಬರಬಹುದಾದ

ಆಲಂಕಾರಿಕ ವ್ಯಾಪಾರೀ ಕೇಂದ್ರಗಳಿಗಾಗಿ ಕಟ್ಟಡ ಕಟ್ಟಿಸಿ, ಲಾಭಗಳಿಸಲು ಸಿದ್ಧರಿರುವರೇ ವಿನಹ, ಈ ಬಡ ಪಶುಗಳಿಗೆ ಮನೆಮಾರು ಕಟ್ಟಿಸಿ ಕೆಲವೇ ರೂಪಾಯಿಗಳನ್ನು ಪಡಕೊಂಡು ತೃಪ್ತರಾಗಿರಲು ಸಿದ್ಧರಿರುವರೇ?

ಒಂದು ಜನೋಪಕಾರಿ ಸಂಸ್ಥೆಯಾದರೂ ಈ ಕಾರ್ಯ ಮಾಡಬಹುದೆಂದರೆ—ಚಿಕ್ಕ ಸಂಸ್ಥೆಗಳಿಂದ ಈ ಕೆಲಸ ಆಗುವಂತಹುದಲ್ಲ. ದೊಡ್ಡ ಸಂಸ್ಥೆಗಳು ಇಲ್ಲವಾಗಿವೆ. ಯಾರೇನು ಮಾಡಬೇಕು?

ಆದರೆ ಸಿಲ್ವರ್, ಬೊಂಬಾಯಂತಹ ಬೃಹತ್ ನಗರಗಳಲ್ಲಿ ಇಂತಹ ಹೊಲಗೇರಿ ಬಿಲಗಳಲ್ಲಿ ವಾಸಿಸುವ ಸಂದರ್ಭ ಸಿಗುವುದು ಕೂಡಾ ಅನೇಕಾನೇಕ ಜನರ ದೃಷ್ಟಿಯಿಂದ ಒಂದು ರೀತಿಯ ಪುಣ್ಯವೆಂದು ಪರಿಗಣಿಸಲ್ಪಡುತ್ತದೆ. ಏಕೆ ಗೊತ್ತೆ? ಲಕ್ಷಗಟ್ಟಲೆ ಜನರಿಗೆ ಇಂತಹ ಬಿಲಗಳೂ ಕೂಡಾ ಇರುವುದಿಲ್ಲ. ಅವರು ರಸ್ತೆ ಬದಿಯಲ್ಲಿಯೇ ಜೀವನ ನಡೆಸುತ್ತಾರೆ. ಇಂಥವರಿಗೆ ರಸ್ತೆ ನಿವಾಸಿಗಳು [Pavement Dwellers] ಎಂಬ ಹೆಸರಿದೆ.

ಬೊಂಬಾಯಿಗೆ ಬರುವ ಮೊದಲೇ ಅಲ್ಲಿ ಎರಡು ಲಕ್ಷ ರಸ್ತೆ ನಿವಾಸಿಕರು ಇದ್ದಾರೆಂಬುದನ್ನು ಕೇಳಿ, ಅಂಥವರನ್ನು ನೋಡುವ ಕುತೂಹಲದಲ್ಲಿದ್ದೆ. ಆದರೆ ನನಗೆ ಮೊದಲು ಅಂತಹ ಲಕ್ಷಣಗಳೇನೂ ಕಾಣಲಿಲ್ಲ. ರಾತ್ರಿ 10 ಗಂಟೆಯ ತನಕವೂ ನಾನು ಸುತ್ತಾಡುತ್ತಿದ್ದೆ. ಆದರೆ ಕೆಲವು ಭಿಕ್ಷುಕರ ಹೊರತಾಗಿ ಆ ರೀತಿಯಲ್ಲಿ ಮನೆಮಾರಿಲ್ಲದೆ ಜೀವಿಸುವವರು ದೃಷ್ಟಿಗೆ ಬೀಳಲಿಲ್ಲ.

ಭಾರತದ ಕುರಿತಾಗಿ ಹುಟ್ಟಿಕೊಂಡ ಅನೇಕ ಸುಳ್ಳು ಸುಳ್ಳಾದ ಕಟ್ಟುಕತೆಗಳಂತೆಯೇ ಇದೂ ಆಗಿರಬೇಕೆಂದು ನಾನು ಭಾವಿಸಿಕೊಂಡಿದ್ದೆ.

ಆದರೆ ಒಂದು ದಿನ ನನಗೆ ಬೊಂಬಾಯಿಯ ಅತಿ ದೊಡ್ಡ ಕೇಂದ್ರವಾದ ಬೋರಿ ಬಂದರ್‌ನಲ್ಲಿರುವ ಮಧ್ಯ ರೈಲ್ವೆಯ ಅತಿ ಸುಂದರವಾದ ರೈಲ್ವೆ ನಿಲ್ದಾಣವಾದ ವಿಕ್ಟೋರಿಯಾ ಟರ್ಮಿನಸ್‌ಗೆ ಪ್ರಾತಃಕಾಲ 5 ಗಂಟೆಗೆ ಹೋಗಬೇಕಾಗಿತ್ತು. ನನಗೆ ಬೆಳಗಾತ ಮೊದಲಾಗಿ ಹೊರಡುವ ವಿದ್ಯುತ್ ಬಂಡಿಯಲ್ಲಿ ಬೊಂಬಾಯಿ ಮತ್ತು ಪೂನಾಗಳ ನಡುವೆ ಇರುವ ಲೋನಾವ್ಲಾಕ್ಕೆ ಹೋಗಬೇಕಾಗಿತ್ತು.

ನಾನು ತಾರ್‌ದೇವ್‌ನ ಬಳಿಯಲ್ಲಿದ್ದ ನನ್ನ ವಾಸಸ್ಥಾನದಿಂದ ಟ್ರಾಮು ಹತ್ತಿ ಹೊರಟೆ. ಆ ಮೊದಲು ಅಷ್ಟು ಬೆಳಗಾತ ನಾನು ಎದ್ದಿರಲೇ ಇಲ್ಲ. ಟ್ರಾಮಿನಲ್ಲಿ ಕುಳಿತ ಸ್ವಲ್ಪ ಹೊತ್ತಿನಲ್ಲಿ ರಸ್ತೆಯ ಬದಿಯ ಕಾಲುದಾರಿಯಲ್ಲಿ

ಅನೇಕರು ಅಡ್ಡಬಿದ್ದಿದ್ದಂತೆ ನನಗೆ ಕಂಡಿತು. ಸಾಮೂಹಿಕ ಕೊಲೆ ನಡೆಯಿತೇನೋ ಎಂದು ನಾನು ಗ್ರಹಿಸಿದೆ. ಬಹಳ ಆತುರದಿಂದ ಟ್ರೇಮಿನ ಬದಿಯಿಂದ ಇಣಿಕಿ ನೋಡಿದೆ. ರಕ್ತದ ತುಣುಕಿಲ್ಲ. ಶವಗಳ ಲಕ್ಷಣಗಳಿಲ್ಲ. ಕುತೂಹಲ ಕೆರಳಿತು.

ಟ್ರಾಮು ಗಡಗಡ ಸದ್ದು ಮಾಡುತ್ತ ಮುಂದೆ ಮುಂದೆ ಹೋದಂತೆ ಪ್ರತಿ ಗಸ್ತೆಯ ಇಕ್ಕಡೆಗಳಲ್ಲೂ ಸಾವಿರಗಟ್ಟಲೆ ಜನರು ಮಲಗಿದ್ದು ಕಂಡಿತು. ನಾನು ದಿಙ್ಮೂಢನಾದೆ; ಕಂಗಾಲಾದೆ. ಆಗ ಫಕ್ಕನೆ ನೆನಪಾಯಿತು—"ರಸ್ತೆ ನಿವಾಸಿಕರು!" ಆಗ ಸ್ವಲ್ಪ ಜೀವ ಬಂತು. ಆದರೆ ಆದು ನಾನೆಲ್ಲಿಯೂ ನೋಡದಿದ್ದ ಕೌತುಕದ ವಿಷಯವಾಗಿತ್ತು. ಕುತೂಹಲದಿಂದ ಮತ್ತೂ ನೋಡಿದೆ.

ಇದ್ದ ಬಿದ್ದ ಕಂಬಳಿಗಳನ್ನೋ, ಬಟ್ಟೆಗಳನ್ನೋ ಹೊದ್ದುಕೊಂಡು ಮಲಗಿದ್ದರು. ಹೆಂಗಸರೂ ಮಕ್ಕಳೂ ಸಂಕೋಚವಿಲ್ಲದೆ ಅಲ್ಲೇ ಬಿದ್ದು ಈ ಲೋಕವನ್ನೇ ಮರೆತಿದ್ದರು. ಅಲ್ಲಿ ಯಾವ ಭೇದಭಾವವೂ ಇರಲಿಲ್ಲ. ಯಾವ ಅಹಂಭಾವವೂ ಇಲ್ಲ. ಮಾನ ಮರ್ಯಾದೆಗಳ ಗೋಜೂ ಇಲ್ಲ. ಭೂಮಿಯ ಮೇಲೆಯೇ ಹುಟ್ಟಿದ ಜನರು ಭೂಮಿಯ ಮೇಲೆಯೇ ಮಲಗಿದ್ದರು!

ಅಲ್ಲಿ ಇಲ್ಲಿ ಕೆಲವು ಜನರು ಬಹಳ ಅಗ್ಗದ ಒಂದೊಂದು ಬಳ್ಳಿ ಮಂಚದ ಮೇಲೆ ಒರಗಿ ಬಹಳ "ಮೇಲ್ಮಟ್ಟ"ದ ರೀತಿಯ ನಿದ್ದೆಯನ್ನು ಮಾಡುತ್ತಿದ್ದರು;

ಇದನ್ನೆಲ್ಲಾ ನೋಡಿದಂತೆ ಆ ವಿಶಾಲ ನಗರವಾದ ಬೊಂಬ್ಯಾಯಲ್ಲಿ ರಸ್ತೆ ನಿವಾಸಿಕರೇ 2 ಲಕ್ಷ ಇರುವುದೇನೂ ಆಶ್ಚರ್ಯವಲ್ಲ ಎಂದು ನನಗೆನಿಸಿತು.

ಇಷ್ಟು ಜನ ಹಗಲಲ್ಲಿ ಎಲ್ಲಿರುತ್ತಾರೆ? ಏನು ಮಾಡುತ್ತಾರೆ? ಅವರ ಅಡಿಗೆ ಊಟ ಹೇಗೆ ನಡೆಯುತ್ತಿದೆ? ಇವರ ಸಂಸಾರವೆಲ್ಲಿ? ಮಕ್ಕಳು ಮರಿಗಳ ಸಾಕಣೆಯೆಲ್ಲಿ? ಈ ಬಡ ಜೀವಿಗಳಿಗೆ ಸಾಂಸಾರಿಕ ಗೌಪ್ಯವೆಲ್ಲಿ? ಇದನ್ನೆಲ್ಲಾ ನೆನನೆನಸಿ, ನಾನು ಮನಕರಗಿದೆ, ಸಿಲ್ವರ್. ಟ್ರಾಮಿನ ಬದಿಯ ಸರಳಿಗೆ ಗಲ್ಲವಿಟ್ಟು ಒಂದೇ ಸವನೆ ಬದಿಗೆ ನೋಡುತ್ತಾ ದುಃಖದಿಂದ ಬಿಸುಸುಯ್ಯುತ್ತಾ ನಾನು ಮುಂದೆ ಸಾಗುತ್ತಿದ್ದೆ.

ಬೋರಿಬಂದರಿಗೆ ತಲಪುವಾಗಲೇ ನಾನು ಮೈ ತಿಳಿದದ್ದು. ಆಗ ಒಂದೇ ಸವನೆ ಕಣ್ಣಿನಿಂದ ನೀರು ಸುರಿಯುತ್ತಿತ್ತು. ಟ್ರಾಮಿನ ಬದಿ ನನ್ನ ಕಣ್ಣೀರಿನಿಂದ ತೊಯ್ದುಹೋಗಿತ್ತು.

ಘಜನಿ ಮಹಮ್ಮದನು 17 ಸಾರಿ ದಂಡೆತ್ತಿ ಬಂದು ಇಲ್ಲಿಂದ ಅನೇಕಾನೇಕ ಒಂಟೆಗಳ ಮೇಲೆ ಮುತ್ತು ರತ್ನಗಳನ್ನೂ, ಬೆಳ್ಳಿ ಬಂಗಾರಗಳನ್ನೂ ಹೇರಿ ಮಧ್ಯ ಏಸ್ಯಾಕ್ಕೆ ಸಾಗಿಸಿದ್ದರೂ ಮುಗಿಯದಿದ್ದ ಭಾರತದ ಆ ಐಶ್ವರ್ಯ ಎಲ್ಲಿ ನಷ್ಟವಾಗಿ ಹೋಯಿತು! ಎಂದು ಪರಿತಪಿಸಿದೆ. ಅಂದಿನ ನನ್ನ ಸ್ಥಿತಿ ನನಗೆ ಹೇಳುವುದಕ್ಕೇ ಬರುವುದಿಲ್ಲ, ಸಿಲ್ವರ್. ನನ್ನ ಮಾತೃಭೂಮಿಯಾದ ಸಂಯುಕ್ತ ಅಮೇರಿಕಾಕ್ಕೇನೇ ಬೃಹತ್ತಾದ ಗಂಡಾಂತರ ಬಂದಿದ್ದರೂ ನಾನು ಅಷ್ಟು ಕಂಗೆಡುತ್ತಿರಲಿಲ್ಲ.

ಆ ದಿನ ನನ್ನ ಲೊನಾವ್ಲದಲ್ಲಿನ ಪಯಣ ವ್ಯರ್ಥವಾಯಿತು. ಅಲ್ಲಿಯ ರೈಲ್ವೇ ಸ್ಟೇಶನ್ನಿನಲ್ಲಿಳಿದು, ತಲೆಗೆ ಕೈಯಿಟ್ಟು ಸುಮ್ಮನೇ ಚಿಂತಿಸುತ್ತಾ ಕುಳಿತೆ. ಎಲ್ಲಿಗೂ ಹೋಗದೆ, ಆ ದಿನ ಮರಳಿ ಬೊಂಬ್ಯಾಗೆಯೇ ಬಂದುಬಿಟ್ಟೆ.

ಏಕೆಂದರೆ ಆ ದಿನ ಭಾರತದ ಕರಾಳ ದಾರಿದ್ರ್ಯದ ದರ್ಶನ ನನಗಾಗಿತ್ತು.

ಆದ್ದರಿಂದ ಅಂದಿನಿಂದ ಭಾರತದ ಅನೇಕ ಹಳ್ಳಿಗಳಿಗೆ ಸಂದರ್ಶನವಿತ್ತೆ. ಅನೇಕ ಹಿರಿಯ ಕಿರಿಯ ಪೇಟೆ ಪಟ್ಟಣಗಳನ್ನು ಸುತ್ತಾಡಿದೆ. ಅನೇಕಾನೇಕ ಜನರನ್ನು ಭೇಟಿಯಾದೆ. ಭಾರತದ ದಾರಿದ್ರ್ಯಕ್ಕೆ ಚಾರಿತ್ರಿಕವಾದ ಕಾರಣ ನನಗೆ ತಿಳಿದಿತ್ತು. ಆದರೆ ಇಂದಿನ ಪ್ರಸಕ್ತ ಕಾರಣವೇನು–ನನಗೆ ತಿಳಿಯ ಬೇಕಾಗಿತ್ತು.

ಹೀಗೆ ಸುತ್ತಾಡಿ ಸುತ್ತಾಡಿ ಅನೇಕ ವಿಷಯಗಳನ್ನು ತಿಳಕೊಂಡೆ. ಅವುಗಳನ್ನು ಮುಂದೆ ಸವಿಸ್ತಾರವಾಗಿ ನಿನಗೆ ಬರೆಯಲಿದ್ದೇನೆ. ಈಗ ಈ ಬಡತನದ ಚಿತ್ರಣವನ್ನೇ ಪೂರೈಸಿಬಿಡುತ್ತೇನೆ.

ಈ ರಸ್ತೆ ನಿವಾಸಿಗಳಲ್ಲಿ ಅನೇಕರು ಇತ್ತೀಚೆಗೆ ಅಂದರೆ ಹೆಚ್ಚು ಕಡಿಮೆ ದ್ವಿತೀಯ ಮಹಾ ಯುದ್ಧದ ನಂತರ ಹಳ್ಳಿಗಾಡುಗಳಿಂದ ಬಂದವರು. ಈಗ ಹೆಚ್ಚಿನವರು ಔದ್ಯಮಿಕ ಮಜೂರರು [ಸ್ತ್ರೀ ಪುರುಷರು ಕೂಡಾ]. ಆದರೆ ಸಹಸ್ರಾರು ಜನರಿಗೆ ದುಡಿತವಿಲ್ಲದೆ ಸುಮ್ಮನೆ ಅಲೆಯುತ್ತಾರೆ. ಏನಾದರೂ ಸಿಕ್ಕಿದ ಕೂಲಿ ಕೆಲಸಮಾಡಿ ಕಾಲಯಾಪನೆ ಮಾಡುತ್ತಾರೆ.

ಭಾರತೀಯ ಮಟ್ಟಗಳಿಂದ ನೋಡಿದರೆ, ಈ ಔದ್ಯಮಿಕ ಮಜೂರರ ಸಂಪಾದನೆಯು ಅಷ್ಟೇನೂ ಕಡಿಮೆಯಲ್ಲ. ಒಬ್ಬೊಬ್ಬನಿಗೆ ಕಡಿಮೆಯೆಂದರೆ ದಿನಕ್ಕೆ ಎರಡು ರೂಪ್ಯಾಗಳಿಂದ ಮೂರು ರೂಪ್ಯಾಗಳ ತನಕವೂ ಸಂಪಾದನೆ ಅವರಿಗಿದೆ. ನಾಲ್ಕು ಯಾ ಐದು ರೂಪ್ಯಾಯ ಸಂಪಾದನೆ ಇರುವವರೂ

ಇದ್ದಾರೆ. ಹಾಗೆಯೇ ಅವರ ಹೆಂಗಳೆಯರಿಗೂ, ಸ್ವಲ್ಪ ಕಡಿಮೆ ಮಟ್ಟದ ಲ್ಲಾದರೂ ಸಾಕಷ್ಟು ಮಟ್ಟಿನ ವೇತನವಿದೆ.

ಆದರೆ ಅವರಿಗೆ ತಮ್ಮದೆಂಬ ಮನೆಯಿಲ್ಲ. ಆಕಾಶದ ಕೆಳಗಡೆ ತಮ್ಮ ದೆಂಬ ಮಾಡಿಲ್ಲ– ತಮ್ಮದೆಂಬ ನೆಲವಿಲ್ಲ. ಬೀದಿಬದಿಯ ಅಂಗಡಿಗಳ ಹೊರ ಮಾಡೇ ಅವರ ಮನೆ. ಆ ಬೀದಿಯ ಬದಿಯ ಕಾಲುದಾರಿಗಳೇ ಅವರ ಸ್ವಂತ ನೆಲ! ಕಟ್ಟಡಗಳ ಮುಂಭಾಗದ ಗೋಡೆಗಳೇ ಅವರ ಗೋಡೆಗಳು.

ಹೌದು? ಸಿಲ್ವರ್, ಅಲ್ಲಿಯೂ, ಅವರವರ ನಿಶ್ಚಿತ ಸ್ಥಳವಿದೆ. ಒಬ್ಬನು ಇನ್ನೊಬ್ಬನು ವಾಸಿಸುವ ಸ್ಥಳವನ್ನು ಆಕ್ರಮಿಸಲಾರನು. ಅಂತಹ ಪ್ರಯ ತ್ನಗಳಿಂದ ಪೆಟ್ಟುಗುಟ್ಟು ಆಗಬಹುದು; ಜೀವವೂ ಹೋಗಬಹುದು.

ಆ ಬಡ ಜೀವಿಗಳು ಅವಿದ್ಯಾವಂತರು. ಕುಸಂಸ್ಕೃತರು–ದುಷ್ಟ ಅಭ್ಯಾ ಸಗಳೇ ವೈವೆತ್ತು ಬಂದವರು. ಉತ್ಪತ್ತಿಯನ್ನು ಕೂಡಿಟ್ಟು ದೊಡ್ಡದು ಮಾಡುವುದೆಂಬ ಆ ಮಾತನ್ನೇ ಕೇಳಿ ತಿಳಿಯರು.

ಆಯಾ ದಿನದ ಉತ್ಪತ್ತಿ ಆಯಾ ದಿನವೇ ಮುಗಿಯದಿದ್ದರೆ, ಅವರಿಗೆ ನಿದ್ದೆ ಬರಲಾರದು. ಹಣ ದೊರೆತೊಡನೆಯೇ ಸಿಕ್ಕಾ ಬಟ್ಟೆ ಕುಡಿಯುತ್ತಾರೆ. (ಇಲ್ಲಿಯ ಪ್ರೋಹಿಬಿಷನ್‌ನ ರೀತಿ ಹಾಗೆ. ಅದರ ಕತೆ ಬಹಳ ದೊಡ್ಡದಿದೆ– ಮುಂದೆ ಬರೆಯುತ್ತೇನೆ). ವಿವಿಧ ರೀತಿಯಲ್ಲಿ ಜುಗಾರಾಡುತ್ತಾರೆ. ನಮ್ಮ ಅಮೇರಿಕದ ಹತ್ತಿ ಸಂತೆಯಲ್ಲಿ ನಡೆಯುವ ಹತ್ತಿಯ ಕ್ರಯದ ಮೇಲೆ ಜೂಜಾ ಡುವುದು ಭಾರತೀಯರ ಅತಿ ದೊಡ್ಡ ಹುಚ್ಚುಗಳಲ್ಲೊಂದು. ಆ ರೀತಿಯೂ ದುಡ್ಡು ಹಾಳುಮಾಡುತ್ತಾರೆ.

ಅಲ್ಲದೆ ಮಲಗಲು ಮನೆಯಿಲ್ಲದ ಈ ಬಡ ಜೀವಿಗಳಿಗೆ, ಒಂದು ಆರಾ ಮದ ಸುಂದರ ಸ್ಥಳ ದೊರೆಯುವುದೆಂದರೆ ಸಿನೇಮಾ ಥಿಯೇಟರುಗಳಲ್ಲಿ. ದಿನವೂ ಒಂದಲ್ಲ ಒಂದು ಥಿಯೇಟರಿಗೆ ತೆರಳಿ ಮಧ್ಯರಾತ್ರಿ ತನಕ ಸಮಯ ಹಾಗೆ ಕಳೆದು, ಮತ್ತೆ ಬಂದು ರಸ್ತೆಯ ಬದಿಯ ಕಾಲುದಾರಿಯಲ್ಲಿ ತಮ್ಮದೇ "ಆಗಿರುವ ಸ್ಥಳ"ದಲ್ಲಿ ಮಲಗಿ ನಿದ್ರಿಸುತ್ತಾರೆ. ಅವರ ದಿನದಿನದ ವೇತನ ಮುಗಿಸುವ ಸಾಧನಗಳಲ್ಲಿ ಈ ಸಿನೆಮಾಗಳೂ ಪ್ರಾಮುಖ್ಯವಾದವುಗಳು.

ಇನ್ನೊಂದು ಸೂಕ್ಷ್ಮ ವಿಷಯವಿದೆ, ಸಿಲ್ವರ್. ಬೊಂಬಾಯಿಯ ಬಹು ಸಂಖ್ಯಾಕ ಮಜೂರರು ತಮ್ಮ ಹೆಂಡಿರು ಮಕ್ಕಳನ್ನು ಊರಲ್ಲೇ ಬಿಟ್ಟು ಸಂಪಾ ದನೆಗಾಗಿಯೆಂದು ಈ ಬೃಹತ್ ನಗರಗಳಿಗೆ ಬಂದಿರುತ್ತಾರೆ. ಕಾರಖಾನೆಯ

ಕೆಲಸವಾದರೋ, ಕ್ರೂರವಾದ ಕುರೂಪಿಗಳಾದ, ಕರಾಳ ಯಂತ್ರಗಳೊಂದಿಗೆ. ಅಲ್ಲಿ ಸೌಂದರ್ಯದ ಗಂಧ ಗಾಳಿಯಿಲ್ಲ. ತಾವು ತಯಾರಿಸುವ ವಸ್ತುವಿನಲ್ಲೇ ಅವರು ಸೌಂದರ್ಯ ಕಾಣಬಹುದೆಂದರೆ ಯಾರೂ ಯಾವ ವಸ್ತುವನ್ನೂ ಪೂರ್ಣವಾಗಿ ತಯಾರಿಸುವುದಿಲ್ಲ(ಅದು ಭಾರತದಲ್ಲಿ ಮಾತ್ರ ಕಾಣುವ ಕೊರತೆಯಲ್ಲ. ಹಿಂದಿನ ಕುಶಲ ಕೈಗಾರಿಕೆಗಳ ರೀತಿಗೆ ವಿರುದ್ಧವಾಗಿ ಇಂದಿನ ಔದ್ಯಮಿಕ ಕ್ಷೇತ್ರಗಳಲ್ಲಿ ವಿಶ್ವಾದ್ಯಂತ ಇರುವ ಸಮಸ್ಯೆಯಾಗಿದೆ ಇದು.) ಆದ್ದರಿಂದ ಅಲ್ಲಿಯೂ ಆತ ಸೌಂದರ್ಯವನ್ನು ನೋಡಲಾರ.

ಪೇಟೆಯ ಸೌಂದರ್ಯವನ್ನಾತ ಮೆಚ್ಚಬಹುದೆಂದರೆ--ಆಡಂಬರದ ಬೀದಿಗಳಲ್ಲಿ ಆತನು ಪಡಕೊಳ್ಳುವ ಶಕ್ತಿಯ ಮಿತಿಯೊಳಗಿನ ಯಾವ ವಸ್ತುವನ್ನೂ ಆತ ಕಾಣಲೊಲ್ಲ. ಆತನಿಗೆ ಬೇಕಾದ, ಆತನಿಗೆ ಹಿಡಿಸುವ ರೀತಿಯ ವಸ್ತುಗಳನ್ನು ಕೊಂಡುಕೊಳ್ಳಬಲ್ಲ ಬೀದಿಗಳಲ್ಲಿ ಸಂಚರಿಸಿದನೆಂದರೆ, ಆತನಿಗೆ ಎಲ್ಲೆಲ್ಲೂ ಕಾಣುವುದು, ಅಸ್ವಚ್ಛತೆ, ಕೃತ್ರಿಮತೆ, ಪ್ರೇಮರಾಹಿತ್ಯಗಳು. ಆ ಮಾನವ ಸಾಗರದಲ್ಲಿ ಆತನನ್ನು ಮನವಾರೆ ಪ್ರೀತಿಸುವವನಾರು? ಪ್ರೀತಿಸುವವಳಾರು?

ಮನೆಗೆ ತೆರಳಿ ಪತ್ನೀ ಪುತ್ರರ ಮುದ್ದು ಮುದ್ದಾದ ಮಾತಿನೆಡೆಯಲ್ಲಿ ತನ್ನ ಜೀವನದ ಕುರೂಪತೆ ಮರೆಯಬಹುದೆಂದರೆ—ಮನೆಯೇ ಇಲ್ಲ; ಹೆಚ್ಚಿನವರಿಗೆ ಹೆಂಡಿರು ಮಕ್ಕಳೂ ಬಳಿಯಿಲ್ಲ. ಇನ್ನೇನು ಮಾಡಬೇಕು?

ಸಿನೆಮಾದಲ್ಲಿ ಕಾಣುವ ಪ್ರೇಮವೆಂದು ಕರೆಯಲ್ಪಡುವ ಕಾಮ ಪ್ರದರ್ಶನದಲ್ಲಿ ಆತ ಏನೋ ಒಂದು ಸುಖ ಪಡೆಯುತ್ತಾನೆ. ಅಲ್ಲಿ ಕಾಣುವ ಕಥಾನಾಯಕ ತಾನೇ ಏನೋ ಎಂಬಂತೆ ಊಹಿಸಿಕೊಂಡು, ಆ ಕಥಾನಾಯಕಿಯು ತನ್ನನ್ನೇ ಪ್ರೀತಿಸುತ್ತಾಳೆ ಎಂದಾತ ಭಾವಿಸಿಕೊಂಡು ಕಲ್ಪನಾ ರಾಜ್ಯದಲ್ಲಿ ವ್ಯವಹರಿಸುತ್ತಾನೆ. ಅದೊಂದು ತಾತ್ಕಾಲಿಕ ಸುಖ ಆತನ ಪಾಲಿಗೆ! ಅಷ್ಟಾದರೂ ಸುಖವನ್ನಾತ ಬೇರೆಲ್ಲಿ ಕಾಣಬೇಕು?

ಮದುವೆಯಾಗದೆಯೇ ಬೊಂಬಾಯಿಗೆ ಬಂದು ಮಜೂರ ಕೆಲಸ ಮಾಡುವ ಯುವಕರೂ ಅಲ್ಲಿ ಬೇಕಷ್ಟು ಇದ್ದಾರೆ. ಅವರಿಗೆ ವಿವಾಹವಾಗಿ ಸಂಸಾರ ಜೀವನ ಸಾಗಿಸಲು ಎಡೆಯಿಲ್ಲ. ಕೈಹಿಡಿದು ತಂದ ಹೆಣ್ಣನ್ನು ಯಾವ ಮನೆಗೆ ಕರೆತರಬೇಕು? ದಿನದಿನದ ಉತ್ಪತ್ತಿಯನ್ನು ಕಣ್ಣು ಮುಚ್ಚಿ ಖರ್ಚು ಮಾಡುವ ತನಗೆ ಮದುವೆ ಮಾಡಿಕೊಳ್ಳಲು ಬೇಕಾದ ದುಡ್ಡಾದರೂ ಎಲ್ಲಿದೆ? ಅದಕ್ಕಾಗಿ ಆತ ಮದುವೆಯ ವಿಷಯವನ್ನು ಕೇವಲ ಗ್ರಹಿಸಲೂ ಧೈರ್ಯಪಡುವುದಿಲ್ಲ.

ಆದರೆ ತನ್ನ ಸುತ್ತು ಮುತ್ತಲೂ ಇಪ್ಪತ್ತನಾಲ್ಕು ಗಂಟೆಯೂ ಪಾಶವೀ ಜೀವನವನ್ನೇ ನೋಡುತ್ತಿರುವ ಆ ಗಂಡುಸು ಇಂದ್ರಿಯ ನಿಗ್ರಹವನ್ನು ಮಾಡಿಕೊಂಡು ಹೇಗೆ ಬಾಳಬೇಕು? ಅದಕ್ಕೆ ಸಂಬಂಧಿಸಿದ ಒಂದು ಶಬ್ದವನ್ನು ಕೂಡ ಆತನು ತಿಳಿದಿರುವುದಿಲ್ಲ. (ನಮ್ಮ ಸಂಯುಕ್ತ ಅಮೇರಿಕದಲ್ಲಿ ಇರುವ ಬಹು ಸಂಖ್ಯಾಕ ಜನರಂತೆ.) ಆ ಶಬ್ದವನ್ನಾತ ಸಂದರ್ಭಾನುಸಾರ ಕಿವಿಯಿಂದ ಕೇಳಿದರೂ, ಅದೇನೂ ಅರ್ಥ ಅಥವಾ ಮಹತ್ವವಿರುವ ಶಬ್ದವಾಗಿ ಆತನಿಗೆ ಗೋಚರವಾಗುವುದಿಲ್ಲ.

ಸಾಲದ್ದಕ್ಕೆ ಮನಸ್ಸಿನ ಬೇಗುದಿ ಮರೆತು, ಸ್ವಲ್ಪವಾದರೂ ಕ್ಷಣಿಕ ಸುಖ ನೀಡಬಲ್ಲ ಸಿನೆಮಾ, ಜೂಜು, ಕುಡುಕತನ ಮೊದಲಾದ ಸಾಧನಗಳು ಆತನಿಗೆ ಸ್ವೇಚ್ಛಾಚಾರವನ್ನೇ ಕಲಿಸಿ ಕೊಡುತ್ತವೆ. ಆದ್ದರಿಂದ ಬೇರೆ ದಾರಿಯಿಲ್ಲದೆ ಸಹಸ್ರ ಸಂಖ್ಯೆಯಲ್ಲಿ ಅಂತಹ ನಗರಗಳಲ್ಲಿರುವ ವಾರಾಂಗನೆಯರಿಗೆ ಅವರು ಗಿರಾಕಿಗಳಾಗಿ ಪರಿಣಮಿಸುತ್ತಾರೆ. ಆದ್ದರಿಂದಲೇ ಹಿಂದೆಯೇ ನಾನು ಬರೆದಂತೆ ಅಷ್ಟು ಜನ ವೇಶ್ಯೆಯರು ಇಂತಹ ಪಟ್ಟಣಗಳಲ್ಲಿ ಇರಲು ಕಾರಣ. (ಈ ವಿವರ ಹಿಂದೆಯೇ ನಾನು ಬರೆದಿದ್ದೇನೆ.)

ಈ ರೀತಿಗಳಲ್ಲಿ—ಭಂಡವಾಳವಿಲ್ಲದೆ, ಮನೆಯಿಲ್ಲದೆ ಈ ಮಜೂರ ಜನರು ಬನ್ನ ಬಡುತ್ತಾರೆ. ಆ ಬನ್ನವನ್ನು ನೀಗಿಸುವ ದಾರಿಗೆ ವ್ಯತಿರಿಕ್ತವಾದ ಸ್ವೇಚ್ಛಾಚಾರದ ಜೀವನವನ್ನೇ ಅವರು ನಡೆಸುತ್ತಿದ್ದಾರೆ. ಈ ಸುಳಿಗುಂಡಿಯಿಂದ ಭಾರತೀಯ ಬಡ ಜನರಿಗೆ ವಿಮೋಚನೆಯೆಲ್ಲಿ ?

ಸಿಲ್ವರ್, ನೋಡು, ಇಲ್ಲಿಯ ಇನ್ನೊಂದು ಹೃದಯ ವಿದ್ರಾವಕ ವಿಷಯ ಬರೆಯುತ್ತೇನೆ.

ನಮ್ಮ ದೇಶದಲ್ಲಿ ಕಡಿಮೆ ಪಕ್ಷ ಹದಿನಾಲ್ಕು-ಹದಿನಾರು ವರ್ಷಗಳ ತನಕವಾದರೂ ಎಲ್ಲ ಮಕ್ಕಳು ಉತ್ತಮವಾದ ಬಟ್ಟೆಬರೆ ಧರಿಸಿ, ಹೊಟ್ಟೆ ತುಂಬಾ ಪೌಷ್ಟಿಕ ಆಹಾರ ಸೇವಿಸಿ, ಶಾಲೆಗೆ ತೆರಳಿ ಅಧ್ಯಯನ ಮಾಡುತ್ತಾರೆ. ಅವರ ಹೆತ್ತವರು ಅವರ ಭಾರ ಹೊರುತ್ತಾರೆ.

ಆದರೆ ಇಲ್ಲಿ ಇಂತಹ ನಗರಗಳಲ್ಲಿ ಕೇವಲ 8-10 ವರ್ಷಗಳ ಬಡ ಬಾಲಕರೂ ಶಾಲೆಗೆ ತೆರಳಲಾರದೆ, ಆಟ ಪಾಟಗಳ ಗಂಧಗಾಳಿಯಿಲ್ಲದೆ, ಹೊಟ್ಟೆ ಪಾಡಿಗಾಗಿ ಪಾಪ ! ದುಡಿಯುವ ಮನಕರಗುವ ದೃಶ್ಯವನ್ನು ನೋಡುತ್ತೇವೆ. ನಗುನಗುತ್ತಾ ಇರಬೇಕಾದ ಅವರ ಮುಖಾರವಿಂದ ಬಾಡಿ, ಬತ್ತಿ,

ಬಸವಳಿದು ಹೋದ್ದನ್ನು ನೋಡುತ್ತೇವೆ. ಹೊಟ್ಟೆತುಂಬಾ ತಿಂದು, ಪರಿಪುಷ್ಟ ವಾಗಿ ಬೆಳೆಯ ಬೇಕಾದವರು ಪೌಷ್ಟಿಕ ಆಹಾರವಿಲ್ಲದೆ ಎಲುಬಿನ ಹಂದರ ವಾಗಿ ಕಾಣುತ್ತಾರೆ.

ದೊಡ್ಡ ಕಾರಖಾನೆಗಳಲ್ಲಿ ಅವರನ್ನು ಮಜೂರರನ್ನಾಗಿ ಸೇರಿಸಬಾರದು ಎಂಬ ಶಾಸನವೇನೋ ಭಾರತದಲ್ಲಿದೆ. ಆದರೆ ಈ ಶಾಸನದಿಂದ ಬಡ ಹೆತ್ತ ವರ ಮೇಲೂ, ಮಕ್ಕಳ ಮೇಲೂ ಮತ್ತಷ್ಟು ಹೆಚ್ಚಿನ ಕ್ರೌರ್ಯವನ್ನೇ ತೋರಿ ದಂತಾಗಿದೆ. ಕಾರಣ, ಆ ಬಡ ಮಕ್ಕಳನ್ನು ಸುಮ್ಮನೆ ಸಾಕುತ್ತಾ ಶಾಲೆಗಳಿಗೆ ಕಳುಹಿಸುವ ಏರ್ಪಾಡು ಹೇಗೆ ಮಾಡುವುದು ಎಂಬುದಕ್ಕೆ ಸರಕಾರದಲ್ಲಿ ಉತ್ತರವಿಲ್ಲ. ಆ ಮಕ್ಕಳಿಗೆ ಅಂಗಿಬಟ್ಟೆ, ಪುಸ್ತಕ ಸಾಮಗ್ರಿಗಳು ಮತ್ತು ಊಟ ತಿನಸುಗಳನ್ನು ಕೊಟ್ಟು ಅವರು ಬಡ ಹೆತ್ತವರ ಮೇಲೆ ಭಾರವಾಗದಂತೆ ಮಾಡುವ ಏರ್ಪಾಡೇನೂ ಇಲ್ಲ ಪರಿಣಾಮವೆಂದರೆ ಮಕ್ಕಳು ಕಾರ್ಖಾನೆ ಗಳಲ್ಲಿ ದುಡಿದು ಉತ್ಪತ್ತಿ ಮಾಡಲಾರರು–ಶಾಲೆಗೆ ಹೋಗಿ ಕಲಿಯಲಾರರು. ಹೆತ್ತವರು ಅವರನ್ನು ಯೋಗ್ಯವಾಗಿ ಸಾಕಲಾರರು.

ಪರಿಣಾಮವೇನು? ಸಹಸ್ರಾರು ಜನ ಬಾಲಕ ಬಾಲಕಿಯರು ಭಿಕ್ಷಾ ಟನೆ ಮಾಡುತ್ತಾರೆ. ಸಹಸ್ರಾರು ಜನ 'ಬೂಟ್ ಪಾಲಿಶ್' ಎಂದುಕೊಂಡು ಸುತ್ತಾಡುತ್ತಾರೆ. ನೂರಾರು ಜನ ಕಿಸೆ ಕತ್ತರಿಸುವ "ಕುಶಲ ಕಲೆ"ಯನ್ನು "ಸಮರ್ಥ"ರಿಂದ ಕಲಿಯುತ್ತಾರೆ. ಇನ್ನೆಷ್ಟೋ ಜನ ಪೆಟ್ಟಿಗೆ ಹೊರುವ ಕೂಲಿಗಳಾಗಿ ಮೈಮೇಲೆ ಬೀಳುತ್ತಾರೆ. ಇದೆಂತಹ ವಿಪತ್ತು ನೋಡು.

ಇದೇ ಬಾಲಕರು ಭಾರತದ ಪ್ರಜೆಗಳು. ಇವರಿಗೂ ಪ್ರಾಯಪ್ರಬುದ್ಧ ರಾದಾಗ ಮತ ನೀಡುವ ಹಕ್ಕಿದೆ. ಇವರೇ ಮುಂದೆ ಭಾರತದ ಜನಸಂಖ್ಯೆ ಯನ್ನು ಗಗನಗಾಮಿಯಾಗಿ ಏರಿಸುವವರು.

ಸಿಲ್ವರ್, "ಎಲ್ಲ ಸರಿ–ಇದೆಲ್ಲ ಪಟ್ಟಣಗಳ ಮಾತಾಯಿತು. ಭಾರತದ ಹಳ್ಳಿಗಳ ಆರ್ಥಿಕ ಸ್ಥಿತಿಯ ಕುರಿತೇಕೆ ಬರೆಯುವುದಿಲ್ಲ" ಎಂಬುದಾಗಿ ನೀನು ಪ್ರಶ್ನಿಸಬಹುದು. ಬರೆಯುತ್ತೇನೆ, ಎಲ್ಲ ಬರೆಯುತ್ತೇನೆ. ನೋಡು, ಬರೆ ದಂತೆಯೇ ವಿಷಯ ವಿಸ್ತಾರವಾಗುತ್ತಾ ನಡೆಯುತ್ತಿದೆ. ಬರೆದು ಮುಗಿಯು ವುದಿಲ್ಲ. ಅದರ ಕುರಿತಾಗಿಯೂ ನಾನು ಬರೆಯಲಿದ್ದೇನೆ. ಆದರೆ ಅದರ ಮೊದಲು ಒಂದು ಮಾತು.

ಭಾರತದ ಈ ಬೃಹತ್ ನಗರಗಳಲ್ಲಿ ಶ್ರೀಮಂತರೇ ಇಲ್ಲವೆಂದು ಭಾವಿಸ ಬೇಡ. ಜಗತ್ತಿನ ಅತಿ ಶ್ರೀಮಂತರಲ್ಲಿ ಕೆಲವರು ಇಲ್ಲಿದ್ದಾರೆ. ಅಲ್ಲದೆ ಇನ್ನ ನೇಕ ಮಿಲಿಯಾಧೀಶರೂ, ಕೋಟ್ಯಾಧೀಶರೂ ಇದ್ದಾರೆ. ಅನೇಕ ರಾಜ ಕೀಯ ಧುರೀಣರಿದ್ದಾರೆ. ಅನೇಕ ಸಮಾಜ ಸೇವಕರಿದ್ದಾರೆ.

ಆದರೆ ಬೊಂಬ್ಯಾಯಂತಹ ಈ ನಗರಗಳಲ್ಲಿ ನಡೆದ ಯಾವುದೇ ಸಭೆ ಸಮಾರಂಭಗಳಲ್ಲಿ, ಈ ಬಡತನದ ಹೃದಯವಿದ್ರಾವಕ ಚಿತ್ರದ ಕುರಿತಾಗಿ ಪ್ರಸ್ತಾಪಿಸಿದವರನ್ನು ನಾನು ಕಾಣಲಿಲ್ಲ. ಅದಕ್ಕಾಗಿ ಕಣ್ಣೀರು ಸುರಿಸಿದವ ರನ್ನೂ ನಾನು ಕಾಣಲಿಲ್ಲ. ಅದರ ನಿರ್ಮೂಲನಕ್ಕಾಗಿ ದುಡಿಯುವವರೂ ಕಾಣಿಸುವುದಿಲ್ಲ. ನನ್ನ ಕಣ್ಣು ಮಂದವಾಗಿ ಹೀಗಾಯಿತೋ ಅಥವಾ, ಅಂತಹ ಧುರೀಣರಿಲ್ಲದೆ ಹೀಗಾಯಿತೋ ನಾನರಿಯೆ!

ಇಂತಹ ದುಸ್ಥಿತಿಯನ್ನು ನೋಡಿ ನಾಚಿ ತಲೆಬಾಗುವ ಒಂದೇ ಒಂದು ಹುಳವನ್ನೂ ನಾನು ಭಾರತದಲ್ಲಿ ಈ ತನಕ ನೋಡಲಿಲ್ಲ. ಆದ್ದರಿಂದ ಆ ದಿನ ಟ್ರಾಮಿನಲ್ಲಿ ನಾನು ಕಣ್ಣೀರು ಸುರಿಸಿದ ದೃಶ್ಯ ಗ್ರಹಿಸುವಾಗ, ಈಗೀಗ ಒಮ್ಮೊಮ್ಮೆ ನನ್ನ ಕಾರ್ಯಕ್ಕೆ ನಾನೇ ನಾಚುವುದಿದೆ. ಅಂದರೆ ಭಾರತೀಯ ರಿಗೇ ಬೇಡದ ಭಾರತಕ್ಕಾಗಿ ನಾನೇಕೆ ಅಳಬೇಕು ಎಂಬುದು ನನ್ನ ಮನಸ್ಸಿನಲ್ಲಿ ಬರುವ ಚಪಲತೆಯ ಭಾವನೆ. ಆವರೆ ಅಂತಹ ಭಾವನೆಯನ್ನು ನಾನು ಬಹಳ ಕಾಲ ಇರಗೊಡಿಸುವುದಿಲ್ಲ, ಸಿಲ್ವರ್.

ಅಮೇರಿಕದಲ್ಲಿ ಬಡವರೆನಿಸುವ ಮಜೂರರರೂ ಸ್ವಂತ ಕಾರಿನಲ್ಲೇ ತಿರು ಗಾಡುವ ವೇಳೆ ಅಲ್ಲಿಯ ಮಿಲಿಯಾಧೀಶರು ಕೇಡಿಲ್ಲಕ್‌ನಂತಹ ಬಹು ಬೆಲೆಯ ಕಾರಿನಲ್ಲಿ ತಿರುಗಾಡುತ್ತ ಕೇವಲ ಆಡಂಬರಕ್ಕಾಗಿ ಹಣ ಚೆಲ್ಲುತ್ತಾ ನಡೆದರೆ ನಾವು ಆಶ್ಚರ್ಯ ಪಡುವುದಿಲ್ಲ. ಆದರೆ, ನಮ್ಮೂರಲ್ಲಿ ದನಕರುಗಳೂ ವಾಸಿ ಸಲಾರದಂತಹ ಅತಿ ನಿಕೃಷ್ಟ ಪರಿಸ್ಥಿತಿಗಳಲ್ಲಿ ದಿನ ನೂಕುತ್ತಿರುವ ಬಡ ಜನರೆ ಡೆಯಲ್ಲಿ, ಅಂತಹ ಹೊಲಗೇರಿಗಳ ಮಧ್ಯೆ ಇಂತಹ ಕೇಡಿಲ್ಲಕ್ ಕಾರು ಹೋಗಿ ಬಿಟ್ಟರೆ, ಎಂತಹ ಕಿರುಕುಳ, ಹೃದಯ ವೇದನೆಯಾಗುವುದು ಗೊತ್ತೆ? ಅದನ್ನು ಸಹಿಸುವುದಕ್ಕಾಗುವುದಿಲ್ಲ.

ಅದರಲ್ಲೂ ಆ ಶ್ರೀಮಂತರು, ಪಾಶ್ಚಾತ್ಯರಾದ ನಮ್ಮ ಅಂಧಾನುಕರಣೆ ಮಾಡುತ್ತ, ನಮ್ಮಂತೆಯೇ ಲೈಂಗಿಕ ಸ್ವೇಚ್ಛಾಚಾರದಲ್ಲಿ ನಿರತರಾಗಿ ಭಾರ

ತೀಯ ಸಂಪ್ರದಾಯ ಮರೆತು, ಈ ಬಡ ಜನರೆಡೆಗೆ ಸಹಾನುಭೂತಿ, ಪ್ರೇಮ ವಿಲ್ಲದವರಾಗಿ ನಡೆಯುವಾಗ ನನಗೇಕೋ ಹಿತವೆನಿಸುವುದಿಲ್ಲ. ಆ ಬಡ ಜನರನ್ನು ಆ ಶ್ರೀಮಂತರು, ಭಾರತೀಯರೆಂದು ಭಾವಿಸುವುದೇ ಇಲ್ಲ. ಬದಲಿಗೆ ಕೇವಲ ರಸ್ತೆ ನಿವಾಸಿಗರೆಂದು ಭಾವಿಸುತ್ತಾರೆ.

ಆದ್ದರಿಂದಲೇ ಇಲ್ಲಿಯ ಕಮ್ಯುನಿಸ್ಟರು, ಅವರನ್ನೆಲ್ಲಾ, ಆರ್ಥಿಕ ಭದ್ರತೆಯ ಆಸೆ ತೋರಿಸಿ, ಬಗಲಿಗೆ ಹಾಕಿಕೊಂಡು, ಮಂಗನನ್ನು ಕುಣಿಸಿದಂತೆ ಹೇಗೆ ಕುಣಿಸುತ್ತಾರೆ ಗೊತ್ತೆ? ಅವರು, ಬಡಜನರನ್ನೇ ಏಕೆ? ಶ್ರೀಮಂತರನ್ನೇ ಕುಣಿಸಿ ಬಿಡುತ್ತಾರೆ. ಆದರೆ, ಇದ್ಯಾವುದರ ಗೋಜೂ ಇಲ್ಲದೆ ಒಂದು ಶ್ರೇಷ್ಠತೆಯ ಬಿಂಕದಲ್ಲಿ, ಅನೈಜತೆಯ ವಾತಾವರಣದಲ್ಲಿ ಇಲ್ಲಿಯ ಪೇಟೆ ಪಟ್ಟಣಗಳ ಮಿಲಿಯಾಧೀಶರು ವ್ಯವಹರಿಸುತ್ತಾರೆ. ಭಾರತದ ಆಧ್ಯಾತ್ಮಿಕ ಪರಂಪರೆಯಿಂದ ಇಂಥವರು ಒಂದೇ ಒಂದು ಬಿಡಿ ಕಾಸಿನ ಪ್ರಯೋಜನವನ್ನೂ ಪಡಕೊಂಡಂತೆ ನನಗನಿಸುವುದಿಲ್ಲ.

ಮೇಲ್ಮಟ್ಟದ ಶ್ರೀಮಂತರು ಹಲವರ ಅನೈತಿಕ ತಳಹದಿಯ ಭೋಗ ವಿಲಾಸಗಳ ಆಸಕ್ತಿಯುಕೆಳತರಗತಿಯ ಶ್ರೀಮಂತರನ್ನೂ ಹುಚ್ಚರನ್ನಾಗಿ ಮಾಡುತ್ತಿದೆ. ಅವರೂ ಅಧ್ಯಯನ, ವೈಜ್ಞಾನಿಕ ಸಂಶೋಧನೆ, ಸಮಾಜ ಸೇವೆ, ಅಧ್ಯಾತ್ಮಸಾಧನೆ ಇತ್ಯಾದಿಗಳಲ್ಲಿ ನಿರತರಾಗಿರುವ ಬದಲು ಕೀಳ್ಮಟ್ಟದ ಇಂದ್ರಿಯ ಸುಖಲೋಲುಪತೆಯಲ್ಲಿ ಬೀಳುತ್ತಾರೆ. ಅವರಿಂದ ಈ ಹುಚ್ಚು, ಮಧ್ಯಮ ವರ್ಗದವರ ಬೆನ್ನು ಹಿಡಿಯುತ್ತದೆ. ಅಂದರೆ ಈ ಮೂರೂ ವರ್ಗಗಳವರೂ ವಿಷಯಾಸಕ್ತಿಯಿಂದ ಸಕಲ ಭೋಗಗಳನ್ನೂ "ಇಚ್ಛಾ ಮಾತ್ರದಿಂದ ಒದಗಿಸಬಲ್ಲ ಮಾಯಾಯಂತ್ರವಾದ" ಧನ ಸಂಚಯನದ ಬೆನ್ನು ಹಿಡಿಯುತ್ತಾರೆ. ಅದೂ ನ್ಯಾಯವಾದ ವಿಧಾನಗಳಿಂದಲ್ಲ. ಕಷ್ಟಪಟ್ಟು ದುಡಿದು, ದೀರ್ಘವಾದ ಯೋಜನೆಗಳನ್ನು ಹಾಕಿ ಧನಸಂಪಾದನೆ ಮಾಡಲು ಸಿದ್ಧರಿರುವವರು ಬಹಳ ಕಡಿಮೆ.

ಹೆಚ್ಚಿನವರಿಗೆ ಇರುವ ಆಸೆ ಒಂದೇ ವರ್ಷದಲ್ಲಿ ಮಿಲಿಯಾಧೀಶನಾಗಬೇಕೆಂದು. ಅದಕ್ಕಾಗಿ ಯಾವ ದಾರಿಯನ್ನು ಅನುಸರಿಸಲೂ ಅವರು ಹಿಂಜರಿಯುವುದಿಲ್ಲ. ದುಷ್ಕರ್ಮಗಳಿಂದ ಸಂಪಾದಿಸಿದ ಹಣ ಇನ್ನೊಂದು ತೆರನಾದ ಪಾಪಕೂಪದಲ್ಲಿ ಇಳಿದು ಹೋಗಿ, ಎಲ್ಲರನ್ನೂ ಭ್ರಾಂತರನ್ನಾಗಿ ಮಾಡಿ ಬಿಡುತ್ತಿದೆ. ದುಡ್ಡು, ದುಡ್ಡು ಎಂದು ಜನ ಓಡಾಡುತ್ತಾರೆ. (ನಮ್ಮಲ್ಲಿಯೂ ಇದೇ ಓಡಾಟವಿದೆಯೆನ್ನು! ಆದರೆ ಸುಲಭದಲ್ಲಿ ಏನಾದರೂ ಮಾಡಿ ಧನಾ

ರ್ಜನೆಯ ದಾರಿ ಹಿಡಿಯುವವರು ಭಾರತದಷ್ಟು ನಮ್ಮಲ್ಲಿ ಇಲ್ಲವೆಂದು ನನ್ನ ಮತ.)

ಮೇಲಿನ ಈ ಮೂರೂ ವರ್ಗಗಳ ಈ ಹುಚ್ಚು ಈ ಮಜೂರ ವರ್ಗದವರ ಮನವನ್ನೂ ಕೆರಳಿಸಿ ಹಿಂದೆ ಹೇಳಿದಂತೆ ಅವರೂ ಕೇವಲ ಭೋಗಾಸಕ್ತರಾಗುವಂತೆ ಮಾಡುತ್ತಿದೆ. ಈ ಚಪಲತೆಯನ್ನು ಪೂರ್ಣವಾಗಿ ಬಿಡಲು ಯಾರಿಗೂ ಸಾಧ್ಯವಿಲ್ಲವೆನ್ನು. ಆದರೆ ದೇಶದ ಕುರಿತಾದ ಆಸಕ್ತಿ ಮುಂದೆ ನಿಲ್ಲಬೇಕಲ್ಲ.

ಈ ಎಲ್ಲ ವರ್ಗಗಳ ಜನರ ಭೋಗಾಸಕ್ತಿಯ ಪರಿಣಾಮವಾಗಿ ಮತ್ತು ರಾಷ್ಟ್ರಪ್ರೇಮದ ಕೊರತೆಯ ಕಾರಣದಿಂದಲಾಗಿ ಭಾರತವು ಇನ್ನೂ ಭೀಕರ ದಾರಿದ್ರ್ಯದಲ್ಲಿ ವಿಲಿ ವಿಲಿ ಒದ್ದಾಡುತ್ತಿದೆ. ಈ ಪುಣ್ಯ ಭೂಮಿಗೆ ಈ ಕಂಟಕದಿಂದ ವಿಮೋಚನೆಯೆಲ್ಲಿಯೋ? ಯಾರಿಂದಲೋ? ಯಾವಾಗಲೋ? ನನಗೆ ತಿಳಿಯದು.

ಆದರೆ ಸಿಲ್ವರ್, ಭಾರತದಲ್ಲಿ ಸ್ವಾತಂತ್ರ್ಯಾನಂತರ ಆರ್ಥಿಕ ಪ್ರಗತಿಯಾಗಿಲ್ಲವೆಂದು ಇದರರ್ಥವಲ್ಲ! ಬಹಳ ಪ್ರಗತಿಯಾಗಿದೆ. ನಾವು ಮೆಚ್ಚಲೇಬೇಕು. ಇಲ್ಲಿಯ ಧುರೀಣರೂ ಬಹಳ ರೀತಿಯಲ್ಲಿ ದುಡಿಯುತ್ತಾರೆ. ಆದರೆ ಹಿಂದೆಯೇ ನಾನು ಬಣ್ಣಿಸಿದಂತೆ–ಭಾರತದ ಇತ್ತೀಚೆಗಿನ ಪೂರ್ವ ಚರಿತ್ರೆಯು ತನ್ನ ಕರಾಳ ಛಾಯೆಯನ್ನು ಇನ್ನೂ ಕೂಡಾ ಭಾರತೀಯ ಜನಾಂಗದ ಮೇಲೆ ಬೀರುತ್ತಲೇ ಇದೆ. ಅಭಿವೃದ್ಧಿಯಾಗಬಹುದು. ಆದರೆ ಇಂದಿನ ಅನೇಕ ಸಮಸ್ಯೆಗಳು ಪರಿಹಾರವಾಗಲು ಇನ್ನೂ ಅರ್ಧ ಶತಮಾನ ಬೇಕಾಗಬಹುದು. ಆಗ ಅಂತರ್ರಾಷ್ಟ್ರೀಯ ಒತ್ತಡಗಳೆಡೆಯಲ್ಲಿ ಇಲ್ಲಿಯ ರಾಜಕೀಯ ಪರಿಸ್ಥಿತಿ ಹೇಗೆ ನಿಂತೀತು ಎಂಬುದೇ ನನ್ನ ಊಹನೆಗೆ ನಿಲುಕುವುದಿಲ್ಲ.

ಅಲ್ಲ—ನನಗೆ ನಿಲುಕಬೇಕಾದ ಆಗತ್ಯವೂ ಇಲ್ಲವೆನ್ನು. ನಾನೊಬ್ಬ ಅಮೇರಿಕದ ಯಃಕಶ್ಚಿತ್ ಮನುಷ್ಯ! ಭಾರತದ ಕುರಿತಾಗಿ ಸಿದ್ಧಾಂತ ಮಾಡಲು ನಾನಾರು? ಆದರೆ ಭಾರತವನ್ನು ಪ್ರೀತಿಸುವ ಒಬ್ಬ 'ಹುಚ್ಚ' ನಾನು. ಆ ಹುಚ್ಚೇ ನನಗೆ ಬಂದು ಅಧಿಕಾರ ನೀಡಿದೆ ಎಂಬುದಾಗಿ ಭಾವಿಸುವ ಹುಚ್ಚೂ ನನ್ನಲ್ಲಿದೆ. ನನ್ನ ಹುಚ್ಚು ಸರಿಯಾದರೆ ನನ್ನ ಸಿದ್ಧಾಂತಗಳಿಂದ ಭಾರತದಲ್ಲಿ ಪರಿಣಾಮಕಾರಿಯಾಗಿ ಕಾರ್ಯ ಮಾಡಲು ಮುಂದೆಯಾದರೂ ನಾನು ಸಮರ್ಥನಾಗಬೇಕು. ಇಲ್ಲವಾದರೆ ನನ್ನ ಹುಚ್ಚು ಹುಚ್ಚೇ ಸರಿ! ಎಂಬ ತೀರ್ಮಾನಕ್ಕೆ ನಾವೆಲ್ಲ ಬರಬೇಕಾದೀತು, ಅಲ್ಲವೇ ಸಿಲ್ವರ್?

ಅಯ್ಯಯ್ಯೋ ಸಿಲ್ವರ್ ! ಏನಿದು ಕತೆ? ಬರೆದು ರಾಶಿ ಹಾಕಿದ ಕಾಗದದ ಹಾಳೆಗಳನ್ನು ನೋಡುತ್ತೇನೆ. ಅಬ್ಬಬ್ಬಾ ಎಷ್ಟು ಉದ್ದ ಬೆಳೆದು ಹೋಯಿತು ! ಆದರೂ ಬರೆಯಲು ಇನ್ನೂ ಎಷ್ಟೋ ಬಾಕಿಯಿದೆ! ಇರಲಿ, ಒಂದೇ ದಿನ ಮುಗಿಸಲು ನನ್ನಿಂದಾದೀತೇ? ಒಂದೆರಡು ವರ್ಷಗಳ ತನಕ ಇಲ್ಲಿದ್ದು ಆಳ ವಾದ ಅಧ್ಯಯನ ಮಾಡಿ ಪಡೆದ ಅನುಭವದ ನವನೀತವನ್ನು ನಿನಗೆ ಒಂದು ಪತ್ರದಲ್ಲಿ ಬರೆವೆನೆಂದರೆ ಹೇಗೆ ಸಾಧ್ಯ?

ಇರಲಿ, ಸಿಲ್ವರ್, ಇಲ್ಲಿಗೆ ನಿಲ್ಲಿಸಿ ಬಿಡುತ್ತೇನೆ. ನೋಡು, ಈ ಪತ್ರ ವನ್ನು ನಿನ್ನ ಶ್ರೀಮತಿಗೆ ಸಿಗುವಂತೆ ಇಟ್ಟುಬಿಡಬೇಡ. ಪಾಪ! ಆಕೆ ನೊಂದು ಬಿಟ್ಟಾಳು. ಆಕೆಯ ಸುಖಕ್ಕೆ ನಾನೇಕೆ ಅಡ್ಡಿ ಬರಬೇಕು? ನೀನಾದರೂ ಅಷ್ಟೆ! ಭಾರತೀಯ ಪರಂಪರೆಯ ಮಾನವೀಯ ಹೃದಯವನ್ನೂ, ದೈವೀ ಸೌಜನ್ಯವನ್ನೂ ಬೆಳೆಸಿಕೊಂಡು ಹೊಸ ಒಂದು ಆಧ್ಯಾತ್ಮಿಕ ದಿಗಂತವನ್ನು ನೋಡತೊಡಗು. ನಿನ್ನ ಜೀವನಕ್ಕೆ ಒಂದು ಹೊಸ ಮಾನ, ಒಂದು ಹೊಸ ಆಳತೆ, ಒಂದು ಹೊಸ ದೃಷ್ಟಿ ಬರಲಿ! ಆಗ ಆಕೆ ಪರಿವರ್ತಿತಳಾಗುವಳೇನೋ ನೋಡಬಹುದು.

ಅದು ಆಗಲಿಲ್ಲವೆನ್ನು. ಈ ಪ್ರಪಂಚದಲ್ಲಿ ನಮ್ಮ ಮಾನವ ಬಂಧುಗಳ ಸುಖಕ್ಕಾಗಿ ನಾವು ಮಾಡಬೇಕಾದ್ದೆಷ್ಟಿಲ್ಲ! ಹಿಂದೂ ಸಿದ್ಧಾಂತ ಪ್ರಕಾರ, ಜನರೇ ಪರಮಾತ್ಮನ ಮೂರ್ತ ಸ್ವರೂಪವಂತೆ. ಅದು ಸತ್ಯ ಸಿಲ್ವರ್! ಏನ ನ್ನುವೆ? ನಾವಿಬ್ಬರೂ ಆ ಸಿದ್ಧಾಂತ ಪ್ರಕಾರ ಜನಸೇವೆಗಾಗಿ ಟೊಂಕ ಬಿಗಿ ಯೋಣ--ಆಗದೇ? ಅದಕ್ಕಾಗಿ, ಹಿಂದೂ ಕ್ರಿಶ್ಚಿಯನ್, ಪೂರ್ವ ಪಶ್ಚಿಮ ಗಳೆಂಬ ಭೇದಭಾವವನ್ನೇ ಅರಿಯದ ದೇವಾಧಿದೇವ ಏಸುವನ್ನು ಮನಸ್ವೀ ಪ್ರಾರ್ಥಿಸೋಣ.

ಮುದ್ದು ಕೇನ್ನಿಯನ್ನು (ಪಾಪ!) ಆಗಾಗ ನೆನೆಸುತ್ತಿದ್ದೇನೆ, ಎಂದು ತಿಳಿಸು ಗೆಳೆಯಾ.

ಆಗಾಗ ಪತ್ರ ಬರೆ. ನೋಡು, ದುಃಖ, ದ್ವೇಷ ಎರಡೂ ನಿನ್ನ ಹೃದ ಯಕ್ಕೆ ನುಸುಳದಿರಲಿ, ನೋಡಿಕೋ. ನಿನ್ನ ಕಷ್ಟದಲ್ಲಿ ನಾನು ಪೂರ್ಣ ಸಹಭಾಗಿಯೆಂಬುದನ್ನು ಸ್ಮರಿಸಿಕೋ. ನಿನಗಾಗಿ ನನ್ನ ಅನಂತ ಪ್ರಾರ್ಥನೆಗಳು.

ಇತಿ, ನಿನ್ನ ಆಪ್ತಮಿತ್ರ,
ಜೋನ್ ಓರ್‌ಮನ್.

# ೮

ಮದ್ರಾಸು,
28–4–62

ಪ್ರಿಯ ಸಿಲ್ವರ್,

ನಿನ್ನ ದೀರ್ಘವಾದ ಮರುಪತ್ರವನ್ನೇ ಪರೀಕ್ಷಣೆ ಮಾಡುತ್ತಿದ್ದ ನನಗೆ ಈ ತನಕವೂ ನಿರಾಶೆಯೇ ಆಯಿತು. ಆದರೆ ಭಗವದ್ಗೀತೆಯ ಇಂಗ್ಲಿಷ್ ಭಾಷಾಂತರವೊಂದನ್ನು ಕಳುಹಿಸಿಕೊಡು ಎಂಬ ನಿನ್ನ ಮೊನ್ನೆಯ ತಂತಿ ನೋಡಿ ಬಹಳ ಆಹ್ಲಾದವಾಯಿತು. ನೀನು ಪತ್ರ ಬರೆಯದಿದ್ದರೂ ನಿನ್ನ ಅಂತರಂಗದ ಬೆಳವಣಿಗೆಯ ಬೆಟ್ಟವನ್ನೇ ಆ ತಂತಿಯಲ್ಲಿ ಕಂಡುಬಿಟ್ಟೆ. ಆದ್ದರಿಂದ ಆ ಆನಂದವೇ ನನ್ನ ನಿರಾಶೆಯನ್ನು ಬಹುಮಟ್ಟಿಗೆ ನೀಗಿಸಿ, ಈ ಪತ್ರವನ್ನು ಬರೆಯುವಂತೆ ಮಾಡಿದೆ.

ನಿನ್ನ ಶ್ರೀಮತಿಯ ವಿಚಾರ ದಿನ ದಿನ ತಿಳಿಯೋಣ ಎಂಬ ಕುತೂಹಲ ನನಗೆ ಬಲವಾಗಿದೆ. ಆದರೇನು ಮಾಡಲಿ? ಕೆಲವು ದಿನಗಳಿಂದ ನೀನು ಬಾಯಿ ಬಿಗಿದು ಕುಳಿತಿದ್ದಿ.

ಆದರೆ ಒಂದು ಧೈರ್ಯ ನನಗೆ–ನಿನ್ನ ಮನಸ್ಸಿನ ಬೇಗುದಿಯೇ ನಿನ್ನ ಮೌನಕ್ಕೆ ಕಾರಣವೆಂದಾದರೆ, ಗೀತಾಪಠನ ಪ್ರಾರಂಭಿಸಿದ ಒಡನೆಯೇ ನಿನ್ನ ಅಂತರಂಗಕ್ಕೆ ಶಾಂತಿ ಲಭಿಸಿ ನೀನು ಹಿಂದಿನಂತೆಯೇ ಪತ್ರ ಬರೆಯಲು ಪ್ರಾರಂಭಿಸುವೆ, ಎಂದು. ಆದ್ದರಿಂದ ನನ್ನ ಪತ್ರಗಳ ಸರಣಿಯನ್ನು ತಡೆ ಹಿಡಿಯದೆ ಮುಂದರಿಸುತ್ತಲೇ ಹೋಗುತ್ತೇನೆ.

ಮೊನ್ನೆ ಜಗತ್ಪ್ರಸಿದ್ಧವಾದ, ಮದ್ರಾಸಿನ 'ಮೆರಿನಾ' ಸಮುದ್ರ ದಂಡೆಗೆ

ಅಡ್ಡಾಡಲು ನನ್ನ ಗೆಳೆಯ ಜಯನಾಥ ಎಂಬವರೊಂದಿಗೆ ಹೋಗಿದ್ದೆ. ಆಗ ಯೋಗೀಶ್ ಎಂಬೊಬ್ಬ ಶ್ರೀಮಂತರ ಪರಿಚಯವು ಬಹಳ ಸ್ವಾರಸ್ಯವಾದ ರೀತಿಯಲ್ಲಿ ನಡೆಯಿತು.

ನಾನೂ ನನ್ನ ಗೆಳೆಯನೂ, ಆ ವಿಶಾಲ ಮರಳ ರಾಶಿಯಲ್ಲಿ ಒಂದು ಕಡೆ ತುಂಬಾ ಸಮಯ ಕುಳಿತು ಭಾರತದ ಕುರಿತಾದ ಹಲವು ಗಹನವಾದ ವಿಮರ್ಶೆಗಳನ್ನು ಮಾಡಿ ನನ್ನ ಹೋಟೇಲಿನೆಡೆಗೆ ಹೊರಟೆವು. ಆಗ ನಮ್ಮ ದಾರಿಯಲ್ಲಿ ಶ್ರೀಮಂತ ಸುಂದರ ಯುವಕರೊಬ್ಬರು ಮಳಲಲ್ಲಿ ಕುಳಿತದ್ದು ಕಂಡಿತು. ಅವರ ಬಳಿಯಲ್ಲಿ ಅವರ ಶ್ರೀಮತಿಯೂ ಕುಳಿತಿದ್ದರು. ಹೆಣ್ಣು ಮಗುವೊಂದು ಬಳಿಯೇ ಆಡುತ್ತಿತ್ತು. ಮಳಲ ಮೇಲೆ 'ಸ್ಕ್ರೀನ್' ಎಂಬ, ಚಲಚಿತ್ರದ ಕುರಿತಾದ ವಿವರಣೆ ತೋರುವ ಪತ್ರಿಕೆಯೊಂದನ್ನು ಬಿಡಿಸಿಟ್ಟು ಅದರ ಕುರಿತಾಗಿ ಮಡದಿಯ ಕೂಡೆ ವಿಮರ್ಶೆ ಮಾಡುತ್ತಿದ್ದರು.

ಅವರ ಬಳಿಗೆ ನಾನು ಸಮೀಪಿಸಿದಾಗ ಆ ಮಗುವನ್ನು ನೋಡಿ ನಿನ್ನ ಮುದ್ದು ಕೇನ್ನಿಯ ನೆನಪಾಯಿತು, ನನಗೆ. ಅವಳ ಕೆನ್ನೆ ಮುಟ್ಟಿ ನಿನ್ನ ಹೆಸರೇನು ಮಗೂ ಎಂಬುದಾಗಿ ನನ್ನದೇ ಆದ ಒಡಕು ತಮಿಳಿನಲ್ಲಿ ಕೇಳಿದೆ. ಮಗು ಕೇನ್ನಿಯಂತೆಯೇ ಮುದ್ದು ಮುದ್ದಾಗಿ ನಕ್ಕು 'ವೀಣಾ' ಎಂದು ಉತ್ತರ ಕೊಟ್ಟಿತು. ಆದರೆ ಅಷ್ಟರಲ್ಲಿ 'ವೀಣಾ, ಈಚೆಗೆ ಬಾ' ಎಂಬ ಮಾತು ಆ ಯುವಕರಿಂದ ಬಂದದ್ದು ನೋಡಿ ನನಗೆ ಆಶ್ಚರ್ಯವಾಯ್ತು. ನಾನು ಸಹಜವಾಗಿಯೇ ಅವರೆಡೆಗೆ ನೋಡಿದೆ. ಆ ಮುಖದಲ್ಲಿ ನನ್ನೆಡೆಗೆ ತಿರಸ್ಕಾರವೂ ಒಂದು ತೆರನಾದ ದುರಹಂಕಾರವೂ ತುಂಬಿತ್ತು. ನಾನು ತುಂಬಾ ನೊಂದುಕೊಂಡೆ. ಅವರೆಡೆಗೆ ತೆರಳಿ "ಕ್ಷಮಿಸಿಬಿಡಿ. ನಿಮ್ಮ ಮಗುವನ್ನು ನೋಡಿ ಮಾತನಾಡಿಸೋಣ ಎಂದು ಕಂಡಿತು" ಎಂದು ಇಂಗ್ಲಿಷಿನಲ್ಲಿ ಹೇಳಿದೆ. ಆದರೆ ಆದರಿಂದೇನೂ ಅವರ ಮನಸ್ಸು ಪಲ್ಲಟವಾಗಲಿಲ್ಲ. ಮತ್ತೂ ಒಂದು ತೆರನಾದ ತಿರಸ್ಕಾರದಿಂದಲೇ ತಲೆಯಲ್ಲಾಡಿಸಿ, ಸ್ಕ್ರೀನ್ ಪತ್ರಿಕೆಯ ಪುಟ ಮಗುಚತೊಡಗಿದರು.

ನನಗೀವರ್ತನೆಯು ವಿಚಿತ್ರವಾಗಿ ಕಂಡಿತು. ಭಾರತೀಯನೋರ್ವನಿಂದ ಈ ತೆರದ ವರ್ತನೆ ನಾನು ನಿರೀಕ್ಷಿಸಿರಲಿಲ್ಲ. ನಾನು ಪುನಃ ಏನೋ ಮಾತನಾಡಿ, ಅವನ ಗೆಳೆತನ ಸಂಪಾದಿಸುವುದರಲ್ಲಿದ್ದೆ. ಅಷ್ಟರಲ್ಲಿ ನನ್ನ ಗೆಳೆಯ ಜಯನಾಥರು ನನ್ನ ಕೈ ಹಿಡಿದು ಜಗ್ಗಿದರು ಮತ್ತು ಹಿಂದಕ್ಕೆಳೆದರು. ನಾನು ಅಲ್ಲಿಂದ ಕಾಲು

ಕೇಳಬೇಕಾಯಿತು.

ದಾರಿಯಲ್ಲಿ ಜಯನಾಥ ಕೇಳಿದರು "ಅಂತಹ ದುರಹಂಕಾರಿ ಜನರೊಂದಿಗೆ ಮಾತು ಬೆಳೆಸುವ ಹವ್ಯಾಸ ನಿಮಗೇಕೆ ಓರ್ಮನ್?" "ಏನಿಲ್ಲ. ಕೇವಲ ಕುತೂಹಲ" ಎಂದೆ ನಾನು. ಭಾರತದಲ್ಲಿ ಹಲವರಿಗಿರುವ ಒಣ ಜಂಭ ನನಗೆ ತಿಳಿದಿದ್ದರೂ ಆ ಸಮಯ ಅದು ಮರೆತು ಹೋಗಿತ್ತು. (ಈ ಕುರಿತಾಗಿ ನಿನಗೆ ನಾನು ಮುಂದೆ ಬರೆಯುತ್ತೇನೆ.) ರಸ್ತೆ ಬಳಿಗೆ ಬಂದಾಗ ಇಲ್ಲಿಯು ಹುರಿದ ನೆಲಕಡಲೆ ನಮಗೆ ಎದುರಾಯಿತು. ಜಯನಾಥರು ಒಂದಿಷ್ಟು ತೆಗೆದೇ ಬಿಟ್ಟರು. ಅಲ್ಲೇ ಫೂಟ್ ಪಾತಿನ ಒಂದು ಬದಿಯಲ್ಲಿ ನಾವು ಇತರ ನೂರಾರು ಜನರಂತೆ ಕುಳಿತು ತಿನ್ನತೊಡಗಿದೆವು.

ಕಾಲು ಗಂಟೆ ಕಳೆದಿರಬಹುದು. ಅಷ್ಟರಲ್ಲಿ ನಾನು ಹಿಂದೆ ನೋಡಿದ ಮಹನೀಯರು ಹದಿನೆಂಟನೇ ಶತಮಾನದ ಸಾಮ್ರಾಟರ ಠೀವಿಯಲ್ಲಿ ರಸ್ತೆಗೆ ಬಂದು ಅವರ ಕ್ಯಾಡಿಲ್ಲಕ್ ಕಾರಿನ ಬಾಗಿಲು ತೆಗೆದು ಒಳ ಸೇರಿದರು. ಆದರೆ ಕಾರು ಅದೇತಕ್ಕೋ ಹೊರಡಲೇ ಇಲ್ಲ. ಬಹಳ ಸಮಯ ಅವರು ಪೇಚಾಡಿದರೂ ಕಾರಿನ ಎಂಜಿನು ಮುಷ್ಕರ ಹೂಡಿತು.

ಕುತೂಹಲದಿಂದ ನೋಡುತ್ತಿದ್ದ ನನಗೇಕೋ ಸಹಾನುಭೂತಿ ಬಂತು. ಕಾರಿನ ಕುರಿತಾದ ಪೂರ್ಣ ಮಾಹಿತಿ ನನಗಿರುವುದರಿಂದ, ಜಯನಾಥರು ತಡೆದಂತೆಯೇ ಎದ್ದು ನಿಂತೆ. ನೇರವಾಗಿ ಅವರ ಬಳಿ ಸಾರಿದೆ. "ನಾನು ನೆರವಾಗಲೇ?" ಎಂದು ಕೇಳಿದೆ. "ಬೇಡ. ಈಗ ಸರಿಯಾದೀತು" ಎಂದುಬಿಟ್ಟರು. ಮರಳಿ ಮರಳಿ ಯತ್ನಿಸಿಯೂ ಅವರು ವಿಫಲರಾದರು. ನೋಡುತ್ತಾ ನಿಂತ ನಾನು [ನಿನಗಿದು ವಿಚಿತ್ರವಾಗಿ ಕಾಣಬಹುದು], ಪುನಃ ಹೇಳಿದೆ "ನನಗೆ ಮೋಟಾರು ಕಾರಿನ ರಿಪೇರಿಯಲ್ಲಿ ಪ್ರಾವೀಣ್ಯತೆಯಿದೆ. ನನಗಾ ಕೆಲಸ ವಹಿಸಿಕೊಡಿ; ನಾನು ಸರಿಪಡಿಸುತ್ತೇನೆ." ಕಟ್ಟಕಡೆಗೆ ಮನಸ್ಸಿಲ್ಲದ ಮನಸ್ಸಿನಿಂದ 'ಆಗಲಿ' ಎಂದರು. ನಾನು ಎಂಜಿನನ್ನು ನೋಡಿದೆ. ಒಂದು ಕಡೆ ಇಲೆಕ್ಟ್ರಿಕಲ್ ಸಂಪರ್ಕ ಸ್ವಲ್ಪ ಸಡಿಲಾಗಿತ್ತು. ಕೇವಲ 5 ಮಿನಿಟುಗಳಲ್ಲಿ ನಾನದನ್ನು ಸರಿಪಡಿಸಿ ಆ ಸುಂದರ ಕಾರನ್ನು ಹೊರಡಿಸಿದೆ.

ಆ ಮಹನೀಯರ ಮುಖವು ಹಿಗ್ಗಿ ಇಷ್ಟಗಲವಾಯಿತು. ನನ್ನನ್ನು ನೋಡಿ "ತುಂಬಾ ಥೇಂಕ್ಸ್" ಎಂದು ಹೇಳಿದರು. ನಾನು ಅವರ ಪರಿಚಯ ಕೇಳಿದೆ. ನಮ್ಮ ಮಾತು ಮುಂದರಿಯಿತು. ಅಷ್ಟರಲ್ಲಿ ಜಯ

ನಾಥರೂ ಅಲ್ಲಿಗೆ ಬಂದೇ ಬಿಟ್ಟರು.

ವಿಷಯ ತಿಳಿದಾಗ ಇವರೊಬ್ಬ ವಿದ್ಯಾವಂತ ಭೂಮಾಲಿಕರೆಂದೂ ಮದ್ರಾಸಿಗೆ 80 ಮೈಲು ದೂರದ ವೆಲ್ಲೂರಿನ ಬಳಿಯ ಒಂದು ಹಳ್ಳಿಯ ನಿವಾಸಿಗಳೆಂದೂ ತಿಳಿಯಿತು. ಆದರೆ ಸಾಮಾನ್ಯವಾಗಿ ತಮಿಳರು ಇರುವಂತೆ ಇವರು ಕಂದು ಅಥವಾ ಕಪ್ಪು ಮೈಬಣ್ಣದವರಾಗಿರದೆ, ಅಚ್ಚ ಗೌರ ವರ್ಣದವರಾಗಿದ್ದಾರೆ. ಅವರು ಒಂದು ಶ್ರೀಮಂತ ಹಾಗೂ ಕುಲೀನ ಬ್ರಾಹ್ಮಣ ಮನೆತನಕ್ಕೆ ಸೇರಿದವರು.

ನನ್ನ ಅವರ ಗೆಳೆತನ ಬಾಹ್ಯತಃ ಬೆಳೆಯಿತು. ನನ್ನನ್ನು ತಮ್ಮ ಕಾರಿನಲ್ಲಿ ಕುಳ್ಳಿರಿಸಿ, ಎಗ್ಮೋರಿನ ನನ್ನ ಹೋಟೆಲ್ಲಿಗೆ ತಂದು ಬಿಟ್ಟರು.

ದಾರಿಯಲ್ಲಿ ನಮ್ಮ ಮಾತುಕತೆ ಮತ್ತೂ ಮುಂದುವರಿಯಿತು. ಅವರ ಹಳ್ಳಿಯನ್ನು ನೋಡುವ ಅಭಿಲಾಷೆಯನ್ನು ನಾನು ವ್ಯಕ್ತ ಪಡಿಸಿದೆ. ನನ್ನ ಆಸೆಯನ್ನು ಒಂದೆರಡು ದಿನಗಳಲ್ಲಿ ಪೂರ್ತಿಗೊಳಿಸುವೆನೆಂಬುದಾಗಿ ಅವರು ಹೇಳಿದರು.

ಹಾಗೆಯೇ ಎರಡು ದಿನಗಳ ನಂತರ ನಾನೂ ಜಯನಾಥರೂ, ಆ ಹೊಸ ಗೆಳೆಯರ (ಅವರ ಹೆಸರು ಕಮಲನಯನ ಎಂಬುದಾಗಿ) ಕಾರಿನಲ್ಲಿ ವೆಲ್ಲೂರು ಕಡೆಗೆ ಹೊರಟೆವು. (ಅಲ್ಲೇ ನಮ್ಮ ಅಮೇರಿಕನ್ ಸಿ. ಯಮ್. ಸಿ. ಆಸ್ಪತ್ರೆಯಿರುವುದು.) 3 ಗಂಟೆಗಳ ಪಯಣದ ನಂತರ ನಾವು ಆ ಹಳ್ಳಿಗೆ ಬಂದು ತಲಪಿದೆವು.

ಇಂತಹ ಶ್ರೀಮಂತರ ವಾಸಸ್ಥಳವಾದ ಈ ಹಳ್ಳಿಯಾದರೂ ಬಹಳ ಮುಂದುವರಿದಿರಬಹುದೆಂದು ನಾನು ಭಾವಿಸಿದ್ದೆ. ಆದರೆ ನನ್ನ ನಿರೀಕ್ಷಣೆಯು ಪೂರ್ಣ ತಪ್ಪಾಗಿತ್ತು. ಅಲ್ಲಿ ನನಗೆ ಕಂಡಂತಹ ಗುಡಿಸಲುಗಳು ಕೇವಲ ಕರುಳನ್ನೇ ಕೀಳುವಂಥವುಗಳಾಗಿದ್ದವು. ಮದ್ರಾಸು ಬೊಂಬಾಯಿ ನಗರಗಳ ಹೊಲಗೇರಿ ಪ್ರದೇಶಗಳಲ್ಲಿದ್ದ, ಆ 'ಬಿಲ' ಗಳಿಗಿಂತ ಇಲ್ಲಿಯವುಗಳು ಸ್ವಲ್ಪ ದೊಡ್ಡದಿದ್ದರೂ, ಆ ಗುಡಿಸಲುಗಳನ್ನು ಆವರಿಸಿದ್ದ ಹೊಲಸನ್ನು ನೋಡಿ ನಾನು ಆಶ್ಚರ್ಯಪಟ್ಟೆ. ಅಗಲಕಿರಿದಾದ ಅಲ್ಲಿಯ ಬೀದಿಯಾದರೂ ಅದೇ ತೆರನಾಗಿ ಇತ್ತು. ಒಂದೇ ಸವನೆ ನಾಲ್ಕೂ ಬದಿಗಳಿಂದಲೂ ಕೆಟ್ಟ ವಾಸನೆ ಬಂದು ಮೂಗನ್ನು ಬಡಿಯುತಿತ್ತು.

ಅಂತಹ ಆ ಗುಡಿಸಲುಗಳನ್ನು ಹಾದುಕೊಂಡೇ ಒಂದು ಹಳೆಯ ಕಾಲದ ಮನೆಯೆಡೆಗೆ ತೆರಳಿದೆವು. ಆ ಮನೆಯ ಅಂಗಳದಲ್ಲೂ, ಮನೆಯೊಳಗೂ ನಾನು ಕಂಡ ದೃಶ್ಯವು ಅಸಹ್ಯವಾಗಿತ್ತು.

ಮನೆಯ ಅಂಗಳದ ತುಂಬಾ ಏನೆಲ್ಲಾ ಕಸಕಡ್ಡಿಗಳೋ, ಸೆಗಣಿಯ ರಾಶಿಗಳೋ ಹೇರಲ್ಪಟ್ಟದ್ದುವು. ಅಲ್ಲಲ್ಲಿ ಮಕ್ಕಳು ಮತ್ತು ದೊಡ್ಡವರು ಕೂಡಾ ಮಲವಿಸರ್ಜನೆ ಮಾಡಿದ್ದು ವಿವಿಧ ಹಂತದ ಒಣಗುವಿಕೆಯಲ್ಲಿತ್ತು.

ಕಮಲನಯನರು ಕಾರನ್ನು ಅಂಗಳಕ್ಕೆ ತಂದು ಹಾರ್ನ್ ಮಾಡಿದರು. ಆಗ ಹರಕು ಚಿಂದಿಯುಟ್ಟ ಮುದುಕಿಯೋರ್ವಳು ಮನೆ ಬಳಿಯ ಒಂದು ಕಟ್ಟಡದಿಂದ ಹೊರಬಂದಳು. ಆವಳ ಮುಖದಲ್ಲಿ ದುಃಖ ಮತ್ತು ತಿರಸ್ಕಾರ ಗಳೇ ಒಡಮೂಡಿದ್ದುವು. ನಮ್ಮ ಗೆಳೆಯರು ತಮಿಳಿನಲ್ಲಿ ಅವಳ ಕೂಡೆ ಮಗನೆಲ್ಲಿ ಎಂದು ಒಂದು ರೀತಿಯ ದರ್ಪದಿಂದ ಕೇಳಿದರು. ತಿಳಿದಿಲ್ಲವೆಂದು ಹೇಳಿ ಅವಳು ಸುಮ್ಮನಾದಳು. ಮತ್ತೆಯೂ ಅವರೊಳಗೆ ಕೆಲವು ಸಂಭಾ ಷಣೆ ನಡೆಯಿತು. ನನಗೆ ತಮಿಳಿನ ಕೆಲವು ಶಬ್ದಗಳು ಮಾತ್ರವೇ ತಿಳಿಯತ್ತಿ ದ್ದರೂ, ನಾನು ತಮಿಳರೇ ಆಗಿದ್ದ ಜಯನಾಥರ ಸಹಾಯದಿಂದ ಅವರ ಸಂಭಾಷಣೆಯ ಮುಖ್ಯ ಸಾರಾಂಶ ತಿಳಿದುಕೊಂಡೆ.

ಮಗ ದುಡಿಯುವುದಿಲ್ಲವಂತೆ; ಸೋಮಾರಿಯಾಗಿದ್ದು, ಗೇಣಿಯ ಗದ್ದೆಯ ಉತ್ಪತ್ತಿಯನ್ನೆಲ್ಲಾ ಕುಡಿಯುವುದಕ್ಕೋ ಜುಗಾರಾಡುವುದಕ್ಕೋ ಮುಗಿಸುತ್ತಿದ್ದಾನಂತೆ. ಗೇಣಿಯೇಕೆ ಸಲಾಯಿಸಲಿಲ್ಲ ಎಂದು ಕೇಳಿದ್ದಕ್ಕೂ ಅವಳ ಉತ್ತರ ಅಷ್ಟೆ. ಅವನ ಹೆಂಡತಿ, ಎಲ್ಲಿಗೋ ಮನೆಕೆಲಸಕ್ಕೆ ಹೋಗಿ ಸಿಕ್ಕಿದ ಸ್ವಲ್ಪ ಹಣದಿಂದ ಸಂಸಾರ ಸಾಗಿಸುವುದಂತೆ. ಮಗನಿಗೆ ಜನಿಸಿದ 3–4 ಮಂದಿ ಮಕ್ಕಳಲ್ಲಿ 3 ಮಂದಿ ಏನೇನೋ ದೆವ್ವಗಳ ಉಪದ್ರದಿಂದ ಗತಿಸಿ ಹೋಗಿ, ಈಗ ಇದ್ದ ಒಬ್ಬನೇ ಹುಡುಗ, ಸರಕಾರದ ರಸ್ತೆ ಕೆಲಸಕ್ಕೆ ಹೋಗು ತ್ತಾನಂತೆ. ಅವನಿಗೆ ದಿನಕ್ಕೆ ಹನ್ನೆರಡಾಣೆ ಮಜೂರಿ ಸಿಗುತ್ತಿದೆಯಂತೆ (ಹೆಚ್ಚು ಕಡಿಮೆ $\frac{1}{7}$ ಡಾಲರ್)

ಮನೆಯ ಗೋಡೆ ಮತ್ತು ಮಾಡುಗಳಲ್ಲಿ ಸಹಸ್ರಾರು ಭೀಕರ ಗಾತ್ರದ ಜೇಡರ ಹುಳಗಳು, ಅನೇಕ ತಿಂಗಳುಗಳಿಂದಲೂ ಅಳಿಸಲ್ಪಟ್ಟಿಲ್ಲದ ರೀತಿಯ ಬಲ ವಾದ ಕೋಟೆಗಳನ್ನು ಕಟ್ಟಿ ರಾಜ್ಯವನ್ನಾಳುತ್ತಿದ್ದುವು. ನೆಲದಲ್ಲಿ ಜಮೆಯಾದ ಧೂಳು ಕಡಿಮೆಯೆಂದರೂ ಕಾಲು ಇಂಚು ದಪ್ಪವಾಗಿತ್ತು. ಗೋಡೆಯಲ್ಲಿ

ಮನೆಯೆದುರಿನ ಬಾಗಿಲ ಮೇಲೆ ಮುಂಡಾಸು ಕಟ್ಟಿದ ಒಬ್ಬರು ಮುದುಕರ ಚಿತ್ರ ತೂಗಹಾಕಿತ್ತು. ಇತರ ಕಡೆಗಳಲ್ಲಿ ಭಾರತದ ನಾರಾಯಣ, ವಿಘ್ನೇಶ್ವರ, ರಾಮ, ಕೃಷ್ಣ, ದುರ್ಗೆ ಮೊದಲಾದ ದೇವ ದೇವಿಯರ ಚಿತ್ರಗಳೂ ಇದ್ದುವು. ಎಲ್ಲ ಭಾವ ಚಿತ್ರಗಳ ಮೇಲೂ ಧೂಳಿನ ಆವರಣವಿತ್ತು.

ಮಾಡಿನ ಮರದ ಮೋಪುಗಳೆಲ್ಲ ಬಹಳ ಹಳತಾಗಿ, ಗೆದ್ದಲು ಹಿಡಿದು ಮುರಿದು ಬೀಳುವ ಸಿದ್ಧತೆಯಲ್ಲಿದ್ದುವು. ಹಂಚು ಕೆಳಗೆ ಬಿದ್ದು ಒಂದು ಕಡೆಯಲ್ಲಿ ಹುಡಿಹುಡಿಯಾದ್ದು ಹಾಗೆಯೇ ಇತ್ತು. ಅದೇ ಸ್ಥಳದಲ್ಲಿ ಮಳೆಯ ನೀರು ಗೋಡೆಯ ಮೂಲಕ ಕೆಳಗಿಳಿದು ಅದರ ಕುರುಹು ನಿರಾಶಾಯುತವಾಗಿ ಗೋಡೆಯ ಮೇಲೆ ಹಾಗೆಯೇ ಕುಳಿತಿತ್ತು.

ಈ ಮಾನವನ ಬದುಕೆಂಬುದು ಎಂತಹ ಕರಾಳ ಕಾರ್ಗತ್ತಲೆಯಿಂದ ಕೂಡಿದ್ದೆಂಬುದಾಗಿ ಈ ಮನೆಯನ್ನು ನೋಡಿದಾಗ ಯಾರಾದರೂ ಭಾವಿಸುವಂತಿತ್ತು. ಏಕೆಂದರೆ ಅನೇಕ ಸಮಯದಿಂದ ಅದರಲ್ಲಿ ಯಾರೂ ವಾಸ್ತವ್ಯವಿರಲಿಲ್ಲ.

ಕಮಲನಯನರ ಹಿರಿಯರ ವಾಸ್ತವ್ಯದ ಮನೆಯು ಇದೇ ಆಗಿತ್ತೆಂದೂ, ಆ ಮುದುಕರ ಭಾವಚಿತ್ರವು ಇವರ ತಂದೆಯ ಭಾವಚಿತ್ರವೇ ಆಗಿತ್ತೆಂದೂ ತಿಳಿದುಬಂತು. [ತಂದೆಯ ಭಾವಚಿತ್ರವನ್ನು ತನ್ನೊಂದಿಗೆ ಒಯ್ಯಬೇಕೆಂದೂ ಈ ಯುವಕರಿಗೆ ಕಾಣಲಿಲ್ಲ] ಭಾರತದ ಗತಕಾಲದ ವೈಭವ ಗ್ರಹಿಸಿ ನಾನು ಆಗಾಗ ಅತ್ತಂತೆಯೇ, ಕಮಲನಯನರ ಕುಟುಂಬದ ಈ ಮನೆಯ ಅವನತಿ ಗ್ರಹಿಸಿ, ಬಹಳ ಮಾನಸಿಕ ವೇದನೆಯನ್ನನುಭವಿಸಿದೆ. ಇದೇಕೆ ಹೀಗೆಲ್ಲಾ ಆಯಿತು ಎಂಬುದಾಗಿ ನಾನು ಆಶ್ಚರ್ಯಪಟ್ಟೆ.

ಕಾರು ಹತ್ತಿ ನಾವು ಅಲ್ಲಿಂದ ಹೊರಟೆವು. ಪುನಃ ಬೀದಿಯಲ್ಲಿ ಮುಂದೆ ಸಾಗಿದೆವು. ಅಲ್ಲೇ ಪಕ್ಕದಲ್ಲಿ ಜನರು ಕಿಕ್ಕಿರಿದು ನೆರೆದಿದ್ದ ಒಂದು ಗುಡಿಸಲು ಕಾಣಿಸಿತು ನಾನು ಕುತೂಹಲದಿಂದ, ಕಾರನ್ನು ನಿಲ್ಲಿಸುವಂತೆ ಕೇಳಿಕೊಂಡೆ.

ನಾನು ಸೂಕ್ಷ್ಮವಾಗಿ ಪರೀಕ್ಷಿಸಿ ಹಾಗೂ ಪ್ರಶ್ನಿಸಿ ನೋಡಿದಾಗ ಅದೊಂದು ಆ ಹಳ್ಳಿಯ ಹೋಟೆಲೆಂದು ತಿಳಿಯಿತು. ನ್ಯೂಯೋರ್ಕಿನ ವಾಲ್ಡಾರ್ಫ್ ಅಸ್ಟೋರಿಯಾ ಹೋಟೆಲನ್ನು ನೋಡಿದವರಿಗೆ, ಈ ಬಡ ಹಳ್ಳಿಯ ಹೋಟೆಲಲ್ಲಿ ಅನೇಕ ಕೌತುಕದ ವಿಷಯಗಳು ಸಿಗುವುದರಲ್ಲಿ ಆಶ್ಚರ್ಯವೇನಿಲ್ಲ.

ಒಂದು ಕಡೆಯಲ್ಲಿ ಎಂಟು ಜನ ಸೇರಿ 'ಇಸ್ಪೇಟು' ಆಟವಾಡುತ್ತಿದ್ದರು.

ಅವರಿಗೆ ಹಲವು ಸಲಹೆಗಾರರು ಸೇರಿಕೊಂಡು ಸಹಾಯವೆಸಗುತ್ತಿದ್ದರು. ಆಟದಲ್ಲಿ ಸೋತವರಿಂದ ಗೆದ್ದವರಿಗೆ ದುಡ್ಡಿನ ಚಲಾವಣೆಯಾಗುತ್ತಿತ್ತು. ಈ ಆಟದ ಗತಿಯನ್ನು ನೋಡುತ್ತಾ ಸುಮಾರು ಇಪ್ಪತ್ತು ಮಂದಿ ಸುತ್ತುವರಿದು ನಿಂತಿದ್ದರು (ಸಲಹೆಗಾರರಲ್ಲದೆ). ಇವರೆಲ್ಲ ಮಧ್ಯಮ ವಯಸ್ಸಿನವರಾಗಿದ್ದು ಕಷ್ಟಪಟ್ಟು ದುಡಿಯತಕ್ಕ ಪ್ರಾಯದವರಾಗಿದ್ದರು.

ಇನ್ನೊಂದು ಕಡೆಯಲ್ಲಿ ಇನ್ನೂ 8-10 ಜನರು ಮುರುಕಲು ಬೆಂಚುಗಳಲ್ಲಿ ಕುಳಿತು, ಏನೋ ಎಲ್ಲ ಊರ ಸುದ್ದಿಗಳನ್ನೋ, ಸುಖದುಃಖಗಳನ್ನೋ ಮಾತನಾಡುತ್ತಿದ್ದರು. ಕೆಲವು ಯುವಕರು ಬೀಡಿ ಸೇದುತ್ತಿದ್ದರು. [ಇದು ಭಾರತದಲ್ಲಿ ಬೃಹತ್ ಗುಡಿ ಕೈಗಾರಿಕೆಯಾಗಿ ತಯಾರಾಗುತ್ತಿರುವ ಒಂದು ರೀತಿಯ ಸಿಗರೇಟ್].

ಅಲ್ಲದೆ ಒಳಗಿನ ಒಂದು ಸಣ್ಣ ಕೋಣೆಯಲ್ಲಿ ಇನ್ನೂ ಕೆಲವರು ಕುಳಿತು ಏನನ್ನೋ ಕುಡಿಯುತ್ತಿದ್ದರು. ನನಗೇನೋ ಹೆಂಡದ ವಾಸನೆ ಬರತೊಡಗಿತು. ನಾನು ಕುತೂಹಲದಿಂದ ಒಳಗೆ ನಡೆದೆ. ಎಲ್ಲರೂ ಆಶ್ಚರ್ಯದಿಂದ ಮತ್ತು ಭಯದಿಂದ ನನ್ನೆಡೆಗೇ ನೋಡತೊಡಗಿದರು. ಹೌದು, ಅದು ಹೆಂಡವಾಗಿತ್ತು. ಮದ್ಯಪಾನ ನಿಷೇಧವಿರುವ ಈ ಊರಲ್ಲಿ ನಡೆಯುವ ಈ ಕೃತ್ಯ ನೋಡಿ ಆಶ್ಚರ್ಯಪಟ್ಟೆ. [ಈ ಕುರಿತಾಗಿ ಇನ್ನೂ ಸ್ವಾರಸ್ಯದ ವಿಷಯಗಳಿವೆ—ಮುಂದೆ ಬರೆಯುತ್ತೇನೆ.]

ಹೀಗೆ ಒಟ್ಟಿನಲ್ಲಿ ಈ ಚಿಕ್ಕ ಮುರುಕಲು ಗುಡಿಸಲಿನೊಳಗೆ ಐವತ್ತಕ್ಕೂ ಮಿಕ್ಕಿ ಜನರನ್ನು ನಾನು ನೋಡಿದೆ.

ಪೂರ್ವಾಹ್ನ 10 ಗಂಟೆಯ ಹೊತ್ತಿಗೆ ಅದೂ ಆದಿತ್ಯವಾರವಲ್ಲದ ಒಂದು ದಿನ [ಮಂಗಳವಾರ ಎಂದು ನೆನಪು], ಉದ್ಯೋಗವಿಲ್ಲದೆ ಇಷ್ಟು ಜನ ಹೀಗೆ ಸುಮ್ಮನೆ ಕಾಲಹರಣ ಮಾಡುವುದನ್ನು ನೋಡಿ ನಾನು ಬೆಕ್ಕಸ ಬೆರಗಾದೆ. ಆದರೆ ಈ ನಾಡಿನ ಹಳ್ಳಿ ಹಳ್ಳಿಗಳಲ್ಲಿ ಇದೇ ದೃಶ್ಯವನ್ನು ಅನೇಕ ಸಲ ಕಂಡದ್ದು ಫಕ್ಕನೆ ನೆನಪಾಗಿ ನನ್ನ ಆಶ್ಚರ್ಯ ಕಡಿಮೆಯಾಯಿತೆನ್ನಬಹುದು.

ಸಮಯವೇ ಇಲ್ಲದೆ ಅವಿಶ್ರಾಂತವಾಗಿ ಒಂದಲ್ಲ ಒಂದು ಚಟುವಟಿಕೆಯಲ್ಲಿ ನಿರತರಾಗಿರುವ ಅಮೇರಿಕದ ಜನತೆಯ ನೆನಪಾಗಿ, ಸಹಜವಾಗಿ ಒಂದು ಹೋಲಿಕೆ ನನ್ನ ಮುಂದೆ ನಿಂತಿತು. ಇದೇಕೆ ಹೀಗೆ ಎಂದು? ಆ ವಿಶಾಲ ಅಮೇರಿಕಾ ದೇಶದಲ್ಲಿ ಅದರಲ್ಲೂ ಮುಖ್ಯವಾಗಿ ನ್ಯೂಯೋರ್ಕಿನಲ್ಲಿ ಜನ

ನಿಂತಲ್ಲಿ ನಿಲ್ಲುವುದಿಲ್ಲ; ಓಡಾಡುತ್ತಾರೆ. ಒಂದಲ್ಲ ಒಂದು ಕಾರ್ಯ ಅವರನ್ನು ಸದಾ ಎತ್ತಲೋ ಒಯ್ಯುತ್ತಿರುತ್ತದೆ. ಸದಾ ಉದ್ಯೋಗಶೀಲರಾಗಿರುತ್ತಾರೆ. ಅವರೂ ಆಟವಾಡುತ್ತಾರೆ ಎಂಬುದು ನಿಶ್ಚಯವೇ. ಆದರೂ, ಅದಕ್ಕೂ ಸಾಯಂಕಾಲದ ಸಮಯ ಇಲ್ಲವೇ ರಜೆ ದಿನಗಳಲ್ಲಿ ಮಾತ್ರವೇ ಎಂಬೊಂದು ನಿಯಮವನ್ನಿಟ್ಟುಕೊಳ್ಳುತ್ತಾರೆ.

ಶ್ರೀಮಂತಿಕೆಯಿಂದ ಓಲಾಡುತ್ತಿರುವ ಅಮೇರಿಕದ ಜನತೆ ಹೀಗೆ ಉದ್ಯೋಗಪ್ರಿಯರಾಗಿರಲು, ಬಡತನದ ಬೆಂಗಾಡಿನಲ್ಲಿ ಬಳಲುತ್ತಿರುವ ಭಾರತೀಯರೇಕೆ ಇಷ್ಟೂ ಆಲಸಿಗರಾಗಿದ್ದಾರೆ ಎಂಬುದು ನಾನು ತಿಳಿಯಲಾರದ ವಿಷಯವಾಗಿದೆ. ಭಾರತದ ಅನುಪಮವಾದ ಆಧ್ಯಾತ್ಮಿಕ ಜೀವನದ ರೂಪರೇಷೆಯು ಇಲ್ಲಿ ನೆರೆದ ಯಾರಲ್ಲಾದರೂ ಕಾಣುವುದೇ ಎಂದು ನೋಡಿದರೆ ನನಗದರ ಗ್ರಂಥಗಾಳಿಯೂ ಆಗ ಕಾಣಿಸಲಿಲ್ಲ.

ಅಲ್ಲಿ ನೆರೆದವರೆಲ್ಲ ವನ್ಯದೃಷ್ಟಿಯಿಂದ ನೋಡುತ್ತಾ ಪಶು ಸಮಾನವಾಗಿಯೇ ಕಾಣುತ್ತಿದ್ದರು. ಪರಸ್ಪರ ಸಹಾನುಭೂತಿಯಾಗಲೀ ಮಾನವೀಯ ದೃಷ್ಟಿಯಾಗಲೀ ನನಗೆ ಕಾಣಲೇ ಇಲ್ಲ.

ನೋಡು, ಒಂದು ವಿಷಯ ಹೇಳಲು ಮರೆತೇ ಬಿಟ್ಟೆ. ಕಾರು ಬಿಡುತಿದ್ದ ಕಮಲನಯನರನ್ನು ಅಲ್ಲಿ ನೆರೆದವರೆಲ್ಲ ನೋಡಿ ಗುರುತಿಸಿದರು—ನಿಶ್ಚಯ. ಆದರೆ ಆ ಜನರ ಮುಖದಲ್ಲಿ ಒಂದು ರೀತಿಯ ತಿರಸ್ಕಾರದ ಭಾವನೆಯೇ ಇತ್ತು.

ಸ್ವಲ್ಪ ಕಾಲಾನಂತರ ಕಮಲ ನಯನರು ಅಲ್ಲಿದ್ದ ಕೆಲವರನ್ನು ಹೊರಗೆ ಕರೆದರು. ಕರೆದು ಈ ವರ್ಷದ ಗೇಣಿಯೇಕೆ ಸಲಾಯಿಸಲಿಲ್ಲ ಎಂದು ಬಿರುಸಿನಿಂದಲೇ ಕೇಳಿದರು. "ಕೊಡುತ್ತೇವೆ ಸ್ವಾಮಿ" ಎಂದಷ್ಟೇ ನುಡಿದು ಅವರು ಸುಮ್ಮನಾದರು. "ಬೇಗನೆ ಕೊಡದಿದ್ದರೆ ವ್ಯಾಜ್ಯ ದಾಖಲು ಮಾಡುತ್ತೇನೆಂ"ಬುದಾಗಿ ಇವರು ಗದರಿಸಿದರೂ ಅವರೇನೂ ಬೆದರಿದಂತೆ ನನಗೆ ಕಾಣಲಿಲ್ಲ. ಒಂದು ರೀತಿಯ ಒರಟುತನವು ಅವರಲ್ಲಿದ್ದಂತೆ ನನಗೆ ಕಂಡಿತು.

ಇದನ್ನೆಲ್ಲಾ ನೋಡಿ ನನಗೆ ಖೇದ ಸಹಿತವಾದ ಆಶ್ಚರ್ಯವಾದರೆ, ನಮ್ಮ ಕಮಲನಯನರಿಗೆ ಇದರಿಂದ ಬಹಳ ರೋಸಿ ಹೋಗಿತ್ತು. ಅವರಿಗೆ ಇಲ್ಲಿ ನಿಂತದ್ದೇ ಸಾಕಾಗಿ ಹೋಗಿತ್ತು.

ಅವರು ನನ್ನನ್ನು ಕರೆದೇ ಬಿಟ್ಟರು. "ಬನ್ನಿ ಹೋಗೋಣ, ಓರ್

ಮನ್ ! ” ಎಂದು. ನಾನು ಹೇಳಿದೆ “ಕಮಲನಯನ ! ಇಷ್ಟೇಕೆ ಅವಸರ? ಈ ಗ್ರಾಮದ ಕುರಿತಾಗಿ ತಿಳಿಯುವುದು ಮುಗಿಯಿತೇನು? ಈ ದಿನ ಇಲ್ಲೇ ತಂಗೋಣ. ನಿಮ್ಮ ಜನರೇ ತಾನೇ? ಎಲ್ಲ ವಿಷಯ ಸಂಗ್ರಹಿಸೋಣ” ಎಂದು. ನಾನು ನಿಜವಾಗಿಯೂ ಅಷ್ಟು ಬೇಗನೇ ಹೋಗಲು ಸಿದ್ಧನಿರಲಿಲ್ಲ.

ಆದರೆ ಆ ಯುವಕರು “ಇಸ್ಸಿ ! ಇನ್ನೇನು ಇದೆ ಈ ಮುರುಕಲು ಹಳ್ಳಿಯಲ್ಲಿ! ಹೋಗೋಣ ಬನ್ನಿ ! ” ಎಂದು ಬಿಟ್ಟರು. ನಾನು ಜಯನಾಥರ ಬೆಂಬಲ ಕೋರಿದೆ. ಆದರೆ ಅವರಿಗೆ ಸ್ಪಷ್ಟ ಅಭಿಪ್ರಾಯ ನೀಡುವುದು ಕಷ್ಟವಾಗಿ ಪರಿಣಮಿಸಿತು.

ಕಮಲನಯನರು ಪುನಃ “ಬನ್ನಿ! ಬನ್ನಿ ! ಹೋಗೋಣ. ನನಗೆ ಮಧ್ಯಾಹ್ನ ನಂತರ ಕ್ಲಬ್ಬಿಗೆ ಹೋಗಲಿದೆ. ರಾತ್ರಿಗೆ ಸಿನೆಮಕ್ಕೆ ಟಿಕೇಟು ರಿಜರ್ವ್ ಮಾಡಿಸಿದ್ದೇನೆ; ಹೋಗಲೇ ಬೇಕು” ಎಂದರು.

ಆಗ ನಾನು ಕಾರಿನ ಬಳಿಸಾರಿ ನಾನು ಆ ದಿನ ಬರುವುದಿಲ್ಲವೆಂದು ಕ್ಷಮಾಯಾಚನೆಯೊಂದಿಗೆ ಕೇಳಿದೆ. ಅವರು ಸಂತೋಷದಿಂದ ಹೋಗಬಹುದೆಂದೂ ಹೇಳಿದೆ. ಖಡಾ ಖಂಡಿತವಾದ ನನ್ನ ಮಾತು ನೋಡಿ ಜಯನಾಥರೂ ನನ್ನ ಕಡೆಗೊಲಿದರು.

ಒಬ್ಬನೇ ಹಿಂತೆರಳಬೇಕಲ್ಲ ಎಂಬ ನಿರಾಶೆಯಿಂದ ಹೇಗೋ, ಕಮಲನಯನರು ಕಾರನ್ನು ಮುಂದಕ್ಕೆ ಬಿಟ್ಟರು. ನಾನು ಬೃಹತ್ತಾದ ಅರಣ್ಯದಲ್ಲಿ ಉಳಿದ ಒಬ್ಬ ಸಸ್ಯ ಸಂಶೋಧಕನಂತೆ ಉಳಿದುಬಿಟ್ಟೆ.

ನನಗೆ ಈ ಗ್ರಾಮದಲ್ಲಿ ಉಂಟಾದ ಎಲ್ಲಾ ರೀತಿಯ ಅವನತಿಯ ಕಾರಣ ತಿಳಿಯಬೇಕಾಗಿತ್ತು- ಅಂತಹ ಅನ್ವೇಷಣೆಯೇ ನನ್ನ ಭಾರತ ದರ್ಶನದ ಪ್ರಾಮುಖ್ಯ ಭಾಗವಾಗಿತ್ತು; ಭಾರತ ದರ್ಪಣದ ಜೋಡಣಾ ವಿಧಾನವಾಗಿತ್ತು.

ನನಗೆ ಈ ಎಲ್ಲರ ಕೂಡೆ ಸಂಭಾಷಿಸಬೇಕೆಂದೂ, ಜಯನಾಥರು ನನ್ನ ದ್ವಿಭಾಷಿಗಳಾಗಿ ನಿಲ್ಲಬೇಕೆಂದೂ ಕೇಳಿಕೊಂಡೆ; ಅವರನ್ನು ಒಪ್ಪಿಸಿದೆ.

ಹಾಗೆ ನಿಶ್ಚಯಿಸಿ, ಪುನಃ ಹೊಲಸಿನಿಂದ ನಾರುವ ಆ ಗುಡಿಸಲಿನೊಳಕ್ಕೆ ಮರಳಿ ಹೊಕ್ಕೆ. ಜಯನಾಥರ ಮುಖದಲ್ಲಿಯೂ ತಿರಸ್ಕಾರ ಕಾಣದಿರಲಿಲ್ಲ. ಆದರೆ ನನ್ನ ಪ್ರೇಮವು ಅವರಲ್ಲಿ ಬಲವಾಗಿತ್ತು. ಅದಕ್ಕಾಗಿ ಅವರು ನನ್ನನ್ನು ಹಿಂಬಾಲಿಸಿದರು.

ಇಲ್ಲೇ ಬೆಂಚಿನಲ್ಲಿ ಕುಳಿತು ಸ್ವಲ್ಪ ಸಹಾನುಭೂತಿಯಿಂದ ನನ್ನೆಡೆಗೆ ನೋಡುತ್ತಿದ್ದ ಮುದುಕನೋರ್ವನ ಬಳಿಯಲ್ಲಿ ಕುಳಿತೆ. ನನ್ನ ಸಂಭಾಷಣೆಗೆ ಮೊದಲಾಯಿತು. ನಾನು ಪ್ರೇಮ, ಸಹಾನುಭೂತಿಗಳಿಂದ ಒಂದೊಂದೇ ವಿಷಯ ಮಾತನಾಡುತ್ತಾ ಬಂದಂತೆಯೇ ಒಳಗಿದ್ದವರು ಇತರ ಎಲ್ಲ ಅಭಿರುಚಿಗಳನ್ನು ತ್ಯಜಿಸಿ, ನನ್ನ ಸುತ್ತುವರಿದು ಕುತೂಹಲದಿಂದ ಕೇಳುತ್ತ ನಿಂತರು.

ಆ ಗ್ರಾಮದ ಭೂಮಿಯಲ್ಲಿ ಬಹುಭಾಗವು ಕಮಲನಯನರು ಮತ್ತು ಅವರಂತಹ ಇತರ ಮೂವರ ಸೊತ್ತಾಗಿತ್ತೆಂದೂ, ಕೇವಲ ಸೇಕಡಾ 1 ಯಾ 2ರಷ್ಟು ಭೂಮಿ ಮಾತ್ರವೇ ಕೆಲವು ಸಣ್ಣ ಹಿಡುವಳಿದಾರರಿಗೆ ಸೇರಿತ್ತೆಂದೂ ತಿಳಿಯಿತು. ಉಳಿದ ಮೂವರೂ ಕೂಡಾ ಕಮಲನಯನರಂತೆಯೇ, ಹುಟ್ಟಿದ ಗ್ರಾಮವು ಕುಗ್ರಾಮವೆಂದು ತೊರೆದುಬಿಟ್ಟು ಮದ್ರಾಸಿನಲ್ಲಿ ನೆಲಸಿದ್ದಾರೆಂದೂ ಗೊತ್ತಾಯಿತು.

ಅಲ್ಲಿ ಸೇರಿದವರಲ್ಲಿ ಬಹುಜನರು ಈ ನಾಲ್ಕು ಮಂದಿ ಶ್ರೀಮಂತರಿಂದ ಭೂಮಿಯನ್ನು ಗೇಣಿಗೆ ಪಡೆದು, ಸಾಗುವಳಿ ಮಾಡುವವರಾಗಿದ್ದರು.

ಕಮಲನಯನರ ಕುಟುಂಬದ ಹಿಂದಿನ ಕತೆಗಳನ್ನೆಲ್ಲ ಆ ಮುದುಕ ಹೇಳಿದ. ಅವರ ತಂದೆ ವೈದ್ಯನಾಥ ರಾವ್ ಎನ್ನುವವರು ತುಂಬಾ ದಯಾಳುವೂ, ದೈವಭಕ್ತರೂ ಆಗಿದ್ದರು. ಅವರಿಗೆ ತಮ್ಮ ಒಕ್ಕಲಿಗರೆಂದರೆ ತುಂಬಾ ಪ್ರೇಮ. ಈ ಬಡಜನರ ಪ್ರತಿಯೊಂದು ಸುಖಕಷ್ಟಗಳಲ್ಲಿ ಅವರೂ ಭಾಗಿಯಾಗಿದ್ದರಂತೆ. ಸಾಗುವಳಿ ಮಾಡಲು ಅವಶ್ಯಬಿದ್ದಾಗ ಒಕ್ಕಲಿಗರಿಗೆ ಸಾಲವನ್ನೂ ಕೊಟ್ಟು ಆಧರಿಸುತ್ತಿದ್ದರು. ಆ ರೈತರು ಸದಾ ಕಷ್ಟಪಟ್ಟು ಹೊಲದಲ್ಲೇ ದುಡಿಯುತ್ತಾ, ಭೂಮಿಯಿಂದ ಉತ್ಪತ್ತಿ ತೆಗೆದು, ತಮ್ಮ ಜೀವನ ಸಾಗಿಸುವುದಲ್ಲದೆ ಧನಿಯ ಗೇಣಿಯನ್ನೂ ತೆರುತ್ತಿದ್ದರು. ಹಳ್ಳಿಯಲ್ಲಿ ಬೀಡಿ ಸಿಗರೇಟಾಗಲೀ, ಜುಗಾರಾಟವಾಗಲೀ, ಪೋಲಿತನ, ಕಳವು ಸುಲಿಗೆಗಳಾಗಲೀ ಇರಲಿಲ್ಲ. ರೈತರೆಲ್ಲ ವೈದ್ಯನಾಥರಾಯರ ನಾಯಕತ್ವದಲ್ಲಿ ಜೀವನ ಸಾಗಿಸುತ್ತಿದ್ದರು.

ಅವರ ಮರಣಾನಂತರ ಪೇಟೆಯ ಬೆಡಗು ಬಿನ್ನಾಣವನ್ನೇ ಬಯಸಿದ ಕಮಲನಯನರು ಮದ್ರಾಸಿಗೆ ತೆರಳಿದರು. ಈ ಬಡ ಒಕ್ಕಲಿಗರಿಗೆ ಗತಿಗೋತ್ರವಿಲ್ಲದಂತೆ ಮಾಡಿ ದೂರದ ಶಹರಿಗೆ ತೆರಳಬಾರದೆಂದು ತಾಯಿ ಕಣ್ಣೀರು

ಸುರಿಸಿ ಹೇಳಿದರೂ ಕೇಳಲೇ ಇಲ್ಲ. ಹೆಂಡತಿಯೂ ಅಂಥವಳೇ– ಬೆಡಗು ಬಿನ್ನಾಣದವಳು.

ಆ ಮುದುಕಿ ಕಣ್ಣೀರು ಸುರಿಸಿಯೇ ಜೀವಬಿಟ್ಟಳು. ಈ ಹಳ್ಳಿಯ ರೈತರೆಲ್ಲ ಅನಾಥರಾದರು. ದಾರಿದ್ರ್ಯ, ರೋಗರುಜಿನ, ಕಲಹ ಕಚ್ಚಾಟಗಳು- ಇವುಗಳಿಂದ ಅವರು ಹಣ್ಣಾದರು.

ಹೀಗೆ ತಮ್ಮ ಸುಖ, ಕಷ್ಟ ವಿಚಾರಿಸುವವರಿಲ್ಲದೆ ಸಹಾಯ ನೀಡಿ, ನೀತಿ ಕಲಿಸಿ ಆಧರಿಸುವವರಿಲ್ಲದೆ ಜನರು ಕಾತರಿಸಿದರು. ಅವರ ಮನಸ್ಸಿನಲ್ಲಿ ದೊಡ್ಡ ಒಂದು ಹಸಿವೆ ಮತ್ತು ತೃಷೆಯಿತ್ತು. ಹೊಟ್ಟೆಯ ಹಸಿವೆಗೆ ಆ ಹಸಿವೆ ಕೂಡಿ ಬೆಳೆದಿತ್ತು. ಆ ಹಸಿವೆ– ತನ್ನ ಮೇಲೆ ಪ್ರೇಮ ಸಹಾನುಭೂತಿ ತೋರುವವರು ಬೇಕು ಎಂಬ ಹಸಿವೆ.

ಅದೇ ಸಮಯಕ್ಕೆ ಸರಿಯಾಗಿ, ಕಮ್ಯುನಿಸ್ಟ್ ಪಾರ್ಟಿಯ ಕೆಲವು ಕಾರ್ಯಕರ್ತರು ಅಲ್ಲಿಗೆ ಬಂದು ಜನರ ಮನಸ್ಸನ್ನು ಕೆರಳಿಸತೊಡಗಿದರು. ಬಡಜನರ ಮಿತ್ರರೆಂಬಂತೆ ಅವರು ನಟಿಸಿ, ಅವರಲ್ಲಿ ಮೊದಲಿದ್ದ ನಂಬುಗೆ, ವಿಶ್ವಾಸಗಳ ಕೋಟೆಯನ್ನೇ ಕುಸಿದು ಹಾಕಿ, ಸಂಶಯ, ದ್ವೇಷ, ತಿರಸ್ಕಾರಗಳ ಹೊಸ ತತ್ವವನ್ನು ಬೋಧಿಸಿದರು. ಇದರಿಂದಲೇ ಈ ಬಡ ಜನರ ವಿಮೋಚನೆಯೆಂದು ಸಾರಿದರು. ಕಮ್ಯುನಿಸ್ಟ್ ತತ್ವ ಬಂದರೆ ಭೂಮಿಯೆಲ್ಲಾ ಈ ಒಕ್ಕಲಿಗರದೇ ಆಗುವುದೆಂದೂ, ಆದ್ದರಿಂದ ದೇಶಾದ್ಯಂತ ಕಮ್ಯುನಿಸ್ಟ್ ತತ್ವವನ್ನು ಬೆಳೆಸುವ ಬಗ್ಗೆಗಿ ಎಲ್ಲರೂ ಕಮ್ಯುನಿಸ್ಟ್ ಪಾರ್ಟಿಗೆ ಸೇರಬೇಕೆಂದೂ ಒತ್ತಾಯಿಸತೊಡಗಿದರು. ಅಲ್ಲದೆ ಧನಿಗಳಿಗೆ ಮುಂದೆ ಗೇಣಿ ತೆರಬೇಕಾಗಿಲ್ಲವೆಂದೂ, ಆ ಹಣವನ್ನೆಲ್ಲಾ ಕಮ್ಯುನಿಸ್ಟ್ ಪಾರ್ಟಿಗೇ ತೆತ್ತರೆ, ಅವರ ಉದ್ದೇಶ ಸಾಧನೆ ಬೇಗನೇ ಆಗುವುದೆಂದೂ ಬೋಧಿಸಿದರು. ಚುನಾವಣೆಯಲ್ಲಿ ಕಮ್ಯುನಿಸ್ಟರಿಗೇ ಮತ ನೀಡಬೇಕೆಂದೂ ಉಪದೇಶಿಸಿ, ಪ್ರಚಾರ ಮಾಡಿದರು.

ಆ ಬಡ ಜನರಿಗೆ ಇದೆಲ್ಲ ಸಹಜವಾಗಿ ಪಥ್ಯವಾಗಿ ತೋರಿರಬೇಕು- ಧನಿಗಳಿಗೆ ಗೇಣಿ ಸಂದಾಯ ನಿಲ್ಲಿಸಿದರು. ಹಣ ಕೈಯಲ್ಲಿ ಬಂದೊಡನೆಯೇ ಮದ್ಯಸೇವನೆ, ಜುಗಾರಾಟ, ಪೋಲಿತನ, ಅನಾಚಾರಗಳು ವೃದ್ಧಿಯಾದುವು. ತಾನೂ ಕಮ್ಯುನಿಸ್ಟ್ ಪಾರ್ಟಿಯವನೆಂದುಕೊಂಡು ಎಷ್ಟೋ ಜನ ಕೀಳು ಮನೋವೃತ್ತಿಯವರು ಇಂತಹ ದುರಾಚಾರಗಳನ್ನು ಬೆಂಬಲಿಸಿ ತಾವೂ ಅದರ ಲಾಭಗಳನ್ನು ಪಡಕೊಂಡರು.

ಗೇಣಿ ದೊರೆಯದ ಧನಿಗಳು ಕೋರ್ಟಿನಲ್ಲಿ ದಾವೆ ಹೂಡಿದರು. ರೈತರನ್ನು ಬೆಂಬಲಿಸಿ, ಪಾರ್ಟಿಯ ಕೆಲವು ಮುಖಂಡರು, ಕೋರ್ಟಿಗೆ ಎಡತಾಕಿದರು. ವ್ಯಾಜ್ಯಗಳಲ್ಲಿ ರೈತರು ಸೋತರು. ಗೇಣಿ ತೆರಬೇಕೆಂದಾಯಿತು. ಇದರಿಂದ ಆ ಪಾರ್ಟಿಯವರ ಪ್ರಾಬಲ್ಯವೇನೋ ಕಡಿಮೆಯಾಯಿತಾದರೂ, ಪೂರ್ಣ ಹೋಗಲಿಲ್ಲ. ರೈತರು ತಾವು ವೃದ್ಧಿಸಿಕೊಂಡ ದುರಭ್ಯಾಸಗಳನ್ನು ಮತ್ತಷ್ಟು ಬೆಳೆಸಿದರು. ರೈತರೆಲ್ಲ ವ್ಯಾಜ್ಯ ದಾಖಲಾಗಿ ಅದರ ತೀರ್ಪಾದ ನಂತರವೇ ಗೇಣಿಯನ್ನು ಕಂತು ಪ್ರಕಾರ ಕಟ್ಟತೊಡಗಿದರು. ಇದರಿಂದ ಧನಿ, ಒಕ್ಕಲಿಗರ ಸಂಬಂಧವು ಮತ್ತಷ್ಟು ಕೆಟ್ಟಿತು.

ಇಂದು ದುಡಿತ ಯಾರಿಗೂ ಬೇಕಾಗಿಲ್ಲ. ಸುಮ್ಮಸುಮ್ಮನೆ ಸೋಮಾರಿಗಳಾಗಿ, ಎಲ್ಲೆಲ್ಲ ಅಲೆದಾಡುತ್ತಾ, ಏನೆಲ್ಲ ಮಾಡುತ್ತ ಹಗಟೆ ಹೊಡೆಯುತ್ತ, ಜುಗಾರಾಡುತ್ತ, ಮನೆಯ ಗಂಡಸರು ಜೀವನ ವ್ಯರ್ಥ ಮಾಡುತ್ತಿದ್ದಾರೆ. ಮನೆಯ ಹೆಂಗುಸರು ಮತ್ತು ಮಕ್ಕಳು ಕೂಲಿಗೆ ಹೋಗಿ ಜೀವನ ಮಾಡುತ್ತಿದ್ದಾರೆ.

ಈ ರೈತರು ತಮ್ಮ ಭೂಮಿಗಳಲ್ಲಿ ಸರಿಯಾಗಿ ಸಾಗುವಳಿ ಮಾಡಿದರೂ ಇಡೀ ವರ್ಷಕ್ಕೆ ಅವರಿಗೆ ಉದ್ಯೋಗವಿಲ್ಲ. ತಮ್ಮ ಭೂಮಿಯಿಂದ ಗೇಣಿ ಕೊಟ್ಟು ಉಳಿಯುವ ಮೌಲ್ಯವು ಅವರ ಇಡೀ ವರ್ಷದ ಉತ್ತಮ ಜೀವನ ಸಾಗಿಸಲು ಸಾಕಾಗುವಂತಿಲ್ಲ. ಅಂಥಾದ್ದರಲ್ಲಿ ಈಗಂತೂ ಬಹುಸಮಯವೂ ತಿರುಗಾಡುವುದರ ಹೊರತಾಗಿ ಬೇರೆ ಉದ್ಯೋಗವು ಅವರಿಗಿಲ್ಲ.

ಶ್ರೀಮಂತರು ಗ್ರಾಮಗಳಿಂದ ತೆರಳಿದ್ದರಿಂದ ಗಂಡಸರ ಕೂಲಿ ಜೀವನಕ್ಕೂ ಆಸ್ಪದವು ಕಡಿಮೆಯಾಯಿತು. ಅಲ್ಲದೆ, ಹಳ್ಳಿಯಲ್ಲಿ ಮೊದಲು ಉಪಯುಕ್ತವಾದ ವಿವಿಧ ವೃತ್ತಿಗಳನ್ನು ಮಾಡಿಕೊಂಡಿದ್ದವರೆಲ್ಲ ಬಡವರಾದರು. ಅಕ್ಕಸಾಲಿಗರು, ಕಮ್ಮಾರರು, ನೇಕಾರರು, ಬಡಗಿಯವರು, ಮಡಿವಾಳರು, ನಾಪಿತರು, ಕಲ್ಲುಕುಟ್ಟಿಗರು ಮೊದಲಾದ ವಿವಿಧ ವೃತ್ತಿಯವರು ಶ್ರೀಮಂತರ ಬೆಂಬಲವಿಲ್ಲದೆ ಬಡವಾದರು. ಅವರ ಮಾನಸಿಕ ಸ್ಥೈರ್ಯ ಕೆಟ್ಟು ಹೋಯಿತು. ನೀತಿಯ ನೆಲಗಟ್ಟೂ ನಾಶವಾಯಿತು.

ನಂತರ ಹಳ್ಳಿಯ ಉಳಿದ ರೈತರು ಅವರಿಗೆ ಏನಾದರೂ ಕೆಲಸ ಕೊಟ್ಟರೂ, ಅವರು ಅದರಲ್ಲೇ ವಂಚನೆ ಮಾಡುತ್ತಾ, ಅತಿಯಾದ ಪ್ರತಿಫಲ ಕೇಳುತ್ತ,

ಹೇಳಿದ ಸಮಯಕ್ಕೆ ಕೆಲಸ ಪೂರೈಸಿ ಕೊಡದೆ, ತಮ್ಮ ವೃತ್ತಿಯ ಬಲವು ಇನ್ನಷ್ಟು ಕುಂದುವಂತೆ ಮಾಡಿದರು. ಇದರಿಂದ ಆ ಗ್ರಾಮದ ಆಕರ್ಷಣೆಯು ಮತ್ತಷ್ಟು ಕಡಿಮೆಯಾಯಿತು.

ವಿವಿಧ ರೀತಿಯ ವೃತ್ತಿಯವರೂ, ಹೀಗೆ ಬಡವಾಗಿ ಮದ್ರಾಸಿನಂತಹ ನಗರಗಳಿಗೆ ತೆರಳಿ, ಅಲ್ಲಿಯ ನಿರುದ್ಯೋಗಿಗಳ ಸಂಖ್ಯೆಯನ್ನು ಹೆಚ್ಚಿಸತೊಡಗಿದರು.

ಸಿಲ್ವರ್, ಈ ಎಲ್ಲ ವಿಚಾರಗಳು, ಆ ಹಳ್ಳಿಯ ಚರಿತ್ರೆಯನ್ನು ತಿಳಿಸಿದ ಆ ವ್ಯಕ್ತಿಗಳಿಂದ ನನಗೆ ತಿಳಿಯಿತು.

ಮೊದಲು ಧನಿಗಳು ಮನೆ ಹೊರಟರೆಂದರೆ, ಓಡೋಡಿ ಬಂದು ಅವರನ್ನು ಗೌರವಿಸುತ್ತಿದ್ದರೆಂದೂ, ಇಂದು ಅದೇ ಧನಿಯ ಮಗನು ಬಂದಾಗ ಯಾರೂ ಎದ್ದು ನಿಲ್ಲಲೂ ಸಿದ್ಧರಿಲ್ಲವೆಂದೂ ಆ ವೃದ್ಧನು ಹೇಳಿದನು. ನನಗಾ ಮಾತು ಬಹಳವಾಗಿ ನಾಟಿತು. ಕಮಲನಯನರು ವಿದ್ಯಾವಂತರಾಗಿದ್ದು, ತಮ್ಮ ಅಗಾಧ ಸಂಪತ್ತನ್ನು ಪಟ್ಟಣದಲ್ಲಿ ಕುಳಿತು, ಕೇವಲ ಧೂಳಿ ಧೂಸರಿತಕ್ಕೆ ವ್ಯಯಿಸುವುದಕ್ಕಿಂತ, ಈ ಹಳ್ಳಿಯ ಅಭಿವೃದ್ಧಿಗೆ ಮನಸ್ಸು ಮಾಡಿ, ಕೆಲವು ಉದ್ಯೋಗಗಳನ್ನೂ ಅಲ್ಲಿ ಪ್ರಾರಂಭಿಸಿ ಅನೇಕ ವಿದ್ಯಾವಂತ ಯುವಕರಿಗೆ ಉದ್ಯೋಗ ಸಿಗುವಂತೆ ಮಾಡಿದ್ದರೆ ಎಷ್ಟು ಚೆನ್ನಾಗಿತ್ತು ಎಂದು ನನಗನಿಸಿತು.

ನೋಡು ಗೆಳೆಯಾ, ಅವರ ಮನೋಭಾವನೆಯನ್ನು! ಈ ಮನೆಯನ್ನು ಸುಮ್ಮನೇ ಪಾಳುಬಿಡುವುದಕ್ಕಿಂತ ಈ ಬಡ ಒಕ್ಕಲಿಗರಲ್ಲಿ ಕೆಲವರ ವಾಸ್ತವ್ಯಕ್ಕಾದರೂ ಬಿಡಬಾರದೇಕೆ ಎಂಬುದಾಗಿ ನಾನು ಕಮಲನಯನರ ಕೂಡೆ ಅವರು ಮದ್ರಾಸಿಗೆ ತೆರಳುವ ಮೊದಲು ಪ್ರಶ್ನಿಸಿದ್ದೆ. ಇಂತಹ ಬಿಕನಾಸಿಗಳಿಗೆ ಈ ಮನೆಯನ್ನು ಕೊಡುವುದಕ್ಕಿಂತ ಅದು ಬಿದ್ದೇ ಹೋಗುವುದು ವಾಸಿ ಎಂದವರು ಹೇಳಿದ್ದರು.

ಅವರು ಬಿಕನಾಸಿಗಳಾಗುವಂತೆ ಮಾಡಿದವರು ಯಾರು ಸಿಲ್ವರ್? ಇವರೇ ಅಲ್ಲವೇ ? ಅಲ್ಲವಾದರೆ, ಕ್ಷುದ್ರ ಜೀವನ ಮಾಡುತ್ತಿರಲು, ಇವರಿಗೆ ಈ ಬಹುಬೆಲೆಯ ಕೇಡಿಲ್ಲಕ್ ಕಾರೇತಕ್ಕೆ? ಜೀವನವನ್ನೆಲ್ಲ ಈ ಸಿನೆಮಾ ತಾರೆಯರ ಧ್ಯಾನದಲ್ಲೇ ಕಳೆಯುತ್ತಾರಲ್ಲ ? ಅದರಿಂದ ದೊರೆಯುವ ಮೌಲ್ಯವಾದರೂ

ಏನು? ಇಡಿಯ ಭಾರತವೇ ಸುಟ್ಟು ಭಸ್ಮವಾದರೂ, ಈ ಕಮಲನಯನರ ಹುಚ್ಚು ಹೋಗುವಂತಿಲ್ಲ. ಆ ಕೃತ್ರಿಮ ಜೀವನದಲ್ಲೇ ಅವರು ಜೀವನದ ಪರಮ ಸತ್ಯವಿದೆಯೆಂದು ಭ್ರಾಂತಿ ಪಟ್ಟುಕೊಳ್ಳುತ್ತಾರೆ.

ಏನಾಯಿತು ಗೊತ್ತೆ? ನಾನಿಷ್ಟು ಪ್ರೇಮ ತೋರಿದ್ದೇ ತಡ–ನಮಗಿಬ್ಬರಿಗೂ ಮಧ್ಯಾಹ್ನದ ಊಟದ ಏರ್ಪಾಡು ಮಾಡಲು ಆ ಬಡ ಜನರು ಮುಂದಾದರು. ಅವರೊಂದಿಗೆ ಉಳಕೊಳ್ಳಲು ನನಗೂ ಸಂತೋಷವಿತ್ತು.

ಯಾರಲ್ಲಿ ಊಟವೆಂಬ ವಿಮರ್ಶೆ ನಡೆದು, ಇದ್ದ ಮಟ್ಟಿನಲ್ಲಿ ಸ್ವಚ್ಛತೆಯನ್ನು ಕಾಪಾಡುತ್ತಾ, ಒಳ್ಳೆಯ ರೀತಿಯಲ್ಲಿರುವ ವೇಲಾಯುಧನ್ ಎಂಬ ಯುವಕನ ಮನೆಗೆ ನಾವು ಹೋಗಬೇಕೆಂದು ಗೊತ್ತಾಯಿತು. ಬೇಕಾದ ಏರ್ಪಾಡು ಮಾಡಲು ಆ ಯುವಕನು ಮುಂದೆ ತೆರಳಿದ.

ನಾನು ಆ ಹಳ್ಳಿಯ ಹೊಲಗಳನ್ನೂ ಇತರ ಕೆಲವರ ಗುಡಿಸಲುಗಳನ್ನೂ ನೋಡುವ ಅಪೇಕ್ಷೆ ಸೂಚಿಸಿದೆ.

ಒಂದು ಗಂಟೆಗೆ ಮೊದಲು ಕೇವಲ ಮೃಗಗಳಂತೆ ತೋರುತ್ತಿದ್ದ ಅವರೀಗ ನನಗೆ ಮಾನವರಾಗಿ ಕಂಡರು. ಅವರಲ್ಲಿ ಕೆಲವರೊಂದಿಗೆ ನಾನು ಕೆಲವಾರು ಹೊಲಗಳನ್ನು ಸುತ್ತಾಡಿದೆ. ಹಿಂದೆ ಉಳಿದವರು ನಮಗೆ ಭಕ್ತಿ ಗೌರವಗಳಿಂದ ನಮಸ್ಕರಿಸಿ ಹಿಂದೆಯೇ ಉಳಿದರು.

ಸಿಲ್ವರ್, ಈ ವೆಲ್ಲೂರಿನ ಬಳಿಯ ಭೂಮಿಯಾದರೋ ಎಂತಹ ಫಲವತ್ತಾದ್ದೆಂದು ಮಾಡಿದ್ದಿ? ಇದು ಕರಿಮಣ್ಣು. ಕೇವಲ ಕೆಲವೇ ಇಂಚು ಮಳೆ ಬಿದ್ದರೂ ಈ ಭೂಮಿಯಲ್ಲಿ ತೇವವುಳಿಯುವುದು.

ಭತ್ತ, ರಾಗಿ, ಜೋಳ, ನೆಲಕಡಲೆ, ಟೊಮೆಟೋ, ಮುಲ್ಲಂಗಿ, ತೊಗರಿ, ಕಡಲೆ, ಹೆಸರು ಮೊದಲಾದ ಅನೇಕ ತೆರನಾದ ಕೃಷಿಗಳನ್ನು ಇಲ್ಲಿ ಮಾಡಬಹುದಾಗಿದೆ.

ಆದರೆ ಈ ರೈತರು, ಗೊಬ್ಬರ ಹಾಕುವುದನ್ನು ಕಂಡರಿಯರು. ಸ್ವಲ್ಪ ಸೆಗಣಿಯನ್ನೇನೋ ಗದ್ದೆಗೆ ಹಾಕುವರು. ಆದರೆ ಗೊಬ್ಬರ ತಯಾರಿಸುವ ಕ್ರಮವೇ ಇವರಿಗೆ ತಿಳಿದಿಲ್ಲ. ಅಲ್ಲದೆ ಆಧುನಿಕವಾದ ಯಾವ ಕೃಷಿ ಪದ್ಧತಿಯೂ ಅವರಿಗೆ ತಿಳಿದಿಲ್ಲ. ಕೇವಲ ಭೂಮಿಯ ಸಾರದಿಂದಲೇ ಅವರ ಕೃಷಿ ನಡೆಯುವುದು ಹೊರತಾಗಿ ಬೇರೇನಲ್ಲ. ಆಧುನಿಕ ವೈಜ್ಞಾನಿಕ ವಿಧಾನ ಈ ರೈತ

ರಿಗೆ ಕಲಿಸಿದರೆ ಇವರ ಆರ್ಥಿಕ ಸಮಸ್ಯೆಯು ಬಹಳಷ್ಟು ಬಗೆಹರಿಯಬಹುದು.

ಈ ಬಡಜನರ ಗುಡಿಸಲುಗಳನ್ನು ನೋಡಿ ನನಗೆ ನಿಜವಾಗಿ ಕಣ್ಣೀರೊ ಸರಿತು. ಕೇವಲ ಮಣ್ಣಿನ ನೆಲಕ್ಕೆ ಒಂದಿಷ್ಟು ಸೆಗಣಿ ಸಾರಿಸಿದ್ದರು. ಗೋಡೆಗೆ ಗಾರೆ ತೆಗೆದಿದ್ದಿಲ್ಲ. ಕೆಲವು ಮಣ್ಣಿನ ಹೆಂಟೆಗಳನ್ನು ಒಂದರ ಮೇಲೊಂದು ಇಟ್ಟು ಆ ಗೋಡೆಯನ್ನು ರಚಿಸಿದಂತಿತ್ತು. ಓರೆಕೋರೆಯಾಗಿ, ಪೀಸಾ ನಗರದ ಮಾಲುವ ಗೋಪುರದಂತಿದ್ದ ಆ ಗೋಡೆಗಳು ಎಲ್ಲಿ ಬೀಳುವವೋ ಎಂದು ನನಗೆ ಕಾಣುತ್ತಿತ್ತು. ಆದರೆ ದೇವರಿಗೆ ಈ ಬಡವರ ಮೇಲೆ ವಿಶೇಷ ಕನಿಕರ ವಿದ್ದಿರಬೇಕು. ಆ ಗ್ರಾಮದಲ್ಲಿ ಒಂದೇ ಒಂದು ಗೋಡೆ ಬಿದ್ದಿಲ್ಲವೆಂದು ಅವರು ಹೇಳಿದರು.

ಗೋಡೆಗೆ ಕಿಟಿಕಿಯೆಂಬುದನ್ನು ಅವರರಿಯರು. ಒಂದು ದ್ವಾರ-ಅಂದರೆ ಬಾಗಿಲು ಮಾತ್ರವಿದೆ. ಅಪರೂಪವಾಗಿ, ಗೋಡೆಯು ಇನ್ನೊಂದು ಮಗ್ಗುಲಿಗೆ ಸಣ್ಣ ತೂತಿರುವುದೂ ಇದೆ.

ಗಾಳಿ ಬೆಳಕು ಬಾರದಂತೆ ಏತಕ್ಕೆ ಹೀಗೆ ಇಟ್ಟಿದ್ದೀರಿ ಎಂದು ನಾನು ಹೆಡ್ಡನಾಗಿ ಕೇಳಿದೆ. "ಬಡಜನರಾದ ನಾವು ಚಳಿಗಾಲದಲ್ಲಿ, ಮಳೆಗಾಲದಲ್ಲಿ, ಛಳಿ ಅಥವಾ ಥಂಡಿಯಲ್ಲಿ ಸಾಯಬೇಕೇ ಆಯ್ಯಾ" ಎಂದವರು ಇತರ ಸಹಸ್ರಾರು ಭಾರತದ ಹಳ್ಳಿಗರಂತೆಯೇ ಉತ್ತರ ಕೊಟ್ಟರು.

ಹರಿದು ಹೋಗಿ ಚಿಂದಿಯಾದ್ದಕ್ಕಾಗಿ ಸಾವಿರ ತೇಪೆಗಳನ್ನು ಹಾಕಿ, ಸಾಬೂನು ನೀರುಗಳನ್ನು ಅನೇಕ ವರ್ಷಗಳಿಂದಲೇ ಕಾಣದೆ, ಬೆವರು, ಕೊಳೆ, ಧೂಳುಗಳಿಂದ ಪೂರ್ಣವಾಗಿ ಮುಳುಗಿಹೋದ ಆ ಬಡ ಜನರ ಬಟ್ಟೆಬರೆಗಳನ್ನೂ ನೋಡಿದೆ. ಆ ಗುಡಿಸಲುಗಳಲ್ಲಿ ಕಂಡ ಅವರ ಬಟ್ಟೆಗಳ ಸಮೀಪಕ್ಕೆ ಸರಿದಾಗಲೇ ಅವುಗಳ ಜಿಡ್ಡು ವಾಸನೆ 'ಗಂ' ಎಂದು ಮೂಗಿಗೆ ಬಡಿಯುತ್ತಿತ್ತು.

ನೆಲದಲ್ಲೆಲ್ಲಾ ಕೋಳಿಯ ಹಿಕ್ಕೆ-ಅಲ್ಲಲ್ಲಿ ಮಕ್ಕಳ ಮಲಮೂತ್ರ ವಿಸರ್ಜನೆಗಳು-ಲಕ್ಷೋಪಲಕ್ಷ ನೊಣಗಳ ಅಜೇಯ ಹಿಂಡು, ಗೋಡೆಯ ಸಂದುಗೊಂದುಗಳಲ್ಲಿ ಅವಿತು ಕುಳಿತ ಮಿಲಿಯಗಟ್ಟಲೆ ತಗಣೆಗಳ ಸೇನೆ-ಇದನ್ನೆಲ್ಲ ನಾನು ನೋಡಿದೆ. ಮನೆಯ ಒಳಗೇನೇ ಕೆಲವರು ತಮ್ಮ ದನಕರುಗಳನ್ನೂ ಕಟ್ಟಿ ತಾವು ಆ ಪಶುಗಳಿಗಿಂತ ವಿಶೇಷ ಭಿನ್ನವಿಲ್ಲವೆಂದು ತೋರುತ್ತಿದ್ದರು. ಅವುಗಳ ಗಂಜಳ ಮತ್ತು ಮೂತ್ರಗಳೂ ಅಲ್ಲೇ ಇದ್ದುವು. ಅವುಗಳಿಗೆ ಹಾಕಿದ ಹುಲ್ಲು, ಬೈಹುಲ್ಲುಗಳೂ ಸೆಗಣಿಯೊಂದಿಗೆ ಮಿಶ್ರವಾಗಿ ಬಿದ್ದಿದ್ದುವು.

ಆ ದರಿದ್ರರ ಮಕ್ಕಳನ್ನು ನೋಡಿದೆ. 3—4 ವರ್ಷದೊಳಗಿನ ಪ್ರಾಯದ ಮಕ್ಕಳಿಗೆ ಹೆಚ್ಚಾಗಿ ಏನೂ ಬಟ್ಟೆ ಬರೆ ಇರುವುದಿಲ್ಲ. ಅವರು ದೇವರು ಸೃಷ್ಟಿಸಿದ ತೆರನಾಗಿಯೇ ಬತ್ತಲೆ ಇರುತ್ತಾರೆ. ಮುದ್ದು ಮುದ್ದಾದ ಮಕ್ಕಳೂ, ಸ್ನಾನವಿಲ್ಲದೆ ಕೊಳೆಯಿಂದಲೇ ಅಲಂಕೃತರಾಗಿದ್ದರು. 6 ಇಂಚಿನಷ್ಟು ಎತ್ತರಕ್ಕೆ ಧೂಳು ತುಂಬಿದ ರಸ್ತೆಯೇ ಆ ಬಡಪಾಯಿ ಮಕ್ಕಳ ಆಟದ ಮೈದಾನು. ಕಲ್ಲು, ಕೋಲು, ಕಡ್ಡಿಗಳೇ ಅವರ ಆಟದ ಒಡವೆಗಳು. ಮುಖವೆಲ್ಲ ಸಿಂಬಳ, ಧೂಳು, ಬೆವರುಗಳ ಸಮ್ಮಿಶ್ರದಿಂದ ಕರಿಯ ಬಣ್ಣ ಬಳೆದಂತೆ ಕಾಣುತ್ತಿದ್ದರು.

ಹಲವು ಮಕ್ಕಳಿಗೆ ಊದಿಕೊಂಡ ಬಹಳ ದೊಡ್ಡ ಹೊಟ್ಟೆಗಳಿರುವುದನ್ನು ನೋಡಿದೆ. ಊಟಕ್ಕಿಲ್ಲದ ಈ ಪರದೇಶಿ ಮಕ್ಕಳ ಹೊಟ್ಟೆ ಇಷ್ಟು ದೊಡ್ಡದಾಗ ಬೆಳೆಸಿದ ಆಹಾರವಾದರೂ ಯಾವುದೆಂದು ಮೊದ ಮೊದಲು ಕೆಲವು ಹಳ್ಳಿಗಳಲ್ಲಿ ನಾನು ಆಶ್ಚರ್ಯಪಟ್ಟಿದ್ದೆ. ಆದರೆ ಈಗ ಅದು ಸಾಮಾನ್ಯ ದೃಶ್ಯವಾಗಿತ್ತು. ಅವರ ಹೊಟ್ಟೆಯೊಳಗೆ ಪಿತ್ತಜನಕಾಂಗವು ಊದಿಕೊಂಡದ್ದು, ಇಲ್ಲವೇ ಜಠರದೊಳಗೆ ನೂರಾರು ಎರೆ ಹುಳಗಳು ಮನೆ ಮಾಡಿಕೊಂಡದ್ದು–ಇದರಿಂದಲೇ, ಅವರ ಹೊಟ್ಟೆ ಹಾಗಾಗುವುದು. ಕೆಲವು ಮಕ್ಕಳ ಕಾಲುಗಳು ಬಿಲ್ಲಿನಂತೆ ಬಾಗಿರುತ್ತವೆ.

ನಗುನಗುತ್ತ ಆಟವಾಡಿಕೊಂಡಿರಬೇಕಾಗಿದ್ದ ಅಂತಹ ಮಕ್ಕಳು ಕರುಣಾಜನಕವಾಗಿ ನಮ್ಮೆಡೆಗೆ ನೋಡುತ್ತಾ ಏನನ್ನೋ ನಿರೀಕ್ಷಿಸುವಂತಿದ್ದುವು. ಅವರ ದೇಹದಲ್ಲಿ ಚಟುವಟಿಕೆಯೇ ಇರಲಿಲ್ಲ.

ಕೆಲವು ಎಳೆ ಮಕ್ಕಳನ್ನು ನೋಡಿದೆ—ವೃದ್ಧರಂತೆ ಎಲುಬಿನ ಹಂದರವಾಗಿ, ಅವರ ಚರ್ಮವೆಲ್ಲ ಸುಕ್ಕುಗಟ್ಟಿ ಹೋಗಿತ್ತು.

ಒಂದು ಗುಡಿಸಲಲ್ಲಿ, ಈ ಗ್ರಾಮಕ್ಕೆ ಡಾಕ್ಟರರಿಲ್ಲವೇ ಎಂದು ಕೇಳಿದೆ. 'ಇದ್ದಾರೆ ಸ್ವಾಮೀ' ಎಂದರು. ಎಲ್ಲಿ ಎಂದು ಕೇಳಿದೆ. 10 ಮೈಲು ದೂರದ ವೆಲ್ಲೂರಿನಲ್ಲಿ ಎರಡು ಆಸ್ಪತ್ರೆಗಳಿದ್ದಾವಂತೆ. ಅಲ್ಲಿರುವ ಡಾಕ್ಟರರೇ ಅವರ ಗ್ರಾಮಕ್ಕೆ ಡಾಕ್ಟರರು. "ನೀವಷ್ಟು ದೂರ ಹೇಗೆ ಹೋಗುತ್ತಿದ್ದೀರಿ?" ಎಂದು ಕೇಳಿದೆ. "ನಡೆದೇ ಹೋಗುತ್ತೇವೆ" ಎಂದು ಹೇಳಿದರು. "ಅಯ್ಯಯ್ಯೋ, ನಿಮ್ಮ ದಿನದ ಸಂಬಳವೆಲ್ಲ ಬಿಟ್ಟುಕೊಟ್ಟು ಈ ಔಷಧಿಗಾಗಿ 10 ಮೈಲು ನಡೆಯುತ್ತೀರಾ? ದಿನವೆಲ್ಲ ಇದೇ ಕೆಲಸವಾಯಿತಲ್ಲಾ?" ಎಂದು ನಾನು ಕೇಳಿದೆ. "ಹೌದು ಬುದ್ಧೀ, ಮತ್ತೇನು ಮಾಡಲಿ?" ಎಂಬುದಾಗಿ

ಒಪ್ಪಾತ ಹೇಳಿದ. ಆಗ ಒಬ್ಬಳು ಹೆಂಗಸು ನಡುವೆ ಬಾಯಿ ಹಾಕಿ "ಅವರು ಇಲ್ಲಿದ್ದರೂ ದುಡಿಯುತ್ತಾರೇನು? ಸುಮ್ಮನೆ ತಿರುಗಾಡುತ್ತಾರೆ. ದುಡಿಯುವುದು ನಾವು" ಎಂದು ಹೇಳಿಬಿಟ್ಟಳು. ನಾನು ಅವಳೆಡೆಗೆ ತಿರುಗಿದೆ. ಒಂದು ರೀತಿ ಅಣಕವಾಡುತ್ತಾ ಅವಳು ಹೇಳಿದ್ದಳು. ಆದರೆ ಆ ಮಾತುಗಳ ಹಿಂದೆ ಆ ಬಡಪಾಯಿಗಳ ಅಜ್ಞಾನದಿಂದ ಉದ್ಭವಿಸಿದ ಕಷ್ಟ ಪರಂಪರೆಗಳ ಚರಿತ್ರೆಯೆಲ್ಲ ಆಕೆಯ ಮುಖದಲ್ಲಿ ಚಿತ್ರಿತವಾಗಿದ್ದಂತೆ ನನಗೆ ಕಂಡಿತು. "ಹೌದು ತಂಗಿ, ಈ ಗೆಳೆಯರು ಬಹಳ ಆಲಸಿಗರಾಗಿದ್ದಾರೆ. ನಮ್ಮೂರಿನಲ್ಲಿ ಗಂಡಸರಾಗಲೀ ಹೆಂಗುಸರಾಗಲೀ ಹೀಗೆ ಮೈಗಳ್ಳರಾಗಿರುವುದಿಲ್ಲ" ಒಂದು ಆಳವಾದ ಸಂವೇದನೆಯಿಂದ ಮರು ಸ್ವರದಲ್ಲಿ ಹೇಳಿದೆ. ಜಯನಾಥರು ಅದನ್ನು ಭಾಷಾಂತರ ಮಾಡಿ ಹೇಳಿದೊಡನೆಯೇ ಎಲ್ಲ ಗಂಡಸರೂ ನಾಚಿ ತಲೆ ಬಾಗಿದರು.

ಆದರೆ ಅವ್ವರಲ್ಲಿ ಒಬ್ಬ ತಲೆಯೆತ್ತಿ "ಆದರೆ ನಮಗೆ ಮದ್ದೇ ತರಬೇಕಾಗುವುದಿಲ್ಲ ಸ್ವಾಮಿ" ಎಂದ. "ಅದಷ್ಟೇ. ನಿಮ್ಮ ಮಕ್ಕಳನ್ನು ನೀವು ಹೀಗೆ ಸಾಯ ಬಿಡುತ್ತೀರಿ ಎನ್ನುವಾಗ ಮದ್ದಿನ ಆವಶ್ಯಕತೆಯೇನು?" ಎಂದು ನಾನು ಚುಚ್ಚಿ ಮಾತನಾಡಿದೆ. ಅವರ ಮನಸ್ಸನ್ನು ನನಗೆ ಕೆರಳಿಸಬೇಕಾಗಿತ್ತು. "ಹಾಗಲ್ಲ ದೊರೆಗಳೇ, ನಾವು ಸೌಖ್ಯವಿಲ್ಲದಾಗ ಇಲ್ಲಿಯ ಮಾರಿಗುಡಿಗೆ ಒಂದು ಕೋಳಿಯ ತಲೆಗಡಿದು ಬಲಿ ಕೊಡುತ್ತೇವೆ" ಎಂದ. "ಏನೋಪ್ಪ !" ಎಂದೆ ನಾನು. ನನಗದು ಅರ್ಥವಾಗಲಿಲ್ಲ. ನನಗೇಕೋ ಅಸಹನೀಯ ವೇದನೆಯಾಗುತ್ತಿತ್ತು. ನಾನು ಅಲ್ಲಿ ನಿಲ್ಲಲಾರದೆ ಇನ್ನೊಂದೆಡೆಗೆ ಹೋದೆ.

ಒಂದೊಂದು ಬಡ ಕುಟುಂಬಕ್ಕೆ ಆರರಿಂದ ತೊಡಗಿ ಹನ್ನೆರಡರ ತನಕ ಮಕ್ಕಳಿದ್ದರು. ಈಗಲೇ ಅಂತಹ ಬಡತನವಿರಲು ಈ ಮಕ್ಕಳು ದೊಡ್ಡವರಾದಾಗ ಪರಿಸ್ಥಿತಿ ಹೇಗಾದೀತು ಎಂಬುದಾಗಿ ನಾನು ಚಿಂತಿಸಿದೆ. ಆದರೆ ನನ್ನ ಚಿಂತೆಯಿಂದ ಫಲವಾದರೂ ಏನು, ಸಿಲ್ವರ್? ಕಮಲನಯನರಂತಹ ಶ್ರೀಮಂತರಿಗೆ ತಮ್ಮ ಹುಟ್ಟುನಾಡಾಗಲೀ, ಹುಟ್ಟುನಾಡಿನ ಬಡಪಾಯಿ ಜನರಾಗಲೀ ಬೇಡವಾದಾಗ ನಾನೇನು ಮಾಡಲು ಸಾಧ್ಯವಿದೆ?

ಇಲ್ಲಿಯ ಸ್ತ್ರೀ ಪುರುಷರ ಪರಸ್ಪರ ವ್ಯವಹಾರಗಳನ್ನೆಲ್ಲ ನಾನು ನೋಡಿದೆ.

ಪ್ರತಿಯೊಬ್ಬರೂ ಒಬ್ಬರಿಗೊಬ್ಬರು ಕಚ್ಚಿಯೇ ಮಾತನಾಡುವುದನ್ನು ನಾನು ನೋಡಿದೆ. ಅಂದರೆ ಅವರಲ್ಲಿ ಪ್ರೇಮದ ವ್ಯವಹಾರ ನನಗೆ ಕಾಣಲಿಲ್ಲ. ಅವರೊಳಗೆ ನಯವಾಗಲೀ, ನಮ್ರತೆಯಾಗಲೀ, ನೋಯಿಸಬಾರದು ಎಂಬ ದೃಷ್ಟಿಯಾಗಲೀ ಇಲ್ಲ. ಒರಟು ಸ್ವಭಾವವೇ ನನಗೆ ಕಂಡಿತು. ಅವರ ಭೀಕರ ದಾರಿದ್ರ್ಯ, ಅಸಹ್ಯತೆಯ, ಕುರೂಪತೆಯ ಪರಿಸರ, ರೋಗ ಪೀಡಿತರೂ, ಹಸಿವಿನಿಂದ ಬಳಲುವವರೂ ಆದ ಮಕ್ಕಳು, ಜೋಪಡಿಯಂತಹ ಮನೆಗಳು ಇವುಗಳೆಡೆಯಲ್ಲಿ ಸುಖದ ಲವಲೇಶವೂ ಇಲ್ಲದೆ, ಇವರೆಲ್ಲ ಹೇಗೆ ಬದುಕಿರುತ್ತಾರೆ ಎಂದೇ ನನಗೆ ಅರ್ಥವಾಗುವುದಿಲ್ಲ, ಸಿಲ್ವರ್.

ಇವರು ಊಟ ಮಾಡುವುದನ್ನೂ ನೋಡುವ ಸುಸಂಧಿ ನನಗೆ ಸಿಕ್ಕಿತು. ಒಂದು ಜೋಪಡಿಯೊಳಕ್ಕೆ ಪ್ರವೇಶಿಸುವಾಗ ಮಧ್ಯಾಹ್ನ $12\frac{1}{2}$ ಗಂಟೆಯಾಗಿತ್ತು. ಮನೆಯ ಜನರೆಲ್ಲ ಊಟಕ್ಕೆ ಕುಳಿತಿದ್ದರು. ನಾನು ನೇರವಾಗಿ ಒಳಗೇ ನಡೆದೆ. ನಾನು ಬಂದೊಡನೆಯೇ ಎದ್ದು ನಿಂತವರನ್ನು ಕೂತುಕೊಳ್ಳಿಸಿ, ಅವರು ಊಟ ಮುಂದರಿಸುವಂತೆ ಮಾಡಲು ನನಗೆ ಪ್ರಯಾಸವೇ ಆಯಿತು.

ಕಡೆಗೆ ಹೇಗಾದರೂ ಮನೆಯೊಡತಿ ಒಂದು ಮಣ್ಣಿನ ಮಡಕೆ ಹಿಡಿದು ಕೊಂಡು ಒಲೆ ಬಳಿಯಿಂದ ಊಟಕ್ಕೆ ಕುಳಿತವರೆಡೆಗೆ ಬಂದಳು. ಅವಳ, ಅತಿ ಮಲಿನವಾಗಿ ಕಪ್ಪಾದ ರವಿಕೆ ಹರಿದುಹೋಗಿ, ಭುಜವನ್ನೆಲ್ಲಾ ಕಾಣಿಸುತ್ತಿತ್ತು. ಸುತ್ತಿದ ಕೊಳಕಾದ ಸೀರೆ ಸಾವಿರ ತೇಪೆಗಳಿಂದ ಕೂಡಿತ್ತು. ನನ್ನೆದುರಿಗೆ ಬರುವಾಗ, ಮೇಲಕ್ಕೆ ಕಟ್ಟಿಕೊಂಡ, ಆ ಬಟ್ಟೆಯನ್ನು ಕೆಳಕ್ಕೆ ಬಿಟ್ಟಳು.

ಅಷ್ಟರಲ್ಲೇ ಅವಳಿಗೆ ಮೂಗಿನಲ್ಲಿ ಸಿಂಬಳ ಬಂದಿರಬೇಕು. ಅಲ್ಲೇ ಅದನ್ನು ತೆಗೆದುಬಿಟ್ಟು, ಅದೇ ಜಗಲಿಗೇ ಬಿಸಾಡಿದಳು. ಕೈಯಲ್ಲಿ ಉಳಿದುದನ್ನು ಗೋಡೆಗೆ ತಗಲಿಸಿ, ಸೀರೆಯಲ್ಲಿ ಕೈ ಮುಖಗಳನ್ನು ಉಜ್ಜಿಕೊಂಡು "ಸ್ವಚ್ಛತೆ" ಪೂರ್ಣ ವಾಗಿಸಿದಳು.

ನಂತರ ಇಕ್ಕಲು ಪ್ರಾರಂಭವಾಯಿತು. ಎಲ್ಲರಿಗೂ ಎರಡೆರಡು ಸೌಟು ಗಂಜಿ ಮತ್ತು ಒಂದಿಷ್ಟು ಗಂಜಿನೀರು. ನನ್ನ ಬಳಿಯಲ್ಲಿ ಒಬ್ಬ ಬಾಲಕ ಕುಳಿತಿದ್ದ. ತನ್ನ ಬಟ್ಟಲಲ್ಲಿ ಏನೋ ಕೊಳೆಯಿದೆ–ಅದನ್ನು ತೆಗೆಯಬೇಕೆಂದು ಆತನು ಹುಯಿಲೆಬ್ಬಿಸಿದ್ದ. ಆತನೆಡೆಗೆ ಬಂದ ಆ ತಾಯಿ ಆತನನ್ನು ಸಮಾಧಾನ ಪಡಿಸಲೋಸುಗ, ತನ್ನ "ಸ್ವಚ್ಛ"ವಾದ ಸೀರೆಯಿಂದಲೇ ಆ ಬಟ್ಟಲಿನ ಒಳಮೈಯನ್ನು ಉಜ್ಜಿದಳು. ಹೀಗೆ ಬಟ್ಟಲೂ ಸ್ವಚ್ಛವಾಯಿತು! ಬಾಲಕ

ನಿಗೂ ಸಮಾಧಾನವಾಯಿತು. ನಂತರ ಅವನಿಗೂ ಗಂಜಿಯಿಕ್ಕಿದಳು. ಹುಡುಗನ ಅಳುವೂ ನಿಂತುಹೋಯಿತು. ಇದೆಲ್ಲ ನೋಡಿ ಹಿಂದೂ ಪುರಾಣಗಳಲ್ಲಿರುವ ನರಕಲೋಕವೆಂದರೆ ಇದೆಯೋ ಏನೋ ಎಂದು ನನಗೆ ಕಂಡು ಬಿಟ್ಟಿತು.

ಗೋಧಿಯ ಬೆಳೆ ಹೆಚ್ಚಾಯಿತು. ಏನು ಮಾಡಲಿ? ಎಂದು ತಲೆ ತುರಿಸುತ್ತಿರುವ ಹಾಗೂ ಒಮ್ಮೊಮ್ಮೆ ಲಕ್ಷಗಟ್ಟಲೆ ಟನ್ನು ಗೋಧಿಯನ್ನು ಸುಟ್ಟು ಹಾಕುವ ಅಮೇರಿಕದ ದೃಶ್ಯ—ಹಾಗೂ ಭಾರತದ ಈ ಕರಾಳ ದಾರಿದ್ರ್ಯ ಒಂದನ್ನೊಂದು ಅಣಕಿಸುವಂತೆ ನನಗೆ ಕಾಣುತ್ತಿದೆ.

ಆಗಲಿ ಮುಂದಿನದೇನು ಎಂದು ನೋಡಿದೆ. ಎಲ್ಲರಿಗೂ ಹುರಿದ ಎರಡೆರಡು ಮೆಣಸುಗಳನ್ನೂ, ಒಂದಷ್ಟು ಹುಳಿ ಮುದ್ದೆಯನ್ನೂ, ಸ್ವಲ್ಪ ಉಪ್ಪನ್ನೂ ಹಾಕುತ್ತಾ ಬಂದಳು. ಅದೇ ಅವರ ಪದಾರ್ಥವಾಗಿತ್ತು. ಈ ಗಂಜಿ ಊಟ ಕೇವಲ ಐದೇ ಮಿನಿಟಿನಲ್ಲಾಯಿತು. ಮಕ್ಕಳೆಲ್ಲ ಬಟ್ಟಲನ್ನು ನೆಕ್ಕಿನೆಕ್ಕಿಯೇ ಸ್ವಚ್ಛಗೊಳಿಸಿದ್ದರು. ಎನಮೆಲ್ ಹೋಗಿ ಕಬ್ಬಿಣವೇ ಎದ್ದು ಬಂದಿದ್ದ ಆ ಮುರುಕು ಬಟ್ಟಲುಗಳು ಆ ಎಳೆಯ ಮಕ್ಕಳನ್ನು ನೋಡಿ ಹಲ್ಲುಕಿರಿಯುವಂತಿದ್ದುವು.

ಕೈ ನೆಕ್ಕುತ್ತಾ ಒಂದು ಮಿನಿಟು ಕಳೆದ ಆ ಮಕ್ಕಳಿಗೆ, ನನ್ನ ಪೇಂಟಿನ ಕಿಸೆಯಲ್ಲಿದ್ದ ಪೆಪ್ಪರುಮಿಂಟುಗಳನ್ನು ಕೊಟ್ಟೆ. ಮಕ್ಕಳ ಸಂತೋಷಕ್ಕೆ ಪಾರವೇ ಇರಲಿಲ್ಲ. ಹೀಗೆ ಅಲ್ಲಿಂದಲೂ ನಾನು ಹೊರಟುಬಿಟ್ಟೆ.

ಇನ್ನೊಂದು ಜೋಪಡಿಗೆ ನಾನು ಹೋದಾಗ, ಮುದುಕನೊಬ್ಬನು ಮಲೇರಿಯಾ ಜ್ವರದಿಂದ ಗಡಗಡ ನಡುಗುತ್ತಿದ್ದನು. ಕತ್ತಲೆಯ ಆ ಕೊಳಕು ಗುಡಿಸಲಿನೊಳಗೆ ಒಂದು ಮೂಲೆಯಲ್ಲಾತ ಪವಡಿಸಿದ್ದ. ಮಲಗಲು ಹರಿದು ಹೋದ ಒಂದು ಚಾಪೆಯಿತ್ತು. ಅದು ಈಚಲು ಎಂಬ ಮರದ ಚಾಪೆಯಂತೆ. ಆತನ ಮೈ ಮೇಲೆ ಚಳಿ ತಡೆಯಲು ಒಂದು ಹಳೆಯ ಮತ್ತು ಹರಿದುಹೋದ ಚಾದರವನ್ನೂ ಕೆಲವು ಚಿಂದಿಬಟ್ಟೆಗಳನ್ನೂ ಹೊದಿಸಿದ್ದರು.

ನಾನೂ ನನ್ನ ಗೆಳೆಯರೂ ಅವನ ಕೈಕಾಲು ಒತ್ತಿ ಶುಶ್ರೂಷೆ ಮಾಡಲು ತೊಡಗಿದೆವು. ಆಗ ಆತನ ಮೈ ಮತ್ತು ಬಟ್ಟೆಗಳಿಂದ ಬರುತ್ತಿದ್ದ ಆ ದುರ್ವಾಸನೆಯನ್ನು ಸಹಿಸುವುದು ಕಷ್ಟವಾಗಿ ಜಯನಾಥರ ಮುಖದಲ್ಲಿ ತಿರಸ್ಕಾರ ಒಡ

ಮಾಡಿತ್ತು. ನನಗೂ ಸಹಿಸುವುದು ಕಷ್ಟವಾಗಿತ್ತು ಎಂಬುದು ನಿಸ್ಸಂಶಯ. ನನ್ನ ಮುಖ ಹೇಗಿತ್ತೋ ಯಾರಿಗೆ ಗೊತ್ತು? ನಾನು ಸ್ವಲ್ಪ ದುಡ್ಡು ಕೊಟ್ಟು, ಹೋಟೆಲಿನಿಂದ ಬಿಸಿ ಚಾ ತರುವಂತೆ ಹೇಳಿ ಒಬ್ಬ ಹುಡುಗನನ್ನು ಕಳುಹಿಸಿದೆ.

ಅಷ್ಟರಲ್ಲಿ ಎರಡು ಜನ ಗಂಡುಸರು ಒಂದು ಕೋಳಿ ಮರಿಯನ್ನು ಹಿಡಿದು ಕೊಂಡು ಬಂದರು. ಅವರ ಪೈಕಿ ಒಬ್ಬನು ಏನೋ ಎಲ್ಲ ಮಂತ್ರ ಮಾಡಿ, ಕಿರುಚುತ್ತಿದ್ದ ಆ ಕೋಳಿಮರಿಯನ್ನು, ಆ ರೋಗಿಯ ತಲೆಯ ಸುತ್ತಲೂ 3 ಸಲ ತಂದು ಪುನಃ ಮಂತ್ರಮಾಡಿ, ಅದರ ಕತ್ತನ್ನು ಕಡಿದು, ಅದರ ರಕ್ತ ವನ್ನು ಆ ಮುದುಕನ ಹಣೆಗೆ ಮುಟ್ಟಿಸಿದನು. ಇನ್ನು ಏನೂ ಭಯ ಬೇಡ ವೆಂದು, ಆ ಆಗಂತುಕರು ಹೇಳಿ, ಒಂದು ರೂಪಾಯಿಯನ್ನು ಇಸಕೊಂಡು ಹೊರನಡೆದರು.

ಅತ್ಯಾಶ್ಚರ್ಯವೆಂದರೆ ಅವರು ಹೋದೊಡನೆಯೇ ಈ ಮುದುಕನ ನಡುಕ ನಿಂತುಬಿಟ್ಟಿತು. ಬಹುಶಃ ಔಷಧಿಯನ್ನು ಪಡೆಯಲಾರದ ಆ ದರಿದ್ರರ ಮೇಲೆ ಪರಮಾತ್ಮನು ಕರುಣೆದೋರಿ ಅವರು ಮಾಡಿದ ಯಾವುದೋ ಒಂದು ಹುಚ್ಚು ಕಾರ್ಯದಿಂದಲೇ ಪರಿಹಾರ ಸಿಗುವಂತೆ ಮಾಡುತ್ತಿದ್ದಾನೇನೋ ಎಂದು ನನಗ ನಿಸಿತು. ಇಲ್ಲವಾದರೆ ಟೈಫಾಯಿಡ್‌ನಂತಹ ಭೀಕರ ಹಾಗೂ ಮಾರಕ ಆಪತ್ತಿಗೆ ಅವರೆಷ್ಟು ಸಲ ಬಲಿಯಾಗಿರಲಾರರು? ದೇವರೇ ಅವರನ್ನು ರಕ್ಷಿಸುತ್ತಾನೆ, ಅಷ್ಟೆ.

ನಂತರ ಅಲ್ಲಿಂದ ಹೊರಟು ಮುಂದೆ ನಡೆದೆ. ನಾನು ಊಟಮಾಡ ಬೇಕೆಂದು ಗೊತ್ತಾದ ಜೋಪಡಿಗೆ ಬಂದೆ. ಮನೆಯನ್ನೆಲ್ಲ ನನಗಾಗಿ ಸೆಗಣಿ ಸಾರಿಸಿ ಚೊಕ್ಕಟ ಮಾಡಿದ್ದರು. ಮನೆಯ ಎದುರಿನ ಬಾಗಿಲಿಗೆ ಕೆಲವು ಹಸುರು ಎಲೆಗಳನ್ನೆಲ್ಲ ಕಟ್ಟಿ ಶೃಂಗರಿಸಿದ್ದರು. ನಾನು ಬಂದೊಡನೆಯೇ ನನಗೆ ಕಾಲು ತೊಳೆಯಲು ನೀರು ಕೊಟ್ಟು ಉಪಚರಿಸಿದರು. (ಇದು ಭಾರತೀಯ ಹಳ್ಳಿಗ ಳಲ್ಲಿ ಮಾಡುವ ಮೊಟ್ಟಮೊದಲಿನ ಉಪಚಾರದ ರೀತಿ.) ನಂತರ ಒಂದು ಚಾಪೆ ಹಾಕಿ ಕೂಡಲು ಹೇಳಿದರು. ಎರಡು ಸೀಯಾಳ (ಎಳತು ತೆಂಗಿನ ಕಾಯಿ— ಇದರ ಸವಿಯನ್ನು ನೀನು ಅನುಭವಿಸಿಯೇ ನೋಡಬೇಕು.) ಗಳನ್ನು ತಂದು, ತೂತು ಮಾಡಿ, ನನಗೂ ನನ್ನ ಮಿತ್ರರಿಗೂ ಕೊಟ್ಟರು. ತಿರುತಿರುಗಿ ದಣಿದ ನಾವು ಅದನ್ನು ಕುಡಿದೆವು.

ನಂತರ ಭಾರತೀಯ ಪದ್ಧತಿಯಲ್ಲಿ ಊಟವಾಯಿತು–ಪತ್ರಾವಳಿ ಅಂದರೆ ಎಲೆಗಳನ್ನು ಹೊಲಿದು ಮಾಡಿದ ಒಂದು ತಟ್ಟೆಯಲ್ಲಿ. ನನ್ನ ಬಗ್ಗಾಗಿ ಹೊಸ ಮೀನಿನ ಪದಾರ್ಥವನ್ನೂ ಮಾಡಿದ್ದರು. ಮನೆಯೊಳಗೆ ಅಲ್ಲಲ್ಲಿ ಮಲಿನತೆಯ ಕುರುಹುಗಳಿದ್ದರೂ, ನನ್ನ ಬಗ್ಗಾಗಿ ಅದನ್ನೆಲ್ಲಾ ಬಹಳ ಅಚ್ಚುಕಟ್ಟಾಗಿ ಮಾಡಿದ್ದರು.

ನಾನು ಕೈಯಿಂದ ತಿನ್ನಲು ತಿಳಿಯದೆ ಚಡಪಡಿಸುವುದನ್ನು ನೋಡುವುದಕ್ಕಾಗಿ ಅನೇಕ ಜನ ಸ್ತ್ರೀ ಪುರುಷರೂ ಮಕ್ಕಳೂ ಅಲ್ಲಿ ಬಂದು ನಿಂತಿದ್ದರು.

ನನಗೆ ಊಟದ ರುಚಿಗಿಂತಲೂ (ಅಬ್ಬ! ಎಂತಹ ಖಾರವೆಂದು ಮಾಡಿದ್ದಿ!), ಅವರ ಪ್ರೇಮದ ರುಚಿಯೇ ವಿಶೇಷವಾಗಿ ಕಂಡಿತು.

ಊಟವಾದ ನಂತರ, ಸ್ವಲ್ಪ ವಿಶ್ರಾಂತಿ ತೆಗೆದುಕೊಂಡು, ವೆಲ್ಲೂರಿಗೆ ಹೋಗಿ, ಅಲ್ಲಿಯ ಆಸ್ಪತ್ರೆಯನ್ನು ಸಂದರ್ಶಿಸಿ, ಮರುದಿನ ಮದ್ರಾಸಿಗೆ ಮರಳಬೇಕೆಂದು ಭಾವಿಸಿದ್ದೆ. ಆದರೆ ಕೆಲಜನರು ರೈತರು ಬಂದು, ತಮ್ಮಲ್ಲಿಗೂ ಸಂದರ್ಶನ ನೀಡಬೇಕೆಂದು ಕೇಳಿಕೊಂಡರು. ಹಾಗಾಗಿ ಅವರ ಪ್ರೇಮಕ್ಕೆ ಕಟ್ಟುಬಿದ್ದು, ಆ ಹಳ್ಳಿಯ ಮೂಲೆಯಿಂದ ಮೂಲೆಗೆ ಸಂಚರಿಸುತ್ತಾ ಆ ದಿನ ವಿಡೀ ಕಳೆದೆ. ಮರುದಿನ ಮನವಿಲ್ಲದ ಮನದಿಂದ ನಾನು ಹೊರಟು ಬರಬೇಕಾಯಿತು.

ಸಿಲ್ವರ್, ಇಂತಹವೇ ಎಷ್ಟೋ ಭಾರತದ ಹಳ್ಳಿಗಳನ್ನು ನಾನು ಸಂದರ್ಶಿಸಿದ್ದೇನೆ. ಹೆಚ್ಚು ಕಡಿಮೆ ಎಲ್ಲ ಕಡೆಗಳಲ್ಲಿಯೂ ಇದೇ ತೆರನಾದ ಅನುಭವಗಳು ನನಗಾಗಿವೆ. ತೀವ್ರವಾದ ದಾರಿದ್ರ್ಯ; ಅದರ ಬೆನ್ನಲ್ಲೇ, ಕರ್ಮ ಮಾಡಲಾರದ ಸೋಮಾರಿತನ; ವಿವಿಧ ತೆರನಾದ ದುರಭ್ಯಾಸಗಳು; ಹಣದ ಉತ್ಪತ್ತಿಯಾದರೂ ಅದರ ವಿನಿಯೋಗದಲ್ಲಿದ್ದ ಅತಿಯಾದ ಅಜ್ಞಾನ; ರೋಗ ಪೀಡಿತ, ಅರೆಹೊಟ್ಟೆಯ ಮಕ್ಕಳು; ಬಾಹ್ಯತಃ ಮಾಲಿನ್ಯ, ಕೊಳಕುಗಳು; ಎಷ್ಟೋ ತೆರನಾದ ಕುರುಡು ವಿಶ್ವಾಸಗಳು—ವನ್ಯ ದೃಷ್ಟಿಗಳು. ಆದರೆ ನಿಜವಾದ ಪ್ರೇಮ, ಸಹಾನುಭೂತಿ ತೋರುವಾಗ ಹೊರ ಬರುವ, ಗುಪ್ತವಾಹಿನಿಯಾಗಿ ಇರುವ ಆ ಮಾನವೀಯತೆಯನ್ನು ನಾನಿಲ್ಲಿ ಕಾಣುತ್ತಿದ್ದನೆ.

ಕೆಲವು ಹಳ್ಳಿಗಳಲ್ಲಿ ಆ ಹಳ್ಳಿಯ ಭೂಮಿಗಳ ದೊಡ್ಡ ಮಾಲೀಕರು ಪೇಟೆ ಪಟ್ಟಣಗಳಿಗೆ ಹೋಗಿ, ಭೋಗಜೀವನವನ್ನು ಮಾಡುತಾರೆ. ತಮ್ಮ

ಹಳ್ಳಿಯಲ್ಲೇ ನಿಂತು, ಜೀವನ ಮಾಡುವ ಶ್ರೀಮಂತರೂ ಇದ್ದಾರೆ. ಅವರೂ ಭೋಗಾಸಕ್ತಿಯಲ್ಲಿ ಪೇಟೆಯವರನ್ನು ವಿಶೇಷ ಬಿಟ್ಟಿರುವುದಿಲ್ಲ. ಬಡ ಜನರಿಂದ ದುಡಿಸುತ್ತ, ತಾವು ಕೇವಲ ನಿಷ್ಕ್ರಿಯರಾಗಿ ಬೊಜ್ಜು ಬೆಳೆಸುತ್ತ ಕುಳಿತಿರುವವರೂ ಇದ್ದಾರೆ.

ಆಗ "ಅವರನ್ನೇಕೆ ಹೇಳುತ್ತಿ? ನಮ್ಮ ಅಮೇರಿಕದ ಜನರೂ ಭೋಗಾಸಕ್ತರೇ ಅಲ್ಲವೇ?" ಎಂದು ನೀನು ಕೇಳಬಹುದು. ಅದರಲ್ಲೇ ಇರುವುದು ಸ್ವಾರಸ್ಯ.

ಪ್ರಪಂಚದ ದೃಷ್ಟಿಯಿಂದ ಅಮೇರಿಕನರಾದ ನಮ್ಮಷ್ಟು ಪ್ರಪಂಚವಾದಿಗಳು, ಶೃಂಗಾರ ಹಾಗೂ ಭೋಗಪ್ರಿಯರು, ಧರ್ಮದಿಂದ ದೂರವಿರುವವರು ಫ್ರೆಂಚರನ್ನು ಬಿಟ್ಟರೆ ಬೇರಾರೂ ಇಲ್ಲ. ಶೃಂಗಾರ, ಭೋಗ, ವಿಲಾಸಗಳ ಮಟ್ಟಿಗೆ ಈ ಮಾತು ನಿಜ. ಆದರೆ ಭಾರತದ ಶ್ರೀಮಂತನಿಗೆ ಹೋಲಿಸಿದಾಗ, ನಮ್ಮಲ್ಲಿಯ ಶ್ರೀಮಂತ ಎಷ್ಟು ಫಲಪ್ರದವಾದ ಜೀವನ ಮಾಡುತ್ತಿದ್ದಾನೆ ಎಂದು ತಿಳಿಯದಿರದು.

ನಮ್ಮ ಸಂಯುಕ್ತ ಅಮೇರಿಕಾ ದೇಶದ ಒಬ್ಬ ಭೂಮಾಲಿಕನನ್ನೇ ತೆಗೆದುಕೋ. ನಮ್ಮ ದೇಶದಲ್ಲಿ ರೈತ(Farmer)ನೆಂದರೂ ಭೂಮಾಲಿಕನೆಂದರೂ ಒಬ್ಬನೇ. ಆತನು ಯಾವ ಮಜೂರನ ಸಹಾಯವೂ ಇಲ್ಲದೆ, 500 ಯಾ 600 ಎಕ್ರೆ ಭೂಮಿಯನ್ನು ಯಂತ್ರಗಳ ಸಹಾಯದಿಂದ ಕೃಷಿ ಮಾಡುತ್ತಾನೆ. ಬೆಳಗ್ಗೆ ಎದ್ದಲ್ಲಿಂದ ರಾತ್ರೆ ಊಟದ ತನಕವೂ ತನ್ನ ಹೊಲ, ಹಟ್ಟಿ, ಅಥವಾ ಮನೆಯಲ್ಲಿ ದುಡಿಯುತ್ತಲೇ ಇದ್ದು, ಧನೋತ್ಪತ್ತಿ ಮಾಡುತ್ತಾನೆ. ಸಾಯಂಕಾಲ ಮಾತ್ರ ಸ್ವಲ್ಪ ಆಟವಾಡಬಹುದು. ಸ್ವಲ್ಪ ವಿರಮಿಸಬಹುದು. ರಾತ್ರೆ ಊಟದ ನಂತರ ರೇಡಿಯೋ, ಟೆಲಿವಿಶನ್, ವೃತ್ತಪತ್ರಿಕೆಗಳ ಮೂಲಕ ಪ್ರಪಂಚದ ಆಗುಹೋಗುಗಳನ್ನು ತಿಳಿದುಕೊಂಡು, ಸುಖೀ ಜೀವನ ಮಾಡುತ್ತಾನೆ.

ಆತನಿಗೆ ಪ್ರಾರ್ಥನೆ ಇಲ್ಲದಿರಬಹುದು; ಆತನು ಇಗರ್ಜಿಗೂ ಹೋಗದಿರಬಹುದು. ಲೈಂಗಿಕ ಸ್ವೇಚ್ಛಾಚಾರವೂ ಆತನಲ್ಲಿದೆ. ಆದರೆ, ಆಲಸಿಗನಾಗಿ ಒಂದೇ ಒಂದು ಕ್ಷಣವನ್ನೂ ವ್ಯಯಿಸದೆ, ವೈಜ್ಞಾನಿಕ ದೃಷ್ಟಿಯಲ್ಲಿ ಅತ್ಯಾಧುನಿಕ ರೀತಿಯ ಕೃಷಿ ಮಾಡುತ್ತ, ಜಗತ್ತಿನ ವಿವಿಧ ದೇಶಗಳಿಗೆ ಬೇಕಾದ ಆಹಾರ ವಸ್ತುಗಳನ್ನು ಆತನೇ ಸ್ವತಃ ತನ್ನ, ತನ್ನಪತ್ನಿಯ, ಮತ್ತು ಮಕ್ಕಳ ಬೆವರಿನಿಂದ

ಬೆಳೆಸುತ್ತಾನೆ. ಆದ್ದರಿಂದಲೇ ಆತನ ಬದುಕಿಗೆ ಒಂದು ಅರ್ಥವಿದೆ. ಆತನ ಭೋಗಕ್ಕೂ-ಆತನ ವಿರಾಮಕ್ಕೂ ಅರ್ಥವಿದೆ. ಹೀಗೆಯೇ ಸಂಯುಕ್ತ ಅಮೇರಿಕದಲ್ಲಿ ಇರುವ ಇತರ ಯಾವ ವೃತ್ತಿಯವನೇ ಇರಲಿ-ಪ್ರಾಮಾಣಿಕ ದುಡಿತದಿಂದ ಧನೋತ್ಪತ್ತಿ" ಎಂಬ ವಿಶ್ವಾಸವುಳ್ಳವನಾಗಿರುತ್ತಾನೆ. ಅದರಲ್ಲೂ ಸ್ವಾಮಿ ವಿವೇಕಾನಂದರಂದಂತೆ ಅಧ್ಯಾತ್ಮದ ಒಂದು ತಿರುಳಿಲ್ಲವೇ?

ಆದರೆ ಭಾರತದ ಭೂಮಾಲಿಕನಿಗೂ ರೈತನಿಗೂ ಸಾಗರದಷ್ಟು ದೂರ. ಒಬ್ಬನು ದುಡಿಸುವಾತನು-ಇನ್ನೊಬ್ಬನು ದುಡಿಯುವಾತನು. ಇಲ್ಲಿಯ ಭೂಮಾಲಿಕನು ಬಹಳವಾಗಿ ಮಾಡುವ ಕೆಲಸವೆಂದರೆ ಊಟ ಮಾಡುವುದು ಮತ್ತು ಅದನ್ನು ಕರಗಿಸುವ ಧೀರ ಪ್ರಯತ್ನಗಳನ್ನೂ, ಹೋರಾಟಗಳನ್ನೂ, ಮಾಡುವುದು. ಯಾವ್ಯಾವ ರೀತಿಯಲ್ಲಿ ಸುಖ, ಭೋಗಗಳನ್ನು ಅನುಭವಿಸಬಹುದು ಎಂಬುದೊಂದೇ ಅವನ ಯೋಚನೆ. ಬಹಳ ಜನರ ಸಮಯ ಹರಟೆಕೊಚ್ಚುವುದರಲ್ಲಿ, ಇತರರನ್ನು ಟೀಕೆ ಮಾಡುವುದರಲ್ಲಿ, ಅಥವಾ ದೇಹಕ್ಕೆ ವ್ಯಾಯಾಮವನ್ನೂ ಕೊಡಲಾರದ ನಿರರ್ಥಕ ಆಟವಾದ ಇಸ್ಪೀಟಿನಲ್ಲಿ ಹಾರಿಯೇ ಹೋಗುವುದು.

ಇಂದಿನ ಜಗತ್ತಿನ ದೊಡ್ಡ ರಾಷ್ಟ್ರಗಳ ನಡುವೆ ಮೇಲಾಟದ ಪೈಪೋಟಿಯಿದ್ದಂತೆಯೇ, ಪ್ರತಿ ಹಳ್ಳಿಗಳಲ್ಲಿ ಈ ಭೂಮಾಲಿಕರು ಅತಿ ತೀವ್ರವಾಗಿ ಯೋಚಿಸುವ ವಿಷಯವೆಂದರೆ ಹಳ್ಳಿಯಲ್ಲಿರುವ ಇನ್ನೊಬ್ಬರನ್ನು ಹೇಗೆ ಅವಮಾನಕ್ಕೆ, ಕಷ್ಟಕ್ಕೆ ಗುರಿಮಾಡಬಹುದೆಂಬುದು.

ಅಂತಹ ಶ್ರೀಮಂತರಿಬ್ಬರು ವೀಳ್ಯ ಹಾಕುತ್ತಲೋ, ಹೊಗೆ ಸೇವನೆ ಮಾಡುತ್ತಲೋ, ಚಕ್ಕಂದ ಹೊಡೆಯುತ್ತಾರೆ; ಪರಸ್ಪರ ದೂರವಾದೊಡನೆ ಒಬ್ಬರನ್ನೊಬ್ಬರು ನಿಂದಿಸತೊಡಗುತ್ತಾರೆ. ಅಂದರೆ ಜೀವನವೆಲ್ಲ ವಂಚನೆ, ಕೃತ್ರಿಮತೆ, ಮೋಸ

ಅವರ ಮನೆಗೆ ಸಂಬಂಧಪಟ್ಟ ಯಾವ ಕಾರ್ಯವನ್ನೂ ಅವರು ಮಾಡಿಕೊಳ್ಳುವುದಿಲ್ಲ. ಎಲ್ಲದಕ್ಕೂ ಕೂಲಿಯವರೇ ಆಗಬೇಕು. ಇತ್ತೀಚೆಗೆ ಭಾರತದ ವಿವಿಧ ಭಾಷೆಗಳಲ್ಲಿ ರಚಿತವಾದ ಕಾದಂಬರಿಗಳನ್ನೋದುವುದರಲ್ಲೋ ಅಥವಾ ಪೇಟೆ ಪಟ್ಟಣಗಳಿಗೆ ಹೋಗಿ ಸಿನೆಮಾ ನೋಡುವುದರಲ್ಲೋ ಸಮಯ ವಿನಿಯೋಗಿಸುತ್ತಾರೆ.

ಮನುಷ್ಯನು ಒಂದೋ ತಪಸ್ವಿಗಳಂತೆ ಧ್ಯಾನ, ತಪಸ್ಸು ಮೊದಲಾದ ಸಾಧನೆಯಲ್ಲೇ ನಿರತನಾಗಬೇಕು. ಅಥವಾ ಸಂಪತ್ತಿನ ವೃದ್ಧಿ ಮಾಡುವ ಇಲ್ಲವೇ ಸೇವೆ ಎಸಗುವ ಅಖಂಡ ಕರ್ಮದಲ್ಲಿ ನಿರತನಾಗಿರಬೇಕು. ಸುಮ್ಮನೇ ಸೋಮಾರಿಯಾಗಿದ್ದುದರಿಂದ ಫಲವೇನು?

ಅಮೇರಿಕನರು ಪ್ರಪಂಚವಾದಿಗಳೆಂದು ಅಪವಾದ ಹೇರುವ ಭಾರತೀಯ ಶ್ರೀಮಂತರನ್ನು ನಾನು ನೋಡಿದ್ದೇನೆ. ಆದರೆ ನಾನು ತತ್‌ಕ್ಷಣ ಅವರ ಕೂಡೆ ಕೇಳಿದ್ದಿದೆ—"ನೀವೆಷ್ಟು ಗಂಟೆ ದುಡಿಯುತ್ತೀರಿ?" ಎಂದು. ಅದಕ್ಕೆ ಹೆಚ್ಚಾಗಿ ಅವರ ಉತ್ತರ "ನಾವೇಕೆ ದುಡಿಯುವುದು? ಮಜೂರರು ಇದ್ದಾರೆ." ಎಂಬುದಾಗಿ. "ನಿಮ್ಮ ಉತ್ಪತ್ತಿಯ ಎಷ್ಟಂಶವನ್ನು ನೀವು ದಾನ ಧರ್ಮಕ್ಕಾಗಿ ವಿನಿಯೋಗಿಸುತ್ತೀರಿ?" ಎಂಬುದು ನನ್ನ ದ್ವಿತೀಯ ಪ್ರಶ್ನೆ. "ಭಿಕ್ಷುಕರಿಗೆ ದಾನ ಧರ್ಮ ಬಹಳವಾಗಿ ಮಾಡುತ್ತಿದ್ದೇನೆ" ಎಂದು ಹೇಳುವವರಿದ್ದಾರೆ. "ಎಷ್ಟು?" ಎಂದು ಕೇಳಿದಾಗ ಇಡೀ ವರ್ಷದಲ್ಲೇ 25 ರೂ.ಗಳಿಗೆ ಮೀರದಷ್ಟು ದಾನ ಧರ್ಮ ಮಾಡಿದ್ದೇನೆ ಎನ್ನುವವರಿದ್ದಾರೆ. ಇದು ಸಾವಿರಗಟ್ಟಲೆ ಉತ್ಪತ್ತಿ ಯಿರುವವರ ಉತ್ತರ.

ರಾಷ್ಟ್ರ ಸೇವೆ ಮಾಡುತ್ತಿರುವ ಸಂಘಸಂಸ್ಥೆಗಳಿಗೆ ಎಷ್ಟು ಸಹಾಯ ಮಾಡುತ್ತೀರಿ? ಎಂದಾಗ ಇಡಿಯ ಜೀವಮಾನದಲ್ಲಿ 500 ರೂಪ್ಯಾಗಳಿಗಿಂತ ಹೆಚ್ಚು ದಾನ ಮಾಡಿದ್ದೇನೆ ಎನ್ನುವವರು ಒಂದೊಂದು ಜಿಲ್ಲೆಗಳಲ್ಲಿ ಕೈ ಬೆರಳಿ ನಲ್ಲಿ ಎಣಿಸುವಷ್ಟಿರಬಹುದು ವರ್ಷಕ್ಕೆ ಅರ್ಧ ಲಕ್ಷ ರೂಪ್ಯಾ, ಒಂದು ಲಕ್ಷ ರೂಪ್ಯಾಗಳ ತನಕ ಉತ್ಪತ್ತಿಯಿರುವವರು ವರ್ಷಕ್ಕೆ 50, 100 ರೂಪ್ಯಾಗಳಿ ಗಿಂತ ಹೆಚ್ಚು ಸಹಾಯಧನ ನೀಡದವರು ಇಲ್ಲಿದ್ದಾರೆ.

ಅಂತಹ ಸಂದರ್ಭಗಳಲ್ಲಿ "ಸಂಯುಕ್ತ ಅಮೇರಿಕಾದ ವ್ಯಕ್ತಿಗಳು, ಸಮೂಹಗಳು ಮತ್ತು ಸರಕಾರಗಳಿಂದ ಅನ್ಯ ದೇಶಗಳಿಗೆ ಪ್ರತಿ ವರ್ಷ ದಾನ ವೀಯುತ್ತಿರುವ ಹಣವೇ ಭಾರತದ ಕೇಂದ್ರ ಸರಕಾರದ ಇಡಿಯ ವಾರ್ಷಿಕ ಬಜೆಟಿಗಿಂತಲೂ ಅಧಿಕವಾಗಿದೆ. ಗೊತ್ತೆ?" ಎಂದು ನಾನು ಕೇಳಿದ್ದುಂಟು.

ನನ್ನ ಕಡೆಯ ಪ್ರಶ್ನೆ "ನೀವು ಪ್ರಾರ್ಥನೆ ಮಾಡುತ್ತೀರಾ?" ಎಂದು. ಹೆಚ್ಚಿನವರ ಉತ್ತರ "ಇಲ್ಲ" ಎಂದು. ಆದರೂ ಭಾರತೀಯರು ತಾವು ಬಹಳ ಅಧ್ಯಾತ್ಮವಾದಿಗಳೆಂಬ ಜಂಭ ಕೊಚ್ಚಿಕೊಳ್ಳುವುದಿದೆ.

ಕಟ್ಟಕಡೆಗೆ ನಾನು ಕೇಳಿದ್ದುಂಟು. "ನೋಡಿ, ನಮ್ಮ ಸ್ಥಿತಿ ಹೀಗೆ. ಈಗ

ಹೇಳಿ, ವ್ಯಾವಹಾರಿಕವಾಗಿ, ಅಧ್ಯಾತ್ಮ ಜೀವನ ನಮ್ಮದೋ, ನಿಮ್ಮದೋ?" ಎಂದು. ಅದಕ್ಕವರ ಉತ್ತರವಿಲ್ಲ.

ಸಿಲ್ವರ್, ನಾನು ಹಿಂದೆಯೇ ಹೇಳಿದಂತೆ, ಅಧ್ಯಾತ್ಮದ ಸುಪ್ತಗಂಗೆ ಭಾರತೀಯರಲ್ಲಿದೆ, ನಿಶ್ಚಯ. ಆದರೆ ಈಗ ಅದು, ರಾಮಾಯಣದಲ್ಲಿ ಕಾಣುವ ಕುಂಭಕರ್ಣನಂತೆ ದೀರ್ಘ ನಿದ್ರೆಯಲ್ಲೇ ಇದೆ.

ಅದೇ ನಿದ್ರೆಯೇ ಭಾರತೀಯರ ಆಲಸ್ಯ. ಶ್ರೀಮಂತರ ಆಲಸ್ಯವೇ ಬಡಜನರಿಗೂ, ಅಂಟು ಜಾಡ್ಯವಾಗಿ ತಾಗಿದೆ. ಆದ್ದರಿಂದಲೇ ಭಾರತದಲ್ಲಿ ಇಷ್ಟೊಂದು ಬಡತನ.

ಭಾರತದ ಶ್ರೀಮಂತನೊಬ್ಬನಲ್ಲಿ ಒಮ್ಮೆ ಹೀಗೆ ಕೇಳಿದ್ದೆ. "ಮನುಷ್ಯರ ಮಲಮೂತ್ರಗಳನ್ನು ಕೃಷಿಗೆ ಉಪಯೋಗಿಸುವ ವಿಷಯ ಯೋಚಿಸಿದ್ದೀರಾ?" ಎಂದು. ಆ ಮಾತನ್ನು ಕೇಳಿ ಅವನೂ, ಅವನೊಂದಿಗಿದ್ದ ಇತರರೂ ಎದ್ದು ಬಿದ್ದು ನಕ್ಕುಬಿಟ್ಟರು. ನನ್ನನ್ನು ಬೇಕಷ್ಟು ಗೇಲಿಮಾಡಿಬಿಟ್ಟರು. ಕಾಲು ಗಂಟೆ ಸಮಯ, ಅವರ ಗುಲ್ಲು ನಿಲ್ಲಲೇ ಇಲ್ಲ.

ಈ ಸಣ್ಣ ಘಟನೆಯಿಂದ, ಬಹಳ ಬುದ್ಧಿವಂತನೆಂದು ಭಾವಿಸಿಕೊಳ್ಳುವ ಭಾರತೀಯ ಭೂಮಾಲಿಕನು ಒಳಗೆ ಎಷ್ಟು ಟೊಳ್ಳಾಗಿರುತ್ತಾನೆ ಎಂಬುದು ಅರ್ಥವಾಗುವುದು.

ಆದರೆ, ಭಾರತದ ಎಲ್ಲರೂ ಹೀಗೆಯೇ ಎಂದು ನೀನು ಭಾವಿಸಿಕೊಂಡರೆ ತೀರಾ ತಪ್ಪಾಗಬಹುದು. ಬಹಳ ಉದಾತ್ತ ವ್ಯಕ್ತಿಗಳೂ ಇಲ್ಲಿಯ ಭೂಮಾಲಿಕರು ಹಾಗೂ ಇತರ ರೀತಿಯ ಶ್ರೀಮಂತರಲ್ಲಿ ಇದ್ದಾರೆ. ಅಲ್ಲದೆ, ಸಣ್ಣ ಹಿಡುವಳಿದಾರರು ಸ್ವತಃ ದೇಹಶ್ರಮ ಮಾಡಿ ದುಡಿಯುವುದಿದೆ. ಆದರೂ ದುಡಿಯುವುದು ಘನಸ್ಥಿಕೆಯ ಲಕ್ಷಣವಲ್ಲವೆಂಬುದೇ ಅವರ ಮನೋಭಾವ.

ನಾನು ಭಾರತೀಯರಲ್ಲಿ ಕಾಣುತ್ತಿರುವ ಅತಿ ಶೋಚನೀಯ ದುರ್ಗುಣವೆಂದರೆ, ನಮ್ಮಂತಹ ಪಾಶ್ಚಾತ್ಯರ ಬೆಡಗು, ಬಿನ್ನಾಣ, ಕೃತ್ರಿಮತೆ, ಲೈಂಗಿಕ ಸ್ವೇಚ್ಛಾಚಾರಗಳನ್ನು ಮಾತ್ರ ಅನುಸರಿಸುತ್ತಾ ನಮ್ಮಲ್ಲಿರುವ ನಿಜವಾದ ಆಧ್ಯಾತ್ಮಿಕ ಗುಣಗಳಾದ ಶ್ರಮಜೀವನ, ವೈಜ್ಞಾನಿಕ ದೃಷ್ಟಿ, ಹೃದಯ ವೈಶಾಲ್ಯ, ಶಿಸ್ತು, ರಾಷ್ಟ್ರಪ್ರೇಮ ಮೊದಲಾದ ಸದ್ಗುಣಗಳನ್ನು ಸ್ವಲ್ಪವಾದರೂ ಜೀವನದಲ್ಲಿ ಅಳವಡಿಸಿಕೊಳ್ಳುವ ಮನಸ್ಸು ಮಾಡದಿರುವುದು.

ಭಾರತದಲ್ಲಿ ನಿಜವಾದ ಪ್ರಗತಿಯುತ ಸಮಾಜವು ಸ್ಥಾಪನೆಯಾಗಲು ಎಷ್ಟು ಕಾಲ ಹೋಗುವುದೋ ಏನೋ ಸಿಲ್ವರ್? ಆದರೆ, ಭಾರತದ ಬಡಜನರಲ್ಲಿ ನಾನು ಪಶು ಸ್ವಭಾವವನ್ನೇ ಇಂದು ಕಾಣುತ್ತಿರುವೆನಾದರೂ, ಅವರನ್ನು ಬೃಹತ್ ಶಕ್ತಿಯಾಗಿ ಸಂಘಟಿಸಿ, ದೇಶಕ್ಕಾಗಿ ದುಡಿಯುವಂತೆ ಮಾಡಬಹುದು ಎಂಬ ವಿಶ್ವಾಸವುಳ್ಳವನಾಗಿದ್ದೇನೆ. ಆಗಲಾದರೂ ಶ್ರೀಮಂತರೂ ಕಣ್ಣು ತೆರೆಯುವರೋ ಏನೋ?

ಆದರೆ ಭಾರತದ ಮಧ್ಯಮ ವರ್ಗದ ಭೂಮಾಲಿಕರಲ್ಲಿ ಹಾಗೂ ಇತರ ವೃತ್ತಿಯವರಲ್ಲಿ ಇನ್ನೂ ಉದಾತ್ತವಾದ ಸಂಸ್ಕೃತಿಯೂ, ಆಧ್ಯಾತ್ಮಿಕ ದೃಷ್ಟಿಯೂ ಕೆಲವು ಮಟ್ಟಿಗೆ ಇದೆ. ಅದನ್ನು ಪುನಃ ಚೇತನಗೊಳಿಸುವುದು, ಒಂದು ಉತ್ಕೃಷ್ಟವಾದ ಸಂಸ್ಥೆಗೆ ಕಷ್ಟವೆನಿಸಲಾರದು.

ಸಿಲ್ವರ್, ಭಾರತದ ಆರ್ಥಿಕ ಸ್ಥಿತಿಗತಿಯ ವಿಚಾರ ನನಗೆ ಇನ್ನೂ ಬರೆಯಲಿದೆ. ಆದರೆ ನಿನಗೆ ಇದೆಲ್ಲಾ ರುಚಿಸುವುದೋ ಇಲ್ಲವೋ ನನಗೆ ತಿಳಿದಿಲ್ಲ. ನಿನ್ನ ಅಭಿಪ್ರಾಯ ತಿಳಿಸಿದರೆ ತುಂಬಾ ಉಪಕಾರವಾಗಬಹುದು.

ನಾನು ಈ ವಾರಾಂತ್ಯದಲ್ಲಿ ನನ್ನ ಪ್ರೇಮದ ಕೇನ್ನಿಗೆ ಒಂದು ದಂತದ ಕೃಷ್ಣಮೂರ್ತಿಯನ್ನು ಕಳುಹಿಸುತ್ತೇನೆ. ನನಗದು ಅಷ್ಟು ಸುಂದರವಾಗಿ ಕಾಣುತ್ತಿದೆ. ಕೃಷ್ಣನೇಕೆ ಎಂದು ನೀನು ಕೇಳಬಹುದು. ಭಾರತದ ಆಧ್ಯಾತ್ಮ ವಾಹಿನಿಯೇ ಆತನ ಕೊಳಲು—ಅದಕ್ಕಾಗಿ ಅದನ್ನೇ ಕಳುಹಿಸುತ್ತಿದ್ದೇನೆ. ಕೃಷ್ಣನ ಜೀವನದಿಂದ, ಆತನ ದಿವ್ಯ ತತ್ವಗಳಿಂದ ನಾವೂ ಏಕೆ ಸ್ಫೂರ್ತಿ ಪಡೆಯಬಾರದು? ನಮ್ಮ ಕರ್ಮಧೀರತೆಗೂ ಶ್ರೀಕೃಷ್ಣನ ಕರ್ಮಯೋಗದ ಸಂದೇಶಕ್ಕೂ ಬಹಳ ಸಂಬಂಧವಿದೆಯಲ್ಲವೇ?

ಸಿಲ್ವರ್, ಇನ್ನು ಇಲ್ಲಿಗೇ ನಿಲ್ಲಿಸುತ್ತೇನೆ. ನಿನ್ನ ಶ್ರೀಮತಿಯ ವಿಚಾರ ಏನೆಲ್ಲಾ ಆಯಿತೆಂದು ತಿಳಿಸಿಬಿಡು. ಈ ಸಲ ಪತ್ರ ಬರೆಯದೆ ಉಳಿಯಲಾರೆಯಷ್ಟೆ?

ಇತಿ ನಿನ್ನ ಆಪ್ತಮಿತ್ರ,
**ಜೋನ್ ಓರ್‌ಮನ್.**



# ೬

ಮದ್ರಾಸು,
10–5–62

ಪ್ರಿಯ ಸಿಲ್ವರ್,

ಸಿಕ್ಕಿತು, ಮಿತ್ರ, ನಿನ್ನ ಪತ್ರ ಸಿಕ್ಕಿತು. ಅದರಲ್ಲಿ ನೀನು ಬರೆದ ವಿಚಾರಗಳನ್ನು ನೋಡಿ ನಿಜವಾಗಿಯೂ ಸ್ತಂಭೀ ಭೂತನಾದೆ. ನಿನ್ನನ್ನು ಕೊಲ್ಲುವ ಹಂಚಿಕೆ ಮಾಡುವಷ್ಟು, ನಿನ್ನ ಶ್ರೀಮತಿ ಮುಂದರಿಸಿದ್ದು ನೋಡು ವಾಗ ನನಗೆ ಏನು ಹೇಳಲಿ ಎಂಬುದೇ ತಿಳಿಯುವುದಿಲ್ಲ. ಇರಲಿ, ಸ್ವಾಮಿ ಏಸುವು ನಿನ್ನನ್ನು ಉಳಿಸಿ, ಆ ಮುದ್ದು ಮಗು ಕೇನ್ನಿಯಾದರೂ ನಿನ್ನ ರಕ್ಷಣೆ ಯಲ್ಲಿಯೇ ಉಳಿಯುವಂತೆ ಮಾಡಿದನಲ್ಲಾ ಎಂಬುದೇ ನನಗೆ ಸಂತೋಷ.

ಲೈಂಗಿಕ ಸ್ವಾತಂತ್ರ್ಯ ಬೇಕೇ ಬೇಕೆಂದು ಮನೆ ಮಾಡಿಸಲ್ಲಿ ನಿಂತು ಅಂದು ನೀನು ಬೊಬ್ಬಿಡುತ್ತಿದ್ದಾಗ, ಪ್ರಪಂಚ ಮತ್ತು ಸಮಾಜ ನಿನಗೆ ಮಾತ್ರ ಆ ಸ್ವಾತಂತ್ರ್ಯ ಕೊಡುವುದೆಂದೂ, ಕೊಡಬೇಕೆಂದೂ ಭಾವಿಸಿದ್ದೆ ಹೊರತಾಗಿ, ನಿನ್ನ ಶ್ರೀಮತಿ ಲೂಸಿ ಸಿಲ್ವರ್‌ಳಿಗೂ ಅದೇ ಸ್ವಾತಂತ್ರ್ಯ ಕೊಡುವುದೆಂದು ಪ್ರಾಯ ಶಃ ನೀನು ಭಾವಿಸಿರಲಿಲ್ಲ. ಮಾತ್ರವಲ್ಲ ಅಂತಹ ಲೈಂಗಿಕ ತೃಷ್ಣೆಯ ವಿಶ್ವ ರೂಪ ದರ್ಶನವು ಈ ತೆರನಾಗಿಯೂ ಆಗಲು ಸಾಧ್ಯವಿದೆ ಎಂಬುದನ್ನು ನೀನು ಖಂಡಿತ ಗ್ರಹಿಸಿರಲಾರೆ.

ಆಗಲಿ, ಈಗಲಾದರೂ ನೀನು ಕಣ್ಣು ತೆರೆದು ಸತ್ಯದೆಡೆಗೆ ಬರಲು ಸಿದ್ಧ ನಾದ್ದು ನೋಡುವಾಗ ನನಗೆಷ್ಟು ಆನಂದವಾಗುವುದು ಗೊತ್ತೆ?

ನೀನೇ ಬರೆದಿರುವಂತೆ ನಿನ್ನ ಸಂಸಾರವೇನೋ ಒಡೆದು ನುಚ್ಚುನುರಿ

ಯಾಯಿತು–ನಿಜ. ಆದರೆ ಗೊತ್ತುಗುರಿಯಿಲ್ಲದ ನಿನ್ನ ಅಂತರಂಗಿಕ ಜೀವನಕ್ಕೆ ಒಂದು ರೂಪ, ಒಂದು ಧ್ಯೇಯ, ಒಂದು ಮಹತ್ತು ಬರುತ್ತಿರುವುದು ನೋಡಿ ಹಿರಿಹಿರಿ ಹಿಗ್ಗಲೇ ಬೇಕು.

ನೋಡು ಸಿಲ್ವರ್, ನಾನು ನನ್ನ ನಿನ್ನ ಸ್ನೇಹದ ಕುರಿತಾಗಿ ಆಶ್ಚರ್ಯ ಪಟ್ಟದ್ದು ಒಂದೆರಡು ಸಲವಲ್ಲ. ನನ್ನ ನಿನ್ನ ನೆಂಟುತನ-ಬಾಂಧವ್ಯ ಹೇಗೆ ಬೆಳೆಯಿತು ಎಂಬುದೇ ನನಗೆ ದೊಡ್ಡ ಒಗಟಾಗಿತ್ತು. ನಾನು ಧ್ಯೇಯವಾದಿ, ಆದರ್ಶವಾದಿ, ಮಾತ್ರವಲ್ಲ ಅಧ್ಯಾತ್ಮವಾದಿ. ನೀನಾದರೋ ಫ್ರೊಯ್ಡ್‌ನ ಸಿದ್ಧಾಂತವನ್ನನುಸರಿಸುವ ಒಬ್ಬ ಲೌಕಿಕ ವ್ಯವಹಾರವಾದಿ. ನಿನ್ನ ವ್ಯವಹಾರ ವಾದದಲ್ಲೂ ಏನೂ ಆಳವಿರಲಿಲ್ಲ–ತಿರುಳಿರಲಿಲ್ಲ. ನಿನಗೆ ನಾನು ಒಂದೇ ಒಂದಾದ ನಾಮಧೇಯವನ್ನಿಡಬಹುದಾಗಿದ್ದಿದ್ದರೆ ಅದು "ಸ್ವೇಚ್ಛಾಚಾರಿ" ಎಂದು. ಆದರೂ ಅದೇಕೋ ಮನವು ನಿನ್ನ ಕೊರಗಿನೊಂದಿಗೆ ಕೊರಗುತ್ತಿತ್ತು; ನಗುವಿನೊಂದಿಗೆ ನಗುತ್ತಿತ್ತು. ಅದೇಕೆ ಹಾಗೆ ಎಂಬುದಕ್ಕೆ ಉತ್ತರವೇ ಸಿಗಲಿಲ್ಲ.

ಅಂದು, ನಿನ್ನ ವ್ಯಕ್ತಿತ್ವವು ಧ್ಯೇಯವಾದಿಯಾಗಿ ಅರಳಲಿರುವ, ಸುಪ್ತ ಸೌಂದರ್ಯವನ್ನು ಮರೆಯಾಗ ಹೊತ್ತ ಒಂದು ಮೊಗ್ಗಾಗಿದ್ದಿರಬೇಕು. ಬದುಕಿನ ಕಹಿಯ ಝುಳ ಜೋರಾಗಿ ಬಿದ್ದೊಡನೆಯೇ ಮೊಗ್ಗು ಅರಳಲು ಪ್ರಾರಂಭವಾಗಿದೆ. ಆದರೆ ನಮ್ಮಿರ್ವರ ಗೆಳೆತನಕ್ಕೀಗ ಒಂದು ಹೊಸ ವ್ಯಾಪ್ತಿ, ಹೊಸ ಅರ್ಥ ಬಂದಿದೆ, ಸಿಲ್ವರ್. ಇದರಿಂದ ತುಂಬಾ ಸಂತೋಷವಾಗಿದೆ—ದುಃಖ ದೆಡೆಯಲ್ಲೂ.

ನೀನು ಈ ತನಕ ಯಾವುದೋ ಸ್ವಪ್ನ ಲೋಕದಲ್ಲಿದ್ದಿ. ಈಗ ಎಚ್ಚರವಾಗಿದೆ—ಮೈ ತಿಳಿದಿದೆ. ನಿನ್ನ ಪರಿಸರವನ್ನು ಅರ್ಥ ಮಾಡಿಕೊಳ್ಳುವ ಸನ್ನಿವೇಶ ಬಂದಿದೆ.

ಆದರೆ ನಾಗರಿಕತೆಯ ಹೆಸರಲ್ಲಿ ಪಶುಜೀವನ ಮಾಡುತ್ತಿರುವ (ಲೈಂಗಿಕ ವ್ಯವಹಾರದಲ್ಲಿ), ಬಹುಸಂಖ್ಯಾಕರುಳ್ಳ ಸಂಯುಕ್ತ ಅಮೇರಿಕಾ ದೇಶದ ಪ್ರಜೆಗಳ ಲ್ಲೊಬ್ಬನಾದ ನೀನು ಸತ್ಯದರ್ಶನದ ದಿವ್ಯತೆಯ ಹೊಸಲಲ್ಲಿ ನಿಲ್ಲಲೆತ್ನಿಸುತ್ತಿರುವಾಗ ಭಾರತ ದೇಶದಲ್ಲಿ ಅನೇಕರು, ನಮ್ಮ ಜೀವನವೇ ರಸಮಯವೆಂದು ಹುಚ್ಚು ಹುಚ್ಚಾಗಿ ಭಾವಿಸಿ, ಭ್ರಮಿಸಿ, ಅವರ ಭವ್ಯ ಪರಂಪರೆಯ ಅಧ್ಯಾತ್ಮ ಸಂದೇಶವನ್ನು ಮರೆತು ಕೀಳ್ಮಟ್ಟದ ಅನುಕರಣೆಯಲ್ಲಿ ತೊಡಗಲೆತ್ನಿಸುತ್ತಿದ್ದಾರೆ.

ಇಲ್ಲವಾದರೆ ಭಾರತದ ಸನಾತನ ಸಂಪ್ರದಾಯದ ನವನೀತವಾಗಿರುವ ಜಾನಕೀ ದೇವಿಯೆಲ್ಲಿ? ಪಾಶ್ಚಾತ್ಯ ಸಂಪ್ರದಾಯದ ಕುರುಹಾಗಿರುವ ನಿನ್ನ ಶ್ರೀಮತಿ [ಅಲ್ಲ ಇನ್ನೆಂತಹ ಶ್ರೀಮತಿ!]-ಜಾರಿಣಿ ಲೂಸಿ ಸಿಲ್ವರ್‌ಳೆಲ್ಲಿ?

ನಮ್ಮ ಹೊಲಿವುಡ್‌ನಲ್ಲಿ ಸಿದ್ಧವಾಗುತ್ತಿರುವ, ನಮ್ಮ ಕೊಳಕನ್ನೇ ನಗ್ನ ವಾಗಿ ಚಿತ್ರಿಸುತ್ತಿರುವ ನಮ್ಮ ಚಲಚ್ಚಿತ್ರಗಳನ್ನು ನೋಡಲು, ಇಲ್ಲಿಯ ಯುವಕ ಯುವತಿಯರು ಮೇಲ್ಬಾಯುತ್ತಿರುವಾಗ ಅವರಿಗೆ ಜಾನಕೀ ದೇವಿಯ ಆದರ್ಶ ಏನೇನೂ ರುಚಿಸುತ್ತಿಲ್ಲವೆಂದೂ ಅವರಿಗೆ ಬೇಕಾದ್ದು ಲೂಸಿಯ ಇಲ್ಲವೇ ಮೆರಿಲಿನ್ ಮುನ್ರೋವಿನ ಆದರ್ಶವೇ ಆಗಿದೆಯೆಂದೂ ಅರ್ಥವಾಗುವುದಿಲ್ಲವೇ? ಭಾರತದ ಕರುಳನ್ನೂ, ಪಶ್ಚಿಮದ ತಿರುಳನ್ನೂ, ಸ್ವಾಮಿ ವಿವೇಕಾನಂದರಂತೆ ಒಂದಾಗಿಸಿ, ಜಗತ್ತಿಗೆ ಬೇಕಾದ ರಸಪಾಕ ನೀಡುವ ಬದಲು, ಇಲ್ಲಿಯ ಕೊಳಕನ್ನೂ, ಅಲ್ಲಿಯ ಥಳಕನ್ನೂ ಒಟ್ಟಾಗಿಸಿ, ಜೀವದಾನನೀಡುವ ಅಮೃತವೆಂಬಂತೆ ಪಾನ ಮಾಡುವ ಭಾರತೀಯರ ಹುಚ್ಚಿಗೇನೆನ್ನಬೇಕು? ಇರಲಿರಲಿ – ನಾನು ವಿಷಯಾಂತರ ಮಾಡಿ ಎಲ್ಲಿಗೋ ಬಂದು ತಲಪಿದೆ.

ವಿವಾಹ ವಿಚ್ಛೇದಕ್ಕೆ ಲೂಸಿ ಸಿಲ್ವರ್‌ಳೇ ಅರ್ಜಿ ಸಲ್ಲಿಸಿದ್ದಾಳೆಂದೂ, ಮಗು ಕೆನ್ನಿಯನ್ನೂ ಅವಳ ರಕ್ಷಣೆಗೆ ನೀಡಬೇಕೆಂಬುದಾಗಿಯೂ ಅದರಲ್ಲಿ ಕೇಳಿಕೊಂಡಿದ್ದಾಳೆಂದೂ ನಿನ್ನ ಪತ್ರದಿಂದ ತಿಳಿಯಿತು. ಇದಲ್ಲದೆ, ಅದರ ಮೇಲೆ ನೀನು ಅವಳಿಗೆ ವರ್ಷಾಶನ ನೀಡಬೇಕಲ್ಲವೇ? ಸಿಲ್ವರ್, ನೀನೀ ವಿಚಾರದಲ್ಲಿ ಅತ್ಯುತ್ತಮ ತಜ್ಞ ವಕೀಲರನ್ನು ನೇಮಿಸಿ, ನಿನ್ನ ಕಾರ್ಯದಲ್ಲಿ ನೀನು ಸೋಲದಂತೆ ನೋಡಿಕೊಳ್ಳಲೇ ಬೇಕು. ಆ ಜಾರಿಣಿಗೆ ನಿನ್ನ ಒಂದೇ ಒಂದು ಡಾಲರು ಕೂಡಾ ತೆರುವಂತಾಗಬಾರದು.

ಆದರೆ ಗೆಳೆಯಾ, ನಿನ್ನ ಜೀವದ ಕುರಿತಾಗಿ ವಿವಾಹವಿಚ್ಛೇದವಾಗುವ ತನಕವೂ ನೀನು ಬಹಳ ಜಾಗರೂಕನಾಗಿರಬೇಕು––ತಿಳಿದಿರು. ಅವಳ ಕಡೆಯಲ್ಲಿ ಬಹಳ ಮಂದಿ ತಲೆಹೋಕರಿರಬಹುದು. ನಿನ್ನ ಜೀವ ಹಿಂಡಿ ನಿನ್ನ ಸೊತ್ತುಗಳನ್ನು ಅಪಹರಿಸುವ ಉದ್ದೇಶವು ಅವರಿಗಿರಬಹುದು. ವ್ಯವಹಾರದಲ್ಲಿ ಚತುರನಾದ ನಿನಗೆ ನಾನೇನೂ ಹೆಚ್ಚಿಗೆ ಬರೆಯಬೇಕಾಗಿಲ್ಲ.

ಸಿಲ್ವರ್, ಈಗ ನನ್ನ ಮನಸ್ಸು ನಿನ್ನ ಭವಿಷ್ಯತ್ತಿನ ಕುರಿತಾಗಿ ಚಿಂತಿಸುತ್ತಿದೆ. ನಿನ್ನ ಮನೆಯ ಮುಂದಿನ ಏರ್ಪಾಡೇನು? ಕೆನ್ನಿಯ ಲಾಲನೆ

ಪಾಲನೆ ಮಾಡುವವರಾರು? ನೀನು ಪ್ರಾಯಶಃ ಬೇಗನೇ ಬೇರೆ ವಿವಾಹ ಮಾಡಿಕೊಳ್ಳಬಹುದೆಂದು ಭಾವಿಸುತ್ತೇನೆ. ಈ ಕುರಿತಾಗಿ ನಿನ್ನ ಕಾರ್ಯ ಕ್ರಮವನ್ನು ದಯವಿಟ್ಟು ತಿಳಿಸು.

ನಿನ್ನ ಮರ್ಮಭೇದಕ ಸಮಸ್ಯೆಗಳೆಡೆಯಲ್ಲೂ ನೀನು ನನ್ನ ಪತ್ರವನ್ನು ಕೂಲಂಕಷವಾಗಿ ಓದಿ ಮೆಚ್ಚುಗೆ ಸೂಚಿಸಿದ್ದು ನೋಡಿ ನನಗೆ ಬಹಳ ಹರ್ಷ ವಾಯಿತು. ನನ್ನ ಸಿಲ್ವರ್‌ನ ಕುರಿತಾಗಿ ಬಹಳ ಅಭಿಮಾನವೂ ಬಂತು.

ಭಾರತದ ಕುರಿತಾಗಿ ಆಮೂಲಾಗ್ರವಾಗಿ ತಿಳಿಯುವ ನಿನ್ನ ಮನೋಭಿಲಾ ಷೆಯು ನಿನ್ನ ಕೆಲವು ಪ್ರಶ್ನೆಗಳಿಂದ ವ್ಯಕ್ತವಾಗುತ್ತಿದೆ. ಮುಖ್ಯವಾಗಿ ಇಲ್ಲಿಯ ಭಿಕ್ಷುಕರ ಸಮಸ್ಯೆಯ ಕುರಿತಾಗಿ ನೀನು ಪ್ರಶ್ನಿಸಿರುತ್ತಿ. ಬಹಳ ಒಳ್ಳೆಯದು. ನಾನೂ ಈ ಸಲ ನಿನಗೆ ಅದನ್ನೇ ಬರೆಯಬೇಕೆಂದು ನಿಶ್ಚಯಿಸಿದ್ದೆ. ಆದ್ದರಿಂದ ಸರಿಹೋಯಿತು.

ಹಾಂ ಮರೆತು ಹೋಯಿತು—ನಿನ್ನ ಇನ್ನೊಂದು ಪ್ರಶ್ನೆಯಿದೆ, ಅಲ್ಲವೇ? ಯೋಗೀಶ್ ಯಾರು? ಎಂಬುದಾಗಿ ಕೇಳಿದ್ದಿ. ಕಮಲನಯನರಿಗೇನೇ ಇರುವ ಇನ್ನೊಂದು ಹೆಸರು ಯೋಗೀಶ್. ಅವರ ಮನೆಯಲ್ಲಿ ಕೆಲವರು ಅವ ರನ್ನು ಯೋಗೀಶ್ ಎಂದು ಅಕ್ಕರೆಯಿಂದ ಕರೆಯುತ್ತಾರಂತೆ. ಆದರೆ ಈ ವಿವರ ವನ್ನು ನನ್ನ ಪತ್ರದಲ್ಲಿ ಬರೆಯಲು ಕಳೆದಸಲ ಮರೆತೇ ಹೋಗಿತ್ತು.

ಸಿಲ್ವರ್, ಇಲ್ಲಿಯ ಭಿಕ್ಷುಕರ ಸಮಸ್ಯೆಯು ನಿಜವಾಗಿಯೂ ಚಿಂತಾಜನಕ ವಾಗಿದೆ, ಮಾತ್ರವಲ್ಲ ಈ ಬೃಹತ್ ದೇಶಕ್ಕೆ ಅಪಕೀರ್ತಿಯನ್ನು ತರುವಂತಹ ದಿದೆ.

ಇಲ್ಲಿ ಈ ದೇಶದಲ್ಲಿ ಎಲ್ಲಿ ಹೋದರೂ ಕಾಣುವಂತಹ ಒಂದು ದೃಶ್ಯ ಭಿಕ್ಷುಕರದು. ಅವರಿಲ್ಲದ ಊರಿಲ್ಲ. ಅವರಿಲ್ಲದ ಸ್ಥಳವಿಲ್ಲ. ಅವರಿಲ್ಲದ ಕಾರ್ಯಕ್ರಮವೂ ಇಲ್ಲ. ವಿಮಾನ ನಿಲ್ದಾಣಗಳು, ರೈಲ್ವೆ ಸ್ಟೇಷನುಗಳು, ಬಸ್ ಸ್ಟೇಂಡ್‌ಗಳು, ಬಂದರುಗಳು, ದೇವಾಲಯ, ಮಸೀದಿ, ಚರ್ಚುಗಳು, ರಸ್ತೆಗಳು, ಉದ್ಯಾನಗಳು, ಕಾಫಿ ಹೋಟೇಲುಗಳು, ಊಟದ ಹೋಟೇಲುಗಳು, ಮದುವೆ ಮುಂಜಿಗಳು, ಸಭೆ ಸಮಾರಂಭಗಳು, ನಾಟಕ, ಸಿನೆಮಾ, ಸರ್ಕಸುಗಳು, ರೈಲು, ಬಸ್ಸುಗಳು, ಹೀಗೆ ಪ್ರತಿಯೊಂದು ಕಡೆಯಲ್ಲೂ ವಿವಿಧ ಕಾರಣಗಳನ್ನು ಮುಂದೆ ಮಾಡಿ ಭಿಕ್ಷೆ ಬೇಡಿ, ನಮ್ಮ ಮನವನ್ನು ವ್ಯಗ್ರಗೊಳಿಸುವ ಜನರನ್ನಿಲ್ಲಿ ಕಾಣಬಹುದು. ಇದು ಭಾರತದ

ಆರ್ಥಿಕ ಸಮಸ್ಯೆಯ ಪ್ರತೀಕವೂ ಆಗಿದೆ; ಸಮಾಜದ ಸ್ವಭಾವದ ಕೈಗನ್ನಡಿಯೂ ಆಗಿದೆ.

ಇಂತಹ ಭಿಕ್ಷುಕರಿಗೆ ವ್ಯಕ್ತಿತ್ವದ ಅಭಿಮಾನವಿಲ್ಲ; ಮಾನ, ಮರ್ಯಾದೆಗಳಿಲ್ಲ; ಗೌರವ ಲವಲೇಶವಿಲ್ಲ. ಅವರು ಬೇಡುತ್ತಾರೆ, ಕಾಡುತ್ತಾರೆ, ಕಾಲಿಗೆ ಬೀಳುತ್ತಾರೆ, ಹಿಂದೆ ಮುಂದೆ ಹೋಗುತ್ತಾರೆ, ಅಳುತ್ತಾರೆ, ನಗುತ್ತಾರೆ, ಮೈ ಮುಟ್ಟುತ್ತಾರೆ, ಅಗತ್ಯವಿದ್ದರೆ ಬೈದು ಭಂಗಿಸುತ್ತಾರೆ, ಸಂದರ್ಭ ಬಂದರೆ ಕದಿಯುತ್ತಾರೆ. ಹೀಗೆ ಎಲ್ಲಾ ವಿದ್ಯೆಗಳಲ್ಲೂ ಅವರು ಪಾರಂಗತರಾಗಿದ್ದಾರೆ.

ಇಂತಹ ಭಿಕ್ಷುಕರಲ್ಲಿ ಕುರುಡರು, ಕಿವುಡರು, ಮೂಕರು, ಹೆಳವರು, ಕುಂಟರು ಮೊದಲಾದ ಅಂಗವಿಕಲರಿದ್ದಾರೆ. ಕುಷ್ಠ, ಮೇಹ, ಎಕ್ಸಿಮಾ, ಕ್ಷಯ, ಕೇನ್ಸರ್, ಮೊದಲಾದ ರೋಗಪೀಡಿತರಿದ್ದಾರೆ. ಮುದುಕರು, ಮಕ್ಕಳು, ಸ್ತ್ರೀಯರು ಇದ್ದಾರೆ. ನಿರುದ್ಯೋಗದಲ್ಲಿ ಬಳಲಿ ಬೆಂಡಾದವರಿದ್ದಾರೆ. ಬೊಜ್ಜು ಬೆಳೆಸಿ, ದುಡಿಯಲಾರದ ಆಲಸಿಗ, ದಿಂಡಾಳುಗಳಿದ್ದಾರೆ. ಯಾವುದೋ ಗೀತೆಗಳನ್ನು ಹಾಡುತ್ತಾ ಭಿಕ್ಷೆಬೇಡುವವರಿದ್ದಾರೆ; ಹಿಂದೂ ದೇವ ದೇವಿಯರ ಪ್ರತಿಮೆಗಳನ್ನು ಪೆಟ್ಟಿಗೆಯಲ್ಲಿಟ್ಟು ಹೊತ್ತು, ಪುಣ್ಯ ಕ್ಷೇತ್ರಗಳಿಗೆ ಪಯಣ ಬೆಳೆಸುತ್ತೇನೆನ್ನುವವರಿದ್ದಾರೆ; ಹೋರಿಯೊಂದನ್ನು ಬಸವನೆಂದು ಅಲಂಕರಿಸಿ, ಮನೆ ಮನೆಗೆ ಕೊಂಡೊಯ್ದು, ಕಣಿ ಹೇಳುತ್ತೇವೆಂದು ಸುಲಿಗೆ ಮಾಡುವವರಿದ್ದಾರೆ; ತಂಬೂರಿ ಹಿಡಕೊಂಡು, ಏನೇನೋ ಮಾಡಿಕೊಂಡು, ಭವಿಷ್ಯತ್ತನ್ನೇ ಹೇಳುತ್ತೇವೆನ್ನುವ ಜನರಿದ್ದಾರೆ; ವಿವಿಧ ವೇಷಧಾರಣೆಗಳನ್ನು ಮಾಡಿ, ಮನರಂಜನೆ ಮಾಡುವ ನೆಪದಲ್ಲಿ ಹಣ ಎತ್ತುವವರಿದ್ದಾರೆ; ತಮ್ಮ ಮಕ್ಕಳ, ಬಂಧುಬಾಂಧವರ ವಿದ್ಯಾಭ್ಯಾಸ, ಮದುವೆ, ಮುಂಜಿಗೆಂದು ಸಹಾಯ ಕೇಳುವವರಿದ್ದಾರೆ; ಹಣದ ಚೀಲ ಬೀಸಾಡಿಹೋಯಿತೆಂದು ಸಾಲ ಕೇಳುವವರಿದ್ದಾರೆ; ಧನ ಯಾಚಿಸುವವರಿದ್ದಾರೆ; ಮದುವೆಯೇ ಮೊದಲಾದ ಸಮಾರಂಭಗಳಲ್ಲಿ ಎಂಜಲನ್ನವನ್ನೇ ಅಮೃತವೆಂದು ಸವಿಯಲು ಸಿದ್ಧರಾಗಿ ಬಂದು, ಅದಕ್ಕಾಗಿ ಜಗಳಾಡುವ ಹರಿಜನರಿದ್ದಾರೆ; ಭಿಕ್ಷಾಟನೆಯೇ ತಮ್ಮ ವೃತ್ತಿಯೆಂದು, ತಾವು ದಾಸಸಂಥದವರೆಂದು, ಶಂಖ ಹಿಡಿದುಕೊಂಡು, ಭಿಕ್ಷೆ ಬೇಡುವವರಿದ್ದಾರೆ; ಮಂಗನನ್ನೂ, ಹಾವನ್ನೂ ಕುಣಿಸುತ್ತಾ ಹಣ ಕೇಳುವವರಿದ್ದಾರೆ; ಅವಿವಾಹಿತ ಗರ್ಭಿಣಿಯರಾಗಿ ಇಲ್ಲವೇ ತಾಯಾಗಿ ತಿರಸ್ಕೃತರಾದ ಸ್ತ್ರೀಯರಿದ್ದಾರೆ; ಹುಚ್ಚರಿದ್ದಾರೆ; ಇತರ ಅಂಗವಿಕಲರೊಂದಿಗೆ ಅವರಿಗೆ ನೆರವಾಗುವುದಕ್ಕೆಂದು ಬಿಕ್ಷೆ ಬೇಡುವವರಿದ್ದಾರೆ. ಹೀಗೆ ಎಷ್ಟೋ ರೀತಿಯ ಜನರು ಲಕ್ಷಗಟ್ಟಲೆಯಲ್ಲಿ ಬಿಕ್ಷೆ ಬೇಡುತ್ತಾರೆ.

ಕೆಲವು ಹಳ್ಳಿಗಳಲ್ಲಿ ಶಾಲೆಗೆ ಹೋಗದೆ ಸುಮ್ಮನೆ ಅಡ್ಡಾಡುತ್ತಿರುವ ಮಕ್ಕಳಿಗೆ ಊರಿಗೆ ಬಂದವರೆಲ್ಲರಿಂದ ಪುಡಿಕಾಸು ಬೇಡುವುದೇ ಸಂತಸದ ಉದ್ಯೋಗ.

ಈ ಭಿಕ್ಷುಕರ ಸಮಸ್ಯೆಗೆ ಮೂಲವೇನೆಂದು ನಾನು ಬಹಳ ತಲೆಕೆರೆದು ಯೋಚಿಸಿದ್ದೇನೆ–ಅನೇಕರ ಕೂಡೆ ಮಾತನಾಡಿದ್ದೇನೆ. ಬಹಳ ಭಿಕ್ಷುಕರನ್ನೂ ಪ್ರಶ್ನಿಸಿದ್ದೇನೆ. ಹೀಗೆ ಬಹುಮುಖ ಅನ್ವೇಷಣೆಯ ಪರಿಣಾಮವಾಗಿ ನಾನು ಇದರ ಗುಟ್ಟನ್ನು ತಿಳಿದುಕೊಂಡಿದ್ದೇನೆ ಎಂದು ಹೇಳಬಹುದಾಗಿದೆ.

ಬಡತನವೇ ಭಿಕ್ಷಾಟನೆಯ ಮೂಲವೆಂದು, ನೀನೂ ಇತರರೂ ಹೇಳ ಬಹುದಾಗಿದೆ. ಅದೊಂದು ಪ್ರಾಮುಖ್ಯ ಕಾರಣವೇ ಆದರೂ-ಇತರ ಬಹಳ ವಿಷಯಗಳೂ ಸೇರಿಕೊಂಡು ಭಾರತದಲ್ಲಿ ಭಿಕ್ಷಾಟನೆಯ ಸಮಸ್ಯೆಯು ಬಹಳ ಜಟಿಲವಾಗುವಂತೆ ಮಾಡಿವೆ.

ನಾನು ಹಿಂದೆಯೇ ಬರೆದಂತೆ ಇಲ್ಲಿ ಸನ್ಯಾಸಿಗಳ ಸಂಖ್ಯೆ ಮೊದಲಿನಿಂದಲೂ ಬಹಳ ಇತ್ತು. ಸನ್ಯಾಸದ ಮೂಲ ಧರ್ಮದ ಪ್ರಕಾರ ಆಹಾರ ಸಂಪಾದ ನೆಯ ಯತ್ನವೂ ಕೂಡಾ ಇರಬಾರದಾಗಿದ್ದರೂ, ಜೀವವುಳಿಯದೆ ಸಾಧನೆ ಯಿಲ್ಲವೆಂಬುದರಿಂದ, ಭಿಕ್ಷಾಟನೆಯ ಮೂಲಕವೇ ಅವರು ಹೊಟ್ಟೆ ಹೊರಕೊ ಳ್ಳುವ ಪದ್ಧತಿ ರೂಢಿಗೆ ಬಂತು. ಹಾಗೆ ಅಧಿಕೃತವಾಗಿ ಹಿಂದೂ ಸಮಾಜವು ಭಿಕ್ಷಾಟನೆಗೂ, ಭಿಕ್ಷೆಯ ನೀಡುವಿಕೆಗೂ ಬಹಳ ದೊಡ್ಡ ಸ್ಥಾನವನ್ನೇ ಕೊಟ್ಟಿತು. ಈ ಮೊದಲೇ ನಾನು ತಿಳಿಸಿದಂತೆ, ಸನ್ಯಾಸದ ದುರುಪಯೋಗವಾಗ ತೊಡಗಿ ದಾಗ ಬಹುಜನರು ಹೊಟ್ಟೆಹೊರೆಯುವುದಕ್ಕಾಗಿಯೇ ಸನ್ಯಾಸಿಯ ವೇಷಹಾಕಿ ಭಿಕ್ಷೆಯೆತ್ತಲು ತೊಡಗಿದರು.

ಹೀಗಿರುತ್ತಾ ಭಿಕ್ಷೆಯೆತ್ತುವವರ ಸಂಖ್ಯೆ ಬೆಳೆಯಿತು. ಅದಕ್ಕೆ ಸಾಕಷ್ಟು ಬೆಲೆಯೂ ಉಳಿಯಿತು. ಸನ್ಯಾಸಿಗಳಂತಹ ಗೌರವಾನ್ವಿತ, ಹಾಗೂ ಪೂಜ್ಯ ವರ್ಗದವರೇ ಭಿಕ್ಷೆಯೆತ್ತುವರೆಂಬುದರಿಂದ ಹಿಂದೂ ಸಮಾಜದಲ್ಲಿ ಭಿಕ್ಷಾಟ ನೆಯು ಗೌರವದ ವೃತ್ತಿಯೆಂದೇ ಸ್ವೀಕೃತವಾಯಿತು. ಹೊರತು ಅಗೌರವದ ಕಾರ್ಯವೆಂದು ತಿಳಿಯಲ್ಪಡಲಿಲ್ಲ.

ಅಲ್ಲದೆ ಪುನರ್ಜನ್ಮದಲ್ಲಿ ವಿಶ್ವಾಸವಿಡುವ ಹಿಂದೂ ಧರ್ಮದ ಕರ್ಮಕಾಂ ಡದ-ಸಿದ್ಧಾಂತ ಪ್ರಕಾರ, ದಾನಧರ್ಮಗಳು ಬಹಳ ಪುಣ್ಯ ಕಾರ್ಯವೆಂದೂ, ಅದರ ಪ್ರತಿಫಲವಾಗಿ ಸ್ವರ್ಗಸುಖ ದೊರೆಯುವುದೆಂದೂ, ಸ್ವರ್ಗವಾಸ ಮುಗಿದು,

ಪುನಃ ಭೂಮಿಗೆ ಇನ್ನೊಂದು ಜನ್ಮದಲ್ಲಿ ಮರಳಿದಾಗಲೂ, ಅಂತಹ ಪುಣ್ಯ ಕಾರ್ಯ ಮಾಡಿದವರಿಗೆ ಬಹಳ ರೀತಿಯ ಸುಖಜೀವನವು ಹಿಂದಿನ ಕರ್ಮ ಫಲವಾಗಿ ದೊರೆಯುವುದೆಂದೂ ವಿಶ್ವಾಸವಿದೆ. [ಪುನರ್ಜನ್ಮದ ಪ್ರಶ್ನೆಯಿಲ್ಲವಾದರೂ, ನಮ್ಮ ಕ್ರೈಸ್ತ ಸಿದ್ಧಾಂತದಲ್ಲಿಯೂ, ದಾನಧರ್ಮಗಳಿಗೆ ಪ್ರಾಧಾನ್ಯತೆಯಿದೆ—ಹಾಗೂ ಅದರಿಂದ ದೇವರ ಪ್ರೇಮವನ್ನು ಪಡೆದು ದೇವರ ರಾಜ್ಯಕ್ಕೆ ಹೋಗಬಹುದು ಎಂಬುದಾಗಿ ನಾವು ಅಭಿಪ್ರಾಯ ಪಡುತ್ತೇವೆ. ಆದರೆ ನಮ್ಮಲ್ಲಿ ಆರ್ಥಿಕ ಪರಿಸ್ಥಿತಿ ಬದಲಾದುದರಿಂದ ಮತ್ತು ಇತರ ಕಾರಣಗಳಿಂದ ಭಿಕ್ಷಾಟನೆಯ ಪದ್ಧತಿ ಇಲ್ಲಿಯಂತೆ ಬೆಳೆಯಲಿಲ್ಲ.]

ಸಿಲ್ವರ್, ನಿನಗೆ ಹಿಂದಿನ ಪತ್ರಗಳಲ್ಲೇ ಭಾರತೀಯರು ಬಹುಮಟ್ಟಿಗೆ ವೈಯ್ಯಕ್ತಿಕವಾದಿಗಳು ಎಂಬುದನ್ನು ನಾನು ಬರೆದಿರುತ್ತೇನೆ ಎಂಬುದು ನನ್ನ ನೆನಪು. ಅಂದರೆ ಅದರ ಅರ್ಥ ಅವರು ಉತ್ತಮ ಕಾರ್ಯ ಮಾಡುವುದಿದ್ದರೂ ತನ್ನ ಸ್ವಂತ ವೈಯ್ಯಕ್ತಿಕ ನೆಲೆಯಲ್ಲಿ ಮಾಡುವುದಕ್ಕೆಯೇ ಇಷ್ಟಪಡುತ್ತಾರೆ ಹೊರತಾಗಿ ಸಾಂಘಿಕವಾಗಿ ಮುಂದರಿಯಲು ಅವರು ಇಷ್ಟ ಪಡುವುದಿಲ್ಲ.

ಆದ್ದರಿಂದ ದಾನಧರ್ಮ ಮಾಡಬೇಕೆಂಬ ಸಿದ್ಧಾಂತವನ್ನೂ ಅವರು ವೈಯ್ಯಕ್ತಿಕವಾಗಿ ಕಾರ್ಯರೂಪಕ್ಕೆ ತರಲು ಇಷ್ಟಪಡುತ್ತಾರಲ್ಲದೆ ಸಾಮೂಹಿಕವಾಗಿ, ಸಂಘ ಸಂಸ್ಥೆಗಳ ಮೂಲಕವಲ್ಲ. ಹಾಗಿರಲು, ದಾನಧರ್ಮಮಾಡಬೇಕೆಂಬ ಈ ಸಿದ್ಧಾಂತವೂ ವೈಯ್ಯಕ್ತಿಕ ನೆಲೆಯಲ್ಲಿ ಕಾರ್ಯರೂಪಕ್ಕೆ ಬರಬೇಕಾಯಿತು. ಅಂದರೆ ಭಿಕ್ಷೆ ನೀಡುವುದರಲ್ಲಿ ಭಾರತೀಯರು ಮೇಲ್ವಾಯ್ದರು. ಅಂತಹ ಸಂದರ್ಭಕ್ಕಾಗಿ ಕಾಯುತ್ತಿದ್ದರು.

ಇಂದಿಗೂ ಕೂಡಾ ಭಾರತೀಯರಲ್ಲಿ ಮುಖ್ಯವಾಗಿ ಬ್ರಾಹ್ಮಣರಲ್ಲಿ ಮದುವೆ, ಮುಂಜಿಗಳಲ್ಲಿ ಹಾಗೂ ಉತ್ತರಕ್ರಿಯೆಗಳಲ್ಲಿ ಕೂಡಾ ದಾನ, ದಕ್ಷಿಣೆಗಳನ್ನು ನೀಡುವುದಕ್ಕೆ ಬಹಳ ಪ್ರಾಮುಖ್ಯತೆಯಿದೆ—ಸಮಾರಂಭಗಳಲ್ಲಿ ಅದಕ್ಕಾಗಿಯೇ ನೂರಾರು ರುಪ್ಯಾಗಳೂ ವಿನಿಯೋಗವಾಗುತ್ತಿವೆ.

ಈ ಕಾರಣದಿಂದಲೂ, ಭಿಕ್ಷುಕರಿಗೆ ಒಂದಲ್ಲ ಒಂದು ರೀತಿಯಿಂದ ನೇರವಾದ ಕರೆ, ಒಂದು ರೀತಿಯ ಸ್ವಾಗತ ಇಲ್ಲಿ ಸಿಕ್ಕಂತಾಗಿದೆ. ಹಾಗಿರಲು ಭಿಕ್ಷಾಟನೆ ಹೇಗೆ ಇಲ್ಲದಿರಬೇಕು?

ಅಲ್ಲದೆ ಸುಮಾರು ಏಳೆಂಟು ಶತಮಾನಗಳಿಂದ ಹಿಂದೂ ಧರ್ಮದಲ್ಲಿ ಭಕ್ತಿಯೋಗದ ಒಂದು ಅಂಗವಾಗಿ ದಾಸಪಂಥವೆಂಬುದು ರೂಢಿಗೆ ಬಂತು.

ಆ ಪಂಥದವರು ಕೇವಲ ಭಕ್ತರಾಗಿ ಭಗವಂತನ ಭಜನೆ ಹಾಡುತ್ತಾ ಮನೆ ಮನೆಗೆ ಹೋಗುತ್ತಿದ್ದರು. ಜನರು ಏನು ಕೊಟ್ಟರೋ ಅದನ್ನು ಭಿಕ್ಷೆಯಾಗಿ ಸ್ವೀಕರಿಸುತ್ತಿದ್ದರು—ಅದರಲ್ಲೇ ಜೀವನ ಸಾಗಿಸುತ್ತಿದ್ದರು.

ಇಂತಹ ರೀತಿಯಲ್ಲಿ ನಿಜವಾದ ಭಗವದ್ಭಕ್ತರಾಗಿ, ಈ ಪಂಥದ ಅನುಯಾಯಿಗಳಾಗಿರುವವರು ಭಾರತದಲ್ಲಿ ಇಂದು ಪ್ರಾಯಶಃ ಯಾರೂ ಇಲ್ಲ. ಆದರೆ ಹಿಂದಿನ ದಾಸ ಪಂಥದವರ ವಂಶಜರು, ಇಂದೂ ಇದ್ದಾರೆ. ಅವರಲ್ಲಿ ಭಗವದ್ಭಕ್ತಿಯ ಗಂಧಗಾಳಿಯೂ ಇರುವುದಿಲ್ಲ. ಅವರಲ್ಲಿ ಹಲವರು ಕೃಷಿ ಕರ್ಮಿಗಳಾಗಿರುವುದೂ ಇದೆ. ಅವರು ತಮ್ಮನ್ನೇ ತಾವು ದಾಸರೆಂದು ಕರೆದುಕೊಳ್ಳುತ್ತಾರೆ. ಈ 'ದಾಸ'ರ ಕಾರ್ಯವೇನೆಂದರೆ ಯಾವುದೇ ದಿನ, ಮುಖ್ಯವಾಗಿ ಶನಿವಾರ ಒಂದು ಶಂಖ ಮತ್ತು ಒಂದು ಜಾಗಟೆ ತೆಗೆದುಕೊಂಡು, ಮನೆಮನೆ ತಿರುಗಾಡುವುದು. ಮನೆ ಜಗಲಿಗೆ ಬಂದು, ಜಾಗಟೆ ಬಡಿದು, ಶಂಖ ಊದಿ, ಅಕ್ಕಿ ಯಾ ಇತರ ಧಾನ್ಯಗಳ ರೂಪದಲ್ಲಿ ಅಥವಾ ಮೌಲ್ಯ ರೂಪವಾಗಿ, ಭಿಕ್ಷೆ ಪಡೆದು ಹೋಗುವುದು-ಇದೇ ಆಗಿದೆ. ಕೃಷಿ ಇತ್ಯಾದಿಗಳಿಂದ ಇತರ ಹೇರಳ ಉತ್ಪತ್ತಿಯಿದ್ದವರೂ ಕೂಡಾ ಇದು ತಮ್ಮ 'ಕುಲವೃತ್ತಿ'ಯೆಂದು ಭಿಕ್ಷಾಟನೆಯನ್ನು ವಾರಕೊಮ್ಮೆಯಾದರೂ ನಡೆಸುವವರಿದ್ದಾರೆ.

ಹೀಗೆ ಅನ್ಯ ದೇಶಗಳಂತಲ್ಲದೆ, ಭಾರತದಲ್ಲಿ ಭಿಕ್ಷೆ ನೀಡುವುದಕ್ಕೂ ಬೆಲೆಯಿದೆ, ಮರ್ಯಾದೆಯಿದೆ–ಭಿಕ್ಷೆ ಪಡೆಯುವುದಕ್ಕೂ, ಧಾರ್ಮಿಕ ಬೆಂಬಲವಿದೆ-ಒಂದು ರೀತಿಯ ಬೆಲೆಯೂ ಇದೆ. [ಈಗೀಗ ಇದು ಅಪಮರ್ಯಾದೆಯಾಗಿ ತಿಳಿಯಲ್ಪಡುತ್ತಿದೆ ಎಂಬುದನ್ನು ಒಪ್ಪಿಕೊಳ್ಳಲೇ ಬೇಕು.]

ಇನ್ನು ಬಹು ಜನರು ಭಿಕ್ಷಾಟನೆಯ ಮನೋಭಾವನೆಯಲ್ಲೇ ಬೆಳೆದು ಬಂದಿದ್ದಾರೆ. ದುಡಿಯಲು ಅವರು ಸಮರ್ಥರಾದರೂ, ದುಡಿದುಣ್ಣುವ ಯೋಚನೆಯೇ ಅವರ ತಲೆಯಲ್ಲಿ ಉದಿಸುವುದಿಲ್ಲ. ಚಿಕ್ಕಂದಿನಿಂದಲೇ ಹೆತ್ತವರ ಪ್ರೇರಣೆಯಲ್ಲಿಯೇ ಈ ಕಾರ್ಯ ಮಾಡುತ್ತಾ ಬೀದಿ ಬೀದಿಗಳಲ್ಲಿ ತಿರುಗಾಡಿ ಅಭ್ಯಾಸವಾದವರು ಅದೇ ಮನೋಭಾವನೆಯನ್ನು ಸಹಜವಾಗಿ ಸ್ಥಿರಪಡಿಸಿಕೊಳ್ಳುತ್ತಾರೆ. ಅವರಿಗದನ್ನು ಬಿಡುವುದು ಸಾಧ್ಯವಾಗುವುದಿಲ್ಲ.

ಮೊನ್ನೆ ಆದಿತ್ಯವಾರ ಒಂದು ಕುತೂಹಲಕಾರಿ ಘಟನೆ ನಡೆಯಿತು. ನಾನು ಜಯನಾಥರೊಂದಿಗೆ ರೈಲಿನಲ್ಲಿ ಮದ್ರಾಸಿನ ಬಳಿಯಿರುವ ಟ್ರಿವೆಲ್ಲೂರ್ ಎಂಬ

ಲ್ಲಿಗೆ ವಿಹಾರಕ್ಕಾಗಿ ಹೋಗಿದ್ದೆ. ನಾವು ಬೈಸಾರಿ ನಾಲ್ಕು ಗಂಟೆಗೆ ಹೋದವರು ಅಲ್ಲೇ ಬಳಿಯ ಮೈದಾನಿನಲ್ಲಿ ಕುಳಿತು ವಿವಿಧ ವಿಷಯಗಳ ಕುರಿತು ಮಾತನಾಡತೊಡಗಿದೆವು. ಕತ್ತಲಾದ್ದೂ ನಮಗೆ ತಿಳಿಯಲೇ ಇಲ್ಲ.

ಅಷ್ಟರಲ್ಲಿ ಜಯನಾಥರು ನಸುನಗುತ್ತಾ ಇನ್ನೊಂದೆಡೆಗೆ ನೋಡುತ್ತಿದ್ದದ್ದು ತಿಳಿದು ನಾನೂ ಅತ್ತ ದೃಷ್ಟಿ ಬೀರಿದೆ. ಒಬ್ಬ ಚಿಂದಿಯುಟ್ಟು ಕುಂಟುತ್ತಾ ಬರುವ ಮುದುಕ ಭಿಕ್ಷುಕನು ಸಾಮಾನ್ಯಮಧ್ಯಮ ವರ್ಗದವರ ಮನೆಯ ಬಳಿಗೆ ಬರುತ್ತಿದ್ದನು. ಅವನೇನೋ ಬಿಕ್ಕೆ ಬೇಡಲು ಬರುತ್ತಿರಬಹುದು—ಇದರಲ್ಲೇನು ವಿಶೇಷ ಬಂತು ಎಂದು ನಾನು ಚಕಿತನಾಗಿ "ಏನು ಜಯನಾಥ?" ಎಂದು ಕೇಳಿಯೇ ಬಿಟ್ಟೆ. ಅದಕ್ಕವರು, "ಬಹು ಸ್ವಾರಸ್ಯವಿದೆ. ನೋಡುತ್ತಿರಿ" ಎಂದು ಹೇಳಿದರು.

ನಾನು ಹಾಗೆಯೇ ಕತ್ತು ತಿರುಗಿಸಿ ನೋಡತೊಡಗಿದೆ. ಬಂದ ಭಿಕ್ಷುಕನು ಯಾವ ಯೋಚನೆ ಯಾ ಸಂಕೋಚವೂ ಇಲ್ಲದೆ, ನೇರವಾಗಿ ಮನೆಯೊಳಗೆ ಹೊಕ್ಕುಬಿಟ್ಟನು. "ಅದೇನು ಹಾಗೆ?" ಎಂದು ನಾನು ಕೇಳಿದೆ. "ನಿಲ್ಲಿ. ಓರ್‌ಮನ್. ನಿಮಗಿಷ್ಟು ಅವಸರವೇನು? ಹಾಗೆಯೇ ನೋಡುತ್ತಾ ಇರಿ. ಎಲ್ಲ ತನ್ನಿಂದತಾನೇ ತಿಳಿಯುವುದು" ಎಂದು ಅವರು ನನ್ನನ್ನು ಸುಮ್ಮನಾಗಿಸಿದರು. ನಮ್ಮ ಮಾತುಕತೆಯೆಲ್ಲ ನಿಂತು ಹೋಯಿತು.

ಬಹುಶಃ ಹಾಗೆಯೇ ಹತ್ತು ಮಿನಿಟು ನಾನು ನೋಡುತ್ತಾ ಇದ್ದಿರಬಹುದು. ಅಷ್ಟರಲ್ಲಿ ತೆಳ್ಳಗಿನ ದೇಹದ ಪ್ರಾಯಸ್ಥರೊಬ್ಬರು ಸಾಮಾನ್ಯ ಮಧ್ಯಮ ವರ್ಗದವರಂತೆ ಒಂದು ಅಡ್ಡ ಪಂಚೆ ಮತ್ತು ಬನಿಯನು ತೊಟ್ಟು ಅಂಗಳಕ್ಕೆ ಕಾಲು ತೊಳೆಯಲು ಬಂದದ್ದು ಕಂಡಿತು. ಜಯನಾಥರು ಮುಖಕ್ಕೆ ಕೈ ಮುಚ್ಚಿ, ಮೈ ಕುಲುಕಿಸಿ, ಒಂದೇ ಸವನೆ ನಗಲು ಪ್ರಾರಂಭಿಸಿದರು. ನನಗೆ ಒಂದೂ ಅರ್ಥವಾಗಲಿಲ್ಲ. "ಏನೆಂದು ಹೇಳಬಾರದೇ ಜಯನಾಥರೇ?" ಎಂದು ನಾನು ಕೇಳಿದೆ. ಅದಕ್ಕವರು "ಇನ್ನೂ ತಿಳಿಯಲಿಲ್ಲವೇ?" ಎಂದಷ್ಟೆ ಕೇಳಿದರು. "ಇಲ್ಲವಲ್ಲ" ಎಂದು ನಾನೆನ್ನಲು, "ಅಯ್ಯೋ ಓರ್‌ಮನ್! ನೋಡಿರಿ, ಮನೆಯೊಳಗೆ ಹೊಕ್ಕ ಭಿಕ್ಷುಕನು ಈತನೇ" ಎಂದು ಹೇಳಿದರು.

ನನಗೆ ಫಕ್ಕನೆ ಆ ಮಾತನ್ನು ನಂಬಲು ಬರಲಿಲ್ಲ. ನಡಿಗೆಯ ರೀತಿ, ಮುಖ ವರ್ಚಸ್ಸು, ಬಟ್ಟೆಬರೆ ಪ್ರತಿಯೊಂದೂ ಬದಲಾಗಿ ಕಾಣುತ್ತಿತ್ತು.

ನಾನು ಮಂತ್ರ ಮುಗ್ಧನಂತೆ ಆತನೆಡೆಗೇ ನೋಡುತ್ತಾ ಇದ್ದೆ.

ನನ್ನ ಭಾವನೆಯು ಜಯನಾಥರಿಗೆ ಅರ್ಥವಾಯಿತು. ಅವರು ನನ್ನ ಕೈ ಹಿಡಿದೆಬ್ಬಿಸಿ, ನೇರವಾಗಿ ಆ ಮನೆಯೆಡೆಗೆ ನನ್ನನ್ನು ಕರೆದೊಯ್ದರು. ಮನೆಯಂಗಳದ ಬಳಿಯಲ್ಲಿ ಬೀದಿಯ ವಿದ್ಯುತ್ ಲಾಂದ್ರವೊಂದು ಇದ್ದುದರಿಂದ ಆ ಮುದುಕನ ಚಲನವಲನ ನಮಗೆ ಕಾಣುತ್ತಿತ್ತೇ ಹೊರತಾಗಿ, ನಮ್ಮ ಚಲನವಲನ ಅವನಿಗೆ ಕಾಣುವಂತಿರಲಿಲ್ಲ. ನಾವು ರಸ್ತೆಯ ಪಕ್ಕಕ್ಕೆ ಹೋಗಿ ಅಲ್ಲಿಂದ ಅಂಗಳಕ್ಕೆ ಬಂದೆವು.

ನನಗೇಕೋ ಜಯನಾಥರನ್ನು ದೊಡ್ಡ ಪತ್ತೆದಾರಿಯಂತೆ ಕಾಣುತ್ತಿತ್ತು. ಪತ್ತೆದಾರಿಯನ್ನು ಅನುಸರಿಸುವ ಸಾಮಾನ್ಯ ಮನುಷ್ಯನೊಬ್ಬನಂತೆಯೇ ನನ್ನ ಅವಸ್ಥೆಯಾದರೂ ಆಗಿತ್ತು. ನನ್ನ ಎದೆಯಲ್ಲಿ ಏನೋ ಸದ್ದು ನನಗೇ ಕೇಳುತ್ತಿತ್ತು.

ಆಗ ಮುದುಕನು ಒಳ ಸೇರಿದ್ದನು. ಜಯನಾಥರು ಗಟ್ಟಿಯಾಗಿ "ಮುರುಗ ಪಿಳ್ಳೈ" ಎಂದು ಕರೆದೇ ಬಿಟ್ಟರು. ಮುದುಕನು ಹೊರಗೆ ಬಂದು ಭಯಚಕಿತನಾಗಿ ನಮ್ಮೆಡೆಗೆ ನೋಡತೊಡಗಿದನು. ಆಗ ಜಯನಾಥರು: "ಪಿಳ್ಳೈ ಏನೂ ಭಯಬೇಡ. ನಾನು ಜಯನಾಥ; ಇವರು ನೋಡು ಸಂಯುಕ್ತ ಅಮೇರಿಕಾ ದೇಶದ ನನ್ನ ಮಿತ್ರರು. ಇವರ ಹೆಸರು ಜೋನ್ ಓರ್‌ಮನ್ !" ಎಂದು ಪರಿಚಯವನ್ನೂ ಮಾಡಿಸಿದರು. ಮುದುಕನು ಮುಗಿದ ಕೈ ಹಾಗೆಯೇ ಉಳಿದಿತ್ತು. ಅವನ ನಾಲಿಗೆ ಗಂಟಲಲ್ಲೇ ಇಳಿದು ಹೋಗಿತ್ತು. ಆತನ ಕಾಲುಗಳು ಗಡಗಡನೆ ನಡುಗುತ್ತಿದ್ದವು.

ಜಯನಾಥರಿಗೆ ಪರಿಸ್ಥಿತಿ ಅರ್ಥವಾಯಿತು. ಅವರು ಮುಂದೆ ಸರಿದು ಆ ಮುದುಕನ ಬೆನ್ನು ತಟ್ಟಿ ನುಡಿದರು: "ಏ ಪಿಳ್ಳೈ, ನೀನೇನೂ ಭಯಪಟ್ಟು ಕೊಳ್ಳಬೇಡ. ನಿನ್ನ ಸ್ವಾರಸ್ಯಮಯ ಜೀವನ ತೋರುವುದಕ್ಕೇ ಅವರನ್ನು ಕರಕೊಂಡು ಬಂದಿದ್ದೇನೆ. ಇವರು ನನ್ನ ಪ್ರಾಣ ಸ್ನೇಹಿತರು. ಏನೂ ಭಯವಿಲ್ಲ." ಮುದುಕನ ನಡುಕ ಜೋರಾಯಿತು. "ಬುದ್ಧೀ ನನ್ನ ಹೊಟ್ಟೆಗೆ ಹೊಡೆಯಬೇಡಿ. ನನ್ನ ಜೀವ ನಿಮ್ಮ ಕೈಯ್ಯಲ್ಲಿದೆ, ದಮ್ಮಯ್ಯ" ಮುದುಕನು ಜಯನಾಥರಿಗೆ ಅಂಗಲಾಚಿ ಬೇಡಲು ಪ್ರಾರಂಭಿಸಿದ. ಅವನಿಗೆ ಧೈರ್ಯ ಬರುವಂತೆ ಮಾಡಲು ಜಯನಾಥರಿಗೆ ಸಾಕುಬೇಕಾಯಿತು. ನನಗೆ ಛಕ್ಕುಕ

ನಾಗಿ ಒಳಗೆ ಪ್ರವೇಶಿಸಿದಾತನೇ, ಈ ಮುರುಗ ಪಿಳ್ಳೆ ಎಂಬುದು ಸ್ಪಷ್ಟ ಅರ್ಥ ವಾಯಿತು.

ತನ್ನ ಗುಟ್ಟನ್ನು ಹೊರಗೆ ಹಾಕುವುದಿಲ್ಲವೆಂದು ನನ್ನಿಂದ ಪದೇ ಪದೇ ವಚನ ತೆಗೆದುಕೊಂಡ ನಂತರ ಮುರುಗ ಪಿಳ್ಳೆ, ನಮ್ಮನ್ನು ಮನೆಯೊಳಗೆ ಬರ ಮಾಡಿ ಬಹಳ ಉಪಚಾರ ಮಾಡಿದ. [ಗೆಳೆಯ, ನೋಡು ಈ ಪತ್ರ ಸಾರ್ವ ಜನಿಕ ಸೊತ್ತಲ್ಲ. ಆ ಮುದುಕನ ಗುಟ್ಟನ್ನು ಖಂಡಿತ ಪ್ರಕಟಿಸಬೇಡ, ಕಂಡೆಯಾ?]

ವರ್ಷಕ್ಕೆ 7–8 ಸಾವಿರ ಉತ್ಪತ್ತಿಯಿರುವ ಮಧ್ಯಮ ವರ್ಗದವರ ಒಂದು ಸ್ಥಿತಿಗತಿ ಆತನ ಮನೆಯೊಳಗಿತ್ತು. ಚಿಂದಿ ಬಟ್ಟೆಯ ಲವಲೇಶವೂ ಎದುರಿಗೆ ಕಾಣುತ್ತಿರಲಿಲ್ಲ. ಅವನ ಮುದುಕಿ ಹೆಂಡತಿ, ಅಲ್ಲದೆ ಸಣ್ಣ ವ್ಯಾ ಪಾರ ಮಾಡುವ ಒಬ್ಬ ಯುವಕ, ಆತನ ಹೆಂಡತಿ ಮತ್ತು ಮಗು, ಅಲ್ಲದೆ ಅವಿವಾಹಿತ ಹುಡುಗಿಯೋರ್ವಳು ಇಷ್ಟು ಜನರು ಅವನ ಕುಟುಂಬವಾಸಿಗಳಾ ಗಿದ್ದರು.

ನಮಗೆ ಸ್ವಲ್ಪ ಪಾನೀಯ ಕೊಟ್ಟು ಮುದುಕನು ತನ್ನ ಸ್ವಂತ ಅನುಭವ ವನ್ನೆಲ್ಲಾ ಹೇಳಿದ. ಅವನಿಗೆ ಚಿಕ್ಕಂದಿನಲ್ಲಿ ತಂದೆ, ತಾಯಿ ಗತಿಸಿ ಹೋಗಿ, ಅನಾಥನಾದನು. 8–10 ವರ್ಷ ಪ್ರಾಯದಲ್ಲಿ ಅವನು ಮನೆ ಮಾರಿಲ್ಲದೆ ಬೀದಿಯಿಂದ ಬೀದಿಗೆ ಅಲೆಯುತ್ತಾ ಭಿಕ್ಷೆಯಿಂದ ಜೀವಿಸಲು ತೊಡಗಿದನು. ಅವನ ಕಷ್ಟ ಪರಂಪರೆಗಳನ್ನೆಲ್ಲಾ ವಿವರಿಸಿದ. ಎಷ್ಟೋ ದಿನ ಮದ್ರಾಸಿನ ಹೋಟೇಲುಗಳ ಎಂಜಲನ್ನು ಊಟಮಾಡಿಯೇ ಜೀವಧಾರಣೆ ಮಾಡಿದ ಕತೆ ಹೇಳಿದ.

ಕಟ್ಟಕಡೆಗೆ ಭಿಕ್ಷೆ ಬೇಡುವ ಕೆಲವೊಂದು ಗುಟ್ಟುಗಳನ್ನಾತ ಇತರರಿಂದ ಕಲಿತುಕೋಡು, ಸೌಖ್ಯವಿಲ್ಲದವರಂತೆ ನಟಿಸಿ, ಬೇಡಲು ತೊಡಗಿದ. ಹೊಟ್ಟೆ ಹೊರೆಯಲು ಬೇಕಾದಷ್ಟು ಸಿಗತೊಡಗಿತು. ಪ್ರಾಯ ಹೋದಂತೆ ಭಿಕ್ಷೆಯೆ ತ್ತುವ ಇತರ ಕ್ರಮಗಳನ್ನೂ ಅನುಸರಿಸಿದ. ಕೈಯ್ಯಲ್ಲಿ ಬರಬರುತ್ತಾ ದುಡ್ಡಾ ಯಿತು. ಮದ್ರಾಸಿನ ಕೊಳಚೆ ಪ್ರದೇಶದಲ್ಲಿ ಒಂದು ಮಾನವಬಿಲ[Slum cottage]ವನ್ನಾತ ಬಾಡಿಗೆಗೆ ಪಡಕೊಂಡು ಅಲ್ಲಿ ವಾಸಮಾಡತೊಡಗಿದ. ಆತನ 40 ವರ್ಷ ಪ್ರಾಯದಲ್ಲಿ ಅವನಂತಹ ಬಡ ಹುಡುಗಿಯೋರ್ವಳನ್ನು ವಿವಾಹವಾದ. ಅವಳು ಬಂದ ನಂತರ ದಿನಕ್ಕೆ 2-3 ಯಾ 4 ರೂಪಾಯಿಗಳ ತನಕವೂ ಅವನಿಗೆ ಉತ್ಪತ್ತಿ ಬರತೊಡಗಿತಂತೆ.

ಈಗ 3-4 ವರ್ಷಗಳ ಹಿಂದೆ, ಅವನ ಕೈಯಲ್ಲಿ 20 ಸಾವಿರ ರೂಪಾಯಿಗಳು ನಗದು ಇತ್ತಂತೆ. ಮುಂದೆ ತನ್ನ ಪೀಳಿಗೆಯವರಿಗೆ ಬದುಕಲು ಒಂದು ವ್ಯವಸ್ಥೆಯಾಗಬೇಕೆಂದು, ಈ ಮನೆಯನ್ನು ಕ್ರಯಕ್ಕೆ ಪಡಕೊಂಡನು. ಅಲ್ಲದೆ, ಮಗ ಕೃಷ್ಣನ್‌ಗೆ ಒಂದು ಮದುವೆ ಮಾಡಿ, ಅವನನ್ನು ಒಂದು ಸಿನೆಮಾ ಥಿಯೇಟರಿನ ಬಳಿಯಲ್ಲಿ ವ್ಯಾಪಾರಕ್ಕೆ ಹಚ್ಚಿದನು.

ಇಷ್ಟು ಸ್ಥಿತಿಗತಿ ಬಂದ ಮೇಲೂ, ಈ ದಾರಿದ್ರ್ಯದ ಮತ್ತು ರೋಗದ ವೇಷಮಾಡಿ, ಬಿಕ್ಷೆಯೆತ್ತುವುದೇತಕ್ಕೆ ಎಂದು ನಾನು ಕೇಳಿದೆ. ಅದಕ್ಕಾತನು "ಯಾವ ವೃತ್ತಿಯಿಂದಲೇ ದೇವರು ನನಗಿದನ್ನೆಲ್ಲಾ ಕೊಟ್ಟನೋ, ಅದನ್ನೇ ನಾನಿಂದು ಬಿಟ್ಟು ಬಿಡಲೇ?" ಎಂದು ಕೇಳಿ, ಅವನಿಗೀಗಲೂ, ಈ ವೃತ್ತಿಯಿಂದ ಬಹಳ ಉತ್ಪತ್ತಿಯಿದೆಯೆಂದೂ, ಆತನ ಮಗನ ವ್ಯಾಪಾರದಲ್ಲಿ ಅಷ್ಟು ಉತ್ಪತ್ತಿಯಿಲ್ಲವೆಂದೂ ಅವನು ಹೇಳಿದನು.

ಈ ಕತೆ ಕೇಳಿ ನನಗೆ ಒಂದು ಬದಿಯಲ್ಲಿ ಕೃತ್ರಿಮ ಜೀವನದಿಂದ ಹಣ ಗಳಿಸುವ ಆ ವೃದ್ಧನ ಮೇಲೆ ತಿರಸ್ಕಾರ ಬಂದರೂ ಇನ್ನೊಂದು ಬದಿಯಿಂದ ಆಳವಾದ ಸಹಾನುಭೂತಿ ಹಾಗೂ ಕನಿಕರಗಳೂ ಬಂದುವು. ಭಾರತದ ಸಾಮಾಜಿಕ ಪರಿಸ್ಥಿತಿಯೇ ಹಾಗಾದಲ್ಲಿ ಆತನಂತಹರು ಅನಾಥ ಬಾಲಕರಾಗಿದ್ದಾಗ ಮಾಡಬೇಕಾದರೂ ಏನು? ಎಂದು ನನಗೆ ಕಂಡಿತು.

ಸಿಲ್ವರ್, ಭಾರತದ ಈ ವೈಚಿತ್ರ್ಯದ ಕತೆಯನ್ನೇ ನೆನೆನೆನೆಯುತ್ತಾ, ಅಲ್ಲಿಂದ ಹೊರಟು, ಮದ್ರಾಸಿನ ಕೋಣೆಗೆ ಬಂದು ಸೇರುವಾಗ ರಾತ್ರೆ ಗಂಟೆ ಹನ್ನೊಂದಾಗಿತ್ತು. ಹಾಂ ಮರೆತೇ ಹೋಯಿತು, ಸಿಲ್ವರ್, ಜಯನಾಥರು ಬರುತ್ತಾ ದಾರಿಯಲ್ಲಿ ಹೇಳಿದರು—ಏನೆಂದರೆ ಮುರುಗ ಪಿಳ್ಳೈಯು ಬೇಂಕಿನಲ್ಲಿ ಕಡಿಮೆಯೆಂದರೂ ಹತ್ತು ಸಾವಿರ ರೂಪಾಯಿಗಳ ಠೇವಾಣಾತಿಯಟ್ಟಿದ್ದಾನಂತೆ.

ಭಿಕ್ಷೆಯೆತ್ತುವ ಕಲೆಯ ಕುರಿತಾಗಿ ನಾನು ಹೀಗೆಲ್ಲ ಬರೆದೆನೆಂದು ಭಾರತದಲ್ಲಿ ಪ್ರತಿಯೊಬ್ಬನೂ ಭಿಕ್ಷೆ ನೀಡುವವರೇ ಸರಿ ಎಂದು ನೀನು ಭಾವಿಸಲಾರೆಯಷ್ಟೇ. ಅದನ್ನೂ ಸ್ಪಷ್ಟಪಡಿಸುತ್ತೇನೆ. ಭಾರತದ ಮೇಲ್ಮಟ್ಟದ ಶ್ರೀಮಂತ ವರ್ಗದವರು ಬಹಳ ಅಪರೂಪವಾಗಿ ಮಾತ್ರ ಭಿಕ್ಷೆ ನೀಡುತ್ತಾರೆ. ಭಿಕ್ಷುಕರನ್ನು ಕಂಡರೆ ಅವರಿಗಿರುವಷ್ಟು ತಿರಸ್ಕಾರ ಇನ್ನಾರಿಗೂ ಇರುವುದಿಲ್ಲ. ಬೊಂಬಾಯಂತಹ ನಗರಗಳಲ್ಲಿ ಶ್ರೀಮಂತರ ಮನೆಬಾಗಿಲಲ್ಲಿ—ಮೆರೀನ್

ಡ್ರೈವ್‌ನಲ್ಲಾಗಲೀ, ಮಲಬಾರ್ ಹಿಲ್‌ನಲ್ಲಾಗಲೀ ಅಥವಾ ಇತರ ಕಡೆಗಳಲ್ಲಾಗಲೀ-ಒಬ್ಬನೇ ಒಬ್ಬ ಭಿಕ್ಷುಕನನ್ನೂ ನಾವು ನೋಡಲಾರೆವು. ಒಂದು ವೇಳೆ ಇಂತಹ ಲಕ್ಷ್ಮೀ ಪುತ್ರರ ಮನ ತಿಳಿಯದೆ ಅವರ ಮನೆಬಾಗಿಲಿಗೆ ಹೋದ ಭಿಕ್ಷುಕರನ್ನು ಅವರ ಕೋರೆ ಹಲ್ಲಿನ ಆಲ್‌ಸೇಶಿಯನ್ ನಾಯಿಯು ಹರಿದು ಚೂರುಚೂರು ಮಾಡಿದರೂ ಕೇಳುವವರಾರು?

ಈ ಬಡದೇಶದಲ್ಲಿ ವಿಮಾನದಲ್ಲಿ ಪಯಣ ಬೆಳೆಸುವವರು, ಅಥವಾ ರೈಲಿನ ಒಂದನೇ ತರಗತಿಯಲ್ಲಿ ಪ್ರಯಾಣ ಮಾಡುವವರೂ ಧರ್ಮ ನೀಡುವ ದೃಶ್ಯವು ನಿಜವಾಗಿಯೂ ಅಪರೂಪವಾಗಿದೆ. ಒಂದು ವೇಳೆ ತಪ್ಪಿ ನೀಡಿದರೂ, ಭಿಕ್ಷುಕರೆಂಬ ಉಪದ್ರವ ನೀಡುವ ಪ್ರಾಣಿಗಳ ಉಚ್ಚಾಟನೆಗೆಯೇ ಹೊರತಾಗಿ ಬೇರೇನಲ್ಲ.

ಇಲ್ಲಿಯ ಕೋಟಿಗಟ್ಟಲೆ ಸಂಖ್ಯೆಯಲ್ಲಿರುವ ಕೇವಲ ಬಡವರೂ ಭಿಕ್ಷೆ ನೀಡುವ ಸ್ಥಿತಿಯಲ್ಲಿರುವುದಿಲ್ಲ. ಆದರೂ ಅಂಗವಿಕಲರಿಗೆ ಅವರೂ ಸಹಾಯ ನೀಡುವುದಿದೆ. ಭಾರತದ ಸಂಸ್ಕೃತಿಯ ಅವಿಚ್ಛಿನ್ನ ವಾಹಕಗಳಾದ ಮಧ್ಯಮ ವರ್ಗದವರೇ ದೀನದಲಿತರಿಗೆ ದಾನಧರ್ಮ ನೀಡುವ ಕರುಣಾಳುಗಳು. ಆದರೆ ಈ ವರ್ಗದವರಲ್ಲಿಯೂ, ವಿದ್ಯಾವಂತರೆನ್ನಿಸಿ, ಥಳಕಿನ ಜೀವನ ಮಾಡಲೆತ್ನಿಸುವವರೂ ಇದ್ದಾರೆ. ಇಂತಹವರೂ ದಯಾಹೃದಯ ತೋರುವುದೇ ಇಲ್ಲ.

ಸಿಲ್ವರ್, ನಾನು ಬರೆದ ಮೇಲಿನ ಎಲ್ಲ ವಿಚಾರಗಳನ್ನು ನೋಡಿ ಇಲ್ಲಿಯ ಭಿಕ್ಷುಕರ ಮೇಲೆ ನೀನು ತುಂಬಾ ರೇಗಿಕೊಳ್ಳುತ್ತೀಯೋ ಏನೋ. ಆದರೆ ದಯಮಾಡಿ ಹಾಗೆ ಮಾಡದಿರು ಗೆಳೆಯ. ಮೈಗಳ್ಳತನದಿಂದಲೋ, ದುಡ್ಡಿಗಾಗಿಯೋ ಬೇಡುವ ಕೆಲವರನ್ನು ಬಿಟ್ಟರೆ ಬಹುಸಂಖ್ಯಾಕರು ನಿಜವಾಗಿಯೂ ಅನಿಯಂತ್ರಿತ ಹಾಗೂ ಅನಿವಾರ್ಯ ಪರಿಸ್ಥಿತಿಗಳ ಒತ್ತಡದಿಂದಲಾಗಿಯೇ ಈ ತುಚ್ಛ ಜೀವನಕ್ಕಿಳಿದಿದ್ದಾರೆ.

ನಿಜವಾಗಿಯೂ ಇಲ್ಲಿ ದೀನದಲಿತರಿಗೆ, ಸೋತು ಸುಣ್ಣವಾದವರಿಗೆ, ವಯೋವೃದ್ಧರಿಗೆ, ಅಂಗವಿಕಲರಿಗೆ, ಇನ್ನೊಬ್ಬನನ್ನು ಹೊಂದಿಕೊಂಡಿರದೆ ಗೌರವಪೂರ್ವಕವಾಗಿ ಬದುಕಿ ಬಾಳುವ ಯಾವುದೇ ಸುಸಂಘಟಿತ ಕಾರ್ಯಕ್ರಮವೂ ಇಲ್ಲ. ಉದ್ಯೋಗವಿಲ್ಲದವರಿಗೆ, ನಮ್ಮ ದೇಶದಂತೆ ಇಲ್ಲವೇ ಗ್ರೇಟ್ ಬ್ರಿಟನ್ ಮೊದಲಾದ ಯುರೋಪಿನ ಕೆಲವು ರಾಷ್ಟ್ರಗಳಂತೆ ಬದುಕಲು ಬೇಕಾದ ಮಾಸಾಶನವನ್ನಾದರೂ ಕೊಡುವ ವ್ಯವಸ್ಥೆಯೂ ಇಲ್ಲ.

ಒಬ್ಬ ಮಜೂರನಾಗಿ ಒಬ್ಬಾನೊಬ್ಬ ಶ್ರೀಮಂತನ ಆಶ್ರಯದಲ್ಲಿ ದುಡಿಯುತ್ತಿರುವಾತನಿಗೆ ಆ ದುಡಿತದೆಡೆಯಲ್ಲೇ ಏನಾದರೂ ಅಪಘಡ ಸಂಭವಿಸಿ, ಅಂಗಕ್ಕೆ ಊನ ಬಂದರೆ, ಕೇಳುವವರು ಯಾರಿದ್ದಾರೆ? ಅಂಥವರಿಗೆ ದೇವರೇ ಗತಿ. ಅಂಥವರಿಗೆ ಪರಿಹಾರ ಕೊಡಲು ಶ್ರೀಮಂತರು ಬದ್ಧರಾದರೂ, ಅವಕದಕ್ಕೆ ಮುಂದಾಗುವುದಿಲ್ಲ.

ಮದ್ರಾಸಿನ ಸೆಂಟ್ರಲ್ ಸ್ಟೇಶನಿನ ಪಕ್ಕದಲ್ಲಿ ಅಂದರೆ ಮೂರ್ ಮಾರ್ಕೆಟಿನ ಎದುರಲ್ಲಿ ಫೂಟ್‌ಪಾತಿನ ಮೇಲೆ ಯಾವಾಗಲೂ ಕಾಲಿಲ್ಲದೆ ನರಳುವ ಒಬ್ಬಾತನನ್ನು ನಾನು ನೋಡುತ್ತಿರುತ್ತೇನೆ. ಆತನಿಗೆ ಎರಡೂ ಕಾಲುಗಳೂ ಇಲ್ಲ. ಕೈಯಲ್ಲಿ ಮರದ ಹಾವುಗೆಗಳನ್ನೂ, ಅವುಗಳಿಗೆ ಏನೋ ಒಂದು ರೀತಿಯ ಹತ್ತಿಯ ಪ್ಯಾಡನ್ನೂ ಇಟ್ಟುಕೊಂಡು, ಆ ಹಾವುಗೆಗಳ ಮೂಲಕ ಕೈಯ್ಯಲ್ಲೇ ದೇಹವನ್ನೆತ್ತಿಕೊಂಡು, ಒಂದು ಕಡೆಯಿಂದ ಇನ್ನೊಂದು ಕಡೆಗೆ ಆತನು ಸಾಗಬೇಕಾಗಿತ್ತು. ಭಿಕ್ಷುಕರ ಮೇಲೆ ಏನೇನೂ ಕರುಣೆ ಬಾರದ ನನಗೆ ಆತನನ್ನು ನೋಡನೋಡುತ್ತಾ ನಿಧಾನವಾಗಿ ಏನೋ ಕರುಣೆಯ ಭಾವ ಬಂದು ಮೂಡತೊಡಗಿತು.

ಇತ್ತೀಚೆಗೆ ಒಂದು ದಿನ ನಾನು ಅವನ ಕೂಡೆ ಕೇಳಿದೆ—ಆತನಿಗೆ ಹೇಗೆ ಕಾಲು ಇಲ್ಲವಾಯಿತು ಎಂದು. ನನ್ನ ದ್ವಿಭಾಷಿಗಳಾಗಿ ಜಯಸೋಧರೂ ಇದ್ದರು. ಅಷ್ಟರಲ್ಲಿ ಎಲ್ಲೋ ಹುದುಗಿದ ಕಣ್ಣೀರು ಕಟ್ಟೆಯೊಡೆದು ಆತನ ಕಣ್ಣುಗಳಿಂದ ಹೊರಸೂಸಿತು. ಎಲ್ಲ ಕತೆ ಹೇಳಿದ. ಆತನು ಒಬ್ಬ ಸಾಮಾನ್ಯ ಮಜೂರನಾಗಿದ್ದನಂತೆ. ಇತರರ ಮನೆಯಲ್ಲಿ ದುಡಿದು ದಿನಕ್ಕೆರಡು ರೂಪಾಯಿ ಸಂಪಾದನೆ ಮಾಡಿ ಆತನು ಹೊಟ್ಟೆ ಹೊರೆಯುತ್ತಿದ್ದ. ಕಡೆಗೆ ಒಂದು ವರ್ಷದಲ್ಲಿ ಆತನು ಮದ್ರಾಸಿನ ಬಳಿಯ ಒಂದು ಹಳ್ಳಿಯಲ್ಲಿ ಸುಂದರೇಶ ಚೆಟ್ಟಿ ಎಂಬ ಶ್ರೀಮಂತರ ಆಸ್ತಿಯಲ್ಲಿ ದುಡಿಯುತ್ತಿದ್ದನಂತೆ. ಅವರ ಆಸ್ತಿಯಲ್ಲಿದ್ದ ಹುಳಿಮರದಿಂದ ಹುಳಿ ಕೊಯ್ಯಬೇಕಾಗಿತ್ತು. [ನಮ್ಮೂರಲ್ಲಿ ಹುಳಿಯ ರುಚಿ ಬರಲು ವಿನಿಗರ್ ದ್ರಾವಣ ಉಪಯೋಗಿಸುವಂತೆ ಇಲ್ಲಿ ಹುಳಿಯ ರುಚಿಯಿರುವ ಒಂದು ರೀತಿಯ ಕಪ್ಪು ತಿರುಳಿರುವ ಹಣ್ಣನ್ನು (Tamarind) ಉಪಯೋಗಿಸುತ್ತಾರೆ.]

ಕೊಯ್ಯುತ್ತಾ ಕೊಯ್ಯುತ್ತಾ ಒಂದು ಗೆಲ್ಲಿನಿಂದ ಆತನು ಇನ್ನೊಂದು ಗೆಲ್ಲಿಗೆ ದಾಟುವ ವೇಳೆ ಫಕ್ಕನೆ ಕೈತಪ್ಪಿಹೋಗಿ ಕೆಳಗೆ ಬಿದ್ದುಬಿಟ್ಟ. ಕೆಳಗೆ ಮರದ ಬುಡದಲ್ಲಿ ಕಗ್ಗಲ್ಲಿನ ತುಂಡುಗಳ ರಾಶಿಯೊಂದಿತ್ತು. ಅದರ ಮೇಲೆ

ಬಿದ್ದು ಬಿಟ್ಟ. ಕಾಲು ತುಂಡಾಯಿತು ಮಾತ್ರವಲ್ಲ, ಪುಡಿಯಾಯಿತು. ಮನೆಯಲ್ಲೇ ಇದ್ದ ಸುಂದರೇಶ ಚೆಟ್ಟಿ ಆತನನ್ನು ನೋಡಲು ಬೇಕಾದ ವ್ಯವಸ್ಥೆ ಮಾಡುತ್ತೇವೆ, ಭಯಬೇಡವೆಂದು ಆಶ್ವಾಸನೆಯಿತ್ತರು. ತಮ್ಮ ಕಾರಿನಲ್ಲಿ ಅವನನ್ನು ಆಸ್ಪತ್ರೆಗೇನೋ ದಾಖಲು ಮಾಡಿದರು. ಆದರೆ ಇಲ್ಲಿಯ ಸರಕಾರಿ ಆಸ್ಪತ್ರೆಗಳಲ್ಲಿ ಡಾಕ್ಟರರಿಂದ ಪ್ರಾರಂಭಿಸಿ, ದಾದಿಯರು, ತೋಟಿಗಳು ಪ್ರತಿಯೊಬ್ಬರಿಗೂ ದುಡ್ಡನ್ನು ಚೆಲ್ಲುವಾತನು ಮಾತ್ರವೇ ಮಾನವನಾಗಿ ತಿಳಿಯಲ್ಪಡುತ್ತಾನೆ. ಉಳಿದವರು ಯಾವ ಭಯಂಕರ ಪರಿಸ್ಥಿತಿಯಲ್ಲಿದ್ದರೂ, ಅವರು ಸಮುದ್ರದ ನಡುವಿರುವ ಹರಿಗೋಲೇ ಸರಿ---

ಈ ಮಜೂರನು--ಆತನ ಹೆಸರು ಶೆಡಯನ್ ಎಂದು--ಚಿಕಿತ್ಸೆಯನ್ನೇನೋ ಪಡೆದನು-ಕಾಲಿನ ಮುರಿದ ಎಲುಬುಗಳನ್ನು ಸರಿಪಡಿಸಿದರು. ಗಾಯಗಳನ್ನು ಹೊಲಿದರು. ಆದರೆ ಇಂಜಕ್ಷನ್ ಕೊಡಬೇಕಾಗಿತ್ತು. ಅವನೇ ಕ್ರಯಕ್ಕೆ ಪಡೆದು ಇಂಜಕ್ಷನ್ ಕೊಡಬೇಕೆಂದು ಡಾಕ್ಟರರ ಆದೇಶವಾಯಿತು. ಸುಂದರೇಶ ಚೆಟ್ಟಿಗೆ ಆಸ್ಪತ್ರೆಯಲ್ಲಿದ್ದ ಪತ್ನಿಯ ಮೂಲಕ ಸಂದೇಶ ಹೋಯಿತು. ಬಿದ್ದು ಗಾಯವಾದಾಗ ಬಹಳ ಸಿಹಿ ಮಾತುಗಳನ್ನು ಹೇಳಿದ ಸುಂದರೇಶ ಚೆಟ್ಟಿ ತಾನು ಆಸ್ಪತ್ರೆಗೆ ಬರುತ್ತೇನೆ ಹಣ ಕೊಡುತ್ತೇನೆ ಎಂದು ಹೇಳಿದರೂ ಕಾಣುವುದಕ್ಕೆಯೇ ಇಲ್ಲವಾದರು.

ಪತ್ನಿ ಪುನಃ ಹೋದಳು--ಕಾಡಿ ಬೇಡಿದಳು. ಆಗ ಅದಕ್ಕೆ ಉತ್ತರವಾಗಿ "ನನಗೆ ಅದೊಂದೇ ಕೆಲಸವೇನು?" ಎಂಬ ಉತ್ತರ ಬಂತು. "ಕೇವಲ 5-10 ರೂಪಾಯಿಗಳನ್ನಾದರೂ ಕೊಡಿ; ಬರಬೇಕಾಗಿಲ್ಲ" ಎಂದು ಕೇಳಿಕೊಂಡರೂ ರೂಪಾಯಿಯನ್ನೂ ಕೊಡಲಿಲ್ಲ-ಬರಲೂ ಇಲ್ಲ. 2-3 ದಿನಗಳಲ್ಲಿ ಕಾಲು ಸೆಪ್ಸಿಸ್ ಆಯಿತು. 10 ದಿನಗಳಲ್ಲಿ ಗೇಂಗ್ರೀನ್ ಎಂಬುದು ಪ್ರಾರಂಭವಾಯಿತು. ಕಾಲಿನ ಭಾಗಗಳು ಕೊಳೆತು ನಾರತೊಡಗಿದುವು.

ಒಂದು ದಿನ ಡಾಕ್ಟರರು ಸುದ್ದಿಯಿಲ್ಲದೆ, ಇವನ ಎರಡೂ ಕಾಲುಗಳನ್ನೂ ತೊಡೆಯಿಂದಲೇ ಆಪರೇಶನ್ ಮಾಡಿ ತುಂಡರಿಸಿದರು.

ಸಿಲ್ವರ್, ಆಸ್ಪತ್ರೆಯಲ್ಲಿ, ಆಹಾರವನ್ನು ಕೂಡಾ ಸರಿಕೊಡದೆ ಇದ್ದ ಸಂಬಂಧಪಟ್ಟವರು ಆತನನ್ನು ಯಾವ ಬವಣೆಗೆ ಗುರಿಪಡಿಸಿದರು ಎಂಬುದಾಗಿ ಆತನು ಹೇಳುತ್ತಾನೆ—ಅದನ್ನು ಕಿವಿಯಿಂದ ಕೇಳುವುದಕ್ಕೇ ನಮ್ಮಿಂದಾಗುವುದಿಲ್ಲ. ಸಾಲದುದಕ್ಕೆ ಆತನ ಮನೆಯಲ್ಲಿ ಅನ್ನವಿಲ್ಲದ ಮಕ್ಕಳ ಗೋಳಾಟ. ಅವನ ಹೆಂಡತಿ, ಗಂಡನನ್ನು ಬಿಟ್ಟು ದುಡಿಮೆಗೆ ಹೋಗುವಂತಿಲ್ಲ-ಆಸ್ಪತ್ರೆಯಲ್ಲಿಯೂ

ಮಕ್ಕಳಗೋಳು ಗ್ರಹಿಸಿಗ್ರಹಿಸಿ, ಕಣ್ಣೀರುಮಿಡಿಯದೆ ಕುಳಿತಿರುವಂತಿಲ್ಲ. ಅಂತೂ ಇಂತೂ ಕೆಲವು ದಿನಗಳಲ್ಲಿ ಆತನನ್ನು ಆಸ್ಪತ್ರೆಯಿಂದ ಹೊರಗೆ ತಳ್ಳಿದರು.

ಹಕ್ಕಿಯಂತೆ ಸ್ವತಂತ್ರವಾಗಿ ದುಡಿದು, ಪತ್ನೀ ಪುತ್ರರ ಹೊಟ್ಟೆ ಹೊರೆಯುತ್ತಿದ್ದ ಈತನೀಗ ಕೇವಲ ಪರತಂತ್ರನು. ಈಗ ಆತನು ಭಿಕ್ಷೆಬೇಡಲು ದಾರಿಯಲ್ಲಿ ಬಿದ್ದಿದ್ದಾನೆ. ಇದರಿಂದ ದಿನಾ ದೊರೆಯುವ 2-3ರೂಪಾಯಿಗಳಿಂದ ಆತನು ಸಂಸಾರದ ಪೋಷಣೆ ಮಾಡುತ್ತಿದ್ದಾನೆ.

ದಾರಿಹೋಕರು ಕೈಯೆತ್ತಿ ಕೊಡುವ ಈ ಪುಡಿಕಾಸುಗಳೇ ಅವನ ಜೀವನಾಧಾರ. ಇದನ್ನೆಲ್ಲಾ ತಿಳಿದಾಗ ಆ ಬಡ ಶೆಡಯನಿಗೆ ಯಾರು ತಾನೇ ಭಿಕ್ಷೆ ನೀಡದಿರಲು ಸಾಧ್ಯವಿದೆ, ಸಿಲ್ವರ್ ನೀನೇ ಹೇಳು.

ಭಿಕ್ಷೆ ನೀಡುವುದಿಲ್ಲವೆಂದು ಪಣತೊಟ್ಟಿದ್ದ ನಾನು ಆತನ ಕರುಣಕತೆ ಕೇಳಿ ಏನು ಮಾಡಿದೆ ಗೊತ್ತೆ? ಐದು ರೂಪಾಯಿಗಳ ನೋಟೊಂದನ್ನು ತೆಗೆದು, ಆತನ ಹರಿದು ಚಿಂದಿಯಾಗಿ ಬಿಸಿಲಲ್ಲಿ ಬೆವರಿ ನಾರುವ ಅಂಗಿಯ ಜೇಬಿನೊಳಗೆ ತುರುಕಿದೆ. ಆ ಅಂಗಿ ಆ ದಿನ ನನಗೆಷ್ಟು ಸುಂದರವಾಗಿ ಕಂಡಿತು ಗೊತ್ತೆ? ನನ್ನ ಜೀವವೆಲ್ಲ ಅವನನ್ನು ಆವರಿಸಿತು.

ನಾನು ಅವನಿಂದ ಹೊರಟಾಗ "ಆಂಡವರೇ, ಆಂಡವರೇ!" ಎಂದು, [ಆಂಡವರೇ ಎಂದರೆ ತಮಿಳಿನಲ್ಲಿ ಪರಮಾತ್ಮನ ಕುರಿತಾಗಿ ಸಂಬೋಧನೆ] ಆತನು ನನ್ನ ಕೈ ಕಾಲುಗಳನ್ನು ಹಿಡಿದು ತಬ್ಬಿಕೊಂಡ. ಕಾಲುಗಳನ್ನುಆತನ ಕಣ್ಣೀರಿನಿಂದ, ಮುಖದ ಬೆವರುಮಿಶ್ರಿತ ಧೂಳಿನಿಂದ ತೊಳೆದುಬಿಟ್ಟ. ಇತರರಿಂದ ವಂದಿಸಿಕೊಳ್ಳಲು ಸಿದ್ಧನಿಲ್ಲವಾದರೂ ನನಗೇಕೋ ಅದೊಂದು ಸುಖಸ್ಪರ್ಶವೇ ಆಗಿ ಭಾಸವಾಯಿತು. ಆತನ ಮುಖ, ಕೈ ಕಾಲುಗಳೆಲ್ಲ ಪವಿತ್ರವಾಗಿ ಕಂಡುವು.

ಹಾಂ ನೆನಪಾಯಿತು. ಈಗ ನೀನು ಕೇಳಬಹುದು. ಶೆಡಯನು ಆತನ ಯಜಮಾನನಲ್ಲಿಗೆ ಹೋಗಿ ಪರಿಹಾರ ಕೇಳಲಿಲ್ಲವೇ? ಎಂದು. ನಾನೂ ಕೇಳಿದೆ. ಅವನು ಯಜಮಾನನಲ್ಲಿಗೆ ಹೋಗಿದ್ದನಂತೆ. ಆದರೆ ಶನಿವಾರ ಬರುವ ದಾರಿಹೋಕ ಭಿಕ್ಷುಕರ ಸಾಲಿನಲ್ಲಿ ಇವನನ್ನೂ ಸೇರಿಸಿ, ವಿಶೇಷ ಬಹುಮಾನವಾಗಿ ಈತನಿಗೆ 5 ನಯಾಪೈಸೆ ನೀಡಿದರಂತೆ—ಸುಂದರೇಶ ಚೆಟ್ಟಿಯವರು. ಹೇಗಿದೆ ಇಲ್ಲಿಯ ಸಾಮಾಜಿಕ ನ್ಯಾಯ!

ಸಿಲ್ವರ್, ಭಾರತದಲ್ಲಿ ಭಿಕ್ಷುಕ ಗೃಹಗಳಿಲ್ಲ—ಇಂತಹ ಅಂಗವಿಕಲರಿಗೆ ದಾತಾರರಿಲ್ಲ. ಅವರ ಮುಂದೆ ಎರಡೇ ದಾರಿಗಳು ಉಳಿದಿರುತ್ತವೆ. ಒಂದೋ ಪತ್ನೀಪುತ್ರರು ಸಮೇತವಾಗಿ ಆತ್ಮಹತ್ಯೆ ಮಾಡಿಕೊಳ್ಳಬೇಕು—ಇಲ್ಲವೇ ಬಿಕ್ಕೆ ಬೇಡಿ ಹೊಟ್ಟೆ ಹೊರೆಯಬೇಕು. ಈ ಶಿಡಯನ ವೈಯ್ಯಕ್ತಿಕ ಸಮಸ್ಯೆ ತಿಳಿದ ನಂತರ ನಾನು ಇಲ್ಲಿಯ ಭಿಕ್ಷುಕರ ಕುರಿತಾಗಿ ಬಹಳ ಕರುಣೆಯುಳ್ಳವನಾಗಿ ದ್ದೇನೆ. ಪ್ರತಿಯೊಬ್ಬನ ಹಿಂದಿನಿಂದಲೂ ಇಂಥದೇ ಒಂದಲ್ಲ ಒಂದು ಕರುಣ ಕತೆಯಿದ್ದೇ ಇದೆ. ಇದಕ್ಕೇನನ್ನಲಿ?

ಸಿಲ್ವರ್, ಈ ಕುರಿತಾಗಿ ಇನ್ನೂ ಬರೆಯಲಿದೆ. ಆದರೆ ನನಗೇಕೋ ಇಂದು ಮೈ ಚೆನ್ನಾಗಿಲ್ಲ, ತಲೆ ಭಾರವಾಗಿದೆ. ತುಂಬಾ ತಲೆ ಸಿಡಿತವೂ ಇದೆ. ಬಹುಶಃ ಶೀತವೋ ಏನೋ. ಆದ್ದರಿಂದ ಈ ದಿನ ಇಲ್ಲಿಗೇ ನಿಲ್ಲಿಸಿ, ಒಂದೆ ರಡು ದಿನ ಕಳೆದು ಬರೆಯುತ್ತೇನೆ. ಸಿಲ್ವರ್, ನಾನು ಕೃಷ್ಣನ ಮೂರ್ತಿ ಯನ್ನು ಮೊನ್ನೆ ತಾನೇ ವಿಮಾನ ಮೂಲಕ ಕಳುಹಿಸಿದ್ದೇನೆ. ಅದು ಈಗಾ ಗಲೇ ನಿನಗೆ ತಲಪಿರಬಹುದು. ಪಾಪ! ತಾಯನ್ನಗಲಿ ದುಃಖಿಸುತ್ತಿರುವ ಮುದ್ದು ಮಗು ಕೇನ್ನಿಗೆ—ಕೃಷ್ಣನ ಈ ಸುಂದರ ಪ್ರತಿಮೆಯು ಆನಂದ, ಶಾಂತಿ ಗಳನ್ನು ಕೊಡುವುದೋ ನೋಡೋಣ. ನನ್ನ ಪ್ರೇಮದ ಶುಭ ಸಂದೇಶ ದೊಂದಿಗೆ ಅವಳಿಗೆ ಈ ಪ್ರತಿಮೆಯನ್ನು ನನ್ನ ಬಹುಮಾನವಾಗಿ ಕೊಡು. ಸಾಕು ಮಿತ್ರ, ನಿಲ್ಲಿಸಿ ಬಿಡುತ್ತೇನೆ. ಆಗಾಗ ಪತ್ರ ಬರೆ.

ಇತಿ, ನಿನ್ನ ಆಪ್ತಮಿತ್ರ,
**ಜೋನ್ ಓರ್‌ಮನ್.**





ಮದ್ರಾಸು
25–5–1962

ಪ್ರಿಯ ಸಿಲ್ವರ್,

ನಿನ್ನ ಮೇ 20ರ ಪತ್ರ ದೊರೆತು ಅತ್ಯಾನಂದಿತನಾದೆನು. ಶ್ರೀ ಕೃಷ್ಣನ ದಿವ್ಯ ಪ್ರತಿಮೆಯನ್ನು ಹಿಡಿದುಕೊಂಡು ಕುಣಿಕುಣಿದ ಕೇನ್ನಿಯ ಸುದ್ದಿ ಕೇಳಿ ನನ್ನ ಮೈ ನವಿರೆದ್ದಿತು. ಶುದ್ಧ ಸಂಪ್ರದಾಯವಾದಿಯಾದ ಅಮೇರಿಕನ್ ಕೆಥೋಲಿಕರ ಕುಟುಂಬದಲ್ಲಿ ಜನಿಸಿದ ನಾನು, ಸಂಪ್ರದಾಯವಾದಿಯಲ್ಲವಾದರೂ ಕ್ರಿಶ್ಚಿಯನ್‌ನೇ ಆಗಿರುವ ನಿನ್ನ ಮಗಳಿಗೆ ಹಿಂದೂಗಳ ಅವತಾರಿ ಪುರುಷ ನೆನಿಸಿದ ಶ್ರೀಕೃಷ್ಣನ ಪ್ರತಿಮೆಯನ್ನು ಕಳುಹಿಸುವ ಔಚಿತ್ಯವೇನು ಎಂಬ ಕುರಿತಾಗಿ ನಾನು ಬಹಳವಾಗಿ ಯೋಚಿಸಿದ್ದೇನೆ.

ನನಗೆ ಪ್ರಭು ಏಸುಕ್ರಿಸ್ತನ ಮೇಲಿರುವ ಅಚಲವಾದ ಭಕ್ತಿ, ಶ್ರದ್ಧೆಗಳಿಗೆ ಇಂತಹ ಕ್ರಿಯೆಯಿಂದ ಏನೂ ದೋಷವಾಗಲಾರದೆಂದು ನನಗೆ ಅಡಿಗಡಿಗೆ ಕಂಡಿತು. ಏಕೆಂದರೆ ಕ್ರಿಶ್ಚಿಯನ್ನರು ಜಗತ್ತಿನಾದ್ಯಂತ ಏಸುಕ್ರಿಸ್ತನ ಮೂಲಕ ಮಾತ್ರವೇ ದೇವರ ರಾಜ್ಯಕ್ಕೆ ಪ್ರವೇಶವೆಂದು ಭಾವಿಸುತ್ತಿರುವರಾದರೂ, ಕ್ರೈಸ್ತ ಪಾದರಿಗಳ ದೃಷ್ಟಿಯಲ್ಲಿ ಶ್ರೀಕೃಷ್ಣನೆಂದರೆ ಕೇವಲ ಒಬ್ಬ ವಿಟಪುರುಷನಾದರೂ ಭಾರತೀಯ ಸುಸಂಸ್ಕೃತ ಜನರು ಅದಕ್ಕೆ ಪ್ರತೀಕಾರವಾಗಿ ಹಿಂದೂ ಧರ್ಮದ ಮೂಲಕವಾಗಿ ಮಾತ್ರವೇ ಕೈವಲ್ಯ (ಅಂದರೆ ಮೋಕ್ಷ) ಸಾಧನೆ ಎಂಬುದಾಗಿ ಭಾವಿಸುತ್ತಿಲ್ಲ. ಕೆಲವು ಹಿಂದೂ ಶಾಸ್ತ್ರ ಸಿದ್ಧಾಂತಗಳು ಭಾರತದ ವೈದಿಕ ಧರ್ಮ ಹೊರತಾಗಿರುವವುಗಳೆಲ್ಲ ಮ್ಲೇಂಛಧರ್ಮಗಳೆಂದೂ, ಅನ್ಯರೆಲ್ಲ ಮ್ಲೇಂಛ

ರೆಂದೂ ಸಾರುತ್ತಿರುವವಾದರೂ ಭವ್ಯವಾದ ಉಪನಿಷತ್ತುಗಳಲ್ಲಿ ಅಂತಹ ಉಲ್ಲೇಖವಿದ್ದಂತೆ ನನಗೆ ನೆನಪಿಲ್ಲ. ಅಲ್ಲದೆ ಇತ್ತೀಚೆಗಿನ ಹಿಂದೂ ಅಧ್ಯಾತ್ಮವಾದಿಗಳ ವಿಚಾರಲಹರಿ ಇದಕ್ಕೆ ವಿರುದ್ಧವಾಗಿದೆ. ಸ್ವಾಮಿ ವಿವೇಕಾನಂದರಿಗೆ ಅಧ್ಯಾತ್ಮ ಜೀವನವನ್ನು ಧಾರೆಯೆರೆದ ಭಗವಾನ್ ರಾಮಕೃಷ್ಣ ಪರಮಹಂಸರು, ಹಾಗೂ ಅವರಿಗಿಂತಲೂ ಮೊದಲಾಗಿ ಮಹಾತ್ಮಾ ಕಬೀರ ಮೊದಲಾದವರು ಅಲ್ಲದೆ 20 ನೇ ಶತಮಾನದಲ್ಲಿ ಭಾರತದಲ್ಲಿ ವಿರಾಜಮಾನರಾಗಿದ್ದ ಭಗವಾನ್ ಶಿರ್ಡಿ ಸಾಯಿ ಬಾಬಾರವರು. ಎಲ್ಲ ಧರ್ಮಗಳೂ ಮಾನವನನ್ನು ಪರಮಾತ್ಮನೆಡೆಗೆ ಕೊಂಡೊಯ್ಯುವವು ಎಂಬುದಾಗಿ ಸಾರಿದ್ದಾರೆ. ಭಗವದ್ಗೀತೆಯಲ್ಲಿ ಕಾಣುವ ಶ್ರೀ ಕೃಷ್ಣನ ದಿವ್ಯ ಸಂದೇಶದಲ್ಲಿಯೂ ಇದೇ ಧ್ವನಿ ಹೊರಸೂಸುತ್ತದೆ.

ಅಲ್ಲದೆ ಇತ್ತೀಚೆಗಿನ ಸಂತಶ್ರೇಷ್ಠರುಗಳಾದ ಭಗವಾನ್ ರಮಣ ಮಹರ್ಷಿ, ಸ್ವಾಮಿ ಶಿವಾನಂದ, ಸ್ವಾಮಿ ವಿವೇಕಾನಂದ, ಸ್ವಾಮಿ ರಾಮತೀರ್ಥ ಮೊದಲಾದವರೂ ಇದೇ ವಿಚಾರಧಾರೆಯನ್ನು ಪ್ರತಿಪಾದಿಸಿರುವರು. ಈ ಎಲ್ಲದರ ಪರಿಣಾಮವಾಗಿ, ಇಂದಿನ ಭಾರತದ ಬಹುಸಂಖ್ಯಾಕ ಅಧ್ಯಾತ್ಮವಾದಿಗಳು, ವೈಚಾರಿಕರು ಹಾಗೂ ತತ್ವಜ್ಞಾನಿಗಳು ಸರ್ವಧರ್ಮ ಸಮನ್ವಯ ಸಿದ್ಧಾಂತವನ್ನೇ ಎತ್ತಿಹಿಡಿಯುತ್ತಿರುವರು.

ಆದ್ದರಿಂದ ಇಂದು ಇಲ್ಲಿ ನಾನು ತಿಳಿಯುವ ಪ್ರಕಾರ ಶ್ರೀ ಕೃಷ್ಣ, ಶ್ರೀ ರಾಮ, ಬುದ್ಧದೇವ, ಏಸುಕ್ರಿಸ್ತ ಮೊದಲಾದ ಪಾವನ ಪುರುಷರೆಲ್ಲ ಅವ್ಯಕ್ತ ಚೇತನಾತ್ಮಕ ಪರಮಾತ್ಮನ ಘನೀಭೂತ ಅವತಾರೀಪುರುಷರು ಎಂಬ ಸಿದ್ಧಾಂತವಿದೆ. ಈ ಸಿದ್ಧಾಂತವು ನನಗೇಕೋ ತುಂಬ ಹಿಡಿಸುತ್ತಿದೆ. (ಹಿಂದೆಯೇ ಈ ಕುರಿತಾಗಿ ನಿನಗೆ ಸ್ವಲ್ಪ ಬರೆದಿದ್ದೇನೆ ಎಂಬ ನೆನಪಿದೆ, ನನಗೆ.)

ಇಂತಹ ವಿಚಾರದ ಪಥದಲ್ಲಿ ನಿಂತಾಗ ಕೃಷ್ಣನೆಂದರೆ ಕಳ್ಳನೆಂದೂ, ಏಸುಕ್ರಿಸ್ತನು ಮಾತ್ರವೇ ಸತ್ಯವೆಂದೂ ಸಾರುವ ನಮ್ಮ ಪಾದರಿಗಳ ಮಾತು ನನಗೇಕೋ ಅಂಬೆಗಾಲಿಕ್ಕುವ ಮಕ್ಕಳ ತೊದಲ್ನುಡಿಯಂತೆ ಕಾಣುತ್ತಿದೆ.

ಶ್ರೀ ಕೃಷ್ಣನ ಅಮರ ವಾಣಿಯಲ್ಲಿ, ಹಿಂದೂ ಧರ್ಮದ ನಿತ್ಯ ನೂತನ ತತ್ವಸಾರಗಳು—ನಾವು ತಿಳಿದು ಅರಗಿಸಿಕೊಳ್ಳಲೇಬೇಕಾದವುಗಳು—ಇಂದಿನ ಯುಗದಲ್ಲಿಯೂ ಬಹಳ ಇವೆ. ಅದನ್ನು ನೀನೂ, ಮುಂದೆ ದೊಡ್ಡವಳಾದಾಗ ಕೇನ್ನಿಯೂ ತಿಳಿದುಕೊಳ್ಳಬೇಕೆಂಬುದಕ್ಕಾಗಿಯೇ ಶ್ರೀ ಕೃಷ್ಣನ ಆ ದಿವ್ಯ ಪ್ರತಿಮೆಯನ್ನು ಕೇನ್ನಿಗಾಗಿ ಎಂಬ ನೆಪ ಮಾಡಿ ಕಳುಹಿಸಿ ಕೊಟ್ಟಿದ್ದೇನೆ.

ಸಿಲ್ವರ್', ಭಾರತದ ಭಿಕ್ಷುಕರ ಸಮಸ್ಯೆಯೆಡೆಯಲ್ಲಿ ಈ ಧಾರ್ಮಿಕ ವಿಚಾರವೇಕೆ ಎಂಬುದಾಗಿ ನೀನು ಆಕ್ಷೇಪಿಸುವೆಯೋ ಏನೋ? ಆದರೆ ಶ್ರೀಕೃಷ್ಣನ ಪ್ರತಿಮೆಯ ವಿಚಾರ ಬಂದಾಗ ಮೇಲೆದ್ದು ನಿಲ್ಲುವ ನನ್ನ ಅಂತರಂಗದ ವಿಚಾರ ಲಹರಿಗಳನ್ನು ಹೇಗೆ ತಾನೇ ನಾನು ಹತ್ತಿಕ್ಕಲಿ? ಇದೇನೂ ಗ್ರಂಥವಲ್ಲವಷ್ಟೆ? ನನ್ನ ಅನುಭವಗಳ ಒಂದು ಪಾಕ ಮಾತ್ರವನ್ನು ನಿನ್ನ ಸ್ವಂತ ಉಪಯೋಗದ ಬಗ್ಗೆ ಕಳುಹಿಸುತ್ತಿದ್ದೇನೆ. ಹಾಗಿರಲು ಇದರಲ್ಲಿ ತಪ್ಪಿಲ್ಲ, ಅಲ್ಲವೇ?

ನಾನು ಈ ಕುರಿತಾಗಿ ಕ್ಷಮೆ ಕೇಳಲು ಒಂದು ಕಾರಣವೂ ಇದೆ. ಇದೇ ಕುರಿತಾಗಿ ನಾನು ಇನ್ನೂ ಸ್ವಲ್ಪ ಬರೆಯಬೇಕಾಗಿದೆ. ನೀನು ನನ್ನನ್ನು ಟೀಕಿಸಬಾರದು ಎಂಬುದಕ್ಕಾಗಿ ಹೀಗೆ ಬರೆದೆ.

ಭಾರತೀಯ ಧರ್ಮ ಮತ್ತು ಶಾಸ್ತ್ರಗಳ ಸಂದೇಶವಾಹಕರೆಂಬುದಾಗಿ ತಿಳಿಯಲ್ಪಡುತ್ತಿರುವ ಇಲ್ಲಿಯ ಹಲವು ಪುರೋಹಿತರು, ಪಂಡಿತರು, ವೇದಾಂತಿಗಳು ಮತ್ತು ತತ್ವಜ್ಞಾನಿಗಳೆನ್ನಿಸಿಕೊಳ್ಳುವವರು ಕೂಡಾ ಶ್ರೀಕೃಷ್ಣನು ದೇವರೆಂದು ಸಾರುತ್ತಲೇ ಆದರ ಬೆನ್ನಲ್ಲೇ ಆತನಿಗೆ ಹದಿನಾರು ಸಾವಿರದ ನೂರೆಂಟು ಮಡದಿಯರಿದ್ದರು ಎಂಬುದಾಗಿ ಸಾರಿಬಿಡುತ್ತಾರೆ. ಗೋಪಿಯರನ್ನೆಲ್ಲ (ಗೋಪಿಯರೆಂದರೆ ಶ್ರೀ ಕೃಷ್ಣನು ಬಾಲ್ಯದಲ್ಲಿದ್ದ ನಂದಗೋಕುಲದ ಗೋವಳರ ಸ್ತ್ರೀಯರು) ಶ್ರೀ ಕೃಷ್ಣನು ಸ್ವಚ್ಛಂದವಾಗಿ ಅನುಭವಿಸುತ್ತಿದ್ದನು ಎಂಬುದಾಗಿಯೂ ಭಾವಿಸುತ್ತಾರೆ ಇಲ್ಲವೇ ಹೇಳುತ್ತಾರೆ. ಸೀರೆ ಬಿಚ್ಚಿ ನದಿ, ಕೆರೆಗಳಲ್ಲಿ ಸ್ನಾನ ಮಾಡುತ್ತಿರುವ ಗೋಪಿಯರ ಸೀರೆಯನ್ನು ಶ್ರೀಕೃಷ್ಣನು ಅಪಹರಿಸಿ, ಅಲ್ಲೇ ಮರದ ಮೇಲೆ ಕುಳಿತು ಕೊಳಲನ್ನೂದುತ್ತಿದ್ದನಂತೆ. ಆತನ ಬಾಲ್ಯದಲ್ಲಿ ಇತರ ಗೋಪಿಯರ ಹಾಲಿನ ಗಡಿಗೆಯೊಡೆದು, ಹಾಲು ಕುಡಿಯುತ್ತಿದ್ದನೆಂದೂ ಮಡಿಕೆಯಲ್ಲಿಟ್ಟ ನವನೀತವನ್ನು ಕದಿಯುತ್ತಿದ್ದನೆಂದೂ ಕತೆ ಹೇಳುತ್ತಾರೆ.

ಇಂತಹ ಮಾತುಗಳನ್ನು ತಿಳಿದವರೆನ್ನಿಸಿಕೊಂಡ ಹಿಂದೂ ಬ್ರಾಹ್ಮಣರೇ ಹೇಳುವಾಗ ಅನ್ಯವಾದ ಕ್ರೈಸ್ತ ಧರ್ಮದ ಗುರುಗಳು ಅದೇ ಮಾತನ್ನು ಹೇಳುವುದರಲ್ಲಿ ಆಶ್ಚರ್ಯವೇನು ಬಂತು?

ಭಾರತೀಯ ಚಲಚ್ಚಿತ್ರಗಳಲ್ಲಿ ಹಾಗೂ ಇಲ್ಲಿಯ ನಾಟಕ, ನೃತ್ಯ ಇತ್ಯಾದಿ ಸಾಂಸ್ಕೃತಿಕ ಚಟುವಟಿಕೆಗಳ ಸಂದರ್ಭದಲ್ಲಿ ಭಾರತ ಮತ್ತು ರಾಮಾಯಣದ ಕತೆಗಳನ್ನು ಕಥಾಭಾಗವಾಗಿ ತೆಗೆದುಕೊಳ್ಳುವುದಿದೆ. ಶ್ರೀ ಕೃಷ್ಣನ ಜೀವನದ ನಿರೂಪಣೆಯೇ ಆಗಿರುವ ಭಾರತದ ಭಾಗಗಳನ್ನೂ ಚಿತ್ರಿಸುವುದಿದೆ. ಕೃಷ್ಣನ

ಜೀವನ ಬರುವಲ್ಲಿಲ್ಲ, ಆತನು ಪರಮಾತ್ಮನೆಂದು ಚಿತ್ರಿಸುವುದರೊಂದಿಗೆಯೇ ಆತನ ಮೇಲೆ ಅಲ್ಲಸಲ್ಲದ ಆರೋಪಗಳ ಚಿತ್ರಣವನ್ನೇ ಕೊಡುತ್ತಾರೆ. (ಆರೋಪ ಮಾಡುವ ದೃಷ್ಟಿಯಿಟ್ಟುಕೊಂಡು ಅವರು ಹಾಗೆ ಮಾಡುತ್ತಿಲ್ಲ.) ನಾನೂ ಇಂತಹ ಕೆಲವು ದೃಶ್ಯಗಳನ್ನು ನೋಡಿದ್ದೇನೆ.

ಇತ್ತೀಚೆಗೆ ನಾನು ಮದ್ರಾಸಿನ ಬಳಿಯೇ ಇರುವ ಒಬ್ಬರು ಅಧ್ಯಾತ್ಮ ಸಾಧಕರನ್ನು ಭೇಟಿಯಾದೆ. ಅವರು ಬಹಳ ಹೆಚ್ಚಿನ ವಿದ್ವತ್ಪೂರ್ಣರಾದರೂ ಬಹಳ ವಿನೀತರಾಗಿದ್ದಾರೆ. ಅವರು ಯಾವುದೇ ಆಶ್ರಮ ಇತ್ಯಾದಿಗಳನ್ನು ಕಟ್ಟಿಕೊಳ್ಳದೇನೇ ಅವರಷ್ಟಕ್ಕೇ ಇದ್ದುಕೊಂಡು ತಮ್ಮ ಸ್ವಗೃಹದಲ್ಲಿ ಉಜ್ವಲ ವಾದ ಸಾಧನೆ ಮಾಡುತ್ತಾರೆ. ಅವರು ಮದ್ರಾಸು ವಿಶ್ವವಿದ್ಯಾಲಯದಲ್ಲಿ ತತ್ವ ಶಾಸ್ತ್ರದಲ್ಲಿ ಎಮ್. ಎ. ಪದವೀಧರರಾಗಿ ಪಿ. ಯಚ್. ಡಿ. ಯನ್ನೂ ಪಡೆದು ಸುಮ್ಮನೆ ಸಾಧನೆ ಮಾಡುತ್ತಾ ಕುಳಿತಿದ್ದಾರೆ. ಅವರ ಹೆಸರನ್ನು ಪ್ರಕಟಿಸಲೇ ಬಾರದೆಂಬ ಅವರ ಆಗ್ರಹದ ಕರೆಯ ಮೇರೆಗೆ ನಾನು ಸುಮ್ಮನಿರಬೇಕಾಗಿದೆ. ಹೆಸರು ಬರೆಯಲಿಲ್ಲವೆಂದು ಆಕ್ಷೇಪಿಸಬೇಡ, ಸಿಲ್ವರ್.

ಅವರೊಂದಿಗಿನ ನನ್ನ ಭೇಟಿಯ ಕಾಲದಲ್ಲಿ ನಾನು ಶ್ರೀ ಕೃಷ್ಣನ ಕುರಿತಾಗಿ ಬಹಳವಾಗಿ ಪ್ರಶ್ನಿಸಿದೆ. ಭಾರತದಲ್ಲಿ ಈ ತನಕ ಯಾರೂ ಚೆಲ್ಲದಿದ್ದ ದಿವ್ಯವಾದ ಬೆಳಕನ್ನವರು ಆ ಪುರುಷೋತ್ತಮನ ಜೀವನದ ಮೇಲೆ ಬೀರಿದರು— ನನ್ನ ಎದೆಗೆ ಶಾಂತಿಯನ್ನಿತ್ತರು. ಶ್ರೀ ಕೃಷ್ಣನು ಹಾಗೆಲ್ಲ ಮಾಡಿದನೆಂಬುದು ನನಗೆ ನಂಬಲು ಸಾಧ್ಯವಾಗಿರಲಿಲ್ಲ. ನನ್ನ ಅಂತರಂಗವು ಕಾತರತೆಯಿಂದ ಬಯಸುತ್ತಿದ್ದ ಉತ್ತರವನ್ನೇ ಅವರು ನೀಡಿದರು. ಅವರ ಕೂಡೆ ಸಂಭಾಷಣೆ ಯಿಂದ ನಾನು ತಿಳಿದ ಮಹತ್ವಪೂರ್ಣ ವಿಷಯವನ್ನು ತಿಳಿಸುತ್ತೇನೆ. [ನಂತರ ಸ್ವಾಮಿ ಶಿವಾನಂದರು ಬರೆದ ಶ್ರೀಕೃಷ್ಣನ ಕುರಿತಾದ ಜೀವನ ಚರಿತ್ರೆಯ ನ್ನೋದಿ ಇದೇ ಅಭಿಪ್ರಾಯವು ಮತ್ತಷ್ಟು ಸ್ಪಷ್ಟವಾಯಿತು.]

ನರಕಾಸುರನೆಂಬ ಒಬ್ಬ ದುಷ್ಟ ರಾಜನು 16,100 ಗೋಪಿಕಾ ಸ್ತ್ರೀಯ ರನ್ನು ಅಪಹರಿಸಿ, ತನ್ನ ಕಾಮುಕೇಳಿಗೆಂಬುದಾಗಿ ಬಂಧಿಸಿಟ್ಟಿದ್ದನು. ತಮ್ಮ ಬಿಡುಗಡೆಯಾಗುವಂತೆ, ಅವರು ತಮ್ಮ ಹೃದಯಾಂತರಾಳದಲ್ಲಿ ಶ್ರೀ ಕೃಷ್ಣ ನಿಗೇ ಮೊರೆಯಿಡುತ್ತಿದ್ದರು. ಒಂದು ದಿನ ಅವರ ಕರುಳಿನ ಕರೆಗೆ ಓಗೊಟ್ಟು ಶ್ರೀ ಕೃಷ್ಣನು ನರಕಾಸುರನ ಸಂಹಾರವನ್ನೇರ್ಪಡಿಸಿ, ಆ ಸ್ತ್ರೀಯರನ್ನು ಬಂಧ ಮುಕ್ತರನ್ನಾಗಿ ಮಾಡಿದನು.

ಇದರಿಂದ ಆ ಸ್ತ್ರೀಯರಿಗೆ ಶ್ರೀಕೃಷ್ಣನ ಮೇಲಿನ ಭಕ್ತಿಯು ನೂರ್ಮಡಿಯಾಯಿತು. ಅವರು ಇನ್ನೆಲ್ಲಿಯೂ ಹೋಗದೆ ಶ್ರೀಕೃಷ್ಣನ ಪಾದತಲದಲ್ಲೇ ಸಾಧನೆ ಮಾಡುತ್ತ ಇರುವೆವೆಂದು ಪ್ರಾರ್ಥಿಸಲು ಆತನು ಕರುಣಾ ವಿಶೇಷದಿಂದ ಸಮ್ಮತಿಸಿದನು. ಆ ಸ್ತ್ರೀಯರಿಗೆ ಸದಾ ಕೃಷ್ಣನದೇ ನೆನಪು, ಆತನದೇ ಧ್ಯಾನ, ಆತನದೇ ಚಿಂತನೆ, ಆತನದೇ ಸ್ಮರಣೆ, ಭಜನೆ. ಹಿಂದೂ ಧರ್ಮದಲ್ಲಿ ಪ್ರಸಿದ್ಧವಾದ ಮಧುರ ಭಕ್ತಿಯೆಂಬ ರೂಪದಲ್ಲಿ ಅವರು ಸಾಧನೆ ಮಾಡತೊಡಗಿದರು. ಅಂದರೆ ಅವರೆಲ್ಲ ಶ್ರೀಕೃಷ್ಣನ ಅನನ್ಯ ಶ್ರದ್ಧಾಯುತ ಭಕ್ತೆಯರಾಗಿದ್ದರು—ಇತ್ತೀಚೆಗೆ ಭಾರತದಲ್ಲಿ ಬದುಕಿಬಾಳಿದ ಮೀರಾಬಾಯಿ ಇದ್ದಂತೆ.

ಇಂತಹ ಇವರ ಪಾವನಕರವಾದ ಜೀವನವನ್ನು ಗೌರವಿಸುವ ಬದಲು, ಅದರೊಂದಿಗೆ ಶ್ರೀಕೃಷ್ಣನ ಮಹಿಮಾನ್ವಿತ ವ್ಯಕ್ತಿತ್ವವನ್ನು ತಿಳಿದು, ಕೊಂಡಾಡುವ ಬದಲು, ಆ ಸ್ತ್ರೀಯರೆಲ್ಲ ಶ್ರೀ ಕೃಷ್ಣನ ಮಡದಿಯರು ಎಂದು ಭಾರತೀಯರು ಕರೆಯುತ್ತಾರೆ. ಭಕ್ತೆಯರು ಎಂಬ ಸ್ಥಾನವೆಲ್ಲಿ? ಮಡದಿಯರು ಎಂಬ ಸ್ಥಾನವೆಲ್ಲಿ?

ಅರ್ಧ ನಗ್ನಾವಸ್ಥೆಯಲ್ಲಿ ಜಲಕ್ರೀಡೆಯಾಡುತ್ತಾ ದಾರಿಹೋಕರ ಮನಸ್ಸನ್ನು ಕೆಡಿಸುವಂತಿದ್ದ ಕೆಲವು ಅಂದಿನ ಸ್ತ್ರೀಯರಿಗೆ ಬುದ್ಧಿ ಕಲಿಸುವುದಕ್ಕಾಗಿ, ಆತನು ತನ್ನಮಾಯಾಶಕ್ತಿಯಿಂದಅವರ ಬಿಚ್ಚಿಟ್ಟ ಸೀರೆಗಳನ್ನುಅಪಹರಿಸಿ, ಆರ್ತತೆಯಿಂದ ಅಳುವಂತೆ, ತನಗೇ ಮೊರೆಯಿಡುವಂತೆ ಮಾಡಿದನು. ಕಟ್ಟಕಡೆಗೆ ಅವನು ಬಂದು, ಅವರಿಗೆ ಹಿತಬೋಧೆ ಹೇಳಿ ಸೀರೆಗಳನ್ನು ದಯಪಾಲಿಸಿದನು. ಗೋಪೀ ವಸ್ತ್ರಾಪಹರಣವೆಂಬ ಕಾಮುಕ ವ್ಯವಹಾರದ ಬದಲಾಗಿ, ಗೋಪೀ ಪಾಪಹರಣವೆಂಬ ಸತ್ಯದ ರೂಪವನ್ನದು ನಿಜವಾಗಿ ಹೊಂದಿದೆ. ಆದರೆ ಅದನ್ನು ತಿಳಿದುಕೊಂಡವರು ಕೇವಲ ಕೆಲವೇ ಮಂದಿ.

ಶ್ರೀ ಕೃಷ್ಣನ ಅತ್ಯಂತಿಕ ಭಕ್ತೆಯರ ಕೂಡೆ ಒಂದು ರಾತ್ರಿ ಶ್ರೀಕೃಷ್ಣನು ರಾಸಕ್ರೀಡೆಯೆಂಬ ಒಂದು ಅದ್ಭುತ ರೋಮಾಂಚಕಾರೀ ಪವಾಡರೂಪವಾದ ಲೀಲೆಯನ್ನೆಸಗಿದ್ದಾನೆ. ಮಧುರವಾದ ಭಾವದಿಂದ, ದೇವಾದಿದೇವನೆಂದೂ, ತಮ್ಮ ಸರ್ವೇಶ್ವರನೆಂದೂ ಕಲವು ಗೋಪಿ ಸ್ತ್ರೀಯರು ಭಕ್ತಿಯ ಪರಾಕಾಷ್ಠೆಯ ಸ್ಥಿತಿಯಲ್ಲಿ ಆ ರಾತ್ರಿ ಭಜನೆ ಮಾಡುತ್ತ ಕುಣಿಯುತ್ತಿದ್ದರು. ಎಲ್ಲರಿಗೂ ಶ್ರೀ ಕೃಷ್ಣನ ದಿವ್ಯ ಉನ್ಮಾದ ಹಿಡಿದಿತ್ತು. ಆಗ ಶ್ರೀಕೃಷ್ಣನು ಏಕಕಾಲದಲ್ಲಿ

ಸಹಸ್ರಾರು ಕೃಷ್ಣರಾಗಿ ಪ್ರತ್ಯಕ್ಷನಾಗಿ ಪ್ರತಿ ಎರಡು ಮಂದಿ ಗೋಪಿಯರ ಮಧ್ಯೆ ನಿಂತು, ಅವರ ಭಜನೆಗೆ ಸರಿಯಾಗಿ ಕೋಲಾಟವಾಡಿದನಂತೆ. ಇಂತಹ ಈ ಆಟವೆಂದರೆ, ಆ ಸ್ತ್ರೀಯರಿಗೆ ಆತ್ಮ ಕ್ರೀಡೆಯೇ ಆಗಿ ಪರಿಣಮಿಸಿತು. ಅವ ರೆಲ್ಲ ಬಾಹ್ಯ ಪ್ರಜ್ಞಾಶೂನ್ಯರಾಗಿ ಶ್ರೀಕೃಷ್ಣನ ಭಕ್ತಿಯ ಭಾವೋನ್ಮಾದದಲ್ಲಿ ಕುಣಿ ಕುಣಿದು, ಮೈ ಮರೆತಿದ್ದರು. ಆ ತನಕ ಅನುಭವಿಸದ ಹೊಸ ಆಧ್ಯಾತ್ಮಿಕ ಆನಂದವನ್ನು ಆ ಕೃಷ್ಣಪ್ರೇಮದಲ್ಲಿ, ಆ ಆತ್ಮಕ್ರೀಡೆಯಲ್ಲಿ ಅನುಭವಿಸಿ ದ್ದರು. ಏಕಕಾಲದಲ್ಲಿ ಸಹಸ್ರ ದೇಹಗಳಲ್ಲಿ ಕೃಷ್ಣರೂಪದಲ್ಲೇ ಪ್ರತ್ಯಕ್ಷ ನಾಗಿ, ಅವರಿಗೆ ಆ ಕ್ರೀಡೆಯಲ್ಲೇ ಆತ್ಮಾನಂದವನ್ನನುಭವಿಸಿಕೊಟ್ಟ ಉದಾ ಹರಣೆಯು ಜಗತ್ತಿನ ಚರಿತ್ರೆಯಲ್ಲಿ ಎಲ್ಲಿ ತಾನೇ ಇದೆ, ಹೇಳು ಸಿಲ್ವರ್?

ಶ್ರೀ ಕೃಷ್ಣನು ತನ್ನ ಮಹಿಮಾನ್ವಿತ ದೈವಸ್ಥಿತಿಯಿಂದ ಆ ಗೋಪಿಯರ ಮನಸ್ಸೆಂಬ ಪೀಠವನ್ನೇ ಅಲಂಕರಿಸುತ್ತಿದ್ದನು. ಅವರ ಭಕ್ತಿರಸವೇ ಅವನ ಅತಿ ಪ್ರಿಯವಾದ ಪಾನೀಯವಾಗಿತ್ತು. ಅವರು ತಮ್ಮ ಮನೋಕ್ಷೀರವನ್ನೇ ಕಡೆಕಡೆದು ತಯಾರಿಸಿದ ನವನೀತ ಅಂದರೆ ಅವರ ಆತ್ಮವನ್ನೇ ಶ್ರೀಕೃಷ್ಣನು ಕದಿಯುತ್ತಿದ್ದನು. ಇದನ್ನೆಲ್ಲ ಒಗಟಾಗಿ ನವನೀತ ಚೋರನೆಂಬುದಾಗಿ ಭಾಗ ವತ ಮಹಾ ಪುರಾಣವು ವರ್ಣಿಸಿದೆ. ಅಜ್ಞಾನಿಗಳು ನವನೀತವೆಂದರೆ ಬಿಳಿ ಬಣ್ಣದ ಬೆಣ್ಣೆಯೆಂದೂ, ಶ್ರೀಕೃಷ್ಣನು ಬೆಣ್ಣೆಕಳ್ಳನೆಂದೂ ಭ್ರಮಿಸಿಕೊಳ್ಳು ತ್ತಾರೆ.

ಶ್ರೀಕೃಷ್ಣನಿಗೆ ಎಂಟು ಮಂದಿ ಮಡದಿಯರು ಇದ್ದುದಾಗಿರಬಹುದು. ಆಗಿನ ಕಾಲದ ರಾಜರು ಬಹು ಪತ್ನಿಯರನ್ನು ಸ್ವೀಕರಿಸುತ್ತಿದ್ದರು. ಆದ್ದರಿಂದ ಶ್ರೀ ಕೃಷ್ಣನಿಗೆ ಅಂದಿನ ಸಾಮಾಜಿಕ ಸ್ಥಿತಿಯಲ್ಲಿ ಅದೇನೂ ವಿಶೇಷವಾಗಿರಲಿಲ್ಲ.

ಆದರೆ ಆ ಮಡದಿಯರಿಗೂ ಆತನು ಕೊಟ್ಟುದು ಇಂದ್ರಿಯಸುಖವ ನ್ನಲ್ಲ. ಅಧ್ಯಾತ್ಮದ ರಸಪರಿಪಾಕವನ್ನು. ಏಕೆಂದರೆ ಶ್ರೀಕೃಷ್ಣನೇ ಯೋಗೀ ಶ್ವರನೆಂದು ವರ್ಣಿತನಾಗಿದ್ದಾನೆ. ಯೋಗ ಎಂದರೆ ಪರಮಾರ್ಥ ಸ್ವರೂಪದಲ್ಲಿ ಅಂದರೆ ದೈವೀ ಸ್ಥಿತಿಯಲ್ಲಿ ಅಂತರಂಗವನ್ನು ಅಂದರೆ ಮನಸ್ಸನ್ನು ಕೂಡಿಸಿ ಕೊಂಡು ಐಕ್ಯವಾಗಿಸುವುದು ಎಂಬರ್ಥ. ಅಂತಹ ಯೋಗಿಗಳಿಗೆ ಈಶ್ವರ ಅಂದರೆ ಒಡೆಯನಂತೆ ಶ್ರೀಕೃಷ್ಣ. ಹಾಗಿದ್ದರೆ ಆತನ ದಿವ್ಯ ಅಂತರಂಗ ಹೇಗಿರಬೇಕು, ನೀನೇ ಊಹಿಸಿಕೋ.

ಇಂತಹ ಮಹಿಮಾನ್ವಿತ ಪುರುಷನನ್ನೇ ಇಲ್ಲಿಯ ಜನರು, ಸುಂದರನಾದ ಒಬ್ಬ ವಿಟಪುರುಷನ ರೂಪದಲ್ಲಿರುವ ದೇವರೆಂದು ಭಾವಿಸುವುದು. ತಮ್ಮ ಪಾಪಕ್ರಿಯೆಗೆ ಶಾಸ್ತ್ರಸಮ್ಮತವಾದ ಒಂದು ಒಪ್ಪಿಗೆಯ ಮುದ್ರೆಯನ್ನು ಪಡೆಯು ವುದಕ್ಕಾಗಿಯೇ, ಇಲ್ಲಿಯ ತಿಳಿದವರೆನ್ನಿಸಿಕೊಳ್ಳುವ ಅಜ್ಞಾನಿಗಳು ಇಂತಹ ಕತೆಗ ಳನ್ನು ಪ್ರಚುರಪಡಿಸಿ, ತಮ್ಮ ಭವ್ಯ ಧರ್ಮಕ್ಕೆ ಮಸಿಬಳಿಯುತ್ತಾರೆ. ಹಾಗಿರಲು, ಅದನ್ನೇ ತಮ್ಮ ಪ್ರಚಾರ ಸಾಧನವಾಗಿ ಮಾಡಿಕೊಂಡು, ಹಿಂದೂ ಧರ್ಮದ ಅವನತಿಯಲ್ಲೇ ಕ್ರೈಸ್ತ ಧರ್ಮದ ಉನ್ನತಿಯನ್ನು ಕಾಣುವ ಕೆಲವು ಧರ್ಮ ಗುರುಗಳೆನ್ನಿಸಿಕೊಳ್ಳುವವರು, ಕೀಳು ರೀತಿಯ ಪ್ರಚಾರ ಮಾಡುತ್ತ ಕಳ್ಳ ಕೃಷ್ಣನೆಂದೂ, ಸುಳ್ಳು ಕೃಷ್ಣನೆಂದೂ ಹೇಳುವುದರಲ್ಲಿ ಆಶ್ಚರ್ಯವೇನು?

ಆದರೆ ನನ್ನ ಮಟ್ಟಿಗೆ ಶ್ರೀಕೃಷ್ಣನು ಪರಮ ಪಾವನ ಮೂರ್ತಿ. ಭಗವ ದ್ಗೀತೆಯಲ್ಲಿ ಆತನು ಸಾರಿದ ಸಂದೇಶಗಳು, ಮಾನವ ಜನಾಂಗದ ಅಂತ್ಯದ ತನಕವೂ ಅದರ ಸುಖ, ಶಾಂತಿಗೆ ಬೇಕಾದ ಅನುಪಮವಾದ ರತ್ನ ಭಂಡಾರ ಗಳು; ಯೋಗೀಶ್ವರನು ಮಾತ್ರವೇ ಸುರಿಯಬಹುದಾದ ಅಮೃತ ತುಲ್ಯ ಉಪದೇಶಗಳು. ಈಗ ಬೈಬಲ್‌ನೊಂದಿಗೆ ಗೀತೆಯನ್ನೂ ಓದುತ್ತಿರುವ ನಿನಗೆ ಈ ಮಾತು ಬೇಗನೇ ಪೂರ್ತಿ ಸತ್ಯವಾಗಿ ಕಾಣದಿರದು.

ಸಿಲ್ವರ್, ಇಲ್ಲಿಯ ಭಿಕ್ಷುಕರ ಸಮಸ್ಯೆಯ ಕುರಿತಾಗಿ ಹೇಳಬೇಕಾದ ನಾನು ಇಲ್ಲಿಯ ತನಕ ನಿನ್ನನ್ನು ಕರೆದೊಯ್ದೆ. ಕ್ಷಮಿಸುವೆಯಷ್ಟೆ! ಪ್ರಿಯ ಮಿತ್ರಾ, ಎಲ್ಲಿಯಾದರೂ, ಅಪ್ಪಿತಪ್ಪಿಯಾದರೂ, ಈ ನನ್ನ ಪತ್ರಗಳನ್ನು ನನ್ನ ದೇಶ ಬಾಂಧವರಾದ ಕ್ರೈಸ್ತರು ಓದಿಬಿಟ್ಟರೆ ಖಂಡಿತ ನನ್ನನ್ನು ಧರ್ಮದ್ರೋಹಿ ಯೆಂದು ತಿಳಿಯುವರು. ಆದರೆ ಹಿಂದೂ ಧರ್ಮದ ಮೇಲಿನ ನನ್ನ ಪ್ರೇಮ, ಕ್ರೈಸ್ತ ಧರ್ಮದ ಮೇಲಿನ ನನ್ನ ಶ್ರದ್ಧೆಯನ್ನು ಬಲಪಡಿಸಿದೆಯೇ ವಿನಹಾ ಏನೂ ಕುಂ ದಿಸಿಲ್ಲ. ಸತ್ಯ ಹೇಳುವುದಿದ್ದರೆ ನನಗೆ ಎರಡೂ ಧರ್ಮಗಳೂ, ಒಂದೇ ದೈವೀ ಧರ್ಮದ ಎರಡು ಮುಖಗಳಾಗಿ ಕಾಣುತ್ತಿವೆ; ನೀನು ಒಪ್ಪುವೆಯೋ ಇಲ್ಲ ವೋ ನನಗೆ ತಿಳಿಯದು. ಆದರೆ ಕ್ರೈಸ್ತ ಸಂಘದಲ್ಲಿ ಭಕ್ತಿಯ ವಿಧಾನವು ಮಾತ್ರವೇ ನಿರೂಪಿತವಾಗಿದೆ. ಹಿಂದೂ ಧರ್ಮವು, ರಾಜಯೋಗ, ಕರ್ಮ ಯೋಗ, ಮತ್ತು ಜ್ಞಾನಯೋಗಗಳೆಂಬ ಇತರ ಸಾಧನಾ ವಿಧಾನಗಳನ್ನೂ ಒಳಗೊಂಡಿದೆ. ನನಗೆ ಕಾಣುತ್ತಿರುವ ವ್ಯತ್ಯಾಸ ಇದೊಂದೇ. ಹೀಗಿರಲು ಯಾರಿಗಾದರೂ ನನ್ನ ಮೇಲೆ ಸಂಶಯವೇಕೆ?

ಆದರೂ, ಸಿಲ್ವರ್, ಸತ್ಯವನ್ನು ಇದ್ದುದಿದ್ದಂತೆ ತಿಳಿಯುವವರು ಕೆಲವೇ ಮಂದಿ. ಹಾಗಿರಲು ನನ್ನನ್ನು ತಪ್ಪು ತಿಳಿದುಕೊಳ್ಳುವವರು ಬಹಳ ಮಂದಿ ಇರಬಹುದು. ನಾನೇನು ಮಾಡಲಿ?

ಇರಲಿ, ಪುನಃ ನಿನ್ನನ್ನು ಭಾರತದ ಭಿಕ್ಷುಕರ ರಾಜ್ಯಕ್ಕೆ, ದಾರಿದ್ರ್ಯವು ವಿಕಾರವಾಗಿ ನೃತ್ಯವನ್ನಾಡುತ್ತಿರುವ ಕ್ಷೇತ್ರಕ್ಕೆ ಕರೆದೊಯ್ಯುತ್ತೇನೆ.

ಸಿಲ್ವರ್, ಹೆತ್ತವರ ಸುಭದ್ರ ರಕ್ಷಣೆಯಲ್ಲಿದ್ದುಕೊಂಡು, ಬೇಕು ಬೇಕಾದ ಆರೋಗ್ಯಕರ ತಿಂಡಿ ತಿನಸುಗಳನ್ನು ತಿಂದುಕೊಂಡಿದ್ದು, ಉತ್ತಮ ಬಟ್ಟೆಬರೆ ಹಾಕಿ, ಪಾಠಶಾಲೆಗಳಿಗೆ ಹೋಗುತ್ತ ಅತ್ಯುತ್ತಮ ತರಬೇತಿ ಪಡೆಯುತ್ತ ಬಿಡು ಸಮಯದಲ್ಲಿ ಹಕ್ಕಿಗಳಂತೆ ಹಾರುತ್ತ, ಚೀರುತ್ತ, ಕುಣಿಯುತ್ತ ಇರ ಬೇಕಾದ ಕೇನ್ನಿಯಂತಹ ಎಳೆಯ ಮಕ್ಕಳು, ಈ ಭಾರತದ ಬೀದಿಗಳಲ್ಲಿ ಅನ್ನಕ್ಕಾಗಿ, ಒಂದು ಹಿಡಿ ತಿಂಡಿಗಾಗಿ ಅಲೆಯುತ್ತಾ ತಿರುಗುವ ದೃಶ್ಯವನ್ನು ನೋಡುವಾಗ ಯಾರಿಗೆ ತಾನೇ ಮರುಕವಾಗದು? ಅವರ ಹರುಕು ಚಿಂದಿ ಯಾದ ಅಂಗಿ ಬಟ್ಟೆಗಳೇನು? ಹಸಿವಿನಿಂದ ಜೋತುಬಿದ್ದ ಮುಖಗಳೇನು? ದುಃಖರೂಪದಿಂದಲೇ ಎದ್ದು ಬರುವಂತಿರುವ ಆ ಕರುಣಾರ್ದ್ರ ಕಣ್ಣುಗಳೇನು? ಈ ಕರುಳು ಕೀಳುವ ದೃಶ್ಯಗಳನ್ನು ನೋಡಿಯೂ ಇಲ್ಲಿಯ ಸರಕಾರೀ ಅಧಿಕಾ ರಿಗಳಿಗೆ, ಇಲ್ಲಿಯ ಸಚಿವರುಗಳಿಗೆ, ಇಲ್ಲಿಯ ಶ್ರೀಮಂತರಿಗೆ, ಇಲ್ಲಿಯ ರಾಜ ಕೀಯ ಮುಖಂಡರಿಗೆ ರಾತ್ರಿ ಸುಖವಾದ ನಿದ್ದೆ ಬರುತ್ತದೆ; ಉಂಡ ಊಟ ಮೈ ಸೇರುತ್ತದೆ; ಮನವು ಸುಖದಿಂದ ಉಬ್ಬುತ್ತಿರುತ್ತದೆ.

ನಿನಗೆ ಕೇಳಿದರೆ ಅತ್ಯಾಶ್ಚರ್ಯವಾಗಬಹುದು, ಸಿಲ್ವರ್. ಒಂದು ಘಟನೆ ಹೇಳುತ್ತೇನೆ. ನಾನು ಇತ್ತೀಚೆಗೆ ಒಮ್ಮೆ ಮದ್ರಾಸಿನಿಂದ ರೈಲಿನಲ್ಲಿ ವಿಶಾಖಪಟ್ಟಣಕ್ಕೆ ಹೋಗುತ್ತಿದ್ದೆ. ಯಾವುದೋ ಒಂದು ಸ್ಟೇಶನಿನಲ್ಲಿ, ಎರಡು ಬಾಳೆಹಣ್ಣುಗಳನ್ನು ತೆಗೆದು ತಿನ್ನತೊಡಗಿದೆ. ಒಂದು ಮುಗಿಯಿತು. (ನಾನು ಬಾಯಲ್ಲಿ ಕಚ್ಚಿ ತಿನ್ನುತ್ತಿದ್ದೆ) ಎರಡನೇ ಹಣ್ಣನ್ನೂ ತಿನ್ನತೊಡಗಿದೆ. ಆ ಹಣ್ಣೂ ಕಾಲಂಶ ಮುಗಿದಿತ್ತು. ಅಷ್ಟರಲ್ಲಿ 7-8 ವರ್ಷ ಪ್ರಾಯದ ಒಬ್ಬಳು ಬಾಲಕಿ, ಹರುಕು ಚಿಂದಿಯನ್ನುಟ್ಟು, ಹೊಟ್ಟೆಗೆ ಬಡಕೊಳ್ಳುತ್ತಾ ಪ್ಲೇಟ್ ಫೋರ್ಮಿನಲ್ಲಿ ನಾನು ಕುಳಿತಲ್ಲಿಗೆ ಬಂದಳು. ಕರುಣಾರ್ದ್ರ ನೋಟದಿಂದ ಕುತ್ತಿಗೆ ಓರೆಮಾಡಿ ನನ್ನೆಡೆಗೆ ನೋಡುತ್ತಾ, ಕೈ ಮುಂದೆ ಮಾಡಿದಳು. ನನಗೆ

ಬಹಳ ಕನಿಕರ ಬಂತು. ಆದರೆ ಎಂಜಲು ಬಾಳೆಹಣ್ಣು ಏಕೆ ಕೊಡಲಿ ಎಂದುಕೊಂಡು ಅದನ್ನು ಮುಗಿಸಿ, ದುಡ್ಡು ಕೊಡುವುದರಲ್ಲಿದ್ದೆ. ಹಾಗೆ ಅವಳನ್ನು ನೋಡುತ್ತಲೇ ಇನ್ನೊಂದು ತುತ್ತು ಬಾಳೆಹಣ್ಣನ್ನು ತಿಂದೆ. ಆಗ ಅವಳ ಕಣ್ಣುಗಳಲ್ಲಿ ನೀರೊಸರಿತು. 'ಸಾವಿೂ' 'ಸಾವಿೂ' ಎನ್ನುತ್ತಾ ಮತ್ತಷ್ಟು ತವಕದಿಂದ ಕುತ್ತಿಗೆ ಉದ್ದ ಮಾಡಿದಳು. ಆಗ ನಾನೇ ಕೊಟ್ಟೆನೋ, ಹಣ್ಣೇ ಜಾರಿತೋ ನನಗರಿಯದು. ಅಂತೂ ಬಾಳೆಹಣ್ಣು–ಉಳಿದರ್ಧ ಎಂಜಲು ಹಣ್ಣು ಅವಳ ಕೈಗೆ ಬಿದ್ದು, ಜಾರಿ ಪ್ಲೇಟ್‌ಫೋರ್ಮಿಗೆ ಬಿತ್ತು. ಅವಳದನ್ನು ಸಂತಸದಿಂದ ಎತ್ತಿಕೊಂಡು, ಅದರ ಧೂಳನ್ನೆಲ್ಲ ಜಾಡಿಸಿ, ಆನಂದಾತಿರೇಕದಿಂದ ತಿನ್ನ ತೊಡಗಿದಳು. ನನ್ನನ್ನೇ ನೋಡುತ್ತ ಕೃತಜ್ಞತೆಯ ನಗೆಯನ್ನು ನಗ ತೊಡಗಿದಳು. ವರ್ಣಿಸಲಸದಳವಾದ ಯಾವ ಯಾವುದೋ ಭಾವನೆಗಳು ಹೃದಯವನ್ನು ಮುತ್ತಿ ನನ್ನನ್ನು ಅಳುವಂತೆ ಮಾಡಿದವು.

ತಪ್ಪೋ ಸರಿಯೋ ನನಗೆ ತಿಳಿದಿಲ್ಲ. ಒಂದು ರೂಪಾಯಿಯ ನೋಟು ತೆಗೆದು, ಅವಳ ಕೈಯಲ್ಲಿಟ್ಟು, ಅವಳ ಕಪೋಲ ಮುಟ್ಟಿ ಪ್ರೇಮ ತೋರಿದೆ. ಅವಳು ಚಿಗರಿಯಂತೆ ಹಾರುತ್ತ, ಕುಣಿಯುತ್ತ, ಎಡೆಯೆಡೆಯಲ್ಲಿ ನನ್ನನ್ನು ನೋಡುತ್ತ ದೂರ ದೂರ ಹೋದಳು. ಅವಳ ಚಿತ್ರ ಎಂದಿಗೂ ನನ್ನ ಮನೋ ಪಟಲದಿಂದ ಮರೆಯಾಗದು.

ಇಂತಹ ಲಕ್ಷೋಪಲಕ್ಷ ಬಾಲಕ ಬಾಲಕಿಯರು ಭಾರತ ಮಾತೆಯ ಗರ್ಭದಲ್ಲಿ ಭಾರವಾಗಿ ಕುಳಿತಿರುವರು. ಇವರೇ ಮುಂದೆ ಸಮಾಜದ ಆಧಾರ ಸ್ತಂಭಗಳಾಗುವ ಬದಲು, ಸಮಾಜವನ್ನು ಕಾಡುವ ಪಿಡುಗು ರೋಗಗಳಾಗು ವರು.

ಭಾರತದಲ್ಲಿ ಭಿಕ್ಷಾಟನೆಯನ್ನು ನಿರ್ಮೂಲಗೊಳಿಸುವ ಶಾಸನಗಳು ಒಂದೆರಡು ಪ್ರಾಂತ್ಯಗಳಲ್ಲಿ ಆಗಿವೆಯಾದರೂ, ಅವು ರಾಷ್ಟ್ರೀಯ ಮಟ್ಟದಲ್ಲಿ ಇನ್ನೂ ಬಂದಿಲ್ಲ. ಶಾಸನವಾಗಿ ಮಾಡಿದ ಪ್ರಾಂತ್ಯದಲ್ಲೂ ಅದಿನ್ನೂ ಸಿದ್ಧಾಂ ತಿಕ ಮಟ್ಟದಲ್ಲಷ್ಟೇ ಉಳಿದಿದೆ ಹೊರತಾಗಿ ಇನ್ನೂ ಕಾರ್ಯಕಾರಿಯಾಗಿಲ್ಲ– ಈಗಿನ ಸ್ಥಿತಿಯಲ್ಲಿ ಕಾರ್ಯಕಾರಿಯಾಗುವಂತೆಯೂ ಇಲ್ಲ. ಏಕೆಂದರೆ ಭಿಕ್ಷುಕ ಗೃಹಗಳನ್ನೇರ್ಪಡಿಸಿ, ಅಲ್ಲಿ ವೈಯ್ಯಕ್ತಿಕವಾಗಿ ಪ್ರತಿಯೊಬ್ಬ ಭಿಕ್ಷುಕನ ಸಮಸ್ಯೆ ಗಳನ್ನು ಗುರುತಿಸಿ, ಅದಕ್ಕೆ ಬೇಕಾದ ವ್ಯವಸ್ಥೆಯನ್ನು ಕೈಗೊಳ್ಳುವಂತಹ

ಬೃಹತ್ ಏರ್ಪಾಡು ಮಾಡುವ ಸಾಮರ್ಥ್ಯ ಇಲ್ಲಿಯ ಸರಕಾರಕ್ಕಿಂದು ಇರುವುದಿಲ್ಲ. ಆ ಶಕ್ತಿ ಅವರಿಗೆ ಬಾರದೆ ಈ ಸಮಸ್ಯೆಯು ಬಗೆಹರಿಸಲ್ಪಡುವುದಿಲ್ಲ. ಅದೇ ರೀತಿಯಲ್ಲಿ ಭಿಕ್ಷೆ ನೀಡುವವರ ಹಾಗೂ ಭಿಕ್ಷೆ ಪಡೆಯುವವರ ಮನೋಪರಿವರ್ತನೆಯಾಗದೆ, ಆ ಸಮಸ್ಯೆಗೆ ಪರಿಹಾರ ದೊರೆಯುವಂತಿಲ್ಲ.

ಸರಕಾರದ ಬೆಂಬಲವಿಲ್ಲದೆ ಊರ ಮಹನೀಯರುಗಳೇ ಸೇರಿ ದೇಶದ ಹಿತದೃಷ್ಟಿಯಲ್ಲಿ ತಮ್ಮ ಸ್ವಂತ ಖರ್ಚಿನಿಂದ ಭಿಕ್ಷುಕ ಗೃಹಗಳನ್ನೇಕೆ ನಡೆಸಬಾರದು ಎಂದು ನೀನು ಸಹಜವಾಗಿ ಪ್ರಶ್ನಿಸಬಹುದು. ಆದರೆ ಅಂತಹ ಉದಾರ ಬುದ್ಧಿಯ ಶ್ರೀಮಂತರು, ಕೆಲವೇ ಜನರನ್ನು ಬಿಟ್ಟರೆ ಭಾರತದಲ್ಲಿ ಇನ್ನೂ ಜನಿಸಿಲ್ಲ. ಪ್ರಾಯಶಃ ಮುಂದೆ ಜನಿಸುವರೋ ಏನೋ?

ಅಥವಾ ಒಂದು ಊರಲ್ಲಿ ಭಾರೀ ಪ್ರಯತ್ನಮಾಡಿ ನಡೆಸಿದರೆನ್ನೋಣ. ಆಗಲೂ ಸಮಸ್ಯೆಯಿದೆ. ಪ್ರಶ್ನೆ ಅಲ್ಲಿಗೆ ಬಗೆಹರಿಯುವುದಿಲ್ಲ. ಅದಕ್ಕೆ ಪೂರಕವಾಗಿ ಎರಡು ಘಟನೆಗಳನ್ನೇ ನಿನಗೆ ಬರೆದು ಬಿಡುತ್ತೇನೆ.

ಮದ್ರಾಸಿನಲ್ಲಿ ಒಮ್ಮೆ ಜಯನಾಥರೊಂದಿಗೆ ಕಮಲಂಬಾಳ್ ಎಂಬೋರ್ವ ಕುಲೀನ ಮನೆತನದ ಮಹಿಳೆಯ ಗೃಹಕ್ಕೆ ಹೋಗಿದ್ದೆ. ಆಕೆ ಒಬ್ಬಳು ಸಮಾಜ ಸೇವೆಯಲ್ಲಿ ನಿರತಳಾದ ಪುಣ್ಯವತಿಯಂತೆ. ಪರಿಚಯವಾದ ಮೇಲೆ ಆಕೆಯ ಜೀವನದ ಕುರಿತಾಗಿ ಇನ್ನೂ ಹೆಚ್ಚು ಕೇಳಬೇಕೆಂಬುದಾಗಿ ಕಂಡು ಕೇಳಿದೆ. ಆಗ ಆಕೆಯ ಕಾರ್ಯಕ್ರಮಗಳ ಸೂಕ್ಷ್ಮ ಪರಿಚಯ ದೊರೆಯಿತು.

ಆಕೆ ಅನೇಕ ಸಮಾಜ ಸೇವೆಗಳೊಂದಿಗೆ ಒಂದು ಭಿಕ್ಷುಕರ ಗೃಹವನ್ನೂ ನಡೆಸುತ್ತಾಳಂತೆ. ಇದನ್ನು ಕೇಳಿದೊಡನೆಯೇ ನನ್ನ ಉತ್ಸಾಹವು ನೂರ್ಮಡಿ ಹೆಚ್ಚಾಯಿತು. ಕಿವಿ ನಿಮಿರಿಸಿ, ದೇಹವನ್ನು ಮುಂದಕ್ಕೆ ಬಾಗಿಸಿ "ಇದು ಹೌದೇ?" ಎಂದು ಪ್ರಶ್ನಿಸಿದೆ. "ಹೌದು" ಎಂದವಳು ಒಪ್ಪಿಕೊಂಡಳು. "ಆದರೆ ಅದನ್ನು ಭಿಕ್ಷುಕ ಗೃಹವೆಂದು ಕರೆಯುವುದಕ್ಕೇ ನಾನು ನಾಚಿಕೊಳ್ಳುತ್ತೇನೆ" ಎಂದವಳು ಕೂಡಲೇ ಸ್ವರಕೂಡಿಸಿದಳು. ನನಗೆ ಅರ್ಥವಾಗಲಿಲ್ಲ. ಏತಕ್ಕಾಗಿ ನಾಚಿಕೆ ಎಂದು ನಾನು ಪ್ರಶ್ನಿಸಿದೆ. ಅದರಲ್ಲಿ ಪಕ್ಷವಾತ ರೋಗದಿಂದ ಬಳಲುವ ಒಬ್ಬ ಕುರುಡನು ಮಾತ್ರವೇ ಇರುವುದೆಂದು ಉತ್ತರಿಸಿದಳು. ಅದು ಏತಕ್ಕೆ ಹಾಗಾಯಿತು ಎಂಬುದಾಗಿ ನಾನು ಅನೇಕ ಪ್ರಶ್ನೆಗಳನ್ನು ಹಾಕಿ ತಿಳಿದುಕೊಂಡೆ,

ಒತ್ತಾಯಿಸಿದರೂ, ಧರ್ಮಾರ್ಥ ಊಟ ಹಾಕಿದರೂ ಯಾವ ಭಿಕ್ಷು ಕರೂ ಬರುವುದಿಲ್ಲವಂತೆ-ಒಂದು ವೇಳೆ ಅಪರೂಪದಲ್ಲಿಯಾದರೂ ಬಂದರೂ ಅವರು ನಿಲ್ಲುವುದೇ ಇಲ್ಲವಂತೆ. ಇದಕ್ಕೆ ಕಾರಣವೇನೆಂಬುದನ್ನು ನಾನು ತಿಳಿದುಕೊಂಡೆ.

ಪೇಟೆ ಪಟ್ಟಣಗಳಲ್ಲಿ ಭಿಕ್ಷೆ ಬೇಡಿದಾಗ ಅವರಿಗೆ ದಿನವೊಂದರ 3-4ರೂ ಪಾಯಿಗಳ ಉತ್ಪತ್ತಿಯಾಗುವುದಿದೆ- ಆ ಹಣ ಅವರದೇ ಆಗಿ ಉಳಿಯುವುದು, ಮಾತ್ರವಲ್ಲ ಅದರಿಂದ ತಮ್ಮ ಕುಟುಂಬದ ಪೋಷಣೆ ಮಾಡಿಕೊಳ್ಳಬಹುದು. ಆದರೆ ಈ ಭಿಕ್ಷುಕ ಗೃಹದಲ್ಲಾದರೋ ತಮ್ಮದೆಂಬ ಧನವೇ ಅವರಿಗಿಲ್ಲ. ಒಂದು ಯಂತ್ರದ ಬಿಡಿ ಭಾಗದಂತೆ, ಭಿಕ್ಷುಕ ಗೃಹವೆಂಬ ಯಂತ್ರದಲ್ಲಿ ಅವರೂ ಒಂದು ಬಿಡಿಭಾಗ ಅಷ್ಟೇ. ಅದು ಅವರಿಗೆ ರುಚಿಸುವುದಿಲ್ಲ.

ಅಷ್ಟೇ ಅಲ್ಲ. ಎಷ್ಟೋ ಭಿಕ್ಷುಕರಿಗೆ ಅನೇಕ ದುರಭ್ಯಾಸಗಳಿವೆಯಂತೆ. ತಮ್ಮ ದುಃಖ ಮರೆಯುವುದಕ್ಕಾಗಿಯೋ ಏನೋ ಅವರಲ್ಲಿ ಹಲವರು ಮತ್ತ ರಾಗುವಷ್ಟು ಕುಡಿಯುತ್ತಾರೆ, ಜುಗಾರಾಡುತ್ತಾರೆ, ವ್ಯಭಿಚಾರ ಮಾಡುತ್ತಾರೆ. ದಿನದ ಸಂಗ್ರಹದಲ್ಲಿ ಮನೆಯ ಖರ್ಚಿಗೆ ಬೇಕಾದ ಸಾಮಾನುಗಳನ್ನು ಕೊಂಡು ಕೊಂಡು ಉಳಿಕೆ ಹಣವನ್ನೆಲ್ಲ ಹೆಚ್ಚು ದುಡ್ಡು ಮಾಡುವ ಬಗ್ಗೆ ಎಂದು ಕೊಂಡು ಒಂದಲ್ಲ ಒಂದು ರೀತಿಯಲ್ಲಿ ಜುಗಾರಾಡುತ್ತಾರೆ. ರಾತ್ರಿಯಾಗು ವಾಗ ಅವರ ಕೈಯಲ್ಲಿ ಏನೂ ಉಳಿಯುವುದಿಲ್ಲ. ಇಂಥವರು ಭಿಕ್ಷುಕ ಗೃಹಕ್ಕೆ ಸೇರಲು ಏತಕ್ಕೆ ಬಯಸುತ್ತಾರೆ?

ಇಲ್ಲಿಯ ಭಿಕ್ಷುಕರ ಸಮಸ್ಯೆಗೆ ಸುಲಭ ಪರಿಹಾರವಿಲ್ಲ. ಇದು ಕೇವಲ ದಾರಿದ್ರ್ಯದ ಪ್ರಶ್ನೆಯಲ್ಲ—ಎಂದು ನನಗೆ ಪೂರ್ಣ ಮನವರಿಕೆಯಾದುದು ಈ ಸಂಭಾಷಣೆಯ ನಂತರವೇ.

ನನಗೆ ಆ ಭಿಕ್ಷುಕ ಗೃಹವನ್ನು ನೋಡಬೇಕೆಂದು ಮನಸ್ಸಿಗನಿಸಿತು. ಹಾಗೆ ಜಯನಾಥರು ಮತ್ತು ಕಮಲಂಬಾಳ್‌ರವರ ಜತೆಯಲ್ಲಿ ನಾನೂ ಅಲ್ಲಿಗೆ ಹೋದೆ. ಮಧ್ಯಮ ವರ್ಗದವರ ಮನೆಯಂತೆ ಕಾಣುವ ಒಂದು ಕಟ್ಟಡಕ್ಕೆ ನನ್ನನ್ನು ಕರೆದೊಯ್ದರು. ಒಳಗೆಲ್ಲಾ ಸುತ್ತಾಡಿದೆ. ಕಟ್ಟಡವು ಉತ್ತಮ ರೀತಿಯಲ್ಲಿಡಲ್ಪಟ್ಟಿತ್ತು. ಭಿಕ್ಷುಕ ಗೃಹಕ್ಕೆ ಬೇಕಾದ ಸಾಮಗ್ರಿಗ ಳೆಲ್ಲ ಇದ್ದುವು. ಒಬ್ಬಳು ಅಡಿಗೆ ಹೆಂಗುಸೂ ಇದ್ದಳು. ಒಂದು ಕೋಣೆ ಯಲ್ಲಿ ರೋಗಿಯೊಬ್ಬ ಮಲಗಿದ್ದ. ಅಡಿಗೆ ಹೆಂಗಸಿನ ಕೂಡೆಯೂ ನಾನು

ಮಾತನಾಡಿದೆ. ಅವಳಿಂದಲೂ ಕಮಲಂಬಾಳ್ ಹೇಳಿದ ಮಾತಿಗೆ ಪುಷ್ಟೀಕಾರ ದೊರೆಯಿತು. ಅಪರೂಪದಲ್ಲಿ ಭಿಕ್ಷುಕರು ಬಂದರೂ ಬಹಳ ಹೆಚ್ಚು ಎಂದರೆ 3–4 ದಿನ ನಿಲ್ಲುತ್ತಾರಂತೆ. ಮತ್ತೆ ಸುದ್ದಿ ಹೇಳದೆ ಓಡಿಹೋಗುತ್ತಾರಂತೆ. ಈ ಮುದುಕನು ಪಕ್ಷವಾತವಿದ್ದ ಕಾರಣದಿಂದ ಸುಮ್ಮನಿದ್ದಾನಂತೆ.

ಆ ಮುದುಕನನ್ನು ನಾನೂ ಮಾತನಾಡಿಸಿದೆ. 'ಎಷ್ಟು ಕಾಲ ಈ ಭಿಕ್ಷುಕ ಗೃಹದಲ್ಲಿ ಇರಲು ಬಯಸುತ್ತೀ?' ಎಂಬುದಾಗಿ ನಾನು ಕೇಳಿದೆ. ಜಯನಾಥರು ದ್ವಿಭಾಷಿಗಳಾಗಿ ಕೆಲಸ ಮಾಡುತ್ತಿದ್ದರು. 'ನಾನು ಹೆಚ್ಚು ಸಮಯ ನಿಲ್ಲಬೇಕೆಂಬ ಆಸೆ ಕಟ್ಟಿಕೊಂಡಿಲ್ಲ ಸ್ವಾಮಿ. ನನ್ನಿಂದಾಗಿ ಇತರರಿಗೆ ತೊಂದರೆಯಾಕೆ? ಗುಣವಾದೊಡನೆಯೇ ಹೋಗಿ ಬಿಡುತ್ತೇನೆ' ಎಂದಾತ ಹೇಳಿದ. 'ಹೋಗಿ ಏನು ಮಾಡುತ್ತೀ' ಎಂದು ಪ್ರಶ್ನಿಸಿದೆ. "ಭಿಕ್ಷೆ ಬೇಡುತ್ತೇನೆ" ಎಂಬ ಉತ್ತರವು ಆತನಿಂದ ತಟಕ್ಕನೇ ಬಂತು. ಆಗ ಕಮಲಂಬಾಳ್‌ರವರ ಮುಖ ಸಪ್ಪಗಾಯಿತು. ನಾನು ಕೇಳಿದೆ "ಏತಕ್ಕೆ ಪುನಃ ಭಿಕ್ಷೆ ಬೇಡುವುದು? ಇಲ್ಲೇ ಇರಬಾರದೇ?" ಬೇಸರದ ಸ್ವರದಲ್ಲಿ ಆತ ಹೇಳಿದ "ಆಪತ್ತು ಗುಣವಾಗದಿದ್ದಗೆ ಇರಬಹುದು. ಆದರೆ ಗುಣವಾದರೂ ಇಲ್ಲೇ ಕುಳಿತು ಮಾಡುವುದೇನು? ಏನಾದರೂ ಸಂಪಾದನೆ ಮಾಡಬೇಡವೇ?" ಏನಾದರೂ ಕೈಗಾರಿಕೆ ಕಲಿತು ಇಲ್ಲೇ ಸಂಪಾದನೆ ಮಾಡಬಾರದೇ ಎಂಬುದಾಗಿ ನಾನು ಕೇಳಿದೆ. ಭಿಕ್ಷಾಟನೆಯಷ್ಟು ಉತ್ಪತ್ತಿ ಬರುವ ಕೈಗಾರಿಕೆ ಯಾವುದು ಎಂಬುದವನ ಒಂದನೆಯ ಪ್ರಶ್ನೆಯಾಗಿದ್ದರೆ ಮುದುಕನಾಗಿ ಕೈಗಾರಿಕೆ ಕಲಿಯುವುದು ಹೇಗೆ ಎಂಬುದು ಎರಡನೆಯ ಪ್ರಶ್ನೆಯಾಗಿತ್ತು.

"ನಿಮ್ಮ ವ್ಯಕ್ತಿತ್ವದ ಘನತೆಗೆ ಹೀಗೆ ಭಿಕ್ಷೆ ಬೇಡುವುದು ಕುಂದಲ್ಲವೇ?" ಎಂದು ನಾನು ಕೇಳಿದೆ. "ಕುಂದೇನು ಸ್ವಾಮಿ? ನನ್ನ ವೃತ್ತಿಯೇ ಇದಾಗಿದೆ. ದೇವರು ಅದರಲ್ಲೇ ನನಗೆ ದುಡ್ಡು ಕೊಡುತ್ತಾನೆ" ಎಂದು ಆತನು ನನ್ನೆಡೆಗೆ ಪ್ರಶ್ನಾರ್ಥಕ ಚಿಹ್ನೆಯಲ್ಲಿ ನೋಡುತ್ತ ಉತ್ತರವಿತ್ತ. ನಾನು ಮತ್ತೂ ಮಾತನಾಡುವುದರಲ್ಲಿದ್ದೆ. ಆದರೆ ಅಷ್ಟರಲ್ಲಿ ಕಮಲಂಬಾಳ್‌ರವರು ನನಗೆ ಕಣ್ಸನ್ನೆ ಮಾಡಿ ನನ್ನನ್ನು ಎಳೆದೊಯ್ದರು.

ಇಲ್ಲಿಯ ಸಮಾಜದ ಮನೋಭಾವದೆಡೆಯಲ್ಲಿ, ಈ ಭಿಕ್ಷುಕರ ಸಮಸ್ಯೆಯನ್ನು ಆಸಕ್ತಿ ಕಾಲದಲ್ಲಿ ಹೇಗೆ ಪರಿಹರಿಸಬಹುದು ಎಂಬುದು ನನಗೆ ಕಾಣುವುದಿಲ್ಲ.

ನಾನು ನೋಡಿದ ಇನ್ನೊಂದು ಭಿಕ್ಷುಕಾಲಯದ ಕುರಿತಾದ ಸ್ವಾರಸ್ಯದ ಕತೆ ಬರೆಯುತ್ತೇನೆ. ಆದರೆ ಇದು ಎಲ್ಲಿ, ಯಾವಾಗ ಎಂಬ ವಿವರವನ್ನು ನಾನು ಕೊಡಬಯಸುವುದಿಲ್ಲ. ಏತಕ್ಕೆ ಎಂಬುದಾಗಿ ನೀನೇ ಮುಂದೆ ಊಹಿಸಿಕೊಳ್ಳುವಿಯಂತೆ.

ಅದೊಂದು ಭಿಕ್ಷುಕಾಲಯ. ಅದರ ಕುರಿತಾಗಿ, ಅದರ ಸಂಚಾಲಕರಿಂದ ಬಹಳ ಪ್ರಶಂಸೆಯ ಮಾತು ಕೇಳಿದ್ದೆ. ಯಾರೋ ದೂರದ ಕೆಲವು ಶ್ರೀಮಂತ ಸೇಠ್‌ಜೀಗಳು ಒಂದು ನಿಧಿ ಮಾಡಿ, ಅದರ ಹಣದಿಂದಲೇ ಈ ಭಿಕ್ಷುಕಾಲಯವನ್ನು ನಡೆಸುವುದಂತೆ. ಅದಕ್ಕೆ ಸಂಬಂಧಪಟ್ಟ ವರದಿಯು ಮುದ್ರಿತವಾದ್ದನ್ನೂ ಓದುವ ಸಂದರ್ಭ ನನಗೆ ಬಂದಿತ್ತು. ಅದರ ಉಲ್ಲೇಖದಂತೆ ವರ್ಷಕ್ಕೆ 20 ಸಾವಿರ ರೂಪಾಯಿಗಳ ವರಮಾನವು ಆ ಸಂಸ್ಥೆಗಿದೆ. ವಿವಿಧ ರೀತಿಯಲ್ಲಿ ಅಂಗ ವಿಕಲರಾದ 50 ಮಂದಿ ಭಿಕ್ಷುಕರು ಅದರಲ್ಲಿದ್ದಾರಂತೆ. ಅವರಿಗೆ ಅನೇಕ ರೀತಿಯ ಕೈಗಾರಿಕೆಗಳನ್ನು ಕಲಿಸಿ ಕೊಡಲಾಗುತ್ತಿದೆಯಂತೆ. ಅದರಿಂದಲೂ ಉತ್ಪತ್ತಿಯಿದೆಯಂತೆ. ಅವರು ಸ್ವತಂತ್ರವಾದ ವೃತ್ತಿ ಮಾಡಲು ಅರ್ಹರಾದೊಡನೆಯೇ ಭಿಕ್ಷುಕರ ಕೇಳಿಕೆ ಮೇರೆಗೆ ಅವರನ್ನು ಸ್ವತಂತ್ರ ಜೀವನಕ್ಕೆ ಪ್ರವೇಶಿಸಲು ಬಿಡಲಾಗುತ್ತಿದೆಯಂತೆ. ಇದೇ ರೀತಿ ಈ ಮೊದಲೇ ಸಾವಿರಾರು ಜನರು ಪ್ರಯೋಜನ ಪಡೆದು ಹೊರನಡೆದಿದ್ದಾರಂತೆ.

ಸಂಚಾಲಕರು ತುಂಬಾ ಶ್ರೀಮಂತರು. ತಮ್ಮ ಕಾರಿನಲ್ಲೇ ನನ್ನನ್ನು ಕರಕೊಂಡು ಹೋಗಿ ಈ ಸಂಸ್ಥೆಯನ್ನು ತೋರಿಸುವೆನು ಎಂದವರು ಹೇಳಿದ್ದರು. ಅದನ್ನು ಸ್ವತಹ ನೋಡುವ ದಿನವನ್ನೇ ನಾನು ಕೌತುಕದಿಂದ ಎದುರು ನೋಡುತ್ತಿದ್ದೆ.

ಹಾಗೆಯೇ ಗೊತ್ತಾದ ಒಂದು ದಿನ ನಾನು ಅವರಲ್ಲಿಗೆ ಹೋಗಿ ಆ ಪ್ರಸಿದ್ಧ ಭಿಕ್ಷುಕಾಲಯವನ್ನು ನೋಡುವ ಕುರಿತಾಗಿ ನೆನಪು ಹುಟ್ಟಿಸಿದೆ. ಆಗ ಬಹಳ ವ್ಯಥೆ ತೋರ್ಪಡಿಸುತ್ತಾ ಚಿಂತೆಯಿಂದ ತಲೆ ಕೆರೆಯುತ್ತಾ ಅವರು ಹೇಳಿದರು. "ಏನು ಮಾಡಲಿ ಮಿ। ಓರ್‌ಮನ್! ನಾನು ಹೋಗುವುದೆಂದೇ ನಿಶ್ಚೈಸಿದ್ದೆ. ಕಾರಿನ ಡ್ರೈವರನಿಗೂ ತಿಳಿಸಿದ್ದೆ. ಆದರೆ ನೋಡಿ, ಈಗ ತಾನೇ ಒಂದು ಟ್ರಂಕ್‌ಕಾಲ್ ಬಂತು. ನನ್ನ ಅತ್ತೆಗೆ ಕಠಿಣ ಕಾಯಿಲೆಯಂತೆ. ಆದ್ದರಿಂದ ಇದೇ ರಾತ್ರಿ ಕಾರಿನಲ್ಲಿ ಹೊರಡಬೇಕಾಗಿದೆ. ನನ್ನನ್ನು ಕ್ಷಮಿಸಬೇಕು. ಇನ್ನೊಂದು ದಿನ ಹೋಗೋಣ." ನಾನು ಅವರ ಮಾತನ್ನು

ಪೂರ್ತಿ ನಂಬಿದೆ. ನಿರಾಶನಾದರೂ ಬೇಸರ ಪಟ್ಟುಕೊಳ್ಳದೆ ಹಿಂದಿರುಗಿದೆ.

ಆದರೆ ಮರುದಿನ ಬೆಳಗ್ಗೆ ಅದೇ ಪಟ್ಟಣದ ಒಂದು ಬೀದಿಯಲ್ಲಿ ಅವರ ಕಾರು ನಿಲ್ಲಿಸಿದ್ದನ್ನು ಕಂಡು ಡ್ರೈವರನ ಕೂಡೆ ಮಾತನಾಡಿದೆ. ಆಗ ತಿಳಿಯಿತು–ಆ ಮಹನೀಯರು ಹೇಳಿದ್ದು ಶುದ್ಧ ಸುಳ್ಳುಎಂದು. ಅವರು ಎಲ್ಲಿಗೂ ಹೋಗಿರಲಿಲ್ಲ. ಹೀಗೇಕೆ ಹೇಳಿದರು ಎಂಬುದು ನನಗೆ ತಿಳಿಯಲಿಲ್ಲ.

ಅವರು ಸೂಚಿಸಿದ ದಿನವೇ ನಾನು ಪುನಃ ಹೋದೆ. ಆ ದಿನ ತನಗೆ ಸೌಖ್ಯವಿಲ್ಲವೆಂದು ನಟಿಸಿದರು. ನಿಶ್ಚಿತವಾದ ಮತ್ತೊಂದು ದಿನ ತನ್ನ ಕಾರು ಸರಿಯಿಲ್ಲವೆಂದು ಹೇಳಿದರು. ನಾನೇ ಬಾಡಿಗೆಗೆ ಕಾರು ತರುತ್ತೇನೆ ಎಂದಾಗ "ಛೀ ಛೀ ಹಾಗುಂಟೆ? ಅದೇನೂ ಬೇಡ, ಆದರೆ ನನ್ನ ಕಾರಿರುವಾಗ ಬಾಡಿಗೆ ಕಾರಿನಲ್ಲಿ ಹೋದರೆ ನನ್ನ ಘನತೆಗೆ ಕುಂದಾಗುವುದು" ಎಂಬುದಾಗಿ ಹೇಳಿದರು. ಇನ್ನೊಂದು ದಿನ ಭಿಕ್ಷುಕ ಗೃಹ ರಿಪೇರಿ ಆಗುತ್ತಿದೆ–ಆ ದಿನ ಬೇಡ ಎಂದರು. ಕಡೆಕಡೆಗೆ ಅವರ ಪರೀಕ್ಷೆ ಪೂರ್ತಿ ಆಗಲೇಬೇಕೆಂಬ ಹಠ ನನಗೆ ಬಂತು, ಆದ್ದರಿಂದ ಹದಿನೈದು ಸಲ ಅವರಲ್ಲಿಗೆ ಈ ಬಗ್ಗಾಗಿ ಹೋದೆ. ಕಡೆಯ ಸಲವೂ ಏನೋ ಒಂದು ನೆಪ ಹೂಡಿದರು.

"ನಾನೇ ಹೋಗುತ್ತೇನೆ; ವಿಳಾಸ ಕೊಡಿ" ಎಂದೆ. ಅದಕ್ಕೆ ನನಗೇ ಹೋಗಲು ಬಹಳ ಕಷ್ಟವಾದೀತು ಎಂದು ಹೇಳಿ, ಇನ್ನೊಂದು ದಿನ ನಿಶ್ಚಯವಾಗಿಯೂ ಬರುತ್ತೇನೆ ಎಂಬುದಾಗಿ 16ನೆಯ ಸಲ ತಾರೀಕು ನಿಶ್ಚಯ ಮಾಡಿದರು. ಆ ದಿನ ಹೋದಾಗ, ಅವರು ಮನೆಯಲ್ಲೇ ಇರಲಿಲ್ಲ.

ನನಗೆ ಆ ಸುಪ್ರಸಿದ್ಧವಾದ ಭಿಕ್ಷುಕಾಲಯ ನೋಡಲೇ ಬೇಕಾಗಿತ್ತು. ಅದರ ಹೆಸರು ಹಿಡಿದು ದಿನಪೂರ್ತಿ ಒಟೋ ರಿಕ್ಷಾದಲ್ಲಿ ಸುತ್ತಾಡಿ ಆ ಕಟ್ಟಡವನ್ನು ಕಂಡುಹಿಡಿದೆ.

ಅದೊಂದು ಹಳೆಯ ಕಾಲದ ಹರುಕು ಮುರುಕು ಕಟ್ಟಡವಾಗಿತ್ತು. ಹಲವಾರು ಓಣಿಗಳನ್ನು ದಾಟಿ ಹೋದರೆ ಮಾತ್ರ ಸಿಗುವಂತಿತ್ತು. ಅಲ್ಲಿಗೆ ತಲಪುವಾಗ ಅದರ ಬಾಗಿಲು ಹಾಕಿತ್ತು. ನಾನು ಬಾಗಿಲು ಬಡಿದೆ. ಒಬ್ಬ ಮುದುಕನು ಕೆಮ್ಮುತ್ತಾ ಬಾಗಿಲು ತೆರೆದ. ಅವನನ್ನು ನೋಡಿದಾಗ ಜೀವನವೆಷ್ಟು ಕಹಿಯೆಂದೂ, ಎಷ್ಟು ಅರ್ಥಹೀನವೆಂದೂ, ಎಷ್ಟು ದುಃಖಮಯವೆಂದೂ ಯಾರೂ ಭಾವಿಸಿಕೊಳ್ಳುವಂತಿತ್ತು. ಆತನು ಕ್ಷಯರೋಗಿಯಾಗಿದ್ದಿರಬೇಕು—ಒಂದೇ ಸವನೆ ಕೆಮ್ಮುತ್ತಿದ್ದನು.

ಅವನ ಕೂಡೆ ವಿಶೇಷ ಮಾತನಾಡುವುದು ನನಗೇ ಬೇಕೆನಿಸಲಿಲ್ಲ. ಅಲ್ಲೇ ಒಂದು ನೋಟೀಸು ಬೋರ್ಡು ಇದ್ದಿತು. ಅದನ್ನು ಓದಿದೆ. ಅದನ್ನೋದುವಾಗ ಅದರಲ್ಲಿ ಇರಬೇಕಾದ ಐವತ್ತು ಜನ ಭಿಕ್ಷುಕರ ಹೆಸರು ಅದರಲ್ಲಿತ್ತು. 1304 ಜನರು ಅಲ್ಲಿ ತರಬೇತಿ ಹೊಂದಿ ಈಗ ಸ್ವತಂತ್ರ ಜೀವನವನ್ನು ಅವಲಂಬಿಸುವವರು ಎಂಬುದಾಗಿಯೂ ಇತ್ತು. ಎರಡು ಜನ ಅಡಿಗೆಯವರು ಇದ್ದಾರಂತೆ–ಒಬ್ಬಳು ಕೂಲಿ ಹೆಂಗಸು–ಒಬ್ಬರು ಮೆನೇಜರರು-ನಾಲ್ಕೈದು ಎಮ್ಮೆಗಳು. ಭಿಕ್ಷುಕರಿಗೆ ಒದಗಿಸುವ ವಿವಿಧ ರೀತಿಯ ಸಮುತಾರೋಗಣೆಯ ಪಟ್ಟಿಯು ಅದರಲ್ಲಿತ್ತು. ಅಲ್ಲದೆ ಯಾವ್ಯಾವ ದಿನ ಯಾವ್ಯಾವ ರೀತಿಯ ಆಹಾರ ಎಂಬ ವೇಳಾ ಪಟ್ಟಿಯೂ ಅದರಲ್ಲಿತ್ತು.

ಈ ಕಟ್ಟಡ ಅದರ ನಿರ್ಜನತೆ ಮೊದಲಾದವುಗಳನ್ನು ನೋಡಿದಾಗ ಇವುಗಳೆಲ್ಲಾ ಕೇವಲ ಕುತೂಹಲಕಾರಿ ವಿಷಯಗಳಾಗಿ ನನಗೆ ಕಂಡವು. ಆದ್ದರಿಂದ ಆ ಕಟ್ಟಡದ ಎಲ್ಲಾ ಭಾಗಗಳನ್ನೂ ಸುತ್ತಾಡಿದೆ.

ಅದರಲ್ಲಿದ್ದವರು ಎರಡೇ ಮಂದಿ ಭಿಕ್ಷುಕರು. ಒಬ್ಬಾತನು ಕೇವಲ ಕುರುಡ, ಅಲ್ಲದೆ ಮುದುಕ. ಇನ್ನೊಬ್ಬಾತನು ಎರಡೂ ಕಾಲುಗಳಿಲ್ಲದೆ ನರಳುವಾತನು. ಅವರನ್ನು ಕಂಡು ಮಾತನಾಡಿಸಿದೆ.

ಅವರು ಈ ಭಿಕ್ಷುಕಗೃಹಕ್ಕೆ ಸೇರಲು ಕಾರಣವೇನು ಎಂದು ಕೇಳಿದೆ. ಅವರಿಬ್ಬರೂ ಅನಾಥರು. ಕುರುಡನನ್ನು ಕೈಹಿಡಿದು ನಡೆಸುವವರಿಲ್ಲ, ಹೊಟ್ಟೆಗೆ ಉಣ ಬಡಿಸುವವರಿಲ್ಲ. ಕಾಲಿಲ್ಲದವನೂ ನಿರ್ಗತಿಕನು. ಅವನವರೆಂಬವರು ಯಾರೂ ಇಲ್ಲ. ಆದ್ದರಿಂದ ಅತ್ತಿತ್ತ ಚಲಿಸಲಾರದೆ ಇಲ್ಲೇ ನರಳುತ್ತಿದ್ದಾನೆ. ಇಬ್ಬರನ್ನೂ ನಂಬಿಸಿ ಅತ್ಯುತ್ತಮ ಏರ್ಪಾಡಿದೆಯೆಂದು ಹೇಳಿ ಇಲ್ಲಿಗೆ ಕರೆತಂದರಂತೆ. ಆದರೆ ಈಗ ಊಟಕ್ಕೂ ಗತಿಯಿಲ್ಲವಂತೆ. ಅಲ್ಲಿ ತಿಳಿದ ಕೂಲಂಕಷ ವಿಚಾರ ಈಗ ಬರೆಯುತ್ತೇನೆ.

ಆ ಭಿಕ್ಷುಕ ಗೃಹದಲ್ಲಿ ಈ ಇಬ್ಬರು ಅನಾಥರು ಮಾತ್ರವೇ ಜೀವಚ್ಛವದಂತೆ ಉಳಿದವರು. ಬಾಗಿಲು ತೆಗೆದ ಆ ಕ್ಷಯರೋಗ ಪೀಡಿತನೇ ಅವರ ಅಡಿಗೆಯವನಂತೆ. ಎರಡು ದಿನಕ್ಕೊಮ್ಮೆ ಗಂಜಿ ಬೇಯಿಸಿ, ಅದನ್ನೇ ಅವರೀರ್ವರಿಗೂ ಕೊಟ್ಟು ಅವನೂ ತಿನ್ನುತ್ತಾನೆ. ಕೇವಲ ನಿರ್ಗತಿಕರಿಗೆ ಬಿಸಿ ಗಂಜಿಯಾದರೂ ಸಿಕ್ಕಿದರೆ ಇವರಿಗೆ ಅದೂ ಇಲ್ಲ. ಹೇಗೋ ಕಾಲಯಾಪನೆ ಮಾಡುತ್ತಾರೆ.

ಆ ಕಟ್ಟಡದ ತುಂಬಾ ತುಂಬಿದ್ದ ಕಸ, ಕೊಳೆಗಳ ವಿಚಾರ ನಾನು ಎಷ್ಟು ಕಡಿಮೆ ಬರೆದರೆ ಅಷ್ಟು ಉತ್ತಮ. ಆದರೆ ಅದರೊಳಗೆ ಒಂದೇ ಸವನೆ ಬಂದು ಮೂಗಿಗೆ ಬಡಿಯುತ್ತಿದ್ದ ವಾಸನೆಯ ಕುರಿತು ನಾನು ಬರೆಯದಿರುವುದು ಅಪರಾಧವಾದೀತು.

ಕಾಲಿಲ್ಲದವನು (ಅವನೂ ಮುದುಕನೇ), ಅಲ್ಲೇ ಇದ್ದ ಒಂದು ಬಟ್ಟಲಿನಲ್ಲಿ ಮಲಮೂತ್ರ ವಿಸರ್ಜನೆ ಮಾಡುತ್ತಿದ್ದನು. ಅದನ್ನು ಮುಚ್ಚದೆ ಹಾಗೆಯೇ ಇಟ್ಟಿತ್ತು. ಕೇಳಿದಾಗ, ಅದನ್ನು ಅಡಿಗೆ ಮಾಡುವ ಮುದುಕನು 2 ದಿನಕ್ಕೊಮ್ಮೆ ಹಿಂಬದಿಯ ಅಂಗಳಕ್ಕೆ ಬಿಸಾಡುವುದೆಂದು ತಿಳಿದು ಬಂತು. ಕುರುಡನೂ ಎಷ್ಟು ಅಶಕ್ತನಾಗಿದ್ದನೆಂದರೆ ಆತನು ಜಗಲಿಯಲ್ಲಿ ಕುಳಿತು, ಅಂಗಳದಲ್ಲೇ ಮಲಮೂತ್ರ ವಿಸರ್ಜನೆ ಮಾಡುತ್ತಿದ್ದನಂತೆ (ಅದರ ಕುರುಹುಗಳು ಕಂಡು ನಾನು ವಿಚಾರಿಸಿದಾಗ, ಈ ವಿಷಯ ತಿಳಿಯಿತು.)

ಅಲ್ಲಿದ್ದ ಆ ಮೂವರು ದುರದೃಷ್ಟಕರ ಮುದುಕರ ಕೂಡೆ ನಾನು ಹೇಳಿದೆ "ಈ ಪ್ರಸಿದ್ಧ ಭಿಕ್ಷುಕಾಲಯಕ್ಕೆ ಸೇಠ್‌ಜೀಯವರ ನಿಧಿಯಿಂದ ವರ್ಷಕ್ಕೆ 20 ಸಾವಿರ ರೂಪ್ಯಾಗಳ ವರಮಾನವಿದ್ದೂ ಇದೇಕೆ ಹೀಗೆ?" ಆ ಮುದುಕ ಕಣ್ಣೀರು ತುಂಬಿ ಹೇಳಿದ "ಸ್ವಾಮಿ ಇದಕ್ಕೆ 200 ರೂಪ್ಯಾಗಳ ವರಮಾನವೂ ಇಲ್ಲ. ನಾನು ಹೇಗೋ ಸುಧಾರಿಸುತ್ತೇನೆ." ಆತನೂ ಒಬ್ಬ ಅನಾಥನಂತೆ. ಬೇರೆ ಗತಿಯಿಲ್ಲದೆ ಇಲ್ಲಿ ನಿಂತಿದ್ದಾನಂತೆ.

ಯಾವ ಕೈಗಾರಿಕೆಯನ್ನೂ ಅವರು ಕಂಡವರಲ್ಲ. ಯಾವ ಸಂಚಾಲಕರನ್ನೂ ನೋಡಿದವರಲ್ಲ. ಯಾವ ಮೆನೇಜರನನ್ನೂ ಬರಮಾಡಿದವರಲ್ಲ, ವರ್ಷಕ್ಕೆ 3-4 ಸಲ ಒಂದಷ್ಟು, ಕುದುರೆಯೂ ತಿನ್ನದಂತಹ ಅಕ್ಕಿಯನ್ನೂ ಒಂದಿಷ್ಟು ಉಪ್ಪು, ಮೆಣಸನ್ನೂ ಸಂಚಾಲಕರ ಕಡೆಯ ಕಾರಕೂನನು ಒದಗಿಸುತ್ತಿದ್ದನಂತೆ.

ಈ ಕತೆಯನ್ನೆಲ್ಲ ಕೇಳಿ ನಾನು ವಿವಶನಾದೆ–ದಿಙ್ಮೂಢನಾದೆ. ಇಂತಹ ಮೋಸಗಾರಿಕೆಯ ಸುಳಿಗುಂಡಿಯಲ್ಲಿರುವ ಭಾರತೀಯ ಸಮಾಜ ಎಂದು ಮೇಲೆ ಬಂದೀತು ಎಂದು ನಾನು ಆಳವಾಗಿ ಚಿಂತಿಸಿದೆ.

ಹೊರ ಬಂದು ನೆರೆಕರೆಯವರ ಕೂಡೆ ವಿಚಾರಿಸಿದಾಗ ಹೆಚ್ಚಿನ ಗುಟ್ಟುಗಳು ದೊರೆತುವು. ಈ ಸಂಸ್ಥೆಯ ಪೂರ್ತಿ ವರಮಾನವನ್ನು ಸಂಚಾಲಕರೇ

ನುಂಗುತ್ತಿದ್ದಾರಂತೆ. ಹತ್ತು ವರ್ಷಗಳಿಂದ ಇದಕ್ಕೆ ದೊರೆತ ವರಮಾನದಲ್ಲಿ ಅವರಿಂದು ಲಕ್ಷಾಧೀಶರಾಗಿದ್ದಾರೆ. ಯಾರಾದರೂ ಸರಕಾರೀ ಅಧಿಕಾರಿಗಳು ಪರೀಕ್ಷಿಸಲು ಬರುತ್ತಾರೆಂದು ತಿಳಿದಾಗ, ಕಟ್ಟಡವನ್ನು ಸ್ವಲ್ಪ ಶುಚಿಗೊಳಿಸಿ, ಇತರ 48 ಜನ ಭಿಕ್ಷುಕರನ್ನು ಹೊರಗಿನಿಂದ ಕೂಡಿಹಾಕಿ, ಅವರಿಗೆ ತಲಾ ಐದು ರೂಪಾಯಂತೆ ವಿತರಣೆ ಮಾಡಿ ಸುಳ್ಳು ಹೇಳುವಂತೆ ಮಾಡುತ್ತಿದ್ದಾರಂತೆ. ಈ ರೀತಿಯಲ್ಲಿ ಭಿಕ್ಷುಕಾಲಯದಲ್ಲಿ ಐವತ್ತು ಜನ ಭಿಕ್ಷುಕರಿದ್ದಾರೆ ಎಂಬುದನ್ನವರು ರಿಕಾರ್ಡು ಪ್ರಕಾರ ಸಾಧಿಸುತ್ತಾರೆ.

ಈ ಕತೆಯನ್ನೆಲ್ಲಾ ಕೇಳಿ ನಾನು ಆಶ್ಚರ್ಯಪಟ್ಟಾಗ ಆ ನೆರೆಕರೆಯ ಕೆಲ ಯುವಕರು ಹೀಗೆ ಹೇಳಿದರು· "ನಿಮಗಿದು ಹೊಸತಾಗಿರಬಹುದು. ಆದರೆ ನಮ್ಮೂರಿನಲ್ಲಿ ಇದೆಲ್ಲಾ ನಿತ್ಯ ನಡೆಯುವ ಘಟನೆಗಳು."

ಸಿಲ್ವರ್, ಆ ಸಂಚಾಲಕರೆಂಬ 'ದೆವ್ವ'ದ ವರ್ತನೆಯ ಗುಟ್ಟು ನನಗೆ ಆಗ ತಾನೇ ತಿಳಿಯಿತು. ನಾನು ತೀವ್ರವಾಗಿ ಕಳವಳಗೊಂಡೆ. ಈ ಘಟನೆಯು ನನ್ನ ಮೇಲೆ ಬಹಳ ಆಳವಾದ ಪರಿಣಾಮವನ್ನುಂಟುಮಾಡಿ ನನ್ನ ಹೃದಯವನ್ನೇ ಕಲಕಿದೆ.

ಭಾರತೀಯ ಸಮಾಜವು ಇಂತಹ ದುರವಸ್ಥೆಗಳನ್ನೂ ಹೇಗೆ ಸಹಿಸುತ್ತಿದೆಯೋ ನನಗೆ ತಿಳಿಯದಾಗಿದೆ. ಇಂತಹ ಷಂಡತನದ ಸಹನೆ ಭಾರತದ ಉಜ್ವಲ ರಕ್ತದಲ್ಲಿ ಹೇಗೆ ಬಂತು ಎಂಬುದೇ ದೊಡ್ಡ ಒಗಟಾಗಿದೆ.

ಅಲ್ಲಿ ಇಲ್ಲಿ ಇರುವ ಕೆಲವು ಭಿಕ್ಷುಕಾಲಯುಗಳೂ ಹೀಗಾದರೆ, ಹೊರಗೆ ಬೀದಿಯಲ್ಲಿ ಭಿಕ್ಷೆ ನೀಡಲು ಜನರು ಸಿದ್ಧರಿದ್ದಾರಾದರೆ, ಈ ಭಿಕ್ಷಾಟನೆಯ ವೃತ್ತಿಯನ್ನು ನಿಲ್ಲಿಸುವುದಾದರೂ ಹೇಗೆ? ನೀನೇ ಹೇಳು.

ಜನರು ಒಂದು ವೇಳೆ ಭಿಕ್ಷೆಯನ್ನೇ ನೀಡದಂತೆ ಪ್ರಚಾರ ಹಾಗೂ ಶಾಸನಗಳ ಮೂಲಕ ಕಾರ್ಯಗತಗೊಳಿಸಲಾಯಿತು ಎಂದು ಭಾವಿಸೋಣ. ಆದರೆ, ನ್ಯಾಯವಾದ ಭಿಕ್ಷುಕಾಲಯುಗಳನ್ನು ಸ್ಥಾಪಿಸಿ, ನಡೆಸಲು ಸರಕಾರದ ಕೂಡೆ ಶಕ್ತಿಯಿಲ್ಲದಿರುವಾಗ ಮಾಡಬೇಕೇನು? ಈ ಭಿಕ್ಷುಕರ ಅವಸ್ಥೆ ಏನಾದೀತು? ಒಂದು ವೇಳೆ ಆರ್ಥಿಕ ಶಕ್ತಿಯಾದರೂ ಇದೆಯೆನ್ನು. ಆದರೆ ಅದನ್ನು ಪ್ರಾಮಾಣಿಕವಾಗಿ ನಡೆಸಿ, ಜೀವನದಲ್ಲಿ ಯಾವ ಬೆಳಕನ್ನೂ ಕಾಣದ ಬಡಪಾಯಿಗಳಿಗೆ ಒಂದು ಗೌರವಾನ್ವಿತವಾದ ತೃಪ್ತಿಯ ಜೀವನವಾದರೂ ನಡೆಸುವಂತೆ ಮಾಡುವ ಯೋಗ್ಯತೆಯಿರುವವರು ಇರುವುದೇ ಅಪರೂಪವಾದರೆ ಏನು

ಮಾಡಬೇಕು? ಅಂದರೆ ಈ ಸಾಮಾಜಿಕ ವಾಸನೆಯು ಬಹುಕಾಲ ಭಾರತದಲ್ಲಿ ಉಳಿದೇ ಉಳಿಯುವುದು--ಉಳಿದು ಭಾರತದ ಮುಖದ ಅಂದವನ್ನು ಕೆಡಿಸುವುದು.

ಅಲ್ಲ, ಸಿಲ್ವರ್, ಸತ್ಯ ಹೇಳುತ್ತೇನೆ. ಭಾರತದ ಕುರಿತಾಗಿ, ಹಾಗೂ ಭಾರತೀಯ ಧರ್ಮದ ಕುರಿತಾಗಿ ನನಗೆ ಇಷ್ಟು ಅಭಿಮಾನವಿದ್ದೂ, ಅದೇ ಅಭಿಮಾನವೇ ನನ್ನನ್ನು ಇಲ್ಲಿ ನಿಲ್ಲಿಸುತ್ತಿದೆಯಾದರೂ, ಇಂತಹ ಘಟನೆಗಳನ್ನು ನಾನು ನೋಡಿದೊಡನೆ, ಇಲ್ಲವೇ ಇಂತಹ ವರದಿ ಕೇಳಿದೊಡನೆಯೇ ಇಲ್ಲಿಂದ ಬೇಗನೇ ಕಾಲು ಕೀಳೋಣ ಎಂಬುದಾಗಿ ಕಂಡುಬಿಡುವುದು. ಏಕೆಂದರೆ ಇಂತಹ ವರದಿಗಳು ನನ್ನ ವಿಮರ್ಶಾತ್ಮಕ ಬುದ್ಧಿಗೆ ಆಗಾಗ ಒಂದು ಅಪ್ಪಳಿಸುತ್ತಿವೆ. ನಾನು ಹೇಗೆ ಸುಮ್ಮನಿರಲಿ?

ಕ್ಷಮಿಸು, ಸಿಲ್ವರ್. ನನಗೇನೋ ಟ್ರಂಕ್‌ಕಾಲ್ ಬಂದಿದೆಯಂತೆ. ಕೂಡಲೇ ಹೋಗಬೇಕಾಗಿದೆ. ನಂತರ ಬರೆಯುವೆನೆಂದರೆ ಈ ದಿನ ಸಮಯವಿಲ್ಲ. ನಾಲ್ಕು ದಿನ ಕಳೆದು ಬರೆಯುವೆನಂತೆ. ಈ ದಿನ ನಿಲ್ಲಿಸಲೇ ?

ಕೇನ್ನಿಗೆ ನನ್ನ ಮುದ್ದುಮುದ್ದಾದ ಪ್ರೇಮಳ ಸಂದೇಶ ತಿಳಿಸು, ಆಗದೆ?

ಇತಿ, ನಿನ್ನ ಆಪ್ತಮಿತ್ರ,

**ಜೋನ್ ಓರ್‌ಮನ್.**





ಮದ್ರಾಸು
8-6-1962

ಪ್ರಿಯ ಸಿಲ್ವರ್,

ಜೂನ್ ಒಂದರಂದು ನೀನು ಬರೆದ ಪತ್ರವನ್ನೋದಿದೆ. ಶ್ರೀ ಕೃಷ್ಣನ ಪ್ರತಿಮೆಯನ್ನು ತಬ್ಬಿಕೊಂಡಿರುವ ಪ್ರೇಮಳ ಮೂರ್ತಿ ಕೇನ್ನಿಯ ಭಾವಚಿತ್ರ ನೀನು ಕಳುಹಿಸಿದ್ದನ್ನೂ ಮನತಣಿಯುವಷ್ಟೂ ನೋಡಿದೆ.

ಶ್ರೀಕೃಷ್ಣನ ಕುರಿತಾಗಿಯೂ ನಾನು ಬರೆದುದು ನಿನಗೆ ಬಹಳ ಹಿತಕರ ವಾಯಿತು ಎಂಬುದನ್ನು ತಿಳಿದು, ಇಲ್ಲಿಯ ಭಿಕ್ಷುಕರ ಸಮಸ್ಯೆ ತಿಳಿದು ಕಣ್ಣೀರು ಸುರಿಸಿದೆಯೆಂದು ಓದಿ, ನನ್ನ ಎದೆ ತುಂಬಿಬಂತು. ಈಗ ನಿಜವಾಗಿಯೂ ನೀನು ಮಾನವನ ಹೃದಯದಲ್ಲಿ ಇರಲೇ ಬೇಕಾದ ಪ್ರೇಮದ ಸುಗಂಧವನ್ನು, ಪಡೆಯು ತೊಡಗಿರುವೆ ಎಂದು ನಾನು ಭಾವಿಸುತ್ತೇನೆ, ಭಾವಿಸಿ ಸಂತೋಷಪಡುತ್ತೇನೆ.

ನನ್ನ ಈ ಮಾರುದ್ದದ ಪತ್ರಗಳಿಂದಲೇ ನಿನ್ನಲ್ಲಿ ಅದ್ಭುತವಾದ ಮಾರ್ಪಾಡು ಉಂಟಾಯಿತೆಂದು ಬರೆದು ನನಗೆ ಕೃತಜ್ಞತೆ ಸೂಚಿಸಿರುತ್ತಿ. ಆದರೆ ನಿಜವಾಗಿಯೂ ನಾನು ಮನ ಬಂದಂತೆ ಬರೆಯುತ್ತಾ ಹೋದ ಈ ಪತ್ರ ಸರಣಿಗಳಿಂದ ನಿನ್ನಲ್ಲಿ ಇಂತಹ ಬದಲಾವಣೆ ಹೇಗಾಯಿತು ಎಂಬುದು ನನಗೇ ಕುತೂಹಲದಾಯಕವಾಗಿದೆ.

ಗೆಳೆಯಾ, ಭಾರತದ ಆರ್ಥಿಕ ಸಮಸ್ಯೆಯ ಕೆಲವು ಮುಖಗಳನ್ನು ನಿನ್ನ ಮುಂದಿಟ್ಟಿರುತ್ತೇನೆ. ಆದರೆ ಅದು ಸಾಲದೆಂದೇ ನನಗೆ ತೋರುತ್ತಿದೆ. ಈ ಚಿತ್ರಣವನ್ನು ಸಮಗ್ರವಾಗಿ ನಿನ್ನ ಮುಂದಿಡಲೇ ಬೇಕು.

ನಮ್ಮ ಸಂಯುಕ್ತ ಅಮೇರಿಕಾ ಮತ್ತು ಭಾರತವನ್ನು ವಿವಿಧ ರೀತಿಗಳಿಂದ ತುಲನೆ ಮಾಡುವಂತೆ, ಆರ್ಥಿಕವಾಗಿಯೂ ನಾನು ತುಲನೆ ಮಾಡುತ್ತೇನೆ. ಚರಿತ್ರೆಯ ಅನಂತ ಕಾಲದಲ್ಲಿ, ಇತ್ತೀಚೆಗೆ ಸ್ಥಾಪಿತವಾದ ನಮ್ಮ ರಾಷ್ಟ್ರವು ಇಷ್ಟೊಂದು ಸಂಪತ್ಸಮೃದ್ಧವಾಗಿರಲು ಬಹಳ ಪುರಾತನವಾದ ಭಾರತವೇಕೆ ಬಡವಾಗಿರಬೇಕು? ನಮ್ಮ ದೇಶದಂತೆ ಭಾರತವೂ ಶ್ರೀಮಂತಿಗೆಯಲ್ಲಿ ಲೋಲಾಡುವಂತೆ ಮಾಡಲು ಸಾಧ್ಯವಿಲ್ಲವೆ?

ಒಂದು ರಾಷ್ಟ್ರದಲ್ಲಿರುವ ಪ್ರಜೆಗಳ ಸುಖ, ಸೌಕರ್ಯಗಳಿಗೆ ಬೇಕಾದ ವಸ್ತುಗಳ ಹಾಗೂ ಸಾಧನಗಳ ಮತ್ತು ಪ್ರಾಕೃತಿಕ ಅನುಕೂಲತೆಗಳ ಒಟ್ಟು ಮೊತ್ತವನ್ನೇ ಆ ದೇಶದ ಸಂಪತ್ತೆಂಬುದಾಗಿ ಹೇಳುವುದು. ಅಲ್ಲವೆ ಸಿಲ್ವರ್? ನಾನೇನೂ ಆರ್ಥಿಕ ತಜ್ಞನಲ್ಲ—ಆದರೆ ಒಬ್ಬ ಜನಸಾಮಾನ್ಯನ ನೆಲೆಯಲ್ಲಿ ಸಂಪತ್ತೆಂಬುದರ ಅರ್ಥ ನನಗೀಗ ಈ ರೀತಿ ಹೊಳೆಯುತ್ತಿದೆ.

ಪ್ರಾಕೃತಿಕ ಅನುಕೂಲತೆಗಳು—ಅಂದರೆ ಜಲಸಂಪತ್ತು, ಖನಿಜಸಂಪತ್ತುಗಳು, ಇವುಗಳೆಲ್ಲ ಒಂದು ವರ್ಗವಾದರೆ, ಮಾನವನೇ ನಿರ್ಮಿಸಿದ ಸಾಧನ ಸಾಮಗ್ರಿಗಳು, ಆಹಾರ ವಸ್ತುಗಳು, ಇತ್ಯಾದಿಗಳೆಲ್ಲ ಇನ್ನೊಂದು ವರ್ಗ.

ಮಾನವನೇ ನಿರ್ಮಿಸುವ ಸಾಧನ ಸಾಮಗ್ರಿಗಳಲ್ಲಿಯೂ ಎರಡು ವಿಧವಿದೆಯಲ್ಲವೇ? ಒಂದು ಇಡಿಯ ರಾಷ್ಟ್ರಕ್ಕೆ ಸಾಮೂಹಿಕವಾಗಿ ಬೇಕಾದುದು ಇನ್ನೊಂದು ಪ್ರಜೆಗಳ ವೈಯಕ್ತಿಕ ಉಪಯೋಗಕ್ಕೆ ಬೇಕಾದವುಗಳು. ಅಂದರೆ ಈ ಎರಡನೇ ವಿಧದ ಸಾಧನ ಸಾಮಗ್ರಿಗಳು ದೇಶದ ಜನಸಂಖ್ಯೆಯು ದಾಮಾಶಯದಲ್ಲೇ ಬೇಕಾಗುವುದು—ಮೊದಲ ವಿಧದ್ದು ಜನಸಂಖ್ಯೆಯು ಪ್ರಮಾಣವನ್ನು ಹೊಂದಿಕೊಂಡಿರುವುದಿಲ್ಲ.

ಇಂತಹ ಸಾಧನ ಸಾಮಾಗ್ರಿಗಳನ್ನು ತಯಾರಿಸುವಲ್ಲಿ ಗುಡಿಕೈಗಾರಿಕೆಯಾಗಿ ಮಾಡುತ್ತಾ ಮನುಷ್ಯನು ತನ್ನ ಸ್ವಂತ ದೇಹಶ್ರಮವನ್ನು ಉಪಯೋಗಿಸುವುದು ಒಂದು ವಿಧ; ಉಗಿಯಂತ್ರ ಡೀಸಲ್ ಯಾ ಪೆಟ್ರೋಲ್ ಯಂತ್ರ ಇಲ್ಲವೇ ವಿದ್ಯುತ್ ಯಂತ್ರಗಳನ್ನು ಉಪಯೋಗಿಸಿ, ಅವುಗಳ ಮೂಲಕ ಸಣ್ಣ ರೂಪದಲ್ಲಿ ಯಾ ದೊಡ್ಡ ರೂಪದಲ್ಲಿ ಕೆಲಸಗಾರರ ಸಹಾಯನ್ನೂ ಮಧ್ಯೆ ಮಧ್ಯೆ ಉಪಯೋಗಿಸಿಕೊಂಡು ತಯಾರಿಸುವುದು ಎರಡನೆಯ ವಿಧ. ಅಲ್ಲದೆ ನಮ್ಮ ಸಂಯುಕ್ತ ಅಮೇರಿಕಾ ದೇಶದಲ್ಲಿ ಇತ್ತೀಚೆಗೆ ಅನೇಕ ಬೃಹತ್ ಉದ್ಯ

ಮಗಳು ಮಾಡುವಂತೆ ಇಲೆಕ್ಟ್ರೋನಿಕ್ ಮೆದುಳನ್ನು ಉಪಯೋಗಿಸಿ ಸ್ವಯಂ ಚಾಲಿತ ಯಂತ್ರಗಳ ಮೂಲಕ, ದೊಡ್ಡ ರೂಪದಲ್ಲಿ ವಸ್ತುಗಳನ್ನು ತಯಾರಿಸುವುದು ಮೂರನೆಯ ವಿಧ. ಈ ಮೂರನೆಯ ವಿಧದಲ್ಲಿ ಕೇವಲ ಯಾಂತ್ರಿಕ ತಜ್ಞರು ಮಾತ್ರವೇ ಇರುತ್ತಾರೆ. ಹೊರತಾಗಿ ದೈಹಿಕವಾಗಿ ದುಡಿಯುವ ಮಜೂರರ ಆವಶ್ಯಕತೆಯಿರುವುದಿಲ್ಲ.

ಅತಿ ಕಡಿಮೆ ವೆಚ್ಚದಲ್ಲಿ ರಾಷ್ಟ್ರಕ್ಕೆ ಬೇಕಾದ ಸಕಲ ಸಾಮಗ್ರಿಗಳು ಸಮೃದ್ಧವಾಗಿ ದೊರೆಯಬೇಕಾದರೆ, ಈ ಮೂರನೆಯ ವಿಧದ ಔದ್ಯಮೀಕರಣಕ್ಕೆ ತೊಡಗಬೇಕು—ಅಥವಾ ಕಡೆಯ ಪಕ್ಷ ಎರಡನೆಯ ವಿಧವನ್ನಾದರೂ ಅನುಸರಿಸಬೇಕು. ಕೇವಲ ಮಾನವನ ದೇಹ ಶ್ರಮದಿಂದ ಗುಡಿ ಕೈಗಾರಿಕೆಯಾಗಿ, ವಸ್ತುಗಳನ್ನು ತಯಾರಿಸ ಹೋದರೆ, ಯಾವುದೇ ರಾಷ್ಟ್ರದ ಎಲ್ಲಾ ಜನರೂ 12 ಗಂಟೆ ದುಡಿದರೂ, ರಾಷ್ಟ್ರವನ್ನು ಸಮೃದ್ಧವಾಗಿ ಮಾಡಲು ಸಾಧ್ಯವಿಲ್ಲ.

ಎರಡನೆಯ ವಿಧದ ಉತ್ಪನ್ನಕ್ಕೆ ಕೈ ಹಾಕಿದರೆ ಹೆಚ್ಚು ಜನರಿಗೆ ಉದ್ಯೋಗ ದೊರೆಯುವಂತಿಲ್ಲ. ಆದರೂ, ಪ್ರಜಾಸಂಖ್ಯೆಯ ದಾಮಾಶಯಕ್ಕನುಸಾರ ತಯಾರಿಸತಕ್ಕ ವಸ್ತುಗಳು ಈ ಎರಡನೆಯ ವಿಧದಲ್ಲಿ ಯಂತ್ರಗಳಿಂದ ಉತ್ಪನ್ನವಾಗಿ ದೊರೆತರೂ ನಿರುದ್ಯೋಗ ಬರುವಂತಿಲ್ಲ. ಏಕೆಂದರೆ ಜನರ ವಿವಿಧ ಆವಶ್ಯಕತೆಗಳನ್ನು ಪೂರೈಸುವುದಕ್ಕಾಗಿ ಸ್ಥಾಪಿತವಾಗುವ ವಿವಿಧ ಕಾರಖಾನೆಗಳಲ್ಲಿ ಅವರು ಉದ್ಯೋಗ ಪಡೆಯುವರು. ದೇಶದ ಜನಸಂಖ್ಯೆ ಹೆಚ್ಚಾದರೆ ತಯಾರಿಸತಕ್ಕ ವಸ್ತುಗಳೂ ಜಾಸ್ತಿಯೇ. ಆದ್ದರಿಂದ ಯಂತ್ರಗಳ ಉಪಯೋಗದಿಂದ ಆ ಮಟ್ಟಿಗೆ ನಿರುದ್ಯೋಗ ಸಮಸ್ಯೆಯು ತಲೆ ಹಾಕುವುದಿಲ್ಲ.

ಆದರೆ ಜನಸಂಖ್ಯೆಯ ಪ್ರಮಾಣವನ್ನನುಸರಿಸದೆಯೇ ಇಡಿಯ ರಾಷ್ಟ್ರಕ್ಕೆ ಬೇಕಾದ ಸಾಧನ ಸಾಮಗ್ರಿಗಳ ತಯಾರಿ ವಿಷಯದಲ್ಲಿ ಈ ಸಮಸ್ಯೆಯು ಉದ್ಭವಿಸುವುದು. ಯಂತ್ರಗಳನ್ನುಪಯೋಗಿಸದೆ ನಿರ್ವಾಹವಿಲ್ಲ—ಉಪಯೋಗಿಸಿದರೆ ಹಲವರಿಗೆ ಉದ್ಯೋಗಾವಕಾಶ ದೊರೆಯುವುದಿಲ್ಲ—ಜನಸಂಖ್ಯೆಯು ಜಾಸ್ತಿಯಿರುವ ದೇಶದಲ್ಲಿ. ಭಾರತವು ಹೀಗೆಯೇ ಜನಸಂಖ್ಯೆಯು ಜಾಸ್ತಿಯಿರುವ ದೇಶ.

ಸ್ವಯಂಚಾಲಿತ ಯಾಂತ್ರಿಕ ಉತ್ಪನ್ನಕ್ಕೆ ತೊಡಗಿದಾಗ ಈ ಸಮಸ್ಯೆಯು ಇನ್ನಷ್ಟು ಭೀಕರವಾಗುವುದು. ಜನಸಂಖ್ಯೆಯು ಬಹಳ ಕಡಿಮೆಯಿರುವ ದೇಶವು ಈ ವಿಧಾನದಿಂದ ಬಾನೆತ್ತರದ ಶ್ರೀಮಂತಿಗೆಯನ್ನು ಸಂಪಾದಿಸಿಕೊಳ್ಳಬಹುದು. ಆದರೆ ಭಾರತದಂತಹ ನಾಡಿನ ಅವಸ್ಥೆಯೇನು? ಸ್ವಯಂಚಾಲಿತ ಯಂತ್ರಗಳನ್ನುಪಯೋಗಿಸಿದರೆ ಜನಸಂಖ್ಯೆಯ ಪ್ರಮಾಣಕ್ಕನುಸಾರ ತಯಾರಿಸತಕ್ಕ ವಸ್ತುಗಳ ಕುರಿತಾಗಿಯೂ ನಿರುದ್ಯೋಗವು ಬಂದೇ ಬರುವುದು. ಅದನ್ನು ಹೊಂದಿಕೊಂಡಿರದೆ ಇಡೀ ರಾಷ್ಟ್ರಕ್ಕೆ ಬೇಕಾದ ಉತ್ಪನ್ನದಲ್ಲಿಯೂ ನಿರುದ್ಯೋಗವು ಬಾಧಿಸುವುದು. ಕೆಲವೊಂದು ಲಕ್ಷ ಸಂಖ್ಯೆಯಲ್ಲಿರುವ, ವಿವಿಧ ಚಿಕ್ಕ ದೊಡ್ಡ ವಸ್ತುಗಳನ್ನು ತಯಾರಿಸುವ ಸ್ವಯಂಚಾಲಿತ ಕಾರಖಾನೆಗಳಿದ್ದು ಬಿಟ್ಟರೆ ದೇಶದ ಎಲ್ಲ ರೀತಿಯ ಆವಶ್ಯಕತೆಗಳನ್ನು ಪೂರೈಸಬಹುದು. ಒಂದೊಂದು ಕಾರಖಾನೆಯಲ್ಲಿ ಹೆಚ್ಚೆಂದರೂ 10–15 ಮಜೂರರಿಂದ ತೊಡಗಿ 100–200ಕ್ಕಿಂತ ಜಾಸ್ತಿ ಬೇಕಾಗುವುದೇ ಇಲ್ಲ. ಆಗ ಉಳಿದ ಕೋಟ್ಯಾನುಕೋಟಿ ಮಜೂರರ ಪಾಡೇನು?

ಕೃಷಿ ಕ್ಷೇತ್ರದಲ್ಲೂ ಹಾಗೆಯೇ. ದೇಶಕ್ಕೆ ಬೇಕೆನ್ನುವಷ್ಟು ಆಹಾರ ಉತ್ಪತ್ತಿಯಾಗಬೇಕಾದರೆ ಯಂತ್ರಗಳನ್ನು ಕೃಷಿಗೆ ಉಪಯೋಗಿಸಬೇಕು. ನಮ್ಮ ದೇಶದಲ್ಲಿ ನೀನೇ ನೋಡಿರಬಹುದು. ಒಬ್ಬ ಕೃಷಿಕನು ಯಾವ ಮಜೂರನ ಸಹಾಯವೂ ಇಲ್ಲದೆ, ತನ್ನ ಪತ್ನಿಯ ನೆರವಿನಿಂದ 500 ಯಾ 600 ಎಕ್ರೆ ಭೂಮಿಯನ್ನು ಕೇವಲ ಕೆಲವೇ ಯಂತ್ರಗಳ ಸಹಾಯದಿಂದ ಸಾಗುವಳಿ ಮಾಡಿ, ಆಹಾರವಸ್ತುಗಳನ್ನು ತಯಾರಿಸುತ್ತಾನೆ ಯಂತ್ರಗಳ ಸಹಾಯವಿಲ್ಲದೆ ಅದೇ ಭೂಮಿಯಲ್ಲಿ ಅಷ್ಟೇ ಉತ್ಪತ್ತಿ ಪಡೆಯಲು ಸಾಧ್ಯವಿಲ್ಲ. ನೂರಾರು ಮಜೂರರನ್ನು ನೇಮಿಸಿ, ದೇಹ ಶ್ರಮದಿಂದ ಮಾಡುವ ಕೃಷಿ ಕೆಲಸವನ್ನು ಒಬ್ಬ ಕೃಷಿಕನು, ಕೆಲವು ಯಂತ್ರಗಳ ಸಹಾಯದಿಂದ ಯಾವ ಮಜೂರನ ನೆರವೂ ಇಲ್ಲದೆ ಪೂರೈಸುತ್ತಾನೆ. ಮಾತ್ರವಲ್ಲ–ದೇಹಶ್ರಮದಿಂದ ಆಗುವ ಉತ್ಪತ್ತಿಗಿಂತ ಮಿಗಿಲಾಗಿ ಉತ್ಪತ್ತಿ ಪಡೆಯುತ್ತಾನೆ.

ಅಂದರೆ ಏನಾಯಿತು? ಆ 500–600 ಎಕ್ರೆ ಭೂಮಿಯನ್ನು ಹೊಂದಿಕೊಂಡು ಜೀವನ ಮಾಡುವುದು ಕೇವಲ ಒಂದು ಕುಟುಂಬ, ಆ ಉತ್ಪತ್ತಿಗೆ ಪೂರ್ತಿಯಾಗಿ ಅವರೇ ಹಕ್ಕುದಾರರು. ಆದ್ದರಿಂದಲೇ ಅವರು ಸಮೃದ್ಧಿಯ

ಶ್ರೀಮಂತಿಗೆಯ ಜೀವನ ಮಾಡುತ್ತಾರೆ. ನೂರಾರು ಮಜೂರರೂ ಅದೇ ಭೂಮಿಯಲ್ಲಿ ದುಡಿಯುತ್ತ ಬದುಕುವವರಾದರೆ, ಆ ಭೂಮಿಯ ಉತ್ಪತ್ತಿಗೆ ಅಷ್ಟು ಜನ ಪಾಲುಗಾರರು ದೊರೆತಂತಾಯಿತು. ಅಂದರೆ ಅವರ ವೈಯ್ಯಕ್ತಿಕ ಉತ್ಪತ್ತಿಯು ಕಡಿಮೆಯಾಗಲೇ ಬೇಕು. ಅವರು ಆರ್ಥಿಕವಾಗಿ ಸಮೃದ್ಧಿಯ ಸ್ಥಿತಿಯಲ್ಲಿರಲು ಸಾಧ್ಯವೇ ಇಲ್ಲ.

ಅಂದರೆ, ಒಟ್ಟಿನಲ್ಲಿ ದೂರದೃಷ್ಟಿಯಲ್ಲಿ ಮತ್ತು ಶಾಶ್ವತ ನೆಲೆಯಲ್ಲಿ ಒಂದು ರಾಷ್ಟ್ರದ ಆರ್ಥಿಕ ಕೊರತೆಯ ಸಮಸ್ಯೆಯನ್ನು ಬಗೆಹರಿಸಿ, ಸಮೃದ್ಧಿಯು ಲಭಿಸುವಂತೆ ಮಾಡಲು ಕೃಷಿ ಮತ್ತು ಉದ್ಯಮಗಳಲ್ಲಿ ಯಾಂತ್ರೀಕರಣವಾಗ ಬೇಕು—ಇನ್ನೂ ಸಮೃದ್ಧಿ ಬೇಕಾದರೆ ಸ್ವಯಂಚಾಲಿತ ಯಾಂತ್ರೀಕರಣವಾಗ ಬೇಕು. ಕೃಷಿ ಮತ್ತು ಉದ್ಯಮ ಎರಡರಲ್ಲೂ ಹೊಂದಿಕೊಂಡಿರುವ ಕುಟುಂ ಗಳ ಹಾಗೂ ಜನರ ಸಂಖ್ಯೆ ಕಡಿಮೆಯಿರಬೇಕು.

ಜನಸಂಖ್ಯೆ ವೃದ್ಧಿಯಾದಾಗ ಅಂದರೆ ಒಂದು ಮಿತಿಯನ್ನು ದಾಟಿ ಮುಂದೆ ಹೋದಾಗ ಪ್ರತಿಕ್ಷೇತ್ರದಲ್ಲೂ ಯಾಂತ್ರೀಕರಣ ಮಾಡದಿದ್ದರೆ, ಆರ್ಥಿಕ ಅಭಿವೃದ್ಧಿಯಾಗುವಂತಿಲ್ಲ. ಯಾಂತ್ರೀಕರಣಮಾಡಿದರೆ, ಎಲ್ಲರಿಗೂ ಉದ್ಯೋಗ ದೊರಕುವಂತಿಲ್ಲ. ಅವೆರಡೂ ಗಂಭೀರ ಸಮಸ್ಯೆಗಳೇ.

ಭಾರತದ ಪರಿಸ್ಥಿತಿಯಿಂದು ಇದು. 438 ಮಿಲಿಯ ಜನ ಭಾರತದಲ್ಲಿದ್ದಾರೆ. ಪ್ರತಿ ವರ್ಷವೂ 5 ಮಿಲಿಯ ಜನ ಏರುತ್ತಾ ಹೋಗುತ್ತಾರೆ (ಈಗಿನ ಗಣತಿ ಪ್ರಕಾರ.) ಉದ್ಯಮಗಳಲ್ಲಿ ಯಾಂತ್ರೀಕರಣವಿಲ್ಲದೆ ಬಡತನ ಅಂದರೆ ಜೀವನಾವಶ್ಯಕ ವಸ್ತುಗಳ ಕೊರತೆ ನೀಗುವಂತಿಲ್ಲ. ಸಮೃದ್ಧಿ ಬರುವಂತೆ ಮಾಡಲು, ಸ್ವಯಂಚಾಲಿತ ಯಾಂತ್ರೀಕರಣವನ್ನೇ ಕೈಗೊಳ್ಳಬೇಕು. ಆಗ ಕೋಟಿಗಟ್ಟಲೆ ಮಜೂರರಿಗೆ ಔದ್ಯಮಿಕ ಕ್ಷೇತ್ರದಲ್ಲಿ ಕೂಳನ್ನೂ ಕೂಡಾ ಪಡೆಯಲು ಸಾಧ್ಯವಿಲ್ಲ. ಇಂದು ನಮ್ಮ ದೇಶದ ಮಜೂರರ ಮಟ್ಟದಲ್ಲೇ ಇಲ್ಲಿಯ ಎಲ್ಲ ಜನರೂ ಬದುಕಲು ಬೇಕಷ್ಟು ವಸ್ತುಗಳನ್ನು ತಯಾರಿಸುವುದಿದ್ದರೂ ಕೂಡಾ ದೇಶದ ಕಾಲಂಶ ಮಜೂರರಿಗೂ ಉದ್ಯಮಗಳಲ್ಲಿ ಆಸ್ಪದ ದೊರೆಯಲಾರದು. ಅವರೆಲ್ಲ ಕೃಷಿ ಭೂಮಿಗೆ ತೆರಳಬೇಕು.

ಕೇವಲ ಕೆಲವು ಮಿಲಿಯ ಜನರಿಂದಾಗುವ ಯಾಂತ್ರೀಕೃತ ಕೃಷಿ ಕೆಲಸಕ್ಕೆ ಕೋಟಿಗಟ್ಟಲೆ ಮಜೂರರು ಬಂದುಬಿದ್ದರೆ ಅವರಿಗೆ ಸಮೃದ್ಧಿಯ ವೇತನದ

ಮಾತಂತಿರಲಿ-ಜೀವನಾವಶ್ಯಕ ವೇತನದೊರೆಯುವುದೆಂತು? ಆ ಬಹು ಸಂಖ್ಯಾಕರು ದೇಹದಿಂದಲೇ ದುಡಿಯ ಹೊರಟಾಗ, ಅವರೆಲ್ಲ ಜತೆಯಾಗಿ ದಾರಿದ್ರ್ಯವನ್ನೇ ಹಂಚಿಕೊಳ್ಳಬೇಕೇ ಹೊರತಾಗಿಬೇರೆ ವಿಧಿಯಿಲ್ಲ.

ನಮ್ಮ ದೇಶದ ಸುದೈವ ಅದು. ಸಂಪತ್ಸಮೃದ್ಧವಾದ ನಾಡು. ಬೇಕುಬೇಕಾದ ಖನಿಜ ಸಂಪತ್ತುಗಳಿವೆ. ಬೇಕುಬೇಕಾದ ಆಹಾರ ಸಾಮಗ್ರಿಗಳನ್ನು ಬೆಳೆಸಿಕೊಳ್ಳಬಹುದು. ಮಿತವಾದ ಜನಸಂಖ್ಯೆ. ಭಾರತದ ಇಮ್ಮಡಿಗಿಂತಲೂ ದೊಡ್ಡದಾದ ಸಮೃದ್ಧ ಭೂಮಿ ನಮ್ಮದಾಗಿದ್ದರೆ, ಅದರ ಅರ್ಧಕ್ಕಿಂತಲೂ ಕಡಿಮೆಯಾದ ಜನಸಂಖ್ಯೆಯಿದೆ. ಆದ್ದರಿಂದಲೇ ಸ್ವಯಂಚಾಲಿತ ಉದ್ಯಮಗಳನ್ನು ಸ್ಥಾಪಿಸಿ, ಜಗತ್ತಿನ ಯಾವ ರಾಷ್ಟ್ರವೂ ಚರಿತ್ರೆಯಲ್ಲಿ ಹಿಂದೆ ಎಂದೂ ಇಲ್ಲದಷ್ಟು ನಾವು ಸಂಪನ್ನರಾಗಿದ್ದೇವೆ.

ಆದರೂ, ನಮ್ಮ ದೇಶದಲ್ಲೇ ಕೆಲವು ಮಿಲಿಯ ಜನರು ನಿರುದ್ಯೋಗಿಗಳಿದ್ದಾರೆಂದೂ, ಅವರ ಸಂಖ್ಯೆಯು ಇನ್ನೂ ಹೆಚ್ಚುವುದೆಂದೂ ಕೇಳುತ್ತೇವೆ. ಹಾಗಿರಲು ನಮ್ಮ ಇಮ್ಮಡಿಗಿಂತಲೂ ಹೆಚ್ಚು ಜನ ಸಂಖ್ಯೆಯಿರುವ ಭಾರತದ ಪಾಡೇನಾದೀತು?

ಆದ್ದರಿಂದ ನಾನೊಂದು ನಿರ್ಣಯಕ್ಕೆ ಬಂದಿದ್ದೇನೆ. ಈಗ ಇರುವ ಜನಸಂಖ್ಯೆಯ ಪ್ರಮಾಣದಲ್ಲಿ, ಭಾರತವು ಎಂದೂ ಸಂಯುಕ್ತ ಅಮೇರಿಕಾದ ಜೀವನದ ಮಟ್ಟವನ್ನು ಪಡೆಯಲು ಸಾಧ್ಯವಿಲ್ಲ. ಇಂದಿರುವ ತೀಕ್ಷ್ಣವಾದ ದಾರಿದ್ರ್ಯದ ಪರಿಹಾರಕ್ಕೂ ಬಹಳ ಕಷ್ಟವಿದೆ-ಹಲವು ವರ್ಷಗಳ ಸತತ ಯತ್ನವು ಬೇಕಾಗಬಹುದು.

ಏಕೆಂದರೆ, ಸ್ವಯಂಚಾಲಿತ ಔದ್ಯಮೀಕರಣ ಬಿಟ್ಟು ಕೇವಲ ದ್ವಿತೀಯ ರೀತಿಯ ಯಾಂತ್ರೀಕರಣವನ್ನು ಕೃಷಿ ಮತ್ತು ಉದ್ಯಮಗಳಲ್ಲಿ ತಂದರೂ ಕೋಟ್ಯಾನುಕೋಟಿ ಜನರು ನಿರುದ್ಯೋಗಿಗಳಾಗುವರು—ಕೃಷಿಯಲ್ಲಾದರೂ ಯಾಂತ್ರೀಕರಣ ಬೇಡವೆಂದು ಬಿಟ್ಟರೆ, ಜನರು ದರಿದ್ರರಾಗಿಯೇ ಉಳಿಯುವರು—ಆಹಾರದ ಉತ್ಪತ್ತಿಯ ಮೂಲಬೆಲೆ ಏರುವುದು. ಇದರಿಂದ ರಾಷ್ಟ್ರೀಯ ಸಮೃದ್ಧಿಗೆ ಧಕ್ಕೆಯೊದಗುವುದು.

ಆಗ ಗ್ರೇಟ್ ಬ್ರಿಟನಿನ ಪ್ರಸಿದ್ಧ ವಿಚಾರವಾದಿಗಳೂ, ತತ್ವಜ್ಞಾನಿಗಳೂ ಆದ ಯಚ್. ಜಿ. ವೆಲ್ಸ್‌ರವರು ಸೂಚಿಸಿದ ರೀತಿಯ ದಾರಿಯನ್ನನುಸರಿಸಿದರೇನು ಎಂಬ ಪ್ರಶ್ನೆ ಉದ್ಭವಿಸುವುದು. ಅಂದರೆ ವಿಜ್ಞಾನವು ಕೃಷಿ,

ಉದ್ಯಮಗಳಲ್ಲಿ, ಅತೀ ಲಾಭದಾಯಕವಾದ ಯಾವ ನವೀನ ಸವಲತ್ತುಗಳನ್ನು ಒದಗಿಸುವುದೋ ಅವುಗಳನ್ನೆಲ್ಲ ಉಪಯೋಗಿಸಿಕೊಳ್ಳುವುದು. ಬೇಕಿದ್ದರೆ ಅಣುಶಕ್ತಿಯ ಉಪಯೋಗವನ್ನೂ ಸರಿಯಾಗಿ ಪಡೆದು ಕೊಳ್ಳುವುದು. ಎಲ್ಲರಿಗೂ ಉದ್ಯೋಗವನ್ನೂ ಕೊಡುವುದು. ಅಂದರೆ ಪ್ರತಿಯೊಬ್ಬನ ದುಡಿಮೆಯ ಸಮಯವನ್ನು ಕಡಿಮೆಗೊಳಿಸಿ, ಸರದಿ ಪ್ರಕಾರ ಒಂದೇ ಕಾರಖಾನೆಯಲ್ಲಿ ಹಲವು ಪಂಗಡದವರು ದುಡಿಯುವಂತೆ ಮಾಡುವುದು.

ಹೀಗೆ ಮಾಡಿದರೆ ಪ್ರಾಯಶಃ ಭಾರತದ ಮಜೂರನು ದಿನಕ್ಕೆ ಎರಡೇ ಗಂಟೆ ದುಡಿಯುವಂತಾದೀತೋ ಏನೋ? ಆದರೆ ಎಲ್ಲರಿಗೂ ಜೀವನಾವಶ್ಯಕ ವೇತನಕ್ಕಿಂತ ಮಿಗಿಲಾಗಿ ಸಮೃದ್ಧಿಯ ವೇತನ ಕೊಟ್ಟು ಎಲ್ಲರೂ ಶ್ರೀಮಂತಿಕೆಯ ಜೀವನ ಮಾಡುವಂತೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಹಾಗೆ ವೇತನ ಕೊಟ್ಟಾಗ ನಮ್ಮ ಉತ್ಪನ್ನದ ಬೆಲೆ ಗಗನಗಾಮಿಯಾಗಬಹುದು.

ಜೀವನಾವಶ್ಯಕ ವೇತನವನ್ನು ಕೊಟ್ಟರೂ ಕೂಡಾ ಉತ್ಪನ್ನದ ಬೆಲೆಯು ಜಾಸ್ತಿಯಾಗಿಯೇ ಉಳಿಯುವುದು. ಏಕೆಂದರೆ ಒಂದು ಪ್ರತಿ ಜನರಿಗೆ ಕೊಡತಕ್ಕ ವೇತನವನ್ನೇ ಹಲವು ಪ್ರತಿಜನರಿಗೂ ಕೊಡಬೇಕಾಗುವುದು. ಇದರಿಂದ, ಯಾಂತ್ರೀಕರಣದ ಪರಿಣಾಮವಾಗಿ ವಸ್ತುಗಳ ಬೆಲೆ ಇಳಿಯುವ ಬದಲು ಏರಿಕೊಂಡೇ ಇರುವುದು. ಹಾಗಿರಲು ಜೀವನಾವಶ್ಯಕ ವೇತನ ಮಾತ್ರವೇ ಪಡೆಯುತ್ತಿರುವ ಮಜೂರರು ಸಮೃದ್ಧಿಯ ಜೀವನಕ್ಕಾಗಿ ಎಲ್ಲ ವಸ್ತುಗಳನ್ನೂ ಕೊಂಡುಕೊಳ್ಳಲು ಸಾಧ್ಯವಿಲ್ಲ. ಪರಿಣಾಮವಾಗಿ ಒಂದು ಮಟ್ಟದ ದಾರಿದ್ರ್ಯವು ಉಳಿದೇ ಉಳಿಯುವುದು.

ಆದರೆ ದೇಹಶ್ರಮದಿಂದಲೇ ಎಲ್ಲ ಕೆಲಸ ಸಾಗಿಸುವಾಗಿನ ಸ್ಥಿತಿಗಿಂತ ಈ ಯಾಂತ್ರೀಕರಣದಲ್ಲಿ ಪರಿಸ್ಥಿತಿ ಉತ್ತಮವಾದೀತು.

ಅಲ್ಲದೆ ಭಾರತದ ತಿರುವಾಂಕೂರು ಪ್ರದೇಶದಲ್ಲಿರುವ ಹ್ಯೊಗೆಯಲ್ಲಿ ಬಹಳ ದೊಡ್ಡ ಥೋರಿಯಂ ಭಂಡಾರವಿದೆಯೆಂದು ಕಂಡುಕೊಳ್ಳಲಾಗಿದೆ. ಅದರ ಸಹಾಯದಂದ ಬಹಳ ಅಗ್ಗ ಬೆಲೆಯಲ್ಲಿ ವಿದ್ಯುತ್ತನ್ನು ತಯಾರಿಸಲು ಮುಂದೆ ಸಾಧ್ಯವಾಗುವುದೋ ಏನೋ? ಹಾಗೆ ಸಾಧ್ಯವಾದಲ್ಲಿ ಅಂತಹ ಅಣು ವಿದ್ಯುತ್ ಸ್ಥಾವರಗಳು ಭಾರತದಾದ್ಯಂತ ಸ್ಥಾಪಿಸಲ್ಪಟ್ಟರೆ ದೊರೆಯುವ ಅಗ್ಗದ ವಿದ್ಯುತ್ ಶಕ್ತಿಯಿಂದ ಉತ್ಪನ್ನದ ಬೆಲೆಯನ್ನು ಕಡಿಮೆಗೊಳಿಸಿ, ವೆಲ್ಸರ ಸಿದ್ಧಾಂತದ

ಪ್ರಕಾರವೇ ಎಲ್ಲರಿಗೂ ಕೆಲಸ ಕೊಟ್ಟೂ ವೇತನ ಬಹಳ ಮಟ್ಟಿಗೆ ಕಡಿಮೆಯಾಗದಂತೆ ಮಾಡಬಹುದೋ ಏನೋ? ಆದರೂ ನಮ್ಮ ದೇಶದ ಜೀವನ ಮಟ್ಟ ಭಾರತಕ್ಕೆ ದೊರೆತೀತೆಂದು ಊಹಿಸಲು ಆಸ್ಪದ ಕಾಣುವುದಿಲ್ಲ.

ಈ ದಿಸೆಯಲ್ಲಿ ಇನ್ನೊಂದು ದೊಡ್ಡ ಸಮಸ್ಯೆಯಿದೆ. ಭಾರತ ಉದ್ಯಮಗಾರರು, ತಮ್ಮ ಲಾಭದೃಷ್ಟಿ ಬಿಟ್ಟುಗೊಟ್ಟು ವೆಲ್ಸನ ಸಿದ್ಧಾಂತ ಪ್ರಕಾರ ಎಲ್ಲರಿಗೂ ಉದ್ಯೋಗಾವಕಾಶ ಕೊಡಲು ಸಿದ್ಧರಿರುವರೇ? ಖಂಡಿತ ಇಲ್ಲ. ಸರಕಾರದ ಶಾಸನದ ಬಲ ಬೇಕಾಗಬಹುದು.

ಆದರೆ ಸಿಲ್ವರ್, ಭಾರತದ ಜನರು ಬಹಳ ಬುದ್ಧಿಶಾಲಿಗಳು. ಸರಕಾರವು ಕೈಗೊಂಡ ಪ್ರತಿ ಶಾಸನವನ್ನೂ, ಒಳಗಿಂದಲೇ–ಮುರಿದು ತಮಗೇನೂ ದೋಷ ಬಾರದಂತೆ ಮಾಡಿ ತಲೆ ತಪ್ಪಿಸಿಕೊಳ್ಳುವ ಸಾಮರ್ಥ್ಯವು ಇಲ್ಲಿಯ ಉದ್ಯಮಗಾರರಿಗೂ ಇದೆ. ಇತರ ಶ್ರೀಮಂತರಿಗೂ ಇದೆ. ಆದ್ದರಿಂದ ಈ ಕಾರ್ಯವನ್ನು ಸಾಧಿಸಲು ಬಹಳ ಅಡಚಣಿಗಳಿವೆ. ಸರಕಾರದವರು ಬಹಳ ಒತ್ತಾಯ ಹೇರಿ ಬಿಟ್ಟರೆ ಇಲ್ಲಿಯ ಉದ್ಯಮಗಾರರು "ಕಾರಖಾನೆಯನ್ನು ಮುಚ್ಚಲಾಗಿದೆ" ಎಂಬ ಬೋರ್ಡು ತಗಲಿಸಿ, ಸುಮ್ಮನೆ ಮನೆಗೆ ಹೋಗಲೂ ಸಿದ್ಧರೇ ಇದ್ದಾರೆ.

ಆಗ, ಸರಕಾರವು ಇಂತಹ ಉದ್ಯಮಗಳನ್ನು ರಾಷ್ಟ್ರೀಕರಣ ಮಾಡಬೇಕಾದೀತು. ಸಾಮಾನ್ಯ ಜನರಲ್ಲಿ ಹಾಗೂ ಅಧಿಕಾರಿಗಳಲ್ಲಿ ಮತ್ತು ಮುಖಂಡರಲ್ಲಿ ಪ್ರಾಮಾಣಿಕತೆಯಿಲ್ಲದೆ ರಾಷ್ಟ್ರೀಕರಣ ಮಾಡಿದರೆ ಏನಾಗುವುದೆಂಬುದು ತಿಳಿದೇ ಇದೆ. ಹಿಂದಿನ ಒಂದು ಪತ್ರದಲ್ಲಿ ಇಲ್ಲಿಯ ಒಂದು ಪ್ರಾಂತ್ಯದ ರಾಷ್ಟ್ರೀಕೃತ ಬಸ್ಸುಸಾರಿಗಾಸಂಸ್ಥೆಯ ಸ್ಥಿತಿಗತಿಗಳನ್ನು ನಾನು ಬಣ್ಣಿಸಿದ್ದೆ. ಅಂದರೆ ರಾಷ್ಟ್ರೀಯ ಮಟ್ಟದಲ್ಲಿ ದೊಡ್ಡ ಮೋಸದ ಸುಳಿಗುಂಡಿಯೇ ಬೆಳೆದು ಎಲ್ಲರೂ ಅದರಲ್ಲಿ ಸುಳಿ ಸುಳಿ ಸುತ್ತುತ್ತ ನೀತಿ ಭ್ರಷ್ಟರಾಗಿ ಕೊಳೆಯಬೇಕಾದೀತು. ಪರಿಣಾಮವಾಗಿ ಎಲ್ಲ ಉದ್ಯಮಗಳೂ ಕೆಟ್ಟು ಹೋಗಬಹುದು— ಆರ್ಥಿಕಾಭಿವೃದ್ಧಿಯು ಕಡಿಮೆಯೆಂದರೆ ಹತ್ತು ವರ್ಷಗಳಿಗೆ ಹಿಂದೆ ಬೀಳಬಹುದು.

ಆರ್ಥಿಕ ತಜ್ಞನಲ್ಲದ ನಾನು ಭಾರತದ ಅರ್ಥ ಶಾಸ್ತ್ರವನ್ನು ವಿವರಿಸಹೊರಟ ಸಾಹಸ ಮಾಡಿದೆ. ಪ್ರಾಯಶಃ ಇವನ್ನೆಲ್ಲ ಓದುವ ತಾಳ್ಮೆಯಾದರೂ ನಿನಗೆ ಬರುವುದೋ ಇಲ್ಲವೊ ನನಗೆ ತಿಳಿದಿಲ್ಲ–ಸಾಲದುದಕ್ಕೆ ನಾನು ಸುಲ

ಭದಲ್ಲಿ ಹೇಳತಕ್ಕುದನ್ನು ಕಷ್ಟವಾಡಿ ಹೇಳಿದ್ದೇನೋ ನನಗೆ ತಿಳಿದಿಲ್ಲ. ಹೇಗಿದ್ದರೂ ನಾವು ಸಮಸ್ಯೆಗಳನ್ನು ನನುಗೆ ಗೊತ್ತಿರುವ ನಮ್ಮ ಭಾಷೆಯಲ್ಲೇ ವಿಶ್ಲೇಷಿಸಲು ಯತ್ನಿಸಬೇಕಲ್ಲ?

ಅದಿರಲಿ, ಹಾಗಿದ್ದರೆ ಭಾರತದ ಆರ್ಥಿಕ ಉನ್ನತಿಯ ಭವಿಷ್ಯವೇನು? ಇಲ್ಲಿಯ ಮಿಲಿಯಾಂತರ ಜನರ ಪಾಡೇನು? ಅವರು ಹೀಗೆಯೇ ಉಳಿಯಬೇಕೇ?

ಸಾವಕಾಶವಾಗಿ ಅವರ ಸ್ಥಿತಿ ಖಂಡಿತ ಸುಧಾರಿಸುವುದೆಂಬುದರಲ್ಲಿ ಸಂದೇಹವಿಲ್ಲ–ಆದರೆ ನಮ್ಮ ರೀತಿಯ ಸಮೃದ್ಧಿಯ ಭವಿಷ್ಯತ್ತು ಭಾರತದ ಸಾಮಾನ್ಯ ಪ್ರಜಾಕೋಟಿಗಿದೆಯೋ ಇಲ್ಲವೋ ನಾನಿಂದು ಹೇಳಲಾರೆ.

ಆದರೇನು ಸಿಲ್ವರ್? ಭಾರತದ ಜನರ ರಕ್ತದಲ್ಲಿ ಅಧ್ಯಾತ್ಮದ ಒಂದು ಗುಪ್ತ ಗಂಗೆಯಿದ್ದೇ ಇದೆ. ಭಾರತದ ಆತ್ಮವು ಸಿಡಿದೆದ್ದು ಭೌತಿಕ ಸಮೃದ್ಧಿ ನನಗೆ ಬೇಡ—ಅಧ್ಯಾತ್ಮಿಕ ಸಮೃದ್ಧಿ ಮಾತ್ರವೇ ಬೇಕಾದ್ದು—ಅದು ನನಗಿದೆ. ಇಲ್ಲವಾದರೂ ಸಂಪಾದಿಸಿಕೊಂಡೇನು ಎಂದು ಹೇಳುವಂತಿದೆ.

ಆದ್ದರಿಂದ ಅದಕ್ಕೆ ನಮ್ಮ ಉತ್ತರವೆಲ್ಲಿದೆ? ಎಲ್ಲ ಭೌತಿಕಾನುಕೂಲತೆಗಳನ್ನೂ, ಸಮಾಜದ ಭದ್ರತೆಯನ್ನೂ ಒದ್ದು ಬಿಸುಟು ಸನ್ಯಾಸಿಯಾಗಿ ಜ್ಞಾನ ಸೂರ್ಯನನ್ನು ಅರಸುವ ಧೀರಾಧಿಧೀರರಿಂದ ಕೂಡಿದ ಭಾರತದ ಈ ಪವಿತ್ರ ನೆಲದ ಭೌತಿಕ ಕೊರತೆಯ ಕುರಿತು ಬಹಳವಾಗಿ ಆದೇಕೆ ಚಿಂತಿಸಬೇಕು?

ಆದರೆ ಇಂದಿನ ಭೀಕರ, ಕರಾಳ, ನಗ್ನ ದಾರಿದ್ರ್ಯ ತೊಲಗಲೇ ಬೇಕು, ಸಿಲ್ವರ್. ಅದು ಭಾರತದ ಕೀರ್ತಿಗೆ ಕಳಂಕಪ್ರಾಯವಾದುದು ಭಾರತದ ಅಧ್ಯಾತ್ಮ ಗಂಗೆಯನ್ನೇ ಹಿಂಗಿಸುವಂತಾದ್ದು. ಅದನ್ನು ಹೇಗೆ ಹೋಗಲಾಡಿಸಲಿ? ಇದು ಅಂತರ್ರಾಷ್ಟ್ರೀಯ ಆರ್ಥಿಕ ತಜ್ಞರನ್ನೇ ತಲೆಕೆಡಿಸುವ ಪ್ರಶ್ನೆ.

ಈ ಮಧ್ಯೆ ಕೆಲವು ದುಃಖದಾಯಕ ಪ್ರಸಂಗಗಳು ಭಾರತದಲ್ಲಿ ಅಲ್ಲಲ್ಲಿ ಕಾಣುತ್ತವೆ.

ಹಿಂದಿನ ಪತ್ರದಲ್ಲಿ ನಾನು ವೆಲ್ಲೂರು ಬಳಿಯ ರೈತರ ಸಮಸ್ಯೆಗಳಲ್ಲಿ ಕಮ್ಯುನಿಸ್ಟರ ಪಾತ್ರವನ್ನು ವಿವರಿಸಿದೆ. ಭಾರತದ ಆರ್ಥಿಕ ಹಾಗೂ ಔದ್ಯಮಿಕ ಕ್ಷೇತ್ರದಲ್ಲೂ ಇವರು ಬಹಳ ದೊಡ್ಡ ಪಾತ್ರವನ್ನು ವಹಿಸಿಕೊಂಡಿದ್ದಾರೆ.

ವೈಜ್ಞಾನಿಕ ನೆಲೆಯಲ್ಲಿ ವಿಚಾರಿಸುವ ಪ್ರತಿಯೊಬ್ಬ ವಿಚಾರವಂತನೂ ಪ್ರತಿಯೊಂದು ತತ್ವದಲ್ಲೂ, ಪ್ರತಿಯೊಂದು ವಿಚಾರದಲ್ಲೂ ಹಾಗೂ ಚಳವಳದಲ್ಲೂ ಹೆಚ್ಚು ಕಡಿಮೆ ಪ್ರಮಾಣದಲ್ಲಿ ಒಳಿತು ಕೆಡುಕುಗಳನ್ನು ಕಾಣುತ್ತಾನೆ.

ಅತೀ ಕೆಡುಕೆನಿಸಲ್ಪಟ್ಟ ಚಳವಳದಿಂದಲೂ, ಹೊರ ಬಂದ ಸತ್ಫಲಗಳಿವೆ.

ಹಾಗೆಯೇ ಭಯಂಕರ ದ್ವೇಷ, ಹಿಂಸೆ, ಸಂಶಯ, ಒಳಸಂಚು, ಕ್ರೌರ್ಯ, ದಬ್ಬಾಳಿಕೆಗಳ ಮೂರ್ತಿಮತ್ತಾದ ಸ್ವರೂಪವಾದ ಕಮ್ಯುನಿಸ್ಟ್ ಸಿದ್ಧಾಂತದಿಂದ ಒಂದು ಒಳಿತಾದ್ದೂ ಹುಟ್ಟಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಹಾಗೂ ಆ ಮೊದಲು ವಿವಿಧ ವರ್ಗದ ಮಜೂರರರು ಒಂದು ರೀತಿಯಲ್ಲಿ ಕೇವಲ ಪಶುಗಳಂತೆ ಬದುಕಬೇಕಾಗಿತ್ತು. ಅವರೊಳಗೆ ಸಂಘಟನೆಯ ಬದಲು ಸ್ಪರ್ಧೆಯಿತ್ತು. ತಮ್ಮ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವ ಬದಲು ತಮ್ಮ ಅಧಃಪತನವನ್ನೇ ಸಾಧಿಸುತ್ತಿದ್ದರು. ತಮ್ಮ ಹಕ್ಕುಗಳ ವಿಷಯ, ಅವರಿಗೆ ಪರಿವೆಯಿರಲಿಲ್ಲ. ಇದರಿಂದ ಅವರು ಒಂದು ರೀತಿಯ ದಾಸ್ಯದಲ್ಲೇ ಇದ್ದರು ಎಂದರೂ ತಪ್ಪಾಗಲಾರದು.

ಅರಾಜಕತೆಯನ್ನುಂಟುಮಾಡಿ, ಕಮ್ಯುನಿಸ್ಟ್ ಸರ್ವಾಧಿಕಾರವನ್ನು ಸ್ಥಾಪಿಸುವ ಉದ್ದೇಶವನ್ನು ಸಾಧಿಸಲು ಕಮ್ಯುನಿಸ್ಟರಿಗೆ, ಮಜೂರರರನ್ನೆಲ್ಲ ಸಂಘಟಿಸಿ, ಅವರು ತಮ್ಮ ವಶವಾಗುವಂತೆ ಮಾಡಬೇಕಾಗಿತ್ತು. ಅವರ ಆಕರ್ಷಣೆ ಪಡೆಯಲು, ಅವರಿಗೆ ವೇತನ ಹೆಚ್ಚು ಸಿಗಲೇ ಬೇಕು ಎಂಬ ಕೂಗನ್ನು ಕಲಿಸಿ, ಅದಕ್ಕಾಗಿ ಅವರು ಸುಸಂಘಟಿತರಾಗಿ ಮುಷ್ಕರ ಹೂಡುವಂತೆ ಮಾಡಬೇಕಾಗಿತ್ತು. ಜಗತ್ತಿನಾದ್ಯಂತ ಈ ಕೆಲಸ ನಡೆಯಿತು.

ಕೆಲವು ದೇಶಗಳಲ್ಲಿ ಇದರಿಂದ ಕಮ್ಯುನಿಸ್ಟ್ ತತ್ವವೇ ಒಂದು ಶಾಶ್ವತ ಗುಲಾಮಗಿರಿಯು ಸಿದ್ಧವಾಯಿತು. ಆದರೆ ಭಾರತದಂತಹ ಕೆಲವು ರಾಷ್ಟ್ರಗಳಲ್ಲಿ ಇದರ ಪರಿಣಾಮವಾಗಿ, ಮಜೂರ ವರ್ಗದವರು ತಮ್ಮ ಗಾಢ ನಿದ್ರೆಯಿಂದ ಎಚ್ಚೆತ್ತು ಜಾಗೃತರಾಗುವಂತಾಯಿತು. ತಮ್ಮ ಕೇಳಿಕೆಗಳಿಗಾಗಿ ಅವರು ಸುಸಂಘಟಿತರಾಗಿ ಹೋರಾಡುವಂತಾಯಿತು.

ಅದರ ಫಲವಾಗಿ ಮಿಲಿಯಗಟ್ಟಲೆ ಅಷ್ಟೇಕೆ ಕೋಟಿಗಟ್ಟಲೆ ಮಜೂರರ ಆರ್ಥಿಕ ಪರಿಸ್ಥಿತಿ ಸುಧಾರಿಸಿತು. ಮಾತ್ರವಲ್ಲ, ಒಂದು ರೀತಿಯ ಸ್ವತಂತ್ರ ವ್ಯಕ್ತಿತ್ವ ಅವರಲ್ಲಿ ಬೆಳೆಯಲು ಸಹಾಯವಾಯಿತು. ಇಂದು ಮಜೂರನ ರಕ್ತ ಹೀರಲು ಎಲ್ಲಿಯೂ ಸಾಧ್ಯವಿಲ್ಲ. ಏಕೆಂದರೆ ಅವರು ಸಂಘಟಿತರಾಗಿದ್ದಾರೆ. ತಮ್ಮ ಹಕ್ಕುಗಳನ್ನು ತಿಳಿದುಕೊಂಡಿದ್ದಾರೆ. ಅದೊಂದು ಒಳಿತೇ ಆಯಿತು.

ಆದರೆ ತಮ್ಮಬಾಧ್ಯತೆಯನ್ನುಅವರಿಗೆ ಕಲಿಸಿದವರಿಲ್ಲ—ಅವರಿಗೆ ತಿಳಿದೂ

ಇಲ್ಲ. ಹಕ್ಕುಗಳ ಯಾದಿ ಮಾತ್ರವೇ ಅವರಲ್ಲಿದೆ. ಆ ಯಾದಿಯಲ್ಲಿ ಕನಿಷ್ಠ ಕೆಲಸ–ಗರಿಷ್ಠ ವೇತನವೆಂಬುದೊಂದು ಪ್ರಾಮುಖ್ಯವಾದುದು ದುಡಿತದಲ್ಲಿ ಶ್ರದ್ಧೆಯಿಲ್ಲ. ಆ ಸಂಘಟನೆಯ ದುರುಪಯೋಗ ಮಾಡಿಕೊಂಡು ಕೇಳಿಕೆಗಳನ್ನು ವೃದ್ಧಿಸುತ್ತಲೇ ಹೋಗುವುದು–ಅದಕ್ಕಾಗಿ ಚಳವಳ, ಮುಷ್ಕರ.

ಮಜೂರ ಸಂಘಟನೆಯಿಂದಲೇ ಬಂದ ಒಂದು ವಿಷವಿದು. ಅದಿಂದು. ಭಾರತದ ಆರ್ಥಿಕ ಬಲವನ್ನು ಕುಗ್ಗಿಸುತ್ತಿದೆ.

ಕನ್ಯಾಕುಮಾರಿಯಿಂದ ಕಾಶ್ಮೀರದ ತನಕ ಅಲ್ಲಲ್ಲಿ ಇರುವ ಭಾರತದ ಕಾರಖಾನೆಗಳಲ್ಲಿ ಮಜೂರರಿಗೆ ಯಾವುದಾದರೊಂದು ಸಂಕಷ್ಟವಿರಲಿ–ಇಲ್ಲದಿರಲಿ–ಕಮ್ಯುನಿಸ್ಟರು ಅವರ ಬಳಿ ಸೇರಿಕೊಂಡು ಕೃತಕ ಸಂಕಷ್ಟಗಳನ್ನು ತಯಾರಿಸಿ, ಅವರ ಮನಸ್ಸು ಕೆಡಿಸುತ್ತಾರೆ. ಅನೇಕ ಕಾರಖಾನೆಗಳ ಮಜೂರರು ಕಮ್ಯುನಿಸ್ಟ್ ಪಕ್ಷದಿಂದ ಸಂಘಟಿಸಲ್ಪಟ್ಟಿರುವ ಅಖಿಲ ಭಾರತೀಯ ಟ್ರೇಡ್ ಯೂನಿಯನ್ ಕಾಂಗ್ರೆಸ್‌ಗೆ ಸೇರಿದ್ದಾರೆ. ಕೆಲವು ಕಾರಖಾನೆಗಳ ಮಜೂರರು ಕಾಂಗ್ರೆಸ್ ಪಕ್ಷದಿಂದ ನಿಯಂತ್ರಿಸಲ್ಪಡುವ ಅಖಿಲ ಭಾರತೀಯ ರಾಷ್ಟ್ರೀಯ ಟ್ರೇಡ್ ಯೂನಿಯನ್ ಕಾಂಗ್ರೆಸ್‌ಗೆ ಸೇರಿದ್ದಾರೆ. ಇನ್ನು ಕೆಲವರು ಸಮತಾವಾದಿಗಳಿಂದ ಸಂಘಟಿಸಲ್ಪಟ್ಟಿರುವ ಇತರ ಚಿಕ್ಕ ಪುಟ್ಟ ಮಜೂರ ಪಕ್ಷಗಳಿಗೆ ಸೇರಿದ್ದಾರೆ.

ಹೀಗಿದ್ದರೂ, ಕಮ್ಯುನಿಸ್ಟರು ಎಲ್ಲಾ ಮಜೂರರ ಮೇಲೂ ಪ್ರಭಾವ ಬೀರಲು ಯತ್ನಿಸುವುದಿದೆ–ಅವರು ಸಮರ್ಥರಾಗುವುದೂ ಇದೆ.

ಅವರ ಕಾರ್ಯ ಬಹಳ ಸುಲಭವಾದುದು. ಕಾರಖಾನೆಗಳ ಮಾಲಿಕರ ಕುರಿತಾಗಿ ಮಜೂರರು ತೀವ್ರವಾದ ಸಂಶಯ ಮತ್ತು ದ್ವೇಷಗಳನ್ನು ತಾಳುವಂತೆ ಮಾಡುತ್ತಾರೆ. ಕಾರಖಾನೆ ಸ್ಥಾಪಿಸಿ, ತಮಗೊಂದು ಉದ್ಯೋಗಾವಕಾಶ ದೊರೆತಿತು ಎಂಬುದಾಗಿ ಯಾವ ಮಜೂರನೂ ಭಾವಿಸಲು ಕಮ್ಯುನಿಸ್ಟರು ಆಸ್ಪದ ನೀಡುವುದಿಲ್ಲ. ಬದಲಿಗೆ ತಮ್ಮ ಮಾಲಿಕ ತಮ್ಮ ರಕ್ತವನ್ನು ಹೀರುತ್ತಾ ಇದ್ದಾನೆ. ಅವನು ದೊಡ್ಡ ರಾಕ್ಷಸ ಎಂಬ ಭಾವನೆಯೇ ಅವರಲ್ಲಿ ಬಲವಾಗಿ ಬೇರೂರುವಂತೆ ಅವರು ಭಾಷಣ, ಲೇಖನ, ವೈಯ್ಯಕ್ತಿಕ ಸಂಭಾಷಣ, ಒಳಸಂಚು ಮೊದಲಾದವುಗಳಿಂದ ಮಾಡುತ್ತಾರೆ.

ಆ ಮಜೂರರಿಗೆ ಆ ಮಾಲಿಕರು ಬಹಳ ಅನ್ಯಾಯ ಮಾಡುತ್ತಿದ್ದಾರೆ–ಅವರಿಗೆ ನ್ಯಾಯವಾಗಿ ವೇತನವು ಇನ್ನೂ ಹೆಚ್ಚಾಗಿ ಸಿಗಬೇಕು ಎಂದು ಮುಂತಾಗಿ ಅವರು ಬೋಧಿಸುತ್ತಾರೆ. ಸಂದರ್ಭ ನೋಡಿಕೊಂಡು ಮಜೂ

ರರು ಯಾವುದೋ ನ್ಯಾಯವಾದ ಇಲ್ಲವೇ ಕಾಲ್ಪನಿಕ ಸಂಕಷ್ಟಕ್ಕಾಗಿ ಮುಷ್ಕರ ಹೂಡುವಂತೆ ಮಾಡಿ, ಅದರ ನಾಯಕತ್ವ ವಹಿಸುತ್ತಾರೆ. ಮುಷ್ಕರ, ಪಿಕೆಟಿಂಗ್, ಭಾಷಣಗಳು, ಮೆರವಣಿಗೆ, ಸತ್ಯಾಗ್ರಹ, ಉಪವಾಸ, ಕಲ್ಲು ತೂರುವಿಕೆ, ಲೂಟಿ, ಡೊಂಬಿ ಹೀಗೆ ವಿವಿಧ ಚಟುವಟಿಕೆಗಳಲ್ಲಿ ಮಜೂರರು ತೊಡಗುವಂತೆ ಮಾಡುತ್ತಾರೆ.

ರಾಷ್ಟ್ರೀಯ ವೇತನದ ಮಟ್ಟಕ್ಕಿಂತ ಮಿಗಿಲಾಗಿ ವೇತನ ಸಿಗುವಲ್ಲಿಯೂ ಇಂತಹ ಮುಷ್ಕರಗಳನ್ನು ಕಮ್ಯುನಿಸ್ಟ ಪಕ್ಷದವರು ಸಂಘಟಿಸುವುದಿದೆ. ಮನುಷ್ಯನ ಮನಸ್ಸಿಗೆ, ಎಲ್ಲಾ ರೀತಿಯ ಸುಖ, ಸೌಕರ್ಯಗಳನ್ನೂ ಒದಗಿಸಿ ಕೊಡಬಲ್ಲ ಧನದ ಕುರಿತಾಗಿ ತೃಪ್ತಿಯು ಎಂದೂ ಬರುವುದಿಲ್ಲವೆಂಬುದರಿಂದ, ಆ ಧನದಾಸೆಯನ್ನೇ ತೋರಿಸಿ, ಮಜೂರರನ್ನು ಸಂಘಟಿಸುವುದು ಬಹಳ ಸುಲಭ.

"ಮಜೂರರೇ-ನಿಮ್ಮ ವೇತನ ಸಾಲದು. ನಿಮಗೆ ನಿಜವಾಗಿ ನ್ಯಾಯವಾದ ವೇತನ ಸಿಗಬೇಕು. ನಿಮ್ಮ ಮಾಲಿಕರು ನಿಮಗೆ ಅನ್ಯಾಯ ಮಾಡುತ್ತಿದ್ದಾರೆ. "ಹೂಡಿರಿ–ಮುಷ್ಕರ, ನಿಮ್ಮ ಮಾಲಿಕರು ಬಗ್ಗಿಯೇ ಬಿಡುತ್ತಾರೆ. ನಾವೂ ಇದ್ದೇವೆ ನಿಮ್ಮ ಹಿಂದಿನಿಂದ!" ಹೀಗೆ ಸಾರುವಾಗ ಕಿವಿ ನೆಟ್ಟಗಾಗದ ಮಜೂರನಾರು? ದುಡ್ಡು ಹೆಚ್ಚು ಸಿಗುವುದೆಂದಾಗ ಬಾಯಿಬಿಡದ ಮಜೂರನಾರು? ಈ ರೀತಿಯಿಂದ ಸಂಘಟನೆಯು ಸುಲಭವಾಗಿ ಸಾಧ್ಯವಾಗುವುದು.

ಇಂತಹ ಮುಷ್ಕರ ಹೂಡಿಸಿ, ಏನಾದರೊಂದು ಹೊಸ ಸವಲತ್ತು ಮಜೂರರಿಗೆ ದೊರಕಿತೆಂದರೆ, ಸಾಕು–ಕಮ್ಯುನಿಸ್ಟರು ಗೆದ್ದರು. ಏಕೆಂದರೆ ಅವರ ನಿಜವಾದ ಉದ್ದೇಶ ಮಜೂರರರ, ಹಿತವಲ್ಲ–ಕಮ್ಯುನಿಸ್ಟ ಸಂಘಟನೆ. ಆದ್ದರಿಂದ ಮುಂದಿನ ಚುನಾವಣೆಯಲ್ಲಿ ಆ ಮಜೂರರ ಮತವು ಕಮ್ಯುನಿಸ್ಟ ಪಕ್ಷಕ್ಕೆ ದೊರೆಯುವುದು ನಿಶ್ಚಯವೆಂದು ಅವರು ಭಾವಿಸುತ್ತಾರೆ. ಕಮ್ಯುನಿಸ್ಟ ಪಕ್ಷವೆಂದರೆ ಏನೆಂದು ತಿಳಿಯದೆ, ತಮ್ಮ ಹಿತವನ್ನು ಸಾಧಿಸುವ ಪಕ್ಷವೆಂದಷ್ಟೇ ತಿಳಿದುಕೊಂಡ ಮಜೂರರು, ಅವರಿಗೆ ಮತನೀಡುವುದರಲ್ಲಿ ಆಶ್ಚರ್ಯವೇನಿಲ್ಲ.

ಇಂತಹ ಅನಿಯಂತ್ರಿತ ಚಳವಳ ಹಾಗೂ ಮುಷ್ಕರಗಳ ಪರಿಣಾಮವಾಗಿ ಭಾರತದಲ್ಲಿ ಉದ್ಯಮಗಳನ್ನು ಸ್ಥಾಪಿಸಿದ ಮಾಲೀಕರಿಗೆ ಬರುವ ಸಾಮಾನ್ಯ ಭಾವನೆ–ತಾನು ಸುಮ್ಮನೇ ಭಂಡವಾಳವನ್ನು ಈ ಉದ್ಯಮದಲ್ಲಿ ತೊಡಗಿಸಿ ನಷ್ಟ ಹೊಂದಿದೆನಲ್ಲಾ ಎಂಬ ಪಶ್ಚಾತ್ತಾಪ, ಬೇಗುದಿ. ಪಾಶ್ಚಾ

ತ್ಯರು ಇಲ್ಲಿ ಭಂಡವಾಳ ತೊಡಗಿಸಿದರಂತೂ, ಅವರಿಗೆ ಮತ್ತಷ್ಟು ತೀವ್ರವಾಗಿ ಈ ಭಾವನೆ ಬರುವುದು.

ಮಜೂರರಲ್ಲಿ ಕಮ್ಯುನಿಸ್ಟರು ತುಂಬುವ ಅತೃಪ್ತಿ, ಸಂಶಯ ಮತ್ತು ದ್ವೇಷದ ಮನೋಭಾವಗಳಿಂದಾಗಿ ಅವರ ಮುಷ್ಕರ ಹೂಡದ ಸಮಯದಲ್ಲೂ ಅವರ ದುಡಿತವು ತೃಪ್ತಿಕರವಾಗಿರುವುದಿಲ್ಲ. ಯಂತ್ರಗಳ ಕ್ರಿಯೆಗೆ ಸರಿಯಾಗಿ ಅವರು ಕ್ಷಿಪ್ರವಾಗಿ ದುಡಿಯುವ ಬದಲು ಆಸಡ್ಡೆಯಿಂದ ನಿಧಾನವಾಗಿ ಕೆಲಸ ಮಾಡುತ್ತಾರೆ. ತಾವು ನಿಧಾನವಾಗಿ ದುಡಿಯುವುದಲ್ಲದೆ, ಇತರ ಮಜೂರರೂ ಕೂಡಿದಷ್ಟು ನಿಧಾನವಾಗಿ ಔದಾಸೀನ್ಯದಿಂದಲೇ ದುಡಿಯುವಂತೆ ಮಾಡುತ್ತಾರೆ. ಆದಷ್ಟು ಕಾರಖಾನೆಯ ಸೊತ್ತುಗಳು ನಾಶವಾಗುವಂತೆ ಮಾಡುತ್ತಾರೆ. ಮಾಲೀಕನಿಗೆ ಆದಷ್ಟು ನಷ್ಟವುಂಟಾಗುವಂತೆ ಯತ್ನಿಸುತ್ತಾರೆ.

ಯಾವನಾದರೂ ಒಬ್ಬ ಮಜೂರನು ಶ್ರದ್ಧೆಯಿಂದ ಮತ್ತು ಉತ್ಸಾಹದಿಂದ ಕಷ್ಟಪಟ್ಟು ದುಡಿಯುತ್ತಾನಾದರೆ ಇತರ ಮಜೂರರು ಆತನ ಮೇಲೆ ಕಣ್ಣಿಟ್ಟು ಆತನ ಸ್ವಭಾವವನ್ನು ಬದಲಿಸಲು ಯತ್ನಿಸುತ್ತಾರೆ–ಆತನು ತನ್ನ ಸ್ವಭಾವ ಬದಲಿಸಲಿಲ್ಲವಾದರೆ, ಆತನನ್ನು ಮೂದಲಿಸುತ್ತಾರೆ–ಕಷ್ಟ ಕೊಡುತ್ತಾರೆ, ದ್ವೇಷಿಸುತ್ತಾರೆ. ಮತ್ತೆಯೂ ತನ್ನ ಕ್ರಮ ಬಿಡದೆ ಆತನು ಮುಂದರಿಸಿದನಾದರೆ, ಆತನು ಇತರ ಮಜೂರರ ಕೈಯಿಂದ ಹೊಡೆತಗಳನ್ನು ತಿಂದರೂ ಅಥವಾ ಸಾವನ್ನೇ ಅಪ್ಪಿದರೂ ಆಶ್ಚರ್ಯವಿಲ್ಲ. ಆದರೆ ಅಷ್ಟರ ಮಟ್ಟಿನ ಎದೆಗಾರಿಕೆ ಆತನಿಗೂ ಇರುವುದಿಲ್ಲ. ಸ್ವಲ್ಪ ಭಯೋತ್ಪಾದನೆಯಾದೊಡನೆಯೇ ಇತರರ ಸಾಲಿಗೇ ಆತನು ಬಂದು ನಿಂತುಬಿಡುತ್ತಾನೆ.

ಇಂತಹ ರೀತಿಯ ಈ ಮಜೂರಮನೋವೃತ್ತಿಯಿಂದ ಭಾರತದಲ್ಲಿ ತಯಾರಾಗುವ ಸೊತ್ತುಗಳು ಕೀಳ್ಮಟ್ಟದ್ದಾಗುವವು. ಅವುಗಳ ಉತ್ಪನ್ನ ವೆಚ್ಚವು ಹೊರ ದೇಶಗಳ ಉತ್ಪನ್ನದ ವೆಚ್ಚಕ್ಕಿಂತ ಹೆಚ್ಚಾಗುವುದು. ನಮ್ಮ ಸಂಯುಕ್ತ ಅಮೇರಿಕಾ ದೇಶದಲ್ಲಿ ಮಜೂರರಿಗೆ ಇಷ್ಟೊಂದು ವೇತವಿದ್ದರೂ, ನಮ್ಮ ಸರಕುಗಳಿಗೆ ಬೀಳುವ ಉತ್ಪನ್ನದ ವೆಚ್ಚಕ್ಕಿಂತಲೂ ಅಧಿಕ ಉತ್ಪನ್ನದ ವೆಚ್ಚವು ಭಾರತೀಯ ಸರಕುಗಳಿಗೆ ಬೀಳುವುದು. ಆಗಾಗ ಮುಷ್ಕರಗಳೂ ಸಂಭವಿಸಿದರೆ, ಉತ್ಪನ್ನದ ವೆಚ್ಚದ ಮೇಲೆ ಎಷ್ಟು ದುಷ್ಪರಿಣಾಮವಾಗುವುದೆಂದು ಹೇಳುವುದೇ ಬೇಡ.

ಈ ದುಸ್ಥಿತಿಯ ಪರಿಣಾಮವಾಗಿ, ಸ್ಥಾಪಿತನಾದ ಎಷ್ಟೋ ಕಾರಖಾನೆ

ಗಳು ಮುಚ್ಚಲ್ಪಡುವವು—ಅಥವಾ ಸಾಕಷ್ಟು ಲಾಭಗಳಿಸಲಾರದೆ, ಕುಂಟುತ್ತಾ ಕುರುಡುತ್ತಾ ಸಾಗುವವು. ಇದರಿಂದ ಮೊದಲಾಗಿ ಸಂಕಷ್ಟಕ್ಕೆ ಗುರಿಯಾಗುವವರೂ ಮಜೂರರೇ.

ನಿರುದ್ಯೋಗವಿರುವ ಭಾರತದಲ್ಲಿ ಧಾರಾಳ ಮಜೂರರು ಇರುತ್ತಿರಲು ಉತ್ಪನ್ನದ ವೆಚ್ಚ ಕಡಿಮೆಯಾಗಬೇಕಿತ್ತು. ಮುಷ್ಕರಗಳಿಗೆ ಆಸ್ಪದವಿರಬಾರದಿತ್ತು. ಆದರೆ ಏನೂ ಮಜೂರಬಲವಿಲ್ಲದ ಒಂದು ರಾಷ್ಟ್ರದಂತೆ ಇಲ್ಲಿ ಮುಷ್ಕರಗಳ ಹುಲುಸಾದ ಬೆಳೆ ಯಾವಾಗಲೂ ಇದ್ದೇ ತೀರುವುದು.

ಇದರ ಪರಿಣಾಮವಾಗಿ, ರಾಷ್ಟ್ರೀಯ ಉತ್ಪನ್ನವು ಕಡಿಮೆಯಾಗಿ ಭಾರತದ ಅಭಿವೃದ್ಧಿ ಹಿಂದಾಗುವುದು—ದಾರಿದ್ರ್ಯವು ಮುಂದಾಗುವುದು. ಸಮಸ್ಯೆಯು ಪರಿಹಾರವಾಗಬೇಕಾದ ಬದಲು, ಇದ್ದ ಕಾರಖಾನೆಗಳೂ ಮುಚ್ಚಲ್ಪಟ್ಟು, ನಿರುದ್ಯೋಗಿಗಳು ಇನ್ನಷ್ಟು ಹೆಚ್ಚುವರು.

ಭಾರತದಲ್ಲಿ ಕಮ್ಯುನಿಸ್ಟರ ರೋಮ್ ಎನ್ನಿಸಿದ ಕೇರಳ ಪ್ರಾಂತ್ಯದಲ್ಲಿರುವ ಕಾರಖಾನೆಗಳ ಪರಿಸ್ಥಿತಿ ಹೇಳತೀರದು. ನಿಜವಾಗಿ ಇದು ಇಡೀ ದೇಶದಲ್ಲಿ ಅತೀ ಜನನಿಬಿಡ ಪ್ರಾಂತ್ಯ. ಇಲ್ಲಿ ದಾರಿದ್ರ್ಯವು ನಕ್ಕುನಲಿದಂತೆ ಭಾರತದಲ್ಲಿ ಇನ್ನೆಲ್ಲಿಯೂ ನಲಿಯುವುದಿಲ್ಲ. ಈ ಪ್ರಾಂತ್ಯದಲ್ಲಿ ಉದ್ಯೋಗಾವಕಾಶಗಳು ಸಾಕಷ್ಟು ಇಲ್ಲದೆ, ಮಲೆಯಾಳಿಗಳು ಎಂದು ಕರೆಯಲ್ಪಡುವ ಜನರು ದೇಶದ ಬೇರೆ ಬೇರೆ ಭಾಗಕ್ಕೆ ಹೋಗಿ ನುಗ್ಗುತ್ತಾರೆ.

ಇಲ್ಲಿ ಅಕ್ಷರಸ್ಥರ ಮತ್ತು ವಿದ್ಯಾವಂತರ ಸಂಖ್ಯೆಯು ಅತ್ಯುಚ್ಚ ಮಟ್ಟದಲ್ಲಿದೆ. ಜನರು ತೀಕ್ಷ್ಣಮತಿಗಳೂ ಆಗಿದ್ದಾರೆ. ಇಲ್ಲಿಯ ನಿರುದ್ಯೋಗಿಗಳಿಗೆ ಉದ್ಯೋಗ ಕಲ್ಪಿಸಲು, ಇಲ್ಲಿ ಅನೇಕ ಉದ್ಯಮಗಳು ಸ್ಥಾಪನೆಯಾಗುವ ಆವಶ್ಯಕತೆಯಿದೆ. ಆದರೆ ಇದ್ದ ಉದ್ಯಮಗಳೇ ಮಜೂರರ ಧೋರಣೆಯಿಂದಾಗಿ ಮುಚ್ಚಲ್ಪಡುವ ಸ್ಥಿತಿಯಲ್ಲಿವೆ—ಹಲವಾರು ಈಗಾಗಲೇ ಮುಚ್ಚಲ್ಪಟ್ಟುವಂತೆ!

ಭಾರತದಲ್ಲಿ ಆರ್ಥಿಕ ಸಂಪನ್ನತೆ ಬರಲು, ಉದ್ಯಮಗಳು ವೃದ್ಧಿಯಾಗಬೇಕು—ನಿರುದ್ಯೋಗ ಸಮಸ್ಯೆಯು ಬಗೆಹರಿಸಲ್ಪಟ್ಟು ಮಜೂರರಿಗೆ ಉತ್ತಮ ಉದ್ಯೋಗ ದೊರೆತು, ಅವರ ಆರ್ಥಿಕ ಪರಿಸ್ಥಿತಿ ಉತ್ತಮವಾಗಲೂ ಉದ್ಯಮಗಳು ವೃದ್ಧಿಯಾಗಬೇಕು. ನಿಜವಾಗಿ, ಮಜೂರರ ಹಿತವನ್ನು ಬಯಸುವುದಿದ್ದರೆ, ಈ ಪ್ರಾಂತ್ಯದಲ್ಲಿ ಬಹಳ ಉದ್ಯಮಗಳು ಸ್ಥಾಪಿತವಾಗುವಂತೆ ಕಮ್ಯುನಿಸ್ಟ್ ಪಕ್ಷ ಮಾಡಬೇಕಿತ್ತು; ಟ್ರೇಡ್ ಯೂನಿಯನುಗಳೂ ಯತ್ನಿಸಬೇಕಿತ್ತು; ಮಜೂರರು ಅದಕ್ಕಾಗಿ ದುಡಿಯಬೇಕಾ

ಗಿತ್ತು. ಆದರೆ ಈ ಮೂರು ಪಂಗಡಗಳ ಪ್ರಯತ್ನದ ಫಲವಾಗಿ–ಅಂದರೆ, ಮುಷ್ಕರಗಳು, ಅನ್ಯಾಯವಾದ ಕಾರ್ಯಗಳು ಇವುಗಳ ಪರಿಣಾಮವಾಗಿ, ಹೊಸ ಉದ್ಯಮಗಾರರು ಇಲ್ಲಿ ಭಂಡವಾಳ ತೊಡಗಿಸಲು ಥರ ಥರ ನಡುಗುತ್ತಾರೆ. ಉದ್ಯಮಗಳನ್ನು ಸ್ಥಾಪಿಸಿದವರೂ ತಮ್ಮ ಕಾರ್ಯಾಗಾರಗಳನ್ನು ಮುಚ್ಚುತ್ತಾರೆ, ಇಲ್ಲವೇ ಮುಚ್ಚುವ ಯೋಜನೆ ಮಾಡುತ್ತಿದ್ದಾರೆ.

ಇದು ಯಾವ ರೀತಿಯ ಕ್ರೂರ ವಿಡಂಬನೆಯೆಂಬುದು ನನಗೇ ಅರ್ಥವಾಗುವುದಿಲ್ಲ.

ನಾನು ಕೇರಳವನ್ನು ಇತ್ತೀಚೆಗೆ ಎರಡು ಸಲ ಸುತ್ತಿದೆ. ಎರಡನೆಯ ಸಲ ನನ್ನ ಮದ್ರಾಸಿನ ಮಿತ್ರರಾದ ವೆಂಕಟ್ರಾಮನ್ ಮತ್ತು ಜಯನಾಥರೊಂದಿಗೆ ಪ್ರಯಾಣ ಬೆಳೆಸಿದ್ದೆ. ಈ ಪ್ರಯಾಣದ ವೇಳೆ ಜಯನಾಥರ ಒಬ್ಬರು ಮಲೆಯಾಳೀ ಮಿತ್ರರು–ಶಂಕರನ್ ನಾಯರ್ ಎಂಬವರು ಜತೆಯಲ್ಲಿದ್ದರು. ಅವರು ಒಬ್ಬರು ವಕೀಲರಂತೆ. ದ್ವಿಭಾಷಿಗಳಾಗಿ ಅವರು ನನಗೆ ಸಹಾಯ ಮಾಡುತ್ತಿದ್ದರು.

ಹೀಗೆ ಈ ದ್ವಿಭಾಷಿಗಳ ಸಹಾಯದಿಂದ ಇಲ್ಲಿಯ ಮಜೂರ ವರ್ಗದವರನ್ನೂ, ಉದ್ಯಮಗಳ ಮಾಲಿಕರನ್ನೂ ಕೃಷಿಕರನ್ನೂ ಭೂಮಾಲಿಕರನ್ನೂ ರಾಜಕೀಯ ಧುರೀಣರನ್ನೂ [ಕಮ್ಯುನಿಸ್ಟರನ್ನೂ ಕೂಡಾ] ಕಂಡು ಮಾತನಾಡಿದ್ದೇನೆ.

ಅನೇಕ ದುಃಖದಾಯಕ ಪ್ರಸಂಗಗಳು ನನ್ನ ವರದಿಗೆ ಸೇರಿವೆಯಾದರೂ ಆ ಪೈಕಿ, ನನ್ನ ಮನಸ್ಸಿನ ಮೇಲೆ ಬಹಳ ಪರಿಣಾಮವನ್ನುಂಟುಮಾಡಿದ ಎರಡು ಘಟನೆಗಳನ್ನು ನಿನ್ನ ಮುಂದಿಡುತ್ತೇನೆ.

ಯಥಾರ್ಥವಾಗಿ ಇದು ಕೇರಳಕ್ಕೆ ಮಾತ್ರವೇ ಸೀಮಿತವಾಗಿರುವ ಸಮಸ್ಯೆಯಲ್ಲ. ಇಡೀ ಭಾರತದಲ್ಲಿ ನಾನು ಸಂಚರಿಸಿದಾಗ ಎಲ್ಲೆಲ್ಲಿಯೂ ಇದೇ ಸಮಸ್ಯೆಯಿರುವುದನ್ನು ಕಂಡುಕೊಂಡಿದ್ದೇನೆ.

ನಾನು ರೈಲಿನಲ್ಲಿ ಎರ್ನಾಕುಳಮ್ ಎಂಬ ನಗರದಿಂದ ಕೇರಳದ ರಾಜಧಾನಿಯಾದ ಟ್ರಿವಾಂಡ್ರಮ್‌ಗೆ ಬಂದೆ. ರೈಲಿಳಿದು ಪ್ಲೇಟ್‌ಫೋರ್ಮಿನಲ್ಲಿ ಹೋಗುತ್ತಿರುವ ವೇಳೆ, ಒಂದು ಸಿಮೆಂಟಿನ ಸೀಟಿನಲ್ಲಿ ಒಬ್ಬ ಯುವಕನು ಕುಳಿತದ್ದು ಕಂಡಿತು. ಆತನ ಕೈ ಮತ್ತು ಕಾಲುಗಳಿಗೆ ಪ್ಲೇಸ್ಟರ್ ಆಫ್ ಪೇರಿಸ್ ಹಾಕಿತ್ತು. ತಲೆಗೂ ಒಂದು ಬೇಂಡೇಜು ಮಾಡಲ್ಪಟ್ಟಿತ್ತು. ಅರ್ಧ

ರಿಂದಲೇ ಆತನು ನನ್ನ ಲಕ್ಷ್ಯವನ್ನು ಸೆಳೆದನು.

ನಮ್ಮ ಶಂಕರನ್ ನಾಯರ್‌ರ ಬೆಂಬಲದಿಂದ ಅವನ ವಿಚಾರವನ್ನು ಕೂಲಂಕಷವಾಗಿ ತಿಳಿದುಕೊಂಡೆ. ಆತನು ಕೇರಳದ ಒಂದು ಟಯರ್ ಕಾರಖಾನೆಯಲ್ಲಿ ಒಬ್ಬ ಮಜೂರನಂತೆ. ಆತನ ವೇತನವನ್ನು ವಿಚಾರಿಸಿದಾಗ ಭಾರತದ ಪ್ರಸಕ್ತ ಸ್ಥಿತಿಗತಿಯಲ್ಲಿಇತರ ಮಜೂರರಿಗೆ ಸಿಗುವ ವೇತನಕ್ಕಿಂತಲೂ ಜಾಸ್ತಿಯಾಗಿಯೇ ಆತನಿಗೂ ಆತನ ಸಹೋದ್ಯೋಗೀ ಮಜೂರರಿಗೂ ಸಿಗುತ್ತಿದೆ.

ಆದರೂ ಕೂಡಾ ಮಜೂರರು ಮಾಲಿಕರನ್ನು ಸಂಶಯ, ದ್ವೇಷಗಳಿಂದ ಕಾಣುತ್ತ ಕೆಲಸವನ್ನು ಅಶ್ರದ್ಧೆ, ಔದಾಸೀನ್ಯಗಳಿಂದ ಸಾಗಿಸುತ್ತಿದ್ದರು. ಆದರೆ ಈ ಯುವಕ–ಗೋಪಾಲನ್ ಎಂಬುದಾಗಿ ಆತನ ಹೆಸರು ಎಂಬುದು ನನ್ನ ನೆನಪು–ಶ್ರದ್ಧೆಯಿಂದ ಮತ್ತು ಉತ್ಸಾಹದಿಂದ ದುಡಿಯುತ್ತಿದ್ದ. ಮೊದ ಮೊದಲು ಈತನ ದುಡಿತಕ್ಕಾಗಿ ಇತರ ಮಜೂರರು ಈತನ ಮೇಲೆ ವಕ್ರದೃಷ್ಟಿ ಬೀರ ತೊಡಗಿದರು. ಇವನಿಗದು ಅರ್ಥವಾಗಲಿಲ್ಲ. ಕಡೆಗೆ ಆತನನ್ನು ಮೂದಲಿಸಿ, ಮಾತನಾಡತೊಡಗಿದರು. "ಮಾಲಿಕರ ಕಿಸೆಯೊಳಗೆ ಬಿದ್ದಾನೆ", "ಮಾಲಿಕರ ಮಗಳನ್ನು ಇವನಿಗೇ ಮದುವೆ ಮಾಡಿಕೊಡುತ್ತಾರಂತೆ" ಎಂಬಿತ್ಯಾದಿಯಾಗಿ ಗೇಲಿಮಾಡಲು ತೊಡಗಿದರು. ಈಗ ಯಾತಕ್ಕಾಗಿ ಅವರು ತನ್ನನ್ನು ಮೂದಲಿಸುವರು ಎಂಬುದು ಆತನಿಗೆ ತಿಳಿದರೂ, ಆತನು ತನ್ನ ಕ್ರಮವನ್ನು ಬದಲಿಸಿಕೊಳ್ಳಲಿಲ್ಲ. ಒಂದೇ ಸವನೆ ಹಾಗೆಯೇ ದುಡಿಯ ತೊಡಗಿದನು. ಮಜೂರರಿಗೆ ಆತನ ಮೇಲೆ ದ್ವೇಷ ಬಲವಾಯಿತು.

ಕಡೆಗೆ ಮಜೂರರ ಮುಖಂಡರು ಒಂದು ದಿನ ದಾರಿಯಲ್ಲಿ ಆತನನ್ನು ಸ್ಪಷ್ಟವಾಗಿ ಎಚ್ಚರಿಸಿದರು. "ಕಷ್ಟಪಟ್ಟು ದುಡಿದು ಮಾಲಿಕನಿಗೇಕೆ ಲಾಭ ಬರುವಂತೆ ಮಾಡುವುದು? ನಿಧಾನವಾಗಿ ಕೆಲಸ ಮಾಡಬಾರದೆ? ನೀನೊಬ್ಬ ಹಾಗೆ ಭೂತದಂತೆ ಕೆಲಸ ಮಾಡಿಬಿಟ್ಟರೆ, ನಮ್ಮ ಮೇಲೆ ಮಾಲಿಕರಿಗೆ ಕೆಟ್ಟ ದೃಷ್ಟಿ ಬೀಳುವುದಿಲ್ಲವೇ?........" ಹೀಗೆಯೇ ಏನೇನೋ ಅವರು ಹೇಳಿದರು. ಯುವಕನು ಅದಕ್ಕೆ ಹೀಗೆ ಉತ್ತರವಿತ್ತ "ಮಾಲಿಕನಿಂದ ನಾನು ವೇತನ ಪಡೆಯುತ್ತಿರುವಾಗ ಶ್ರದ್ಧೆಯಿಂದ ನನಗೆ ಶಕ್ತಿಯಿರುವಷ್ಟು ದುಡಿಯಬೇಕಾದ್ದು ನನ್ನ ಕರ್ತವ್ಯ. ಅದನ್ನು ತಡೆಯಲು ನೀವೇಕೆ ಬರುವುದು? ಯಥಾರ್ಥವಾಗಿ ನೀವೂ ಹಾಗೆಯೇ ದುಡಿಯಬೇಕಲ್ಲ?

ಇದನ್ನು ಕೇಳಿ ಆ ಮಜೂರ ಮುಖಂಡರು ರೊಚ್ಚಿಗೆದ್ದರು. "ಎರಡು ದಿನಗಳೊಳಗೆ ನಿನ್ನ ಕ್ರಮ ಬದಲಿಸಿಕೊಂಡೆಯೆಂದರೆ ಸರಿ; ಇಲ್ಲವಾದರೆ ನಿನ್ನ ಜೀವ ಉಳಿಯಲಾರದು, ಜಾಗ್ರತೆ!"

ಗೋಪಾಲನ್ ಗಾಬರಿಯಾದನು. ಮಾಲಿಕರ ಕೂಡೆ ಬಂದು ಆತನು ದೂರು ಹೇಳಿದನು. ಮಾಲಿಕರು ಪೋಲೀಸರಿಗೆ ತಿಳಿಸಿ, ಅವನಿಗೆ ಅಪಾಯ ಬಾರದಂತೆ ಮಾಡಲು ಯತ್ನಿಸಿದರು.

ಗೋಪಾಲನ್ ಹಿಂದಿನಂತೆಯೇ ಉತ್ಸಾಹದಿಂದ ದುಡಿಯತೊಡಗಿದ. ಎಲ್ಲರಿಗೂ ಅವನ ಮೇಲೆ ದ್ವೇಷದ ಉರಿ ಪುನಃ ಪ್ರಾರಂಭವಾಯಿತು. ಯಾರೂ ಆತನ ಕೂಡೆ ಮಾತನಾಡಲೊಲ್ಲರು. ಆತನಿಗೆ ಸಹಕಾರವನ್ನೇ ನೀಡಲಾರರು. ಪೂರ್ತಿ ಬಹಿಷ್ಕಾರ ಹಾಕಿದರು. ಆದರೂ ಆತನು ಗಣಿಸಲಿಲ್ಲ.

ಮಾಲಿಕರು ಆತನ ಕೆಲಸವನ್ನು ಈಕ್ಷಿಸಿ ಫೋರ್‌ಮೇನ್ ಆತನನ್ನು ಆಗಿ ನೇಮಕಮಾಡಿದರು. ಆದರೆ ಆತನು ಫೋರ್‌ಮೇನ್ ಆಗಿ ಕಾರ್ಯ ವಹಿಸಿಕೊಳ್ಳುವ ದಿನ ಬೆಳಗ್ಗೆ ಕಾರಖಾನೆಗೆ ಹೋಗುವಾಗ ದಾರಿಯಲ್ಲಿ ಇತರ ಮಜೂರರು ಆತನನ್ನು ಹೊಡೆದು ಉರುಳಿಸಿದರು. ಸಿಕ್ಕಾಬಟ್ಟೆ ಆತನಿಗೆ ಗಾಯಮಾಡಿದರು. ನಿಜವಾಗಿ ಅವರು ದ್ವೇಷದಿಂದ ಕಿಡಿ ಕಿಡಿಯಾಗಿ ಆತನನ್ನು ಕೊಲ್ಲುವುದರಲ್ಲಿದ್ದರು. ಆದರೆ ಅಷ್ಟರಲ್ಲಿ ಅದೇ ದಾರಿಯಾಗಿ ಒಂದು ಕಾರು ಬಂದ ಕಾರಣ, ಅವರೆಲ್ಲ ಭಯಪಟ್ಟು ಓಡಿದರು. ತೀವ್ರವಾಗಿ ಗಾಯ ಹೊಂದಿದ್ದ ಈತನನ್ನು ಕಾರಿನಲ್ಲಿದ್ದ ಮಹನೀಯರು ಸರಕಾರೀ ಆಸ್ಪತ್ರೆಗೆ ದಾಖಲು ಮಾಡಿದರು.

ಆಸ್ಪತ್ರೆಯಲ್ಲಿ ಆತನಿಗೆ ಸ್ಮೃತಿ ತಪ್ಪಿ ಎರಡುಮೂರು ದಿನ ಪ್ರಜ್ಞೆ ಬರಲಿಲ್ಲ. ಕಡೆಗೆ ಹದಿನೈದು ಇಪ್ಪತ್ತು ದಿನ ಆಸ್ಪತ್ರೆಯಲ್ಲಿ ನಿಂತು ಈ ದಿನ ಬಿಡುಗಡೆಯಾಗಿದ್ದನು. ಕಾಲು, ಕೈಗಳ ಎಲುಬುಗಳು ಮುರಿದಿದ್ದುವು. ತಲೆಗೂ ಪೆಟ್ಟಾಗಿತ್ತು. ಇನ್ನು ಒಂದು ತಿಂಗಳು ಕಳೆದು ಆತನು ಪುನಃ ಉದ್ಯೋಗಕ್ಕೆ ಸೇರಬೇಕಾಗಿತ್ತು. ತನ್ನ ಅವಸ್ಥೆ ಮುಂದೆ ಏನಾದೀತು ಎಂಬ ಚಿಂತೆ ಅವನಿಗಿತ್ತು. "ಇನ್ನಾದರೂ ಇತರರ ಕ್ರಮವನ್ನು ನೀನೂ ಅನುಸರಿಸ ಬೇಡವೇ?" ಎಂದು ನಾನು ಪ್ರಶ್ನಿಸಿದೆ. ಅದಕ್ಕಾತನ ಉತ್ತರ ಹೀಗೆ ಬಂತು. "ಹೇಗಾದರೂ ಒಂದುದಿನ ಸಾಯಲೇ ಬೇಕಲ್ಲಾ, ಸ್ವಾಮೀ? ನನಗೆ ಉದ್ಯೋಗ ಕೊಟ್ಟ ಯಜಮಾನರಿಗೆ ಮೋಸಮಾಡಿ ಒಂದು ದಿನ ಸಾಯುವುದಕ್ಕಿಂತ, ಪ್ರಾಮಾಣಿಕನಾಗಿದ್ದು, ಇಂದೇ ಇವರ ಕೈಯ್ಯಲ್ಲಿ ಸಾಯು

ವುದು ಲೇಸಲ್ಲವೇ? ನನ್ನ ಕ್ರಮವನ್ನು ನಾನು ಏನೇ ಬಂದರೂ ಬದಲಿಸುವು ದಿಲ್ಲ." ಇಂತಹ ಭಾರತದ ವೀರ ಪುತ್ರನನ್ನು ನೋಡಿ ನಾನು ಹೆಮ್ಮೆ ಪಡ ಬೇಕಾಯಿತು. ಅವನನ್ನು ಬಿಟ್ಟು ಕಾಲು ಕೀಳಲು ಮನಸ್ಸಾಗಲಿಲ್ಲ. ಆದರೆ ನಿರ್ವಾಹವಿಲ್ಲದೆ ಅವನನ್ನು ಬಿಟ್ಟು ತೊಲಗಿದೆ. ಮುಂದಿನ ಘಟನೆಗಳನ್ನು ನನಗೆ ಬರೆಯಬೇಕೆಂದು ನನ್ನ ವಿಳಾಸವನ್ನು ಅವನಿಗಿತ್ತು ಅವನ ವಿಳಾಸವನ್ನು ನಾನು ಪಡಕೊಂಡೆ.

ಇಂದಿಗೆ ಮೂರು ತಿಂಗಳುಗಳು ಸಂದು ಹೋದುವು. ಅವನಿಗೆ ನಾ ಲ್ಕೈದು ಪತ್ರ ಬರೆದಾಗಲೂ ಉತ್ತರವಿಲ್ಲದೆ, ಆ ಕಾರ್ಖಾನೆಯ ಮಾಲಿಕರಿಗೇ ಒಂದು ಪತ್ರ ಬರೆದೆ. ಅದಕ್ಕವರ ಉತ್ತರ ಬಂತು–"ಕಮ್ಯುನಿಸ್ಟ್ ಮಜೂರರು ಒಟ್ಟಾಗಿ ಒಂದು ತಿಂಗಳಿನ ಹಿಂದೆ ಆತನನ್ನು ಖೂನಿ ಮಾಡಿದರು ಎಂದು ತಿಳಿ ಸಲು ತೀವ್ರವಾಗಿ ವಿಷಾದ ಪಡುತ್ತೇನೆ." ರಾಷ್ಟ್ರದ ಒಬ್ಬ ವೀರ ಪುತ್ರನು ಹೀಗೆ ಅಸಹಾಯಕನಾಗಿ ಸಾವನ್ನಪ್ಪುವಂತಾಯಿತು. ಇದರಿಂದ ಪ್ರಾಮಾಣಿಕ ವಾಗಿ ದುಡಿಯಬೇಕೆನ್ನುವ ಮಜೂರರು ಯಾರಾದರೂ ಆ ಕಾರಖಾನೆಯಲ್ಲಿ ದ್ದರೂ, ಅವರ ರಕ್ತವು ಭಯದಿಂದ, ಹೆಪ್ಪುಗಟ್ಟುವುದರಲ್ಲಿ ಸಂದೇಹವಿಲ್ಲ. ಇಂತಹ ಎಷ್ಟು ಜನ ಗೋಪಾಲನ್‌ರು ಭಾರತದಲ್ಲಿ ಹೀಗೆಯೇ ಮಣ್ಣುಪಾಲಾ ಗುತ್ತಾರೋ ಯಾರಿಗೆ ಗೊತ್ತು?

ಟ್ರಿವೆಂಡ್ರಮ್‌ನಿಂದ ನಾನು ಕೊಚ್ಚಿಗೆ ಬಂದು ಅಲ್ಲಿಯ ನೌಕಾವಿಭಾಗದ ಸ್ಥಾವರಗಳನ್ನೂ ಬಂದರವನ್ನೂ ಸ್ಥೂಲವಾಗಿ ವೀಕ್ಷಿಸಿ ಹಿಂದೆರಳುವುದಕ್ಕಾಗಿ, ಕೊಚ್ಚಿಯ ವಿಮಾನ ನಿಲ್ದಾಣಕ್ಕೆ ಟೇಕ್ಸಿಯೊಂದರಲ್ಲಿ ನನ್ನ ಬಳಗದವರೊಂದಿಗೆ ಹೋಗುತ್ತಿದ್ದೆ. ದಾರಿಯಲ್ಲಿ ಒಂದು ಕಾಲಿನ ನಡುಪ್ರಾಯದ ಭಿಕ್ಷುಕನೊ ಬ್ಬನು ಭಿಕ್ಷೆಯೆತ್ತುತ್ತಾ ನಡೆಯುವುದು ಕಂಡುಬಂತು. ಒಂದು ಘಂಟೆಯ ಸಾವ ಕಾಶ ನನಗಿದ್ದುದರಿಂದ, ಟೇಕ್ಸಿ ನಿಲ್ಲಿಸಿ, ಅವನ ಬಗಲಿಗೆ ನಾಲ್ಕಾ ಣೆಯ ಒಂದು ನಾಣ್ಯವನ್ನು ಹಾಕಿ, ಅವನ ಕುರಿತಾಗಿ ವಿಚಾರಿಸತೊಡಗಿದೆ.

ಅವನೊಬ್ಬ ತೆಂಗಿನ ನಾರಿನ ಕಾರಖಾನೆಯೊಂದರಲ್ಲಿ ಮಜೂರನಾಗಿದ್ದ ನಂತೆ ಎಲಿಪ್ಪಿ ಎಂಬಲ್ಲಿ. ಒಂದು ದಿನ ನ್ಯಾಯವಾದ ಕಾರಣವೇನೂ ಇಲ್ಲದೆ, ಕಮ್ಯುನಿಸ್ಟರ ಮುಖಂಡತ್ವದಲ್ಲಿ ಕಾರಖಾನೆಯಲ್ಲಿ ಮುಷ್ಕರ ಪ್ರಾರಂಭವಾ ಯಿತು. ಮುಷ್ಕರಕ್ಕೆ ಕಾರಣವೇನೂ ಆತನಿಗೆ ಕಾಣದಿದ್ದರೂ, ಇತರರ ಭೆಯದಿಂದ ಆತನೂ ಮುಷ್ಕರಕ್ಕೆ ಸೇರಲು ಉದ್ಯುಕ್ತನಾದನು.

ಆದರೆ ಆತನ ಪತ್ನಿ ಮನೆಯಲ್ಲಿ ಹಡೆದು ಅಸೌಖ್ಯದಿಂದ ಮಲಗಿದ್ದಳು. ಮೇಲಾಗಿ ಆತನ ತಾಯಿಗೂ ಅಸೌಖ್ಯ. ಮುಷ್ಕರ ನಡೆದಾಗ, ಊಟಕ್ಕೆ ತಕ್ಕಷ್ಟು ಅಕ್ಕಿ ಸಿಗುವ ವ್ಯವಸ್ಥೆಯನ್ನು ಮುಷ್ಕರದ ಮುಂದಾಳುಗಳು ಮಾಡಿದ್ದರೂ, ಔಷಧಿಗೆ ಬೇಕಾದ ನಗದಿ ಹಣ ಸಿಗುವಂತಿರಲಿಲ್ಲ. ಕೇಳಪ್ಪನ್ ಎಂಬ ಈ ಮಜೂರನು, ಮುಷ್ಕರದ ಮುಖಂಡರ ಕೂಡೆ ತನ್ನ ಪರಿಸ್ಥಿತಿ ನಿವೇದಿಸಿ, ತನಗೆ ಹೆಂಡತಿಯ ಜೀವವುಳಿಸಲು ಸಾಲ ಕೊಡಬೇಕೆಂದು ಕೇಳಿದನಂತೆ. ನಕಾರಾತ್ಮಕ ಉತ್ತರ ಬಂತು. ಹಾಗಿದ್ದರೆ ನಾನು ದುಡ್ಡಿಗಾಗಿಯಾದರೂ ಕಾರ್ಖಾನೆಗೆ ಕೆಲಸಕ್ಕೆ ಹೋಗಲೇ ಬೇಕಾಗುವುದೆಂದೂ, ಇಲ್ಲವಾದರೆ ತನ್ನ ಪತ್ನಿಯ ಚಿಕಿತ್ಸೆಗೂ ಆಸ್ಪದವಿಲ್ಲವೆಂದು ಆತ ಬಿನ್ನವಿಸಿಕೊಂಡ.

ಆದಕ್ಕವರ ಉತ್ತರ ಹೀಗೆ ಬಂತು "ನಿನ್ನ ಹೆಂಡತಿಯನ್ನು ಏನು ಬೇಕಾದರೂ ಮಾಡು. ಮುಷ್ಕರದಲ್ಲಿ ಭಾಗವಹಿಸಲೇ ಬೇಕು–ಕೆಲಸಕ್ಕೆ ಹೋಗಲೇ ಬಾರದು. ನಮ್ಮ ಮಾತು ಮೀರಿ ಕೆಲಸಕ್ಕೆ ಹೋದೆಯೆಂದರೆ ನಿನ್ನ ಹೆಂಡತಿಯನ್ನು ನೀನು ವಿಧವೆಯಾಗಿ ಮಾಡಲು ಸಿದ್ಧತೆ ಮಾಡುತ್ತಿದ್ದೀ ಎಂದರ್ಥ; ಜೋಕೆ!"

ಇತರ ಮಜೂರರೆಲ್ಲ ಕಾರ್ಖಾನೆಯ ಎದುರು ಪಿಕೆಟಿಂಗ್ ಹೂಡಿದ್ದಂತೆಯೇ, ಕೇಳಪ್ಪನ್ ಕೆಲಸಕ್ಕೆ ಸೇರಲು ಮುಂದೆ ಸಾಗಿದನು. ಇತರ ಮಜೂರರು ಆತನನ್ನು ಎಚ್ಚರಿಸಿದರು. ಹಿಡಿದು ಜಗ್ಗಿದರು. ಆದರೆ ಆತನ ಪತ್ನಿ ತೀವ್ರ ಕಾಯಿಲೆಯಲ್ಲಿ ಮಲಗಿದ್ದಳು. ಅವಳ ಕರುಣಾಜನಕ ಸ್ಥಿತಿ ನೋಡಿ, ಆತನು ಸಂಪಾದನೆಗಾಗಿಯೇ ಆದರೂ ಕಾರಖಾನೆಗೆ ಹೋಗಲೇ ಬೇಕಾಗಿತ್ತು. ಹಾಗೆ ಆತನು ಮುಂದೆ ಹೋಗತೊಡಗಿದನು. ಆಗ ಕೆಲವು ಪೋಲಿ ಮಜೂರರು ಆತನನ್ನು ಹೊಡೆದುರುಳಿಸಿದರು. ಕತ್ತಿಯಿಂದ ಕಾಲಿಗೆ ಕಡಿದರು.

ಆತನು ಆಸ್ಪತ್ರೆಗೆ ಸೇರಿಸಲ್ಪಟ್ಟನು. ಒಂದು ಕಾಲನ್ನು ತೊಡೆಯಿಂದಲೇ ತುಂಡು ಮಾಡಬೇಕಾಯಿತು. ಆಸ್ಪತ್ರೆಯಿಂದ ಬಿಡುಗಡೆಯಾದಾಗ, ಆ ಎಳೆಯ ಕೂಸನ್ನು ಆತನ ಅಸಹಾಯಕ ಮಡಿಲಲ್ಲಿ ಹಾಕಿ ಆಕೆ ಗತಿಸಿಹೋದಳೆಂದೂ, ಆತನು ದುಡಿಯುತ್ತಿದ್ದ ತೆಂಗಿನ ನಾರಿನ ಕಾರ್ಖಾನೆಯು ಮುಚ್ಚಲ್ಪಟ್ಟು ಸಾವಿರಾರು ಕೆಲಸಗಾರರು ನಿರುದ್ಯೋಗಿಗಳಾಗಿ ಬೀದಿಯಲ್ಲಿ ಅಲೆದಾಡುತ್ತಿದ್ದಾರೆಂದೂ ಆತನು ತಿಳಿದುಕೊಂಡನು.

ಈಗ ಆತನು ನಿರ್ಗತಿಕನು–ಭಿಕ್ಷಾಟನೆಗೆ ತೊಡಗಿದ್ದಾನೆ. ಕಮ್ಯುನಿಸ್ಟರು

ಅವನ ಸಹಾಯಕ್ಕೂ ಬರಲಿಲ್ಲ. ಉದ್ಯೋಗ ಕಳಕೊಂಡ ಸಾವಿರಾರು ಮಜೂ
ರರ ಸಹಾಯಕ್ಕೂ ಬರಲಿಲ್ಲ.

ಕಾರ್ಖಾನೆಯ ಮಾಲೀಕರು ಸಿಲೋನ್‌ನ ಒಬ್ಬ ಶ್ರೀಮಂತನಿಗೆ ಇಡಿಯ
ಕಾರ್ಖಾನೆಯನ್ನೂ, ಯಂತ್ರಗಳನ್ನೂ, ಮಾರಾಟ ಮಾಡಿ, ಕೈಕಟ್ಟಿ ಕುಳಿತಿ
ದ್ದಾರೆ. ಕಾರ್ಖಾನೆಯ ಹೊಸ ಒಡೆಯನು, ಇಡೀ ಸ್ಥಾವರವನ್ನೇ ಬಿಚ್ಚಿ
ಆತನಿಗೆ ಭದ್ರತೆಯಿರುವ ಯಾವುದೋ ಪ್ರಾಂತ್ಯಕ್ಕೋ ಇಲ್ಲವೆ ಸಿಲೋನಿಗೋ
ಸಾಗಿಸುತ್ತಿದ್ದಾನೆ.

ಸಿಲ್ವರ್, ಕೇಳಪ್ಪನ್‌ನ ಕತೆ ಕೇಳಿದಂತೆಯೇ ಇಡಿಯ ಭಾರತದ ಆರ್ಥಿಕ
ಸಮಸ್ಯೆಯು, ಉದ್ಯಮದ ಅವನತಿಯು ಕರುಣಕತೆ ಕಣ್ಣಿಗೆ ಕಟ್ಟಿತು. ಆದರೆ
ಮಾಡಬೇಕೇನು? ಇತರ ಮಿಲಿಯಗಟ್ಟಲೆ ಭಿಕ್ಷುಕರಂತೆಯೇ ಕೇಳಪ್ಪನ್‌ನನ್ನೂ
ಭಿಕ್ಷೆ ಬೇಡಲು ಬಿಟ್ಟುಬಿಟ್ಟು ಹೃದಯವನ್ನು ಕ್ರೂರವಾಗಿ ಮಾಡಿಕೊಂಡು,
ನಾನು ಮದ್ರಾಸಿಗೆ ಬಂದು ತಲಪಿದೆ.

ಸಿಲ್ವರ್, ಕೇರಳದಲ್ಲಿ ಮಾತ್ರವೇ ಹೀಗೆ ಎಂದು ತಿಳಿಯ ಬೇಡ. ಭಾರ
ತದಾದ್ಯಂತ ಎಲ್ಲ ಉದ್ಯಮಗಳಲ್ಲೂ ಇಂತಹ ಪರಿಸ್ಥಿತಿಗಳು ಆಗಿಂದಾಗ ಬರು
ತ್ತಲೇ ಇವೆ. ಇಲ್ಲವಾದರೆ ಕಮ್ಯುನಿಸ್ಟರಿಗೆ ಬೇರೆ ಉದ್ಯೋಗವಾದರೂ
ಏನು?

ಹಾಗಿದ್ದರೆ ಭಾರತದ ಆರ್ಥಿಕ ಉನ್ನತಿಯ ದಾರಿ ಹೇಗೆ? ಯಾರೇ ಆ
ದರೂ ಇದನ್ನು ಉತ್ತರಿಸಲು ಬಹಳ ಕಷ್ಟವಿದೆ. ಜನಮನವನ್ನು ರೂಪಿಸಬಲ್ಲ,
ಜನಪ್ರಿಯವಾದ ಒಂದು ಬೃಹತ್ ಸಂಸ್ಥೆಯ ಕಾರ್ಯಕ್ರಮವಾಗಿ, ಸಮಾಜದ
ಮಜೂರರ ಹಾಗೂ ಶ್ರೀಮಂತರ ಮನಸ್ಸನ್ನೇ ಬದಲಿಸದ ವಿನಹ ಭಾರತಕ್ಕೆ
ವಿಮೋಚನೆಯಿಲ್ಲ–ಖಂಡಿತ. ಏಕೆಂದರೆ ಇದೆಲ್ಲ ಸರಕಾರದಿಂದ ಆಗುವ ಕೆಲ
ಸವಲ್ಲ.

ಆದರೆ ಅಮೇರಿಕಾ ದೇಶದಂತೆ ಕಮ್ಯುನಿಸ್ಟ್ ಪಕ್ಷವನ್ನೇ ನ್ಯಾಯಬಾಹಿ
ರವೆಂದು ಸರಕಾರವು ಸಾರಿದರೆ ಪರಿಸ್ಥಿತಿಯು ಬಹಳ ಮಟ್ಟಿಗೆ ಸುಧಾರಿಸ
ಬಹುದು. ಹಾಗಾದರೂ ಕೂಡಾ, ಕೆಡಿಸಲ್ಪಟ್ಟ ಮಜೂರರ ಮನವನ್ನು,
ಶಾಂತಿ, ಪ್ರೇಮ, ಸೌಹಾರ್ದತೆಗಳ ಸ್ಥಿತಿಗೆ ತಾರದೆ ಯಾವುದೂ ಶಾಶ್ವತ
ಸತ್ಪರಿಣಾಮವನ್ನುಂಟುಮಾಡುವಂತಿಲ್ಲ. ಆ ಕಾರ್ಯವಾದರೊ ಬೃಹತ್,
ಹಾಗೂ ಜನಪ್ರಿಯ ಸಂಘ ಸಂಸ್ಥೆಗಳಿಂದಾಗತಕ್ಕ ಕಾರ್ಯ. ಅಂತಹ ಸಂಸ್ಥೆ

ಯನ್ನು ಸ್ಥಾಪಿಸುವವರು ಯಾರೋ? ಇದೆಲ್ಲಾ ನಡೆಸುವವರು ಯಾರೋ? ಭಾರತದ ಭವಿಷ್ಯತ್ತು ಮಾತ್ರವೇ ಉತ್ತರಿಸಬಲ್ಲ ಪ್ರಶ್ನೆಗಳು.

ನೋಡು, ಸಿಲ್ವರ್, ನಿದ್ದೆಯಿಂದ ಕಣ್ಣು ಮುಸುಕಾಗುತ್ತಿದೆ. ಈ ದಿನ ಇಲ್ಲಿಗೇ ನಿಲ್ಲಿಸಲೇ?

ನಾನು ಸಂದರ್ಶಿಸಿದ ಭಾರತದ ವಿವಿಧ ಸ್ಥಳಗಳ, ವಿವಿಧ ವ್ಯಕ್ತಿಗಳ ಭಾವಚಿತ್ರಗಳನ್ನೊಳಗೊಂಡ ಒಂದು ದೊಡ್ಡ ಚಿತ್ರ ಸಂಗ್ರಹ ತಯಾರಿಸಿದ್ದೇನೆ. ನಿನ್ನ ಮತ್ತು ಕೇಸ್ಸಿಯ ವೀಕ್ಷಣೆಗಾಗಿ ಅದನ್ನು ಬೇಗನೇ ನಿನಗೆ ಕಳುಹಿಸಿ ಕೊಡುತ್ತೇನೆ.

ಆದರೆ, ಮಿತ್ರಾ, ನೀನು ಅದನ್ನು ಜಾಗ್ರತೆಯಾಗಿಟ್ಟುಕೊಂಡು, ಮರಳಿ ನನಗೆ ಕೊಡಬೇಕಾಗಿದೆ. ಏತಕ್ಕೆಂದರೆ ನನ್ನ ಕೂಡೆ ಬೇರೆ ಪ್ರತಿಗಳಿಲ್ಲ. ನನ್ನ ವರದಿಗಳಿಗೆ, ಈ ಭಾವ ಚಿತ್ರಗಳು ಪುಷ್ಟೀಕಾರ ಕೊಡಬಹುದು.

ಕೇಸ್ಸಿಯು ಮತ್ತು ನಿನ್ನ ಚಿಕ್ಕ ಮಗುವಿನ ನೆನಪಾಗುತ್ತಿದೆ. ಅವರಿಗೆ ನನ್ನ ಪ್ರೇಮದ, ಕಣ್ಣಿಗೆ ಕಾಣದ ದೊಡ್ಡ ಗಂಟನ್ನೇ ಕೊಟ್ಟುಬಿಡು, ಗೆಳೆಯಾ. ನೀನಂತೂ ನನ್ನ ಭಾಗವೇ ಆಗಿರುವೆ. ಆದ್ದರಿಂದ ನಿನಗೆ ನನ್ನ ಪ್ರೇಮವ ನ್ನೇನೆಂದು, ತಿಳಿಸುವುದು, ಅಲ್ಲವೇ?

ಇರಲಿ, ಹರಟೆಯನ್ನು ಇಲ್ಲಿಗೇ ನಿಲ್ಲಿಸುತ್ತೇನೆ. ಈ ಪತ್ರ ಓದಿ ನಿನ್ನ ಗಾಢ ಅಭಿಪ್ರಾಯವನ್ನೂ ಕೂಡಲೇ ತಿಳಿಸು.

ಇತಿ, ನಿನ್ನ ಆಪ್ತಮಿತ್ರ,
**ಜೋನ್ ಓರ್‌ಮನ್.**



# ೧೨

ಮದ್ರಾಸು
20–6–'62

ಪ್ರಿಯ ಸಿಲ್ವರ್,

ಗೆಳೆಯಾ, ನೀನು ಬರೆದ ಜೂನ್ 15ರ ಪತ್ರವನ್ನೋದಿದೆ. ನನ್ನ ಪತ್ರಗಳನ್ನು ಏತಕ್ಕೆ ಬೇಗ ಬೇಗನೆ ಬರೆಯುವುದಿಲ್ಲ ಎಂಬುದಾಗಿ ನೀನು ಪ್ರಶ್ನಿಸಿರುತ್ತೀ. ಒಂದೊಂದು ಸಮಸ್ಯೆಗಳ ಕುರಿತಾಗಿ ಒಂದೇ ಪತ್ರದಲ್ಲಿ ದೀರ್ಘವಾಗಿ ಬರೆದಾದರೂ ತಿಳಿಸಬಾರದೇ ಎಂದೂ ಕೇಳಿರುತ್ತೀ.

ಆದರೆ ನೋಡು, ನನ್ನ ಕೂಡೆ ಶೀಘ್ರ ಲಿಪಿಗಾರರು ಯಾರೂ ಇಲ್ಲ. ನಾನೇ ಬರೆ ಬರೆದು ದಣಿಯಬೇಕಾಗಿದೆ. ಒಂದೇ ಸವನೆ ಎಷ್ಟೊಂದು ಬರೆಯುವುದು, ನೀನೇ ಹೇಳು.

ಅಲ್ಲದೆ ಭಾರತದ ನನ್ನ ಅಧ್ಯಯನ ಇನ್ನೂ ಮುಗಿದಿಲ್ಲ—ಅದು ಸಾಗುತ್ತಲೇ ಇದೆ. ವಿವಿಧ ಬದಿಗಳಿಂದ, ವಿವಿಧ ಮುಖವಾಗಿ ಅದು ನಡೆಯುತ್ತಿದೆ. ಆದ್ದರಿಂದ ಬಹಳ ದೀರ್ಘವಾಗಿ ಒಂದೊಮ್ಮೆಗೇ ನಿನಗೆ ಬರೆಯುವುದೂ, ದೊಡ್ಡ ಸಮಸ್ಯೆಯೇ ಆಗಿದೆ.

ಇರಲಿ, ಮಿತ್ರಾ, ಭಾರತದ ಆರ್ಥಿಕ ಸ್ಥಿತಿ ಗತಿಯ ಕುರಿತು ಏನೆಲ್ಲಾ ಬರೆಯ ಬೇಕೋ ಅದನ್ನೆಲ್ಲಾ ಈ ಸಲವೇ ಬರೆದು ಮುಗಿಸಿ ಬಿಡುತ್ತೇನೆ. ನಂತರ ಭಾರತದ ಇತರ ಕುತೂಹಲಕಾರೀ ವಿಷಯಗಳ ಕುರಿತು ಬರೆಯುತ್ತೇನೆ.

ಭಾರತದಲ್ಲಿ ಆರ್ಥಿಕ ಕೊರತೆಯಿದೆ ಎಂಬುದು ಎಷ್ಟು ಸತ್ಯವೋ, ಇರುವ

ಹಣವೂ ಸರಿಯಾಗಿ ಸದುಪಯೋಗವಾಗಿ ರಾಷ್ಟ್ರೀಯ ಉತ್ಪನ್ನವನ್ನು ಹೆಚ್ಚಿಸಲು ಉಪಯೋಗವಾಗುತ್ತಿಲ್ಲ ಎಂಬುದೂ ಅಷ್ಟೇ ಸತ್ಯವಾಗಿದೆ.

ಈ ನಾಡಿನಲ್ಲಿ ನಾನು ಹಿಂದೆಯೇ ಬರೆದಂತೆ ಬಹಳ ಮಂದಿ ಶ್ರೀಮಂತರಿದ್ದಾರೆ. ಅವರ ಕೂಡೆ ಇರುವ ಧನ ಸಂಪತ್ತು ಕೂಡಾ ಏನೂ ಕಡಿಮೆ ತರಗತಿಯದ್ದಲ್ಲ. ಆದರೆ ಆ ಹಣದೊಳಗೆ ಬೆಳಕಿಗೆ ಬರುವ ಭಾಗವು ಬಹಳ ಕಡಿಮೆಯಾಗಿದೆ. ಉಳಿದುದೆಲ್ಲ ಭಾರತದ ಗುಪ್ತ ನದಿ ಸರಸ್ವತಿಯಂತೆ [ಇದು ಅದೃಶ್ಯವಾಗಿ ಭೂಮಿಯೊಳಗೆ ಹರಿಯುತ್ತಾ ಗಂಗಾ ಮತ್ತು ಯಮುನಾ ನದಿಗಳಿಗೆ ಪ್ರಯಾಗ ಎಂಬ ಸ್ಥಳದಲ್ಲಿ ಸೇರುವುದು ಎಂಬುದು ಪ್ರತೀತಿಯಾಗಿದೆ] ಗುಪ್ತಗಾಮಿನಿಯಾಗಿ ಒಳಗಿನಿಂದಲೇ ಹರಿಯುತ್ತಿದೆ. ಇದಕ್ಕೆ ಇಲ್ಲಿ ಒಂದು ಹೆಸರೂ ಇದೆ. ಅದನ್ನು ಕಪ್ಪುಹಣ [Black money]ವೆಂದು ಕರೆಯುತ್ತಾರೆ. ಈ ಕಪ್ಪು ಹಣದಲ್ಲಿಯೂ ಬಹಳ ವೈವಿಧ್ಯತೆಯಿದೆ.

ನೆಲದೊಳಗೆ, ಗವಿಯೊಳಗೆ, ಕಸದೊಳಗೆ ಹುಗಿದಿಡುವ ನಗನಾಣ್ಯಗಳಿವೆ. ಮಣ್ಣಿನ ಇಲ್ಲವೇ ತಾಮ್ರದ ಪಾತ್ರೆಗಳೊಳಗೆ ಬಚ್ಚಿಡುವ ಬೆಳ್ಳಿ ಬಂಗಾರಗಳಿವೆ. ಕಪಾಟಿನೊಳಗೆ, ತಿಜೋರಿಯೊಳಗೆ ಭದ್ರವಾಗಿಡುವ ನೋಟಿನ ಅಟ್ಟಿಗಳಿವೆ. ನೋಟು ಚೀಟುಗಳಿಲ್ಲದೆ ದೈಹಿಕ ನೋವಿನ ಭಯದಿಂದಲೇ ವಸೂಲು ಮಾಡುವ ಧೈರ್ಯದಲ್ಲಿ ಸೇಕಡಾ 15ರಿಂದ ಪ್ರಾರಂಭಿಸಿ 50–60ರ ತನಕ ದರದ ಬಡ್ಡಿಯಲ್ಲಿ ನೀಡಿದ ಗುಪ್ತ ಸಾಲಗಳಿವೆ. ಭಾರತ ಸರಕಾರದ ವಿವಿಧ ವಸ್ತುಗಳ ಬೆಲೆ ನಿಯಂತ್ರಣದ ಶಾಸನವನ್ನು ಪ್ರಚ್ಛನ್ನವಾಗಿ ವಿರೋಧಿಸಿ, ಕಳ್ಳ ಸಂತೆಯ ಬಹು ಲಾಭದಲ್ಲಿ ತೊಡಗಿಸಿದ ಧನ ರಾಶಿಯೂ ಇದೆ. ಗೆಳೆಯಾ, ಇವುಗಳೇ ಇಲ್ಲಿಯ ಕಪ್ಪು ಹಣಗಳು.

ಹಳ್ಳಿಯ ಹಳಬರು ನೆಲದೊಳಗೆ ಇಲ್ಲವೇ ಪಾತ್ರೆ ಪರಡಿಗಳೊಳಗೆ ಜೋಪಾನವಾಗಿಟ್ಟ ನಗ ನಾಣ್ಯಗಳನ್ನು ಬಿಟ್ಟರೆ, ಇತರ ರೀತಿಯ ಎಲ್ಲಾ ಕಪ್ಪು ಹಣಗಳೂ, ಕಪ್ಪು ಕಪ್ಪಾದ ಪ್ರಶ್ನಾತ್ಮಕ ವಿಧಾನಗಳಿಂದಲೇ ರೂಢಿಸಿದವುಗಳು. ಆ ಹಣವು ಒಂದು ಕುರುಡುಗತ್ತಲೆ ಗವಿಯಿಂದ ಇನ್ನೊಂದು ಕುರುಡುಗತ್ತಲೆ ಗವಿಗೆ ನೇರವಾಗಿ ಸದ್ದಿಲ್ಲದೆ ಹರಿಯುತ್ತದೆ. ತಲೆಹೊಡೆದು ಮಾಡಿದ ದುಡ್ಡಿದೆ. ದರೋಡೆಯಿಂದ ಪಡೆದ ಧನವಿದೆ; ನಮ್ಮ ದೇಶದ ಶ್ರೀಮಂತರಂತೆ ವಿವಿಧ ರೀತಿಯ ಜುಗಾರಿಗಳಲ್ಲಿ ಪಡೆದ ಹಣವಿದೆ; ಕಂಪೆನಿಗಳನ್ನು ಮುಳುಗಿಸಿ, ಬೇಂಕುಗಳನ್ನು ತೇಲಿಸಿ ಪಡೆದ ಹಣವಿದೆ: ಲಂಚಗುಳಿ

ತನದಿಂದ ಬಂದ ರೊಕ್ಕವಿದೆ. ವ್ಯಭಿಚಾರದಿಂದ ದೊರೆತ ಹೇರಳ ದ್ರವ್ಯವೂ ಇದೆ. ಇತರರಿಗೆ ಅತ್ಯಾಧುನಿಕ ವಿಧಾನಗಳಿಂದ ಮೋಸ ಮಾಡಿ ಸಂಚಯಿಸಿದ ವಿಪುಲ ಸಂಪತ್ತಿಯೂ ಇದೆ. ಬಹಳ ಪುರಾತನ ದೇವಾಲಯಗಳಿಂದ ಎತ್ತಿ ಹಾಕಿದ ವಜ್ರ ವೈಢೂರ್ಯಗಳೂ ಮುತ್ತು ರತ್ನಾದಿಗಳೂ, ನಗ ನಾಣ್ಯಗಳೂ ಇವೆ. ಹೈದರಾಬಾದಿನ ನಿಜಾಮರ ಭಂಡಾರದಂತೆ ನೋಡಲು ಮಾತ್ರವೇ ಇರುವ ದ್ರವ್ಯರಾಶಿಯೂ ಇದೆ.

ಹೀಗೆ ದಟ್ಟ ದಾರಿದ್ರ್ಯದ ಕೋಲಾಹಲದೆಡೆಯಲ್ಲಿ ತಲೆ ಮರೆಯಿಸಿ, ಮೆರೆಯುವ ಈ ಕಪ್ಪು ದ್ರವ್ಯವು ಈ ಕರಾಳ ಧನರಾಶಿಯು ರಾಷ್ಟ್ರದ, ನಿಜವಾದ ಸಂಪನ್ಮೂಲಗಳನ್ನು ಬೆಳೆಸಲು ಬಹಳ ಮಟ್ಟಿಗೆ ಉಪಯೋಗವಾಗುವುದಿಲ್ಲ.

ಮಾನವನ ಬುದ್ಧಿಮತ್ತೆ, ಆಡಳಿತ ಮತ್ತು ಸಂಘಟನಾ ಸಾಮರ್ಥ್ಯ, ವಿಜ್ಞಾನ, ಯಂತ್ರ ಶಾಸ್ತ್ರ, ಇವೆಲ್ಲವುಗಳ ಮೇಳದಿಂದ, ಪ್ರಾಮಾಣಿಕ ವಿಧಾನದಿಂದ ಕಸದಿಂದ ರಸವುಂಟುಮಾಡುವ ಅಂದರೆ ನಿರುಪಯುಕ್ತ ಕಚ್ಚಾ ಮಾಲಿನಿಂದ ಅತ್ಯುಪಯುಕ್ತ ಸಿದ್ಧ ವಸ್ತುಗಳನ್ನು ತಯಾರಿಸಿ ಸಂಪತ್ತನ್ನೇ ಸೃಷ್ಟಿಸುವ ಉದ್ಯಮಗಳಲ್ಲಿ ಭಂಡವಲ ಹಾಕುವವರು ಭಾರತದಲ್ಲಿ ಬಹಳ ಕಡಿಮೆ ಮಂದಿ.

ನಮ್ಮ ದೇಶದಲ್ಲಿ ಹಾಗೂ ಇತರ ಮುಂದರಿದ ಪಾಶ್ಚಾತ್ಯ ದೇಶಗಳಲ್ಲಿ ಘನ ಉದ್ದಿಮೆಗಳಲ್ಲಿ, ಲಘು ಉದ್ದಿಮೆಗಳಲ್ಲಿ, ವ್ಯಾಪಾರ ವಹಿವಾಟುಗಗಳಲ್ಲಿ, ಬೇಂಕುಗಳ ಹಣ ತೊಡಗಿಸಿ ರಾಷ್ಟ್ರದ ಸಂಪತ್ತನ್ನು ಹೆಚ್ಚಿಸಿ, ತಮ್ಮ ಐಶ್ವರ್ಯವನ್ನೂ ಹೆಚ್ಚಿಸಿಕೊಳ್ಳದವರು ಅಪರೂಪ, ಅಲ್ಲವೇ? ಒಂದು ಕಂಪೆನಿ ತೆರೆಯಲ್ಪಟ್ಟಿತೆಂದು ತಿಳಿದರೆ ಸಾಕು—ಜನ ಮೇಲೆ ಬಿದ್ದು ಅದರ ಪಾಲು ಭಂಡವಲವನ್ನು ಕೊಂಡುಕೊಳ್ಳುತ್ತಾರೆ.

ಇಲ್ಲಿ ಹಾಗಿಲ್ಲ. ತಾತಾ, ಬಿರ್ಲಾ, ದಾಲ್ಮಿಯಾ, ಮೊದಲಾದ ಸುಪ್ರಸಿದ್ಧ ಉದ್ದಿಮೆಗಾರರು [industrialist] ಕೆಲವರಿದ್ದಾರೆ. ಅಂಥವರು ಸ್ಥಾಪಿಸುವ ಯಾವುದಾದರೂ ಉದ್ಯಮಗಳಲ್ಲಿ ಜನರು ಹಣ ತೊಡಗಿಸುತ್ತಾರೆ. ಆದರೆ ಇತರ ಸಾಮಾನ್ಯ ಶ್ರೀಮಂತರು ಕಾರ್ಖಾನೆ ತೆರೆಯುವರೆಂದರೆ ಧನ ವಿನಿಯೋಗಿಸುವವರು ಇಲ್ಲಿ ಅಪರೂಪ. ಅಂತಹ ಕಾರಖಾನೆಗೆ ಭಂಡವಲ ತೊಡಗಿಸಬೇಕಿದ್ದರೆ, ವಿವಿಧ ವ್ಯಕ್ತಿಗಳನ್ನು ವ್ಯಕ್ತಿಗತವಾಗಿ ಭೇಟಿಯಾಗಿ,

ವಿವಿಧ ಆಶೆಗಳನ್ನು ತೋರಿಸಿ, ಭಂಡವಲ ನೀಡುವಂತೆ, ಕೇಳಿಕೊಳ್ಳಬೇಕಾಗುವುದು. ಬೊಂಬ್ಯಾ, ಕಲ್ಕತ್ತ, ಮೊದಲಾದ ಬೃಹತ್ ನಗರಗಳಲ್ಲಿ ಪರಿಸ್ಥಿತಿ ಬದಲಾಗುತ್ತಿದೆಯಾದರೂ ರಾಷ್ಟ್ರದ ಹಲವು ಭಾಗಗಳಲ್ಲಿ ಸ್ಥಿತಿಗತಿ ಹಿಂದಿನಂತೆಯೇ ಇದೆ; ಅಥವಾ ಹೆಚ್ಚು ಬದಲಾಗಿಲ್ಲ.

ಇದಕ್ಕೆ ಹಿಂದಿನ ಅವೈಜ್ಞಾನಿಕ ಆರ್ಥಿಕ ಸಿದ್ಧಾಂತಗಳೂ ಕೆಲವು ಮಟ್ಟಿಗೆ ಕಾರಣ. ಅಲ್ಲದೆ ಇಲ್ಲಿಯ ಔದ್ಯಮಿಕ, ಆರ್ಥಿಕ ಸಿದ್ಧಾಂತಗಳೂ ಕೆಲವು ಮಟ್ಟಿಗೆ ಕಾರಣ. ಅಲ್ಲದೆ ಇಲ್ಲಿಯ ಔದ್ಯಮಿಕ, ಆರ್ಥಿಕ ಕ್ಷೇತ್ರದಲ್ಲಿರುವ ಕೆಲವು ಬೇದಕರ ಪರಿಸ್ಥಿತಿಗಳೂ ಕಾರಣವಾಗಿವೆ.

ಹಿಂದಿನ ಪತ್ರದಲ್ಲೇ ನಾನು ಬರೆದಂತೆ, ಇಲ್ಲಿಯ ಕಮ್ಯುನಿಸ್ಟರ ಹಾವಳಿಯಿಂದ ಉಂಟಾಗುತ್ತಿರುವ ಮಜೂರ ಸಮಸ್ಯೆ ಹಾಗೂ ಅನಿಶ್ಚಿತ ವಾತಾವರಣವು ಭಂಡವಾಲ ವಿನಿಯೋಗಿಸುವ ಪ್ರವೃತ್ತಿಯನ್ನು ತಡೆಯುವ ಒಂದು ಸಾಧನವಾಗಿದೆ. ಇನ್ನೊಂದು ಬಹಳ ಸ್ವಾರಸ್ಯಕರ ಪ್ರಸಂಗವಿದೆ, ಏನು ಗೊತ್ತೆ?

ಹಲವು ಶ್ರೀಮಂತರು ಹಾಗೂ ಮಧ್ಯಮ ವರ್ಗದವರು ಮಿತಜವಾಬ್ದಾರಿಯ ಕಾರ್ಖಾನೆಗಳನ್ನೋ, ಬ್ಯಾಂಕುಗಳನ್ನೋ ಸ್ಥಾಪಿಸುತ್ತಾರೆ. ಆ ಬಗ್ಗೆ ಹಲವರಿಂದ ಭಂಡವಲವನ್ನೂ ಪಡೆದಿರುತ್ತಾರೆ. ಸ್ವಲ್ಪ ಸಮಯ ಆ ಸಂಸ್ಥೆಯನ್ನು ನಡೆಸುತ್ತಾರೆ. ನಂತರ ಆ ಸಂಸ್ಥೆಯ ಹಣವನ್ನೆಲ್ಲಾ ಅವರೇ ಎತ್ತಿಹಾಕಿ, ಕಂಪೆನಿಯಲ್ಲಿ ನಷ್ಟವಾಯಿತೆಂದು ದಿವಾಳಿ [Insolvency] ಅರ್ಜಿಕೊಟ್ಟು ಹಾಯಾಗಿ ಕುಳಿತು ಬಿಡುತ್ತಾರೆ. ಅವರಿಗೆ ದೊರೆತ ಹಣವೆಲ್ಲಾ ಕಪ್ಪು ಹಣವಾಗಿ, ಯಾವುದೋ ಮೂಲೆಯನ್ನು ಸೇರಿ, ಸರಕಾರಕ್ಕೋ, ದೇಶಕ್ಕೋ, ವ್ಯಕ್ತಿಗೋ, ಮೋಸ ಮಾಡಲು ಹೊಂಚುಹಾಕುತ್ತಿರುತ್ತದೆ. ಇಂತಹ ಹಲವು ಸಂದರ್ಭಗಳನ್ನು ನೋಡಿ ಯಾ ಕಹಿ ಅನುಭವ ಪಡೆದ, ಹಲವು ಮಂದಿ ಇಂತಹ ಸಂಸ್ಥೆಗಳಲ್ಲಿ ಹಣ ತೊಡಗಿಸುವ ಕೆಲಸ ಬೇಡ ಎಂಬುದಾಗಿ ಭಾವಿಸುತ್ತಾರೆ.

ಹೀಗೆ ಭಂಡವಾಲ ವಿನಿಯೋಗಿಸುವುದರಲ್ಲಿರುವ ಒಂದು ಅಪಾಯ ನೋಡಿಯೇ. ಹಲವರು ಹಣವನ್ನು ಕಪ್ಪು ಹಣವಾಗಿ ಬಚ್ಚಿಡಲು ಒಂದು ಕಾರಣ.

ಸಿಲ್ವರ್, ಇನ್ನೊಂದು ವಿಷಯ ನೋಡು. ನಮ್ಮ ದೇಶದಲ್ಲಿ ಉತ್ಪತ್ತಿ ತೆರಿಗೆ ತೆರುವುದನ್ನು ದೊಡ್ಡ ಒಂದು ಹೆಮ್ಮೆಯ ವಿಷಯವಾಗಿ ನಮ್ಮ ಹಣವಂತರು ಭಾವಿಸುತ್ತಾರೆ. ಆದ್ದರಿಂದಲೇ ತಮ್ಮ ಉತ್ಪತ್ತಿಯನ್ನು, ಇರುವುದ

ಕ್ಕಿಂತಲೂ ಹೆಚ್ಚು ಉತ್ಪ್ರೇಕ್ಷೆ ಮಾಡಿ ಅವರು ತೋರುತ್ತಾರೆ. ಹಾಗೂ ಸರ ಕಾರಕ್ಕೆ ಅದಕ್ಕನುಸಾರ ತೆರಿಗೆಯನ್ನು ತೆರುತ್ತಾರೆ. ಉತ್ಪತ್ತಿ ಹೆಚ್ಚಿರುವುದು ಹಾಗೂ, ಬಹಳತೆರಿಗೆ ತೆರುವುದು ತಮ್ಮ ಯಶಸ್ಸು ಮತ್ತು ತಮ್ಮ ಉದ್ದಿಮೆ ಗಳ ಮಹತ್ವ ಹಾಗೂ ಪ್ರಗತಿಯ ಕುರಿತಾದ ಒಂದು ಜಾಹೀರಾತು ಎಂಬುದಾ ಗಿಯೇ ಅಲ್ಲಿಯ ಉದ್ದಿಮೆಗಾರರು ಭಾವಿಸಿಕೊಳ್ಳುತ್ತಾರೆ. ಆದ್ದರಿಂದ ತೆರಿಗೆ ಯನ್ನು ತಪ್ಪಿಸುವ ಯತ್ನ ಅಲ್ಲಿ ನಡೆಯುವುದು ಬಹಳ ಅಪರೂಪವೇ ಸರಿ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ನೈಜ ಅಥವಾ ಉತ್ಪ್ರೇಕ್ಷಿತ ಲೆಕ್ಕಪತ್ರ ನೀಡಿ ತೆರಿಗೆ ತೆತ್ತು ಹೋಗಿಬಿಡುತ್ತಾರೆ.

ಇಲ್ಲಿಯ ಪರಿಸ್ಥಿತಿಯು ತದ್ವಿರುದ್ಧವಾಗಿದೆ. ಇಲ್ಲಿ ಜನರು ತಮ್ಮ ಉತ್ಪತ್ತಿಯ ಕುರಿತಾಗಿ ಬಾಯಿ ಬಿಡುವುದೇ ಇಲ್ಲ. ಅದು ಅದಷ್ಟು ಕಡಿಮೆ ಯಿದೆ ಎಂಬುದಾಗಿ ತೋರುವುದರ ಕಡೆಗೇನೇ ಅವರ ಯತ್ನವಿರುತ್ತದೆ. ತಾವಾಗಿ ತೆರಿಗೆ ತೆರುವ ಪುಣ್ಯಾತ್ಮರಿಲ್ಲಿ ಬಹಳಕಡಿಮೆ. ಇಲ್ಲವೇ ಇಲ್ಲವೆಂದರೂ ಸಲ್ಲುವುದು. ಸರಕಾರದ ಆಜ್ಞೆ ಬಂದ ನಂತರವೇ ತಮ್ಮ ಉತ್ಪತ್ತಿಯನ್ನು ಆದಷ್ಟು ಕಡಿಮೆಮಾಡಿ ತೋರಿಸುವ ಸುಳ್ಳು ಲೆಕ್ಕಪತ್ರಗಳನ್ನು ತಯಾರಿಸಿ ಸರ ಕಾರದ ಮುಂದಿಡುತ್ತಾರೆ. ಆದಕ್ಕಾಗಿಯೇ ಲೆಕ್ಕಪತ್ರ ಪರಿಶೋಧಕರಿಗೆ [Auditor] ಬಹಳ ಮೌಲ್ಯ ತೆತ್ತು, ಅವರ ಮೂಲಕವಾಗಿ ತೆರಿಗೆಯು ಬಹಳ ಕಡಿಮೆಯಾಗುವಂತೆ ಯತ್ನಿಸುತ್ತಾರೆ–ಆದಕ್ಕಾಗಿ ವಾದಿಸುತ್ತಾರೆ. ಹೋರಾಡು ತ್ತಾರೆ. ಸಾಧ್ಯವಾದರೆ ಉತ್ಪತ್ತಿ ತೆರಿಗೆ ಅಧಿಕಾರಿಗಳಿಗೆ ಬಹಳ ಮೌಲ್ಯದ ಲಂಚ ತೆರುತ್ತಾರೆ. 500-600 ರೂಪಾಯಿಗಳ ಲಂಚ ತೆತ್ತು, ಉತ್ಪತ್ತಿ ತೆರಿ ಗೆಯಲ್ಲಿ ಸರಕಾರಕ್ಕೆ 1000ರೂಪಾಯಿಗಳಷ್ಟು ಮೋಸಮಾಡಲು ಸಮರ್ಥನಾ ಗುವ ಹಣವಂತನಿಲ್ಲಿ ಬಹಳ ಶ್ಲಾಘನೀಯವಾದ ಮಹತ್ಕಾರ್ಯವನ್ನು ತಾನು ಮಾಡಿದೆನೆಂದು ಎದೆಯುಬ್ಬಿಸಿಕೊಂಡು ನಡೆಯುತ್ತಾನೆ.

ಇನ್ನೂ ಆಶ್ಚರ್ಯದ ವಿಷಯವೆಂದರೆ ಇಲ್ಲಿರುವ ಲೆಕ್ಕ ಪತ್ರ ಪರಿಶೋಧ ಕರಲ್ಲಿ ಹಲವು ಮಂದಿ, ಸರಕಾರವನ್ನು ವಿವಿಧ ತೆರಿಗೆಗಳ ಕುರಿತಾಗಿ ಹೇಗೆ ವಂಚಿಸಬಹುದು ಎಂಬ ಕುರಿತಾಗಿ ತಜ್ಞ ಸಲಹೆಯನ್ನು ನೀಡುವುದರಲ್ಲೇ ಬಹಳ ಹಣ ಗಳಿಸುತ್ತಾರೆ. ಇಲ್ಲಿಯ ಜನ ಮೆಚ್ಚುವುದು ಅಂತಹ ಲೆಕ್ಕ ಪತ್ರ ಪರಿ ಶೋಧಕರನ್ನೇ ಹೊರತಾಗಿ ಪ್ರಾಮಾಣಿಕರನ್ನೂ ನಿಜವಾಗಿಯೂ ಲೆಕ್ಕ ಪತ್ರಗ ಳಲ್ಲಿ ಪರಿಣತರಾಗಿರುವವರನ್ನೂ ಅಲ್ಲವೇ ಅಲ್ಲ.

ಇನ್ನೂ ಸ್ವಾರಸ್ಯದ ಮಾತೆಂದರೆ, ಸಿಲ್ವರ್, ಇಲ್ಲಿಯ ಸರಕಾರದ ಶಾಸನವಿರುವುದು ಎಲ್ಲರೂ ಮೋಸಗಾರರು ಎಂಬ ನೆಲೆಯಲ್ಲೇ ಎಂಬುದಾಗಿ ನನಗೆ ಕಾಣುತ್ತಿದೆ. ಅವರು ವರ್ಷ ವರ್ಷವೂ ಹೊರಿಸುತ್ತಿರುವ ನವನವೀನ ರೀತಿಯ ತೆರಿಗೆಗಳನ್ನು ನೋಡುವಾಗ ನಮಗೇ ಆಶ್ಚರ್ಯವಾಗುವುದು. ಈ ತೆರಿಗೆಯ ಭಾರವನ್ನು ಈ ಬಡದೇಶ ಹೇಗೆ ಹೊತ್ತೀತು ಎಂದು ನಾವು ಆಶ್ಚರ್ಯ ಪಡುತ್ತೇವೆ.

ಭಾರತದ ಒಂದು ಪ್ರಾಂತ್ಯದ ಹಣಕಾಸಿನ ಸಚಿವರನ್ನು [ಅವರ ಹೆಸರನ್ನೂ, ಪ್ರಾಂತ್ಯದ ಹೆಸರನ್ನೂ ನಾನು ಹೇಳ ಬಯಸುವುದಿಲ್ಲ.] ನಾನೊಮ್ಮೆ ಜಯನಾಥರ ಜತೆಯಲ್ಲಿ ಭೇಟಿಯಾಗಿದ್ದೆ. ಅವರ ತೆರಿಗೆ ಧೋರಣೆಯ ಕುರಿತಾಗಿ ಪ್ರಶ್ನಿಸುತ್ತಾ ನಾನು ಕೇಳಿದೆ "ಇಷ್ಟೊಂದು ತೀವ್ರ ತರದ ತೆರಿಗೆಯನ್ನು ನೀವು ವಿಧಿಸಿದಲ್ಲಿ ಜನ ಜೀವನವು ಕಂಗೆಟ್ಟು ವ್ಯಾಪಾರ ವಹಿವಾಟುಗಳು ಹದಗೆಟ್ಟು ಕೆಡುಕಾದ ಪರಿಣಾಮವುಂಟು ಮಾಡುವುದಿಲ್ಲವೇ?" ಅದಕ್ಕವರು ಬಹಳ ಬುದ್ಧಿವಂತರಂತೆ ಗಹ ಗಹಿಸಿ ನಕ್ಕು ಹೇಳಿದರು "ನಮ್ಮ ಜೀವನದ ಕುರಿತು ನೀವೇನೂ ಕಳಕಳಿಪಡುವ ಅಗತ್ಯವೇ ಇಲ್ಲ. ತೆರಿಗೆಗೆ ತಪ್ಪಿಸುವುದು ಹೇಗೆಂದು ಅವರಿಗೆ ತಿಳಿದೇ ಇದೆ. ಇಷ್ಟು ಉಗ್ರವಾದ ತೆರಿಗೆ ಹಾಕಿಯೂ ನಮಗೆ ಸಿಗುವುದು; ಎಷ್ಟು ಸಿಗಬೇಕೋ ಅದರ ಕಾಲಂಶ ಮಾತ್ರ. ಹೀಗೆ ಹೊಸ ಹೊಸ ಉಗ್ರ ತೆರಿಗೆ ಹೇರಿಯೇ ನಮ್ಮ ಜನರ ಹಣ ಪಡೆಯಬೇಕಷ್ಟೇ. ಬೇರೆ ದಾರಿಯೇ ಅದಕ್ಕಿಲ್ಲ." ಈ ಸಚಿವರ ಅಜ್ಞಾನ ನೋಡಿ ನಾನು ಅವರ ಮೇಲೆ ಬಹಳ ಕನಿಕರ ಪಡಬೇಕಾಯಿತು. ಜನರ ಮೋಸದಿಂದಾಗಿ ಉಗ್ರ ತೆರಿಗೆಯೋ ಉಗ್ರ ತೆರಿಗೆಯಿಂದಾಗಿ ಜನರ ಮೋಸವೋ ಎಂಬ ವೃತ್ತಾಕಾರವಾದ ಸಮಸ್ಯೆಯನ್ನು ನಾನು ಬಿಡಿಸದಾದೆ.

ಅಂತಹ ದಡ್ಡರ ಕೂಡೆ ಹೆಚ್ಚು ಮಾತನಾಡಿ ಫಲವೇನೂ ದೊರೆಯದೆಂದು ನಾನು ಬೇಗನೇ ಅವರ ಬಳಿಯಿಂದ ಹೊರಬಂದೆ.

ಸಿಲ್ವರ್, ನಿಜವಾಗಿ ನಾನು ಹೇಳುವುದಿದ್ದರೆ ಸರಕಾರದ ವಿವಿಧ ತೆರಿಗೆಗಳನ್ನು ಪ್ರಾಮಾಣಿಕವಾಗಿ ತೆತ್ತು, ಭಾರತದಲ್ಲಿ ಯಾರೂ ವ್ಯಾಪಾರೋದ್ಯಮಗಳನ್ನೂ, ಕೃಷಿಕೈಗಾರಿಕೆಗಳನ್ನೂ ನಿರ್ವಹಿಸಿ, ಸುಖ ಜೀವನ ಮಾಡಲು ಸಾಧ್ಯವಿಲ್ಲ ಎಂಬ ನಿಶ್ಚಯವಾದ ಅಭಿಪ್ರಾಯಕ್ಕೆ ನಾನು ಬಂದಿದ್ದೇನೆ. ಇದ

ರಿಂದಾಗಿ ಜನರು ಸರಕಾರವನ್ನು ವಂಚಿಸಲು ನೋಡುತ್ತಿದ್ದಾರೆ. ಸರಕಾರವು ಜನತೆಯನ್ನು ವಂಚಿಸಲು ನೋಡುತ್ತಿದೆ.

ನನಗೆ ಇತ್ತೀಚೆಗೆ ರಾಘವನ್ ಎಂಬೊಬ್ಬ ವ್ಯಾಪಾರಿಗಳೊಂದಿಗೆ ಸಂಭಾಷಣೆ ಮಾಡುವ ಸುಸಂಧಿ ದೊರಕಿತ್ತು. ಮಾತನಾಡುತ್ತಾ ಹೋದಂತೆ ನನಗವರು ಬಹಳ ಆಕರ್ಷಕ ವ್ಯಕ್ತಿಯಾಗಿ ಕಂಡರು. ನನ್ನನ್ನವರು ತಮ್ಮ ಅಂಗಡಿಗೂ ಆಮಂತ್ರಿಸಿದರು. ಅಂಗಡಿಯಲ್ಲಿ [ಅದೊಂದು ದೊಡ್ಡ ಜೀನಸಿನ ಅಂಗಡಿ] ನಾನು ಕಂಡ ಇತರ ವಿಚಾರಗಳು ನನ್ನ ವಿವಿಧ ಬದಿಯ ಅನುಭವವನ್ನು ವೃದ್ಧಿಸಿದುವಾದರೂ, ಅವುಗಳ ಕುರಿತಾಗಿ ನಾನೀಗ ಹೇಳಬಯಸುವುದಿಲ್ಲ. ಈಗಿನ ಪ್ರಸ್ತುತ ವಿಚಾರ ಒಂದೇ.

ಅವರ ಲೆಕ್ಕಪತ್ರ ಪುಸ್ತಕಗಳನ್ನು ನೋಡುತ್ತಾ ಹೋದಂತೆ [ನನಗವರು ನೋಡಲು ಸ್ವಾತಂತ್ರ್ಯ ಕೊಟ್ಟರು] ನನಗೆ ಆಶ್ಚರ್ಯವಾಯಿತು. ಎರಡೆರಡು ಪ್ರತಿಯ ಲೆಕ್ಕ ಪತ್ರಗಳಿದ್ದುವು. ನಾನು ಎಷ್ಟು ತಲೆ ಕೆರೆದು ಯೋಚಿಸಿ ನೋಡಿದರೂ ಎರಡು ಪ್ರತಿ ಯಾಕೆಂದು ತಿಳಿಯಲಿಲ್ಲ. ಒಂದರಲ್ಲಿ ಕಾಣುವ ಅಂಕೆ ಸಂಖ್ಯೆಗಳಿಗೂ ಇನ್ನೊಂದರಲ್ಲಿ ಕಾಣುವ ಅಂಕೆ ಸಂಖ್ಯೆಗಳಿಗೂ ತಾಳ ಮೇಳವೇ ಇರಲಿಲ್ಲ–ಹೊಂದಾಣಿಕೆಯೇ ಇರಲಿಲ್ಲ. ಕಡೆಗೆ ಧೈರ್ಯಮಾಡಿ ಕೇಳಿಯೇಬಿಟ್ಟೆ. ಅದೇಕೆ ಎರಡು ಪ್ರತಿ ಲೆಕ್ಕ ಪತ್ರಗಳೆಂದು. ಒಂದು ಪ್ರೈವೇಟ್, ಇನ್ನೊಂದು ಪಬ್ಲಿಕ್ ಎಂಬುದಾಗಿ ಹೇಳಿದರು.

ಅರ್ಥವಾಗದೆ ತಲೆ ತುರಿಸುತ್ತಾ ಪುನಃ ಅದರ ಅರ್ಥ ಕೇಳಿದೆ. ಬಹಳ ವಿವರಣೆಗಳ ನಂತರ ತಿಳಿಯಿತು—ಒಂದು ಯಥಾರ್ಥ ಲೆಕ್ಕಪತ್ರ; ಇನ್ನೊಂದು ಸರಕಾರವನ್ನು ವಂಚಿಸಲು ಮಾಡಿದ ನಕಲೀ ಲೆಕ್ಕಪತ್ರವೆಂದು. ಇವರೂ ಹೀಗೆ ಮಾಡಬಹುದೇ ಎಂದು ವ್ಯಥೆಪಟ್ಟ ನಾನು ಅವರನ್ನು ಪ್ರಶ್ನಿಸಿದಾಗ "ಏನು ಮಾಡಲಿ ಸ್ವಾಮಿ, ಸರಕಾರವೇ ನಮಗೆ ಮೋಸವನ್ನು ಕಲಿಸಿಕೊಡುತ್ತಿದೆ" ಎಂಬುದಾಗಿ ಹೇಳಿದರು.

ಅಂಗಡಿ ಮುಚ್ಚಿದ ನಂತರ ವಿವರಣೆ ಹೇಳುವೆನೆಂದು ಅವರು ಆಶ್ವಾಸನೆಯಿತ್ತ ಕಾರಣ, ಸುಮ್ಮನೇ ಹರಟೆ ಹೊಡೆಯುತ್ತಾ ಸ್ವಲ್ಪ ಕಾಲ ಕುಳಿತೆ. ನಂತರ ಅವರ ಕಾರಿನಲ್ಲೇ ಕುಳಿತು 'ಮೆರೀನಾ'ದ ಕಡೆಗೆ ಹೋದೆವು.

ಆ ವಿಶಾಲ ಸಮುದ್ರ ದಂಡೆಯಲ್ಲಿ ಕುಳಿತು ಎಲ್ಲ ವಿಚಾರ ಮಾತನಾಡಿ

ದೆವು ಅವರ ಜೀವನದ ದುರಂತದ ಹಾಳೆಗಳೆಲ್ಲಾ ನನ್ನೆದುರು ಮುಗುಚಲ್ಪಟ್ಟುವು.

ರಾಘವನ್‌ರು ತಿರುಚಿನಾಪಳ್ಳಿ ನಗರದ ಬಳಿಯ ನಿವಾಸಿಗಳಂತೆ. ಅವರ ಹಿರಿಯರು ಭೂಮಾಲಿಕರಾಗಿದ್ದರು. ಇವರು ತಂದೆಗೆ ಒಬ್ಬನೇ ಮಗ. ಕಾರಣಾಂತರಗಳಿಂದ ಸಾಲವಾಗಿ ಆಸ್ತಿ ಮಾರಬೇಕಾದ ಪ್ರಮೇಯ ಬಂತು. ಸಾಲ ತೆತ್ತು ಅದರಲ್ಲಿ ಉಳಿದುಕೊಂಡ ಒಂದೆರಡು ಸಾವಿರ ರೂಪ್ಯಾಗಳನ್ನು ಅವರು ಹಿಡಿದುಕೊಂಡು ತಿರುಚಿನಾಪಳ್ಳಿ ನಗರಕ್ಕೆ ಬಂದು ಪತ್ನೀ ಸಮೇತರಾಗಿ ವಾಸಮಾಡಲು ತೊಡಗಿದರು. [ತಂದೆ, ತಾಯಿ ಇಬ್ಬರೂ ಗತಿಸಿಹೋಗಿದ್ದರು.]

ಕೆಲವು ಗೆಳೆಯರು ವ್ಯಾಪಾರ ಮಾಡುವುದೇ ಉತ್ತಮ ಮಾರ್ಗವೆಂದು 'ಸೂಚಿಸಿದ್ದರಿಂದ ಜೀನಸಿನ ವ್ಯಾಪಾರಕ್ಕೆ ಪ್ರಾರಂಭಿಸಿದರಂತೆ. ಅವರ ಅಂಗಡಿ ಎದುರಲ್ಲಿ ಇನ್ನೊಬ್ಬ ಬಡವನಾದರೂ ಚುರುಕು ಬುದ್ಧಿಯ ವ್ಯಕ್ತಿ ಒಂದು ಚಿಕ್ಕ ಮರದ ಅಂಗಡಿ [ಇಂತಹ ಅಂಗಡಿಗಳು ಬೊಂಬಾಯ ಗ್ರಾಂಟ್ ರೋಡ್ ಮೊದಲಾದ ಪ್ರಸಿದ್ಧ ಬೀದಿಗಳಲ್ಲಿದ್ದು ಈ ಮಹಾ ನಗರವನ್ನು ವಿರೂಪಪಡಿಸುತ್ತಿರುವುದು ಪ್ರಸಿದ್ಧ ವಿಚಾರವಾಗಿದೆ.]ಯಿಟ್ಟು ಒಂದು ಸಣ್ಣ ಬೀಡಾ [ವೀಳ್ಯ ಹಾಕುವುದು] ಬೀಡಿ, ಸಿಗರೇಟು ಮತ್ತು ಸಿಹಿ ತಿಂಡಿಗಳ ಒಂದು ಅಂಗಡಿ ತೆರೆದನಂತೆ.

ಹೀಗೆ ಇಬ್ಬರ ವ್ಯಾಪಾರವೂ ಜತೆಯಲ್ಲೇ ಪ್ರಾರಂಭವಾಯಿತು. ಸತ್ಯಸಂಧರಾದ ರಾಘವನ್‌ರ ಕೂಡೆ ಅವರ ವ್ಯಾವಹಾರಿಕ ಜ್ಞಾನವುಳ್ಳ ಮಿತ್ರರು "ಸತ್ಯ ಸುಳ್ಳು ಎಂದು ನೋಡಬೇಡ—ಲಾಭ ಬರುವಂತೆ ವ್ಯಾಪಾರಮಾಡು. ಸರಕಾರಕ್ಕೆ ಸರಿಯಾದ ಲೆಕ್ಕಪತ್ರ ತಿಳಿಸಿದಿಯಾದರೆ ನೀನು ಹೋದಂತೆಯೇ ಸರಿ!" ಎಂದು ಮುಂತಾಗಿ ಹಲವು ಸಲ ಬೋಧಿಸಿದರು. ಆದರೆ ಸತ್ಯಕ್ಕೆ ವಿರುದ್ಧ ತಾನು ಬರಲಾರೆ ಎಂದು ಪಣ ತೊಟ್ಟರು ರಾಘವನ್‌ರು. ಸರಕಾರದ ಟೇಕ್ಸ್ ತೆರುವುದರಲ್ಲೇ ಅವರ ಲಾಭವೆಲ್ಲಾ ಕರಗಿ ಹೋಗುತ್ತಿತ್ತು. ವ್ಯಾಪಾರವೇನೋ ಉತ್ಕೃಷ್ಟವಾಗಿ ನಡೆದರೂ ಕೂಡಾ, ಜೀವನಕ್ಕಾಗಿ ಭಂಡವಲದ ಭಾಗವನ್ನೇ ಉಪಯೋಗಿಸಬೇಕಾಗಿ ಬಂದು, ಒಂದೇ ವರ್ಷದಲ್ಲಿ ಅವರು ಅಂಗಡಿ ಮುಚ್ಚಿ, ಬೀದಿಗೆ ಬೀಳಬೇಕಾಗಿ ಬಂತು.

ಅವರ ಅಂಗಡಿಯೆದುರು, ಚಿಕ್ಕ ವ್ಯಾಪಾರ ಪ್ರಾರಂಭಿಸಿದ ವ್ಯಕ್ತಿಯು

ಆರ್ಥಿಕ ಉತ್ಕರ್ಷದ ಸ್ಥಿತಿಯಲ್ಲಿದ್ದನು. ರಾಘವನ್‌ರು ಈ ಅಂಗಡಿಯನ್ನು ಬಿಟ್ಟೊಡನೆಯೇ ಆತನು ಅದನ್ನು ಬಾಡಿಗೆಗೆ ಪಡೆಕೊಂಡು, ದೊಡ್ಡ ರೀತಿಯಲ್ಲಿ ಜೀನಸಿನ ವ್ಯಾಪಾರ ಪ್ರಾರಂಭಿಸಿದನು.

ರಾಘವನ್‌ರು ಕಾಫಿ ಹೋಟೇಲಿನಲ್ಲಿ ಪೂರೈಕೆ [supply] ಕೆಲಸಕ್ಕೆ ಸೇರಬೇಕಾಗಿ ಬಂತು. ಬಹಳ ಕಷ್ಟದಿಂದ ತನ್ನ ಕುಟುಂಬ ಪೋಷಣೆಯನ್ನವರು ಮಾಡುತ್ತಿದ್ದರು. ಅವರ ಗೆಳೆಯರೆಲ್ಲ ಕೈ ಬಿಟ್ಟದ್ದರು. ಈ ಸಮಯ ಯಾವುದೋ ಹುಚ್ಚು ಅವರನ್ನು ತಮ್ಮ ಹಿಂದಿನ ಅಂಗಡಿಯೆಡೆಗೆ ಆಗಾಗ ಎಳೆದೊಯ್ಯುತ್ತಿತ್ತು. ಅಲ್ಲಿ ಆ ಹೊಸಬನ ವ್ಯಾಪಾರ ಬಹಳ ಬಿರುಸಿನಿಂದ ನಡೆಯುತ್ತಿತ್ತು. ಮಾತ್ರವಲ್ಲ ಬಹಳ ಶ್ರೀಮಂತಿಕೆಯ ಲಕ್ಷಣಗಳೆಲ್ಲ ಆತನಲ್ಲಿ ಕಾಣುತ್ತಿದ್ದುವು.

ಈಗ ತನ್ನ ಸೋಲಿನ ಮೂಲ ಕಾರಣವೇನೆಂಬುದನ್ನು ಅವರು ತಿಳಿದುಕೊಂಡರು. ಬಹಳ ಯೋಚಿಸಿ ಯೋಚಿಸಿ, ಹೋಟೇಲಿನ ಗ್ರಾಹಕರ ಪೈಕಿ ಉದಾರಿಗಳಾದ ಓರ್ವರ ಕೂಡೆ ತನ್ನ ಕರುಣ ಕತೆಯನ್ನೆಲ್ಲಾ ಮನಬಿಚ್ಚಿ ಹೇಳಿದರು.

ಕನಿಕರ ಕಂಡು ಅವರು ರಾಘವನ್‌ರಿಗೆ ಒಂದು ಸಾವಿರ ರೂಪ್ಯಾಗಳ ಸಾಲವನ್ನಿತ್ತರು. ರಾಘವನ್ ಪುನಃ ವ್ಯಾಪಾರವನ್ನು ಪ್ರಾರಂಭಿಸಿದರು. ಈ ಸಲ ಅವರ ವ್ಯಾಪಾರದ ರೀತಿಯೇ ಬೇರೆಯಾಗಿತ್ತು. ಹಿಂದಿನ ಅವರ ಮಿತ್ರರ ಮಾತನ್ನೇ ವೇದವಾಕ್ಯವಾಗಿಟ್ಟುಕೊಂಡು ವ್ಯಾಪಾರಕ್ಕೆ ತೊಡಗಿದರು. ವ್ಯಾಪಾರ ರಭಸದಿಂದ ನಡೆಯತೊಡಗಿತು.

ಈಗ ಅವರು ಕೆಲವೇ ವರ್ಷಗಳಲ್ಲಿ ಶ್ರೀಮಂತರಾದರು. ಹಿಂದಿನ ಸಾಲವನ್ನೂ ಸಲಾಯಿಸಿದರು. ಹೀಗೆ ತಮ್ಮ ಈಗಿನ ಉಚ್ಛ್ರಾಯದ ಕತೆಯನ್ನೆಲ್ಲ ಹೇಳಿದರು. ಅವರು ತಮ್ಮ ಅನುಭವ ಹೇಳುತ್ತಾ ಹೋದಂತೆ ತಾನೊಂದು ಪರಮ ಸತ್ಯವನ್ನು ಕಂಡು ಭಾಗ್ಯಶಾಲಿಯಾದವನ ಹೆಮ್ಮೆ ತುಂಬಿಕೊಂಡಿತ್ತು. ಅವರ ಕತೆ ಕೇಳುತ್ತಾ ಹೋದಂತೆ ಬೇಡಬೇಡವೆಂದರೂ ನನ್ನ ಕಣ್ಣುಗಳಲ್ಲಿ ನೀರೂರಿತು. ರಾಘವನ್ ಕೇಳಿಯೇ ಬಿಟ್ಟರು "ಮಿಸ್ಟರ್ ಮುನ್, ಏತಕ್ಕೆ ಕಣ್ಣೀರು?" ಎಂಬುದಾಗಿ. ಹೇಳಲೊಲ್ಲೆ ಎಂದು ಎಷ್ಟು ಹೇಳಿದರೂ ಅವರು ಕೇಳಲೊಲ್ಲರು.

ಕಟ್ಟ ಕಡೆಗೆ ನಾನು ಹೇಳಲೇ ಬೇಕಾಯಿತು. "ಸರಕಾರದ ಧೋರಣೆ

ಯಿಂದ ಎಂತೆಂತಹ ನಿಸ್ಸ್ವಾರ್ಥಿ ಜೀವಿಗಳಲ್ಲಿರುವ ಪ್ರಾಮಾಣಿಕತೆಯೆಲ್ಲ ವಧೆಯಾಗುತ್ತಿದೆಯಲ್ಲ ಎಂದು ದುಃಖ ಬಂದು ಬಿಟ್ಟಿತು" ಎಂದು ಹೇಳಿದೆ. ನನ್ನ ಆ ಭಾವಕ್ಕಾಗಿ ಕ್ಷಮೆಯನ್ನೂ ಅವರ ಕೂಡೆ ಕೇಳಿದೆ.

ಆದರೆ ನನ್ನ ಮಾತನ್ನು ಕೇಳಿದೊಡನೆಯೇ ರಾಘವನ್‌ರು ನಿರ್ವಿಣ್ಣರಾದರು. ಮಾತು ಕಡಿಮೆಯಾಯಿತು. ಏನು ಕಾರಣ ಅವರಲ್ಲಿ ಆ ಬದಲಾವಣೆ ಬಂತೆಂದು ನಾನು ಕೇಳಿದರೂ "ಏನೂ ಇಲ್ಲ, ನಾನು ಮೊದಲಿನಂತೆಯೇ ಇರುವೆನಲ್ಲಾ?" ಎಂದು ಅವರು ಅನ್ನತೊಡಗಿದರು. "ಕತ್ತಲಾಯಿತು. ಹೋಗೋಣವೇ?" ಎಂಬುದೊಂದೇ ಅವರು ನನ್ನ ಮುಖ ನೋಡಿ ಹೇಳಿದ ಮಾತು. ನನಗೂ ಬಹಳ ಕೆಡುಕೆನಿಸಿತು. ನಾನೂ ಹೊರಟೆ.

ಕಾರಿನಲ್ಲಿ ಕುಳಿತು ಸದ್ದಿಲ್ಲದೆಯೇ ಮುಂದೆ ಸಾಗಿದೆವು. ನನ್ನ ಕೋಣೆಯ ಬಳಿಗೆ ಕಾರನ್ನು ತಂದು ಬಿಟ್ಟರು ರಾಘವನ್‌ರು. "ಥ್ಯಾಂಕ್ಸ್" ಎಂದು ಪ್ರೇಮದಿಂದ ಕೈ ಮುಂದೆ ಚಾಚಿದರೆ, ಯಾಂತ್ರಿಕವಾದ ಅವರ ಕೈ ಬಂದು ಯಾಂತ್ರಿಕವಾಗಿಯೇ ಕುಲುಕಿತು. ದೊಡ್ಡ ಆಘಾತ ಪಡೆದು ಕೋಣೆಯೆಡೆಗೆ ನಾನು ಸಾಗಿದೆ.

ಆ ನಂತರ ಇಂದಿನ ತನಕವೂ ಅವರನ್ನು ಕಾಣಲಾಗಲಿಲ್ಲ. ಒಮ್ಮೆ ಅವರ ಅಂಗಡಿಗೆ ಹೋಗಿದ್ದೆ. ಮುಖವೆತ್ತಿ ಅವರು ನೋಡಲೂ ಇಲ್ಲ. ನಾನು ಹಿಂದಕ್ಕೆ ಬಂದೆ. ಭಾರತದ ಶಾಸನಗಳೆಂಬ ಯಂತ್ರ ಹೇಗೆ ಮಾನವತ್ವವನ್ನು ದಾನವತ್ವಕ್ಕೆ ತಿರುಗಿಸುತ್ತಿದೆ ಎಂಬುದಕ್ಕೂ, ಮೋಸ ವಂಚನೆಗಳ ನೇರ ಅಧ್ಯಯನವನ್ನು ಹೇಗೆ ಒದಗಿಸಿ ಕೃತಾರ್ಥವಾಗುತ್ತದೆಂಬುದಕ್ಕೂ ಬೇಕಾದ ಉದಾಹರಣೆಗಳು [ಒಂದೆರಡಲ್ಲ–ಹಲವು] ನನಗೆ ದೊರೆತವು.

ಭಾರತದಾದ್ಯಂತ ಇಷ್ಟೊಂದು ವಿಪುಲವಾಗಿ ಕಪ್ಪುಧನವೇಕೆ ರೂಢಿಯಾಗುತ್ತಿದೆ ಎಂಬುದಕ್ಕೆ ಉತ್ತರವು ನನಗೆ ಈ ರೀತಿ ದೊರೆಯಿತು.

ವಿವಿಧ ಉದ್ದಿಮೆಗಳಲ್ಲಿ ಭಂಡವಲ ವಿನಿಯೋಗಿಸದಿರುವುದಕ್ಕೂ ಇದೇ ಒಂದು ಕಾರಣವಾಗಿದೆ. ತೆರಿಗೆಯಿಲ್ಲದಂತೆ ವಾಮ ಮಾರ್ಗಗಳಿಂದ ಸಂಪಾದಿಸಿದ ಕಪ್ಪು ದ್ರವ್ಯವನ್ನು ಭಂಡವಲವಾಗಿ ಉದ್ದಿಮೆಗಳಲ್ಲಿ ವಿನಿಯೋಗಿಸಿದೊಡನೆಯೇ ಅದರ ಮೇಲೂ ತೆರಿಗೆ ಬೀಳುವುದು ಮಾತ್ರವಲ್ಲ–ಆ ಹಣ ಎಲ್ಲಿಂದ ಬಂತು ಎಂಬ ಶೋಧ ಪ್ರಾರಂಭವಾಗುವುದು. ಆ ಶೋಧ ಪ್ರಾರಂಭವಾಗುವಾಗ, ರಾಶಿ ರಾಶಿಯಾಗಿ ಉಳಿದ ತನ್ನ ಕಪ್ಪು ದ್ರವ್ಯಕ್ಕೂ ತಾನು ಎರವಾಗ

ಬೇಕಾಗಬಹುದು ಎಂಬ ಭಯವೂ ಇದ್ದೇ ಇದೆ.

ವಿವಿಧ ರೂಪದಲ್ಲಿ ಹಣ ಬಚ್ಚಿಡುವುದಕ್ಕೆ ಇನ್ನೂ ಬಹಳ ಕಾರಣಗಳಿವೆ. ಕೆಲವನ್ನು ವಿಸ್ತರಿಸಿ ಬಿಡಲೇ? ಏಕೆಂದರೆ ಒಂದೊಂದು ಬದಿಯ ವಿಚಾರವನ್ನು ಮಾತ್ರವೇ ತಿಳಿದು ನೀನು ತಪ್ಪು ಧೋರಣೆ ತಾಳಬಾರದಲ್ಲಾ?

ಬ್ರಿಟಿಷ್ ಸರಕಾರದ ಆಡಳಿತೆಯು ಭಾರತದಲ್ಲಿ ಪೂರ್ತಿಯಾಗಿ ಸ್ಥಾಪನೆಯಾಗುವ ಮೊದಲೇ, ಆದರೆ ಮೊಗಲರ ಅವನತಿಯ ನಂತರ ಸರಿಯಾದ ಸರಕಾರವು, ದೇಶದ ಎಲ್ಲ ಕಡೆಗಳಲ್ಲಿ ಭದ್ರವಾಗಿ ಇರಲಿಲ್ಲ. ಒಂದೊಂದು ಊರಲ್ಲಿ ಒಬ್ಬೊಬ್ಬ ಮಾಂಡಲಿಕರೆಂಬ ಅಥವಾ ಪಾಳೆಯಗಾರರೆಂಬ ಚಿಕ್ಕ ಪುಟ್ಟ ರಾಜರುಗಳು ಆಡಳಿತ ವಹಿಸುತ್ತಿದ್ದರು. ಅನ್ಯ ಮಾಂಡಲಿಕರ ವ ಪಾಳಯಗಾರರ ಆಕ್ರಮಣಗಳಿಗೆ ಅವರು ಆಗಾಗ ಬಲಿಯಾಗಬೇಕಾಗುತ್ತಿತ್ತು. ಇಂತಹ ಸಂದರ್ಭಗಳಲ್ಲಿ ವಿವಿಧ ಪುಂಡರು ನಾಗರಿಕರನ್ನು ಕೊಳ್ಳೆ ಹೊಡೆಯುವುದು, ಲೂಟಿ ಮಾಡುವುದು ಇತ್ಯಾದಿ ಕಾರ್ಯಗಳಲ್ಲಿ ನಿರತರಾಗಿದ್ದರು.

ಇದರಿಂದ ತಂತಮ್ಮ ಧನವನ್ನು ರಕ್ಷಿಸಿಕೊಳ್ಳುವುದು ಬಹಳ ಕಷ್ಟವೆಂಬ ಅಭಿಪ್ರಾಯ ಎಲ್ಲರಿಗೂ ಬರುತ್ತಿತ್ತು. ಆಗ ಸಹಜವಾಗಿಯೇ ಧನ ಕನಕಾದಿಗಳನ್ನು ನೆಲದೊಳಗೆ, ಪಾತ್ರೆ ಪರಡಿಗಳೊಳಗೆ ಬಚ್ಚಿಡುವ ಪದ್ಧತಿ ಜ್ಯಾರಿಯಾಯಿತು. ಸಾಕಷ್ಟು ವಿದ್ಯಾಭ್ಯಾಸವಿಲ್ಲದೆ, ಧನೋತ್ಪತ್ತಿಯನ್ನು ವೃದ್ಧಿಸುವ ವಿಧಾನ ತಿಳಿಯದ ಹಳ್ಳಿಗಾಡಿನ ಜನರು ಇಂದಿಗೂ ಹೀಗೆ ಮಾಡುವುದಿದೆ. ಮಾತ್ರವಲ್ಲ ಇಂದಿನವರ ಪೂರ್ವಜರು ವಿವಿಧೆಡೆಗಳಲ್ಲಿ ವಿವಿಧ ಕಾರಣಗಳಿಗಾಗಿ ಹೂತಿಟ್ಟ ಹೇರಳ ದ್ರವ್ಯಗಳು ಇಂದಿಗೂ ನೆಲದಡಿಯಲ್ಲಿಯೇ ಇವೆ. ಆದರೆ ಎಲ್ಲಿವೆ? ಏನು? ಎಂಬುದಾಗಿ ಯಾರಿಗೂ ಹೇಳಲು ಸಾಧ್ಯವಿಲ್ಲ.

ಸ್ವಲ್ಪ ವಿದ್ಯಾವಂತರೆನಿಸಿಕೊಂಡಿರುವ ಇಂದಿನ ಕೆಲವು ಶ್ರೀಮಂತರು ಹಿಂದಿನ ಬಚ್ಚಿಡುವ ಪದ್ಧತಿಯಲ್ಲೇ ಒಂದು ಸುಧಾರಣೆ ಮಾಡಿಕೊಂಡು ಭದ್ರವಾದ ಕಪಾಟುಗಳಲ್ಲೋ, ಕಬ್ಬಿಣದ ತಿಜೋರಿಗಳಲ್ಲೋ ವಿಪುಲ ಧನವನ್ನು ಕೂಡಿ ಹಾಕುತ್ತಾರೆ. ಅದು ಚಿನ್ನದ ರೂಪದಲ್ಲಿಯೂ ಇರಬಹುದು. 100 ಯಾ 1000 ರೂಪಾಯಿಗಳ ಕರೆನ್ಸಿ ನೋಟುಗಳ ರೂಪದಲ್ಲಿಯೂ ಇರಬಹುದು.

ತಮ್ಮ ಐಶ್ವರ್ಯವನ್ನು ಹಲವು ಮಂದಿ ಬ್ಯಾಂಕುಗಳಲ್ಲಿಯೂ, ಠೇವಣಾತಿಯಾಗಿಡುವುದಿಲ್ಲ. ಬ್ಯಾಂಕು ದಿವಾಳಿಯಾದರೆ? ಇಲ್ಲವಾದರೆ, ಸರಕಾರ ತೆರಿಗೆ ಹೊರಿಸಿದರೆ? ಇಲ್ಲವೇ ಸರಕಾರದ ಯಾವುದಾದರೂ ಹೊಸ ಶಾಸನ

ಬಂದು ತನ್ನಐಶ್ವರ್ಯಕ್ಕೆಧಕ್ಕೆಬಂದರೇನು ಗತಿ ಎಂಬುದೇ ಅವರ ಭಯವಾಗಿದೆ.

ಇತ್ತೀಚೆಗೆ ಬ್ಯಾಂಕಿನಲ್ಲಿ ಹಣ ಹಾಕುವ ಅಥವಾ ಜೀವವಿಮೆ ಮಾಡಿ ಕೊಳ್ಳುವ ಹವ್ಯಾಸ ಪ್ರಾರಂಭವಾಗುತ್ತಿದೆಯಾದರೂ, ಆ ಅಭ್ಯಾಸವಿನ್ನೂ ಎಳವೆಯಲ್ಲೇ ಇದೆ ಎನ್ನಬಹುದು.

ಮೊದಮೊದಲು ಆಸ್ತಿಪಾಸ್ತಿಗಳ ಅಡಮಾನದ [Mortgage] ಮೇಲೆ ಬಹಳ ಹೆಚ್ಚಿನ ಬಡ್ಡಿಗೆ ಸಾಲ ಕೊಡುವ ಪದ್ಧತಿಯಿತ್ತು. ಆದರೆ ಇತ್ತೀಚೆಗೆ ಸರಕಾರದ ಕೆಲವೊಂದು ಶಾಸನಗಳು ಸಾಲವಾಗಿ ಪಡೆದವನು ಹಣವನ್ನು ಬೇಗನೇ ಮರುಪಾವತಿ ಮಾಡದಿರಲು-ಅಥವಾ ನಿಧಾನವಾಗಿ, ಕಂತಿನಲ್ಲಿ ಪಾವತಿ ಮಾಡುವಂತೆ ಮಾಡಲು ಸಹಾಯ ಮಾಡಿದ್ದರಿಂದ ಹಣದ ವಹಿ ವಾಟು ಬಹಳವಾಗಿ ಮಂದಗತಿಯಿಂದ ಸಾಗುತ್ತಿದೆ. ಯಾರಿಗೂ ಸಾಲ ಕೊಡದೆ ಬಡ್ಡಿ ನಷ್ಟವಾದರೂ ತೊಂದರೆಯಿಲ್ಲ—ಅಸಲೇ ಮುಳುಗಿ ಹೋಗು ವುದಕ್ಕಿಂತ ಅದು ಉತ್ತಮ ಎಂಬಭಿಪ್ರಾಯವೇ ಹಲವರ ತಲೆಯಲ್ಲಿದೆ.

ಭಾರತದ ರಾಜಸ್ಥಾನ ಎಂಬ ಪ್ರದೇಶಕ್ಕೆ ಸೇರಿದ ಮಾರವಾಡಿ ಎಂಬೊಂದು ವರ್ಗದ ಜನರಿದ್ದಾರೆ. ಅವರಲ್ಲಿ ಹಲವರು ಹಣವಂತರು. ಅವರು ದೇಶದ ಬೇರೆ ಬೇರೆ ನಗರಗಳಲ್ಲಿ ವಾಸವಾಗಿದ್ದಾರೆ. ಒಮ್ಮೆಗೆ ಬಹಳ ಹೆಚ್ಚಿನ ಮೌ ಲ್ಯದ ಹಣ ಬೇಕೆಂದಾದರೆ, ಅವರ ಬಳಿ ಸಾರುವ ಮಂದಿ ಬಹಳ ಇದ್ದಾರೆ.

ಅವರು ಹಣ ಸಾಲವಾಗಿ ಕೊಡುವ ಹಾಗೂ ಮರಳಿ ಪಡೆಯುವ ವಿಧಾನ ಬಹಳ ವಿಶೇಷವಾಗಿದೆ. ಅವರಿಗೆ ರಿಕಾರ್ಡು ಇತ್ಯಾದಿ ಏನೇನೂ ಬೇಕಾಗುವುದೇ ಇಲ್ಲ. ಚಿನ್ನದ ಒಡವೆಗಳ ಅಡಮಾನದ ಮೇಲೆಯೂ ಅವರು ಸಾಲಕೊಡು ತ್ತಾರೆ—ಅಥವಾ ಕೇವಲ ಬಾಯಿ ಮಾತಿನಲ್ಲಿಯೂ ಸಾಲ ಕೊಡುತ್ತಾರೆ.

ಅವರ ಬಡ್ಡಿಯ ದರವು ಸೇಕಡಾ 15ರಂದ ತೊಡಗಿ 50—60ರ ತನ ಕವೂ ತಲಪುವುದಿದೆ. ಆದರೆ ಅವರು ಕೊಡುವುದೇ ಕೆಲವೇ ದಿನಗಳ ಉಪ ಯೋಗದ ಬಗ್ಗಾಗಿ. ಎಷ್ಟು ದಿನಗಳಿಗೆ ಸಾಲ ಪಡೆಯಲಾಗುವುದೋ, ಅಷು ದಿನಗಳ ಬಡ್ಡಿಯನ್ನೂ ಕೊಡುವ ಹಣದಲ್ಲೇ ಆತನು ವಜಾ ಮಾಡಿಟ್ಟುಕೊಳು ತ್ತಾನೆ. ಹೀಗೆ ನಿಜವಾಗಿ ಅಸಲು ಹಣವೇ ಕಡಿಮೆಯಾಗಿರುತ್ತದೆ.

ಹೇಳಿದ ವ್ಯಾದೆಗೆ ಸಾಲ ಪಡಕೊಂಡವನು ಹಣ ತೆರಲೇ ಬೇಕು. ಇಲ್ಲ ವಾದರೆ ಆ ಮಾರವಾಡಿ ದೊಡ್ಡ ದೊಣ್ಣೆಯೊಂದನ್ನು ಹಿಡಿದುಕೊಂಡು, ಸಾಲ ಪಡಕೊಂಡವನ ಮನೆಬಾಗಿಲಲ್ಲಿ ಹಾಜರಾಗಿ ನಿಂತು ಬಿಡುತ್ತಾನೆ. ಹಣ ಸಿಕ್ಕಿ

ತೆಂದರೆ ಸರಿ—ಇಲ್ಲವಾದರೆ ದೊಣ್ಣೆಯ ಪ್ರಹಾರವಾಗಿಯೇ ಬಿಡುವುದು. ಈ ದೊಣ್ಣೆ ಪ್ರಹಾರದಷ್ಟು ಸಾಲ ವಸೂಲು ಮಾಡುವ ಸುಲಭ ವಿಧಾನ ಬೇರಿಲ್ಲ. ಎಂಥವನೂ ಅದಕ್ಕೆ ಭಯಪಟ್ಟೇ ತೀರುವನು. ಮಾರವಾಡಿಗಳಿಗೆ ಭಯ ಪಡದ ಜನರೇ ಕಡಿಮೆ.

ಇತರ ವಸೂಲಿ ವಿಧಾನಗಳನ್ನೆಲ್ಲ ಮಾಡರೂ, ಬಡ್ಡಿಯ ದರದಲ್ಲಿ ಮಾರ ವಾಡಿಗಳನ್ನನುಸರಿಸುವ ಶ್ರೀಮಂತರು ಬಹಳ ಮಂದಿಯಿದ್ದಾರೆ. ಅವರು ಬಹಳ ಬಿರುಸಿನ ವ್ಯಾಪಾರ ಮಾಡುತ್ತಿರುತ್ತಾರೆ. ಎಂತಹ ದೊಡ್ಡ ವ್ಯಾಪಾರಿ ಅಥವಾ ಉದ್ದಿಮೆಗಾರನೇ ಆದರೂ ಒಂದೊಮ್ಮೆಗೆ ಇಂಥವರ ಮರೆ ಹೋಗಬೇ ಕಾಗುವುದಿದೆ. ಇದರಿಂದಲೇ ಅವರ ಕಾಳಸಂತೆಯ ವ್ಯಾಪಾರಗಳೆಲ್ಲ ನಡೆಯು ವುದು.

ಉದ್ದಿಮೆಗಳಲ್ಲಿ ಭಂಡವಲ ಹಾಕಿದರೆ ಇಷ್ಟು ಬಡ್ಡಿಯೆಲ್ಲಿ ಸಿಗಬೇಕು? ಅಲ್ಲದೆ ತೆರಿಗೆಯಿಂದ ತಪ್ಪಿಸಿಕೊಳ್ಳಲು ಇಷ್ಟು ಸುಲಭದ ಸಾಧನವೆಲ್ಲಿದೆ?

ಇಲ್ಲಿ ಹಣದ ವಿನಿಯೋಗವಾಗುವ ಇತರ ಹಲವು ವಿಧಾನಗಳಿವೆ. ನಮ್ಮ ದೇಶದಂತೆಯೇ ಕುದುರೆ ಜೂಜು, ಶೇರ್ ಮಾರ್ಕೆಟ್ ವ್ಯಾಪಾರ, ಅಲ್ಲದೆ ಇತರ ವಿವಿಧ ರೀತಿಯ ಜುಗಾರಿಯ ಕ್ರಮಗಳು ರೂಢಿಯಲ್ಲಿವೆ. ರಸ್ತೆಯಲ್ಲಿ ಹೋಗುವ ಕಾರುಗಳ ನಂಬರುಗಳ ಮೇಲೂ ಜೂಜುಕಟ್ಟಿ ಬಳಲುವವರಿದ್ದಾರೆ. ಈ ವಿಷಯದಲ್ಲಿ ಭಾರತ ಅಮೇರಿಕಾ ದೇಶಗಳೊಳಗೆ ಬಹಳ ಸಾಮರಸ್ಯವಿದೆ.

ನಮ್ಮ ದೇಶದಲ್ಲಿಲ್ಲದ ವಿದ್ಯಮಾನವೆಂದರೆ ಇಲ್ಲಿಯ ಅದ್ಭುತವಾದ ಕಾಳ ಸಂತೆ. ಪ್ರಾಮುಖ್ಯವಾದ ವಸ್ತುಗಳಿಗೆಲ್ಲಾ ಇಲ್ಲಿ ಬೆಲೆ ನಿಯಂತ್ರಣವಿದೆ. ಒಂದು ಬೆಲೆ ನಿಯಂತ್ರಣವಾದೊಡನೆಯೇ ಒಂದು ಸುಂದರವಾದ ಹೊಸ ಕಾಳಸಂತೆಯು ಇಲ್ಲಿ ಪ್ರಾರಂಭವಾಗುವುದು. ಕೃತಕ ಗೊಬ್ಬರಗಳು, ಕಬ್ಬಿಣ ಮತ್ತು ಉಕ್ಕು, ಸಿಮೆಂಟು, ಯಂತ್ರಸಾಮುಗ್ರಿಗಳು, ಔಷಧಿಗಳು, ಬಟ್ಟೆ ಬರೆ, ಸಕ್ಕರೆ—ಹೀಗೆ ಎಲ್ಲದಕ್ಕೂ ಬೆಲೆ ನಿಯಂತ್ರಣವೂ ಇದೆ. ಕಾಳಸಂತೆ ಯೂ ಇದೆ. ಕಾಳಸಂತೆಯಲ್ಲಿ ಎಂತೆಂತಹ ವಸ್ತುಗಳು ಬೇಕಿದ್ದರೂ ವಿಪುಲ ವಾಗಿವೆ. ಬಾಹ್ಯ ನಿಯಂತ್ರಿತ ಮಾರುಕಟ್ಟೆಯಲ್ಲಿ ಶೇಖರವಿಲ್ಲ ಎಂಬ ಬೋರ್ಡು ಇಂಗ್ಲಿಷಿನಲ್ಲಿ ಯಾವಾಗಲೂ ತೂಗಹಾಕಿರುವುದು.

ಇಂತಹ ಕಾಳಸಂತೆಯ ವ್ಯಾಪಾರಕ್ಕೆ ಬ್ಯಾಂಕಿನ ಸಾಲವೂ ಸಿಗುವಂತಿಲ್ಲ.

ಅದಕ್ಕೆಲ್ಲಾ ಈ ಕಪ್ಪು ದ್ರವ್ಯವೇ ಆಗಬೇಕು. ದೊಡ್ಡ ದೊಡ್ಡ ಯೋಜನೆಗಳ ಬಗ್ಗಾಗಿ ಸರಕಾರವು ಕಳುಹಿಸಿದ ಸಿಮೆಂಟು, ಕಬ್ಬಿಣ, ಉಕ್ಕುಗಳು, ಯಾವ ಯಾವುದೋ ಮಾರ್ಗವಾಗಿ, ಬಹಳ ಜನರ ಕಿಸೆ ತುಂಬುತ್ತಾ ಕಾಳಸಂತೆಯನ್ನು ಸೇರುವವು—ಮತ್ತು ಅಲ್ಲಿ ಹಾಯಾಗಿ ಕುಳಿತಿರುವವು. ದೇಶದ ಬಹಳ ಪಾಲಿನ ಹಣವೆಲ್ಲ ಈ ಕಾಳ ಸಂತೆಯಲ್ಲೇ ಸುತ್ತುತ್ತಾ ಇರುವುದು.

ಸರಕಾರದ ಒಂದೊಂದು ನಿಯಮ, ಮತ್ತು ಒಂದೊಂದು ಶಾಸನವನ್ನು ಮುರಿಯಲು ಕಪ್ಪು ಹಣವನ್ನು ಬಂದಷ್ಟು ಸುರಿಯಬೇಕು—ಹಾಗೆ ಸುರಿಯು ತ್ತಲೇ ಹೋದಂತೆ "ಅಲಿಬಾಬಾ ಮತ್ತು 40 ಜನ ಕಳ್ಳರು" ಎಂಬ ಅರೇಬಿ ಯನ್ ನೈಟ್ಸ್ ಕತೆಯಂತೆ ನಿಯಮಗಳ ಮೇಲೆ ನಿಯಮಗಳೆಲ್ಲಾ ಸಡಿಲವಾಗಿ ಬಾಗಿಲು ತೆರೆದು ದಾರಿಯನ್ನು ಹಸನುಮಾಡಿ ಕೊಡುವವು. ಆದರೆ ಪಾರ್ಲಿ ಮೆಂಟಿನಲ್ಲಿ, ವಿಧಾನ ಸಭೆಗಳಲ್ಲಿ ಸಚಿವರುಗಳು ಹೇಳುವ ಮಾತಿನ ಪ್ರಕಾರ ಬೇಕಾದ ಸಾಮಗ್ರಿಗಳು ಬೇಕಷ್ಟು ನಿಯಂತ್ರಿತ ಬೆಲೆಗೇ ಸಿಗುತ್ತವೆ. ಅದಕ್ಕೆ ಬೇಕಾದ ಅಂಕೆ ಸಂಖ್ಯೆಗಳೆಲ್ಲಾ ಅವರ ಕೂಡೆ ಸಿದ್ಧವಾಗಿಯೇ ಇರುತ್ತವೆ.

ಇನ್ನೊಂದು ವಿಷಯವಿದೆ. ಭಾರತವು ಸಮತಾವಾದದೆಡೆಗೆ ಮುನ್ನು ಗ್ಗುವ ರಾಷ್ಟ್ರವಷ್ಟೆ? ಆದ್ದರಿಂದ ಎಲ್ಲವೂ ಸರಕಾರದ ನಿಯಂತ್ರಣಕ್ಕೊಳಪಟ್ಟಿದೆ. ಯಾವುದೇ ವ್ಯಾಪಾರ, ಕೈಗಾರಿಕೆ, ಇಲ್ಲವೇ ಉದ್ದಿಮೆಗಳನ್ನು ಸ್ಥಾಪಿಸಬೇಕಿ ದ್ದರೂ ಸರಕಾರದ ಲೈಸನ್ಸು ಆಗಲೇಬೇಕು. ಬೇಕಾದ ಯಂತ್ರ ಸಾಮಗ್ರಿ ಗಳನ್ನು ಹೊರ ದೇಶಗಳಿಂದ ಸುಲಭವಾಗಿ ತರಿಸುವಂತಿಲ್ಲ. ಅದಕ್ಕೆ ಬಹಳ ಮಂದಿ ನೀಚ, ಉಚ್ಚ ಅಧಿಕಾರಿಗಳ ಅನುಗ್ರಹ ಬೇಕಾಗುತ್ತದೆ. ಅದಕ್ಕೂ ಲೈಸನ್ಸ್ ಆಗಬೇಕು. ಈ ಎಲ್ಲಾ ಲೈಸನ್ಸ್‌ಗಳನ್ನು ಪಡೆಯುವುದಕ್ಕೂ ವಿವಿಧ ಹಂತದ ಅಧಿಕಾರಿಗಳಿಗೆ ವಿವಿಧ ರೀತಿಯ ಭಕ್ಷೀಸುಗಳನ್ನು ಕೊಡಬೇಕು. ಅಷ್ಟೇ ಸಾಲದು—ವಿವಿಧ ವ್ಯಕ್ತಿಗಳ ಪ್ರಭಾವ ಬೀಳಲು, ಅವರಿಗೂ ವಿವಿಧ ಸಂದರ್ಭಗಳಲ್ಲಿ ವಿವಿಧ ಆರ್ಥಿಕ ಸವಲತ್ತುಗಳನ್ನೂ ನೀಡಬೇಕು.

ಈ ಎಲ್ಲದರ ಪರಿಣಾಮವಾಗಿ, ಆ ಉದ್ದಿಮೆಗಳಲ್ಲಿ ತಯಾರಾಗುವ ಸಿದ್ಧವಸ್ತುಗಳ ಕ್ರಯ ಹೆಚ್ಚಾಗುವುದು. ಅದರ ಪರಿಣಾಮವಾಗಿ ಬೆಲೆನಿಯಂ ತ್ರಣವಿರುವ ವಸ್ತುಗಳ ಬೆಲೆಯೂ ಏರುವುದು. ಆದರೆ ಸರಕಾರವು ಇದನ್ನೆಲ್ಲಾ ಗಣಿಸುವಂತಿಲ್ಲ. ಬೆಲೆ ನಿಯಂತ್ರಣ ಹಾಕಿದ್ದೇವೆ ಎಂಬುದೊಂದು ತೃಪ್ತಿ ಮಾತ್ರವೇ ಅವರಿಗೆ ಬೇಕಾದ್ದು—ಪರಿಣಾಮವೆಂದರೆ ಕಾಳಸಂತೆ.

ಭಾರತದ ಈ ಕಾಳಸಂತೆಯು ವಿರಾಟ್ ರೂಪವನ್ನು ತಾಳಿದೆ. ಸಿಲ್ವರ್, ಇದಕ್ಕೆ ಎಲ್ಲರೂ ಅಧೀನರೇ. ಸಂದರ್ಭಾನುಸಾರ ಸಚಿವರುಗಳೂ ಕೂಡಾ ಇದಕ್ಕೆ ಅಧೀನವಾಗಿ ಕಾಳಸಂತೆಯಿಂದಲೇ ಜೀವನಾವಶ್ಯಕ ವಸ್ತುಗಳನ್ನು ತರಿಸಬೇಕಾಗಬಹುದು.

ಸರಕಾರದ ಈ ಎಲ್ಲಾ ಧೋರಣೆಗಳಿಂದಾಗಿ ಇಲ್ಲಿ ಯಾವುದೇ ಒಂದು ದೊಡ್ಡ ವಹಿವಾಟಾಗಲೀ, ಅಥವಾ ಉದ್ದಿಮೆಯಾಗಲೀ, ಪ್ರಾರಂಭಿಸಲು, ಲೆಕ್ಕಕ್ಕೆ ಸಿಗದ ಕಪ್ಪು ಹಣವು ಬಹಳವಾಗಿ ಬೇಕಾಗುವುದು. ಆದ್ದರಿಂದಲೇ ಅಂತಹ ಹಣವಿಲ್ಲದೆ, ಯಾರಿಗೂ ತಾನು ಭದ್ರವಾಗಿದ್ದೇನೆಂಬ ಭಾವನೆಯಿಲ್ಲಿ ಬರುವುದಿಲ್ಲ. ಹಾಗಿರುತ್ತಾ ಪ್ರತಿಯೊಬ್ಬನೂ ಒಂದಲ್ಲ ಒಂದು ವಾಮಮಾರ್ಗ ದಿಂದ ವಿಪುಲವಾದ ಧನವನ್ನು ಆರ್ಜಿಸಲು ಯತ್ನಿಸುತ್ತಾನೆ. ವಾಮಮಾರ್ಗ ದಿಂದ ಹೋಗಿಯೇ ಹಣ ಮಾಡಬಹುದಷ್ಟೇ ಎಂಬುದು ಇಲ್ಲಿಯ ಬಹುಸಂಖ್ಯಾಕ ಜನರ ಯಥಾರ್ಥ ವಿಶ್ವಾಸವಾಗಿದೆ.

ಸಿಲ್ವರ್, ನಿಜ ಹೇಳುವುದಿದ್ದರೆ, ಧನಾರ್ಜನೆಯನ್ನು ಪ್ರಾಮಾಣಿಕ ವಾಗಿಯೇ ಮಾಡಬಹುದಾಗಿದೆ. ಈಗ ನಮ್ಮ ದೇಶ, ಕೆನಡಾ ಮತ್ತು ಯುರೋಪಿನ ರಾಷ್ಟ್ರಗಳು ಮೊದಲಾದೆಡೆಯಲ್ಲಿ ಲೈಂಗಿಕ ಸ್ವೇಚ್ಛಾಚಾರವಿದ್ದರೂ ವ್ಯಾಪಾರೋದ್ಯಮಗಳಲ್ಲಿ ಸರಕಾರವನ್ನು ವಂಚಿಸುವ ಇಲ್ಲವೇ ವ್ಯಕ್ತಿಯು ವ್ಯಕ್ತಿಯನ್ನು ವಂಚಿಸುವ ಸಂದರ್ಭಗಳು ಅಪರೂಪವಾಗಿ ಮಾತ್ರವೇ ಬರುವ ವಲ್ಲವೇ? ಆದರಿಂದ ಸರ್ವರಿಗೂ ಭದ್ರತೆಯಿದೆ. ಆದರೆ ಇಲ್ಲಿ ಅದಕ್ಕೆ ಮಾನ್ಯತೆಯಿಲ್ಲ.

ಆದರಲ್ಲೂ ನೋಡು ಆಶ್ಚರ್ಯವೆಂದರೆ ಭಾರತದ ಜನರು ಬಹಳ ಬುದ್ಧಿ ಶಾಲಿಗಳು. ಸಾಮಾನ್ಯ ಮಜೂರರು ಕೂಡಾ ಕೇವಲ ಸ್ವಲ್ಪ ತರಬೇತಿಯಿಂದ ನೈಪುಣ್ಯತೆಯುಳ್ಳ ಕೆಲಸಗಾರರಾಗಿ ಮಾರ್ಪಡುವರು. ನಮ್ಮ ಸಂಯುಕ್ತ ಅಮೇರಿಕಾ ದೇಶದ ಜನತೆಗಿಂತ ಇವರ ಬುದ್ಧಿ ಸೂಕ್ಷ್ಮತೆಯು ಏನೇನೂ ಕಡಿಮೆಯದಲ್ಲ. ಕೆಲವು ಮಟ್ಟನಲ್ಲಿ ಇವರು ನಮಗಿಂತಲೂ ತೀಕ್ಷ್ಣಮತಿ ಗಳೇನೋ ಎಂಬುದಾಗಿ ನನಗೆ ಹಲವು ಸಾರಿ ತೋರಿದೆ.

ಆದರೇನು ಮಾಡಲಿ? ಇಲ್ಲಿಯ ಜನರಿಗೆ ಕ್ಷಿಪ್ರ ಸಮಯದಲ್ಲಿ ವಿಪುಲ ಧನ ಸಂಗ್ರಹವಾಗಬೇಕು. ದೀರ್ಘಕಾಲಿಕ ಯೋಜನೆಗಳಿಗೆ ಅವರು ಹಲ ವರು ಸಿದ್ಧರಿಲ್ಲ. ವ್ಯಾಪಾರೋದ್ದಿಮೆಗಳಲ್ಲಿ ದೂರ ದೇಶದ ಜನರ ಪ್ರೇಮ

ಪ್ರೇಮ ವಿಶ್ವಾಸಗಳೇ ಉತ್ತಮ ವ್ಯಾಪಾರದ ಆಧಾರವೆಂಬುದರಲ್ಲಿ ಅವರಿಗೇನೂ ನಂಬುಗೆಯಿಲ್ಲ.

ಎಂದೆಂದೂ ಉತ್ತಮವಾದ ಮಾಲನ್ನೇ ಒದಗಿಸಿಕೊಟ್ಟು, ಅದಕ್ಕೆ ಬೀಳುವ ಯಥಾರ್ಥ ಖರ್ಚಿಗೆ ಲಾಭವನ್ನೂ ಸೇರಿಸಿ ವ್ಯಾಪಾರ ಮಾಡಿದಾಗ, ಬಾನಷ್ಟು ಏರುವ ವ್ಯಾಪಾರದಿಂದಲೇ ಬೇಕಷ್ಟು ಲಾಭವಾಗುವುದೆಂದು ಅವರು ನಂಬುವುದಿಲ್ಲ. ಉದಾಹರಣೆಗೆ ನಮ್ಮ ದೇಶದ ಹೆನ್ರಿಫೋರ್ಡ್, ರಾಕ್‌ಫೆಲ್ಲರ್ ಮೊದಲಾದವರು ಅಗಣಿತ ಸಂಪತ್ತಿಗೆ ಅಧಿಕಾರಿಗಳಾದದ್ದು ತಮ್ಮ ಪ್ರಾಮಾಣಿಕವಾದ ಮತ್ತು ಬೃಹತ್ತಾದ ಕಾರಖಾನೆಗಳಿಂದಲ್ಲವೇ?

ಇಲ್ಲಿಯ ಉದ್ದಿಮೆಗಾರರ ಸಾಹಸದ ರೀತಿಯೇ ಬೇರೆ. ಮಾರುಕಟ್ಟೆಯಲ್ಲಿರುವ ಯಾವುದಾದರೊಂದು ಮಾಲು ಉತ್ತಮವಾಗಿದ್ದರೆ, ಅದೇ ಮಾಲಿನ ನಕಲಿ ಮಾಡಿ, ಅಗ್ಗದ ವಸ್ತುಗಳನ್ನು ಅದಕ್ಕೆ ಉಪಯೋಗಿಸಿ, ಮಾಲಿನ ಹೆಸರೂ ಕೂಡಾ ಮೂಲವಸ್ತುವಿನ ಹೆಸರಿಗೆ ಸರಿಯಾಗಿ ಕಾಣುವಂತೆ ಏರ್ಪಡಿಸಿ ದುಡ್ಡು ಮಾಡುವುದರಲ್ಲಿ ಇಲ್ಲಿಯ ಹಲವು ಉದ್ದಿಮೆಗಾರರಿಗೆ ಪ್ರೇಮ. ಅದರಿಂದ ತಮ್ಮ ಗೌರವಕ್ಕೆ ಕುಂದು ಎಂಬ ಭಾವನೆಯೂ ಅವರ ತಲೆಯಲ್ಲಿ ಬರುವುದೇ ಇಲ್ಲ.

ಮಾದರಿಯಾಗಿ ಅತೀ ಉತ್ತಮ ರೀತಿಯ ಬಟ್ಟೆ ತಯಾರಿಸಿ ವಿಶ್ವದ ಬೇರೆ ಬೇರೆ ಮಾರುಕಟ್ಟೆಗಳಿಗೆ ಕಳುಹಿಸಿ ಬೇಡಿಕೆಯಿದೆಯೇ ನೋಡುತ್ತಾರೆ. ಹೊರದೇಶಗಳಿಂದ ಆದೇಶ ಬಂದುಬಿಟ್ಟರೆ ಸಾಕು. ಬಹಳ ಕೀಳ್ತರದ ಕಚ್ಚಾ ಮಾಲುಗಳನ್ನು ಉಪಯೋಗಿಸಿ, ಕೀಳ್ಮಟ್ಟದ ಬಟ್ಟೆ ತಯಾರಿಸಿ ಕಳುಹಿಸಿಕೊಡುತ್ತಾರೆ. ಅದರಿಂದ ಬಹಳ ಲಾಭವಾಯಿತೆಂದು ಭಾವಿಸಿಕೊಳ್ಳುತ್ತಾರೆ. ಇದರಿಂದ ಆ ಕಂಪೆನಿಯ ಮೇಲೆ ಅವಿಶ್ವಾಸ ಬರುವುದು ಮಾತ್ರವಲ್ಲದೆ ಭಾರತದ ಉತ್ಪತ್ತಿಗಳ ಕುರಿತಾಗಿಯೇ ಅನ್ಯ ದೇಶಿಗರಿಗೆ ಸಂಶಯ ಬರುವುದು. ಇದರಿಂದ ಭಾರತದ ವ್ಯಾಪಾರವೇ ಕುಸಿದು ಬೀಳುವುದು–ಅನ್ಯ ದೇಶಗಳ ಮಾರುಕಟ್ಟೆ ಇಲ್ಲವಾಗುವುದು. ಆದರೆ ಅದನ್ನೆಲ್ಲಾ ಗಣಿಸುವ ದೂರದರ್ಶಿಗಳಾರು?

ನಾನು ಮೇಲೆ ಬರೆದುದು ಒಂದು ಉದಾಹರಣೆ ಮಾತ್ರವೇ ಆಗಿದೆ– ಇದೇ ರೀತಿ ಯಂತ್ರ ಸಾಮಗ್ರಿಗಳು, ಉಣ್ಣೆ ಬಟ್ಟೆ, ಚರ್ಮದ ಸಾಮಾನುಗಳು, ಇತರ ನಿತ್ಯೋಪಯೋಗಿ ವಸ್ತುಗಳು ಮೊದಲಾದವುಗಳಲ್ಲಿಯೂ ಭಾರತೀ

ಯರು ತಮಗೆ ವಿಶ್ವಾದ್ಯಂತ ಇರುವ ಅತ್ಯುತ್ತಮ ಮಾರುಕಟ್ಟೆಗಳನ್ನು ಕಳೆ ಕೊಳ್ಳುತ್ತಿದ್ದಾರೆ.

ಉಳಿದೆಲ್ಲಾ ವಿಷಯಗಳ ಮಾತಂತಿರಲಿ–ಆಹಾರ ಸಾಮಗ್ರಿಗಳಿಗೂ ಇತರ ಅಗ್ಗದ ವಸ್ತುಗಳನ್ನು ಬೆರಕೆ ಮಾಡಿ ಅದರಿಂದ ಜನರ ಆರೋಗ್ಯದ ಮೇಲೆ ಏನು ಪರಿಣಾಮವಾಗುವುದೆಂಬುದನ್ನೂ ಕೂಡಾ ಲೆಕ್ಕಿಸದೆ ಧನ ಸಂಪಾದಿಸಲು ಯತ್ನಿಸುವವರಿದ್ದಾರೆ. ಅಕ್ಕಿ, ಗೋಧಿ ಮೊದಲಾದ ಧಾನ್ಯಗಳಿಗೆ ಕಲ್ಲು, ನೀರು; ತುಪ್ಪಕ್ಕೆ ವನಸ್ಪತಿ; ಹಾಲಿಗೆ ನೀರು, ಗೋಧಿಹಿಟ್ಟು–ಹೀಗೆ ಯಾವ ಯಾವುವೋ ವಸ್ತುಗಳಿಗೆ ಯಾವ ಯಾವುದೋ ಅಗ್ಗದ ವಸ್ತುಗಳನ್ನು ಹಾಕಿ ಜನರನ್ನು ವಂಚಿಸುತ್ತಾರೆ.

ಮಾನವನ ಜೀವವನ್ನುಳಿಸಬಲ್ಲ ಔಷಧಿಗಳಲ್ಲಿಯೂ ಈ ಬೃಹತ್ ಮೋಸವು ನಡೆಯುತ್ತಿದೆ. ಯಾವುದಾದರೂ ಒಂದು ಪ್ರಸಿದ್ಧ ಕಂಪೆನಿಯ ಔಷಧಿಗಳನ್ನೇ ಹೋಲುವ ಯಾವುದೋ ವಸ್ತುವನ್ನು ಅಗ್ಗವಾಗಿ ತಯಾರಿಸಿ (ಅದು ಮಾನವನಿಗೆ ಕೇವಲ ವಿಷವಾಗಿರಲೂ ಬಹುದು) ಅದೇ ರೀತಿಯ ಚೀಟಿಗಳನ್ನೂ ಅದೇ ಹೆಸರಿನ ಸಂಕೇತವಾಗಿ ತಯಾರಿಸಿ, ವಿವಿಧ ಕೃತಕ ಏಜಂಟರ ಮೂಲಕ ಅದೇ ವಸ್ತು ಎಂಬುದಾಗಿ ನಂಬಿಸಿ ಮಾರಾಟ ಮಾಡುತ್ತಾರೆ. ಅದರಿಂದ ಎಷ್ಟೋ ದೊಡ್ಡ ಗಂಡಾಂತರವುಂಟಾಗುವುದಿದೆ. ಎಷ್ಟೋ ದುರಂತವಾಗುವುದಿದೆ–ಜೀವಹಾನಿಯಾಗುವುದಿದೆ.

ಕೆಲವು ಮಾರಾಟಗಾರರೂ ಕೆಲವು ಸರಕಾರೀ ನೌಕರರೂ ಈ ಮಹಾ ನರಮಾರಕ ಕಾರ್ಯದಲ್ಲಿ ಪರಿಣತರಾಗಿ ಸಹಕರಿಸಿ ದುಡ್ಡು ಗಳಿಸುತ್ತಾರೆ.

ಇಲ್ಲಿಯ ಎಲ್ಲಾ ಸಿದ್ಧ ವಸ್ತುಗಳು ಅತ್ಯುತ್ತಮ ಮಟ್ಟದಲ್ಲಿರುವಂತೆ ನೋಡಲು ಇಂಡಿಯನ್ ಸ್ಟೇಂಡರ್ಡ್ಸ್ ಇನ್ಸ್ಟಿಟ್ಯೂಷನ್ ಎಂಬೊಂದು ಸಂಸ್ಥೆಯು ಸರಕಾರದ ವತಿಯಲ್ಲಿ ನಡೆದಿದೆ. ಅದು ಸರ್ವ ಸಾಮಾನ್ಯ ಕೆಲಸ ಮಾಡುತ್ತಿದೆಯಾದರೂ, ಎಲ್ಲಾ ಕೈಗಾರಿಕೋದ್ಯಮಿಗಳಿಗೂ ಅದು ಇನ್ನೂ ಕಡ್ಡಾಯವಾಗಿ ತನ್ನ ಕೈಯನ್ನು ಚಾಚಿರುವುದಿಲ್ಲ. ಅದು ಕಡ್ಡಾಯವಾಗಿ ಕೈಚಾಚಿದರೂ ಅದರಲ್ಲಿ ಏನೆಲ್ಲಾ ಭ್ರಷ್ಟಾಚಾರಗಳು ಮನೆಮಾಡುವವೋ ಅದು ಬೇರೆ ತಿಳಿಯದು.

ಹೀಗೆ ವಿವಿಧ ರೀತಿಯ ವಾಮ ಮಾರ್ಗಗಳಿಂದ ಸಂಪಾದಿಸಿದ ಧನವನ್ನು ವಿನಿಯೋಗಿಸುವುದರಲ್ಲಿ ಭಾರತದಲ್ಲಿ ಒಂದು ಅಪೂರ್ವವಾದ ಕ್ರಮವಿದೆ.

ಇಲ್ಲಿಯು ಬ್ರಾಹ್ಮಣರಿಗೆ ಉಪನಯನವೆಂಬ ಒಂದು ಸಂಸ್ಕಾರವಿದೆ. ಆ ದಿನ ದೊಡ್ಡ ಸಮಾರಂಭವೇ ಸರಿ. ಶ್ರೀಮಂತರಾದರೆ ಹಲವು ಸಾವಿರಗಟ್ಟಲೆ ವ್ಯಯಿಸುವರು. ಮಧ್ಯಮ ವರ್ಗದವರಾದರೆ ಒಂದೆರಡೇ ಸಾವಿರ ವ್ಯಯಿಸಿ, ತೃಪ್ತಿಪಟ್ಟುಕೊಳ್ಳುವರು. ನಿಮ್ನ ಮಧ್ಯಮ ವರ್ಗದವರಾದರೆ 500 ಯಾ 600 ರೂಪಾಯಿಗಳನ್ನು ಮಾತ್ರವೇ ವ್ಯಯಿಸಿ, "ನಮ್ಮ ಗ್ರಹಗತಿ-ಹೆಚ್ಚು ಖರ್ಚು ಮಾಡಲು ದುಡ್ಡಿಲ್ಲ" ಎಂದು ವ್ಯಥೆ ಪಡುತ್ತಾರೆ. ಆ ಮೌಲ್ಯವೂ ಕೂಡಾ ಸಾಲದಿಂದಲೇ ಪಡೆದರೂ ಆಶ್ಚರ್ಯವೇನಿಲ್ಲ.

ಇನ್ನು ಕೇವಲ ಬಡವರಾದರೂ ಯಾರ್‍ಯಾರ ಕಾಲಿಗೆ ಬಿದ್ದಾದರೂ ನೂರಿನ್ನೂರು ರೂಪಾಯಿಗಳನ್ನು ಸಾಲಪಡೆದು ವ್ಯಯಿಸಿ, ಮಗನಿಗೆ ಉಪನಯನ ಮಾಡಿದೆ ಎಂದು ಹೆಮ್ಮೆ ಪಟ್ಟುಕೊಳ್ಳುತ್ತಾರೆ.

ಈ ಉಪನಯನವೆಂದರೆ ಏನು ಎಂಬ ಕುತೂಹಲ ನಿನ್ನಲ್ಲೇಳಬಹುದು, ಅಲ್ಲವೇ? ಇದು ಭಾರತದ ವರ್ಣಾಶ್ರಮ ಧರ್ಮದ ಒಂದು ಭಗ್ನಾವಶೇಷವಾಗಿದೆ. ಹಿಂದೂ ಧರ್ಮದ ಸಿದ್ಧಾಂತದ ಪ್ರಕಾರ ಬಾಲಕರಿಗೆ ವಿದ್ಯಾರ್ಜನೆಯ ಕಾಲ ಬಂದಾಗ, ಅವರ ವಿದ್ಯಾಭ್ಯಾಸದ ಬಗ್ಗಾಗಿ ಅವರನ್ನು ಯಾವುದಾದರೊಂದು ಗುರುವಿನಾಶ್ರಮದಲ್ಲಿ ಬಿಡುವ ಬಗ್ಗೆ ವ್ಯವಸ್ಥೆ ಮಾಡಿ, ಆತನು ಭಗವಂತನನ್ನು ಪಡೆಯುವ ಸಾಧನೆಯಲ್ಲಿ ತೊಡಗುವಂತೆ ಮಾಡುವ ಮುಹೂರ್ತವಾಗಿದೆ ಅದು. ಆ ದಿನ ಆತನು ಬ್ರಹ್ಮಚರ್ಯದ ಅಂದರೆ ಭಗವಂತನೊಂದಿಗೆ ಮಾಡುವ ಸಹಜೀವನದ ಪ್ರತಿಜ್ಞೆ ಮಾಡುತ್ತಾನೆ. ಆತನಿಗೆ ಆದಿನ ತಂದೆಯಾದವನು ಗಾಯತ್ರಿ ಎಂಬ ಮಹಾ ಮಂತ್ರವನ್ನು ಉಪದೇಶಿಸಿ, ಪುರೋಹಿತರ ಮೂಲಕವಾಗಿ ವಿವಿಧ ಬುದ್ಧಿವಾದದ ಮಾತುಗಳನ್ನು ಹೇಳಿಸುತ್ತಾನೆ. ಯಥಾರ್ಥವಾಗಿ ಅದೊಂದು ಪವಿತ್ರವಾದ ಮುಹೂರ್ತ. ದೇವರ ಕಡೆಗೆ ಸಾಗುವ ಮಹಾ ಪಯಣದ ಮೊದಲ ಘಟ್ಟ. ಆದರೆ ಈಗ ಕ್ರೈಸ್ತರಾದ ನಮ್ಮ ಹಲವು ವಿಧಿಗಳಂತೆ ಅದು ಕೇವಲ ಒಂದು ಆಡಂಬರದ ಮತ್ತು ಖರ್ಚುವೆಚ್ಚದ ಕ್ರಿಯೆಯಾಗಿ ಉಳಿದಿದೆ.

ಸತ್ಯವಾಗಿ ಉಪನಯನ ಎಂದರೆ ಜ್ಞಾನವೆಂಬ ಎರಡನೇ ಕಣ್ಣನ್ನೇ ಆ ವಟು (ಅಂದರೆ ಉಪನಯನ ಪಡೆಯುವಾತನು) ವಿಗೆ ಕೊಡುವುದೆಂಬ ಅರ್ಥ; ಈ ಉಪನಯನವಾದ ನಂತರ ವಟುವು ಸಂಧ್ಯಾವಂದನೆಯೆಂಬುದಾಗಿ ಕರೆಯಲ್ಪಡುವ ಪ್ರಾರ್ಥನೆ, ಅಲ್ಲದೆ ಅಗ್ನಿಹೋತ್ರ ಎಂಬುದಾಗಿ ಕರೆಯಲ್ಪಡುವ ಒಂದು

ವಿಧಿ ಇತ್ಯಾದಿಗಳನ್ನು ಮಾಡಬೇಕೆಂಬ ನಿಯಮವಿದೆ. ಕೈಯಲ್ಲೇ ತಯಾ
ಸಿದ ನೂಲಿನಿಂದ ಮಾಡಿದ ಒಂದು ಯಜ್ಞೋಪವೀತವೆಂಬ ಹೆಸರಿನ ಸಂಕೇ
ವನ್ನಾತ ಧರಿಸಿಕೊಂಡಿರುತ್ತಾನೆ. ಅದರಲ್ಲಿ ಪರಮಾತ್ಮನನ್ನೇ ಕಲ್ಪಿಸುವ
ತಿಯಲ್ಲಿ ಬ್ರಹ್ಮಗಂಟು ಎಂಬುದಾಗಿ ಕರೆಯಲ್ಪಡುವ ಒಂದು ಗಂಟು ಕೂಡ
ಇದೆ.

ಕ್ರೈಸ್ತರಿಗೆ ಇದನ್ನು ಹೋಲಿಸುವುದಿದ್ದರೆ ನಮ್ಮ ಕ್ರಾಸಿಗೆ ಹೋಲಿಸ
ಹುದು. ನಮಗೆ ಅದು ಎಷ್ಟು ಪವಿತ್ರವೋ ಅಷ್ಟೇ ಪವಿತ್ರ ಉಪಯನವ
ದಾತನಿಗೆ ಯಜ್ಞೋಪವೀತ.

ಆದರೆ ನಮ್ಮಂತಹ ಪಾಶ್ಚಾತ್ಯರ ಅನುಕರಣೆಯಿಂದಲೋ ಏನೋ, ಈ
ಲೀಗ ಉಪನಯನವಾದ ಬಾಲಕರಾಗಲೀ, ಹಿರಿಯರಾಗಲೀ ಸಂಧ್ಯಾವಂದ
ಯನ್ನೇ ಮಾಡುತ್ತಿಲ್ಲ. ಆ ದಿನ ಕಲಿತ ಯಾವ ಪಾಠವನ್ನೂ ಅವರು ಸ್ಮರಿಸ
ವುದೂ ಇಲ್ಲ-ನೆನಪಿಟ್ಟುಕೊಳ್ಳುವುದೂ ಇಲ್ಲ.

ಸಿಲ್ವರ್, ಅಷ್ಟೇ ಅಲ್ಲ. ನೋಡು-ಪರಿಸ್ಥಿತಿಯು ಎಷ್ಟು ವಿಪರೀತಾ
ಸ್ಥೆಗೆ ಬಂದಿದೆಯೆಂದರೆ, ಇಂದಿನ ಯುವಕರು ತಮ್ಮ ಯಜ್ಞೋಪವೀತ ಧ
ಸುವುದಕ್ಕೆಯೇ ನಾಚುತ್ತಾರೆ. ಕಾಲೇಜು ವಿದ್ಯಾರ್ಥಿಗಳು ಹಲವರು ಅದನ
ತೆಗೆದಿಟ್ಟು ಊರು ಮನೆಗಳಿಗೆ ಹೋಗುವ ಸಮಯದಲ್ಲಿ ಮಾತ್ರ ಕುತ್ತಿಗೆಯ
ಧರಿಸಿಕೊಳ್ಳುವ ಕ್ರಮವೂ ಇದೆ.

ಆದರೆ ಸಿಲ್ವರ್, ನಮ್ಮ ಆ ಪವಿತ್ರ ಕ್ರಾಸಿಗೆ ಯಾವ ಬೆಲೆಯೂ ಕೊಡದ
ಚರ್ಚಿನ ಹೊಸಲಿಗೇ ದಾಟದ ಮಂದಿ ನಮ್ಮಲ್ಲಿ ಹಲವರಿರುವಾಗ, ಭಾರತ
ವರನ್ನು ಹೀಯಾಳಿಸುವ ಅಧಿಕಾರ ನಮಗಿಲ್ಲವೆಂದೇ ತೋರುವುದು, ಅಲ್ಲವೇ

ಗೆಳೆಯಾ, ಮರೆತೇ ಬಿಟ್ಟೆ. ಏನನ್ನೋ ಹೇಳಲು ಹೊರಟು ಎಲ್ಲೆಲ್ಲಿಗೋ
ಹೋಗಿಬಿಟ್ಟೆ ಅಲ್ಲವೇ? ಕ್ಷಮಿಸಿಬಿಡು, ಪುನಃ ವಿಷಯಕ್ಕೆ ಬರುತ್ತೇನೆ.

ಹಾಗೆಂದು ಇಷ್ಟೆಲ್ಲಾ ಹೇಳಲು ಏನೂ ಕಾರಣವಿಲ್ಲದಿಲ್ಲ. ಅಂದು
ಉಪನಯನಕ್ಕೆ ಅಂತಹ ಅರ್ಥವಿತ್ತು. ಇಂದು ಅದು ಕೇವಲ ಆಡಂಬರದ
ಚಿಹ್ನೆಯಾಗಿದೆ; ಪ್ರದರ್ಶನದ ಕೂಟವಾಗಿದೆ. ಜನ ಖರ್ಚು ಮಾಡುತ್ತಾರೆ-
ಊಟ ಮಾಡುತ್ತಾರೆ, ಮಾಡಿ ತೇಗುತ್ತಾರೆ. ಉಳಿದದ್ದನ್ನು ಬಿಸಾಡು
ತ್ತಾರೆ. ಎಷ್ಟೆಲ್ಲಾ ಭಕ್ಷ್ಯ ಭೋಜ್ಯಗಳು! ಎಷ್ಟೆಲ್ಲಾ ಸಂಭ್ರಮ! ಎಷ್ಟು
ಅಪವ್ಯಯ! ಏಕೆ ಹಾಗೆ ಖರ್ಚು ಮಾಡುತ್ತಾರೋ ತಿಳಿಯುವುದಿಲ್ಲ.

ಮದುವೆಗಳಿಗೂ ಇಷ್ಟೇ. ಸಾವಿರಾರು ಜನರಿಗೆ ಆಮಂತ್ರಣ ಕೊಟ್ಟು ಬರಮಾಡುತ್ತಾರೆ–ಭಾರೀ ಗದ್ದಲ; ಭಾರೀ ಖರ್ಚು; ಭಾರೀ ಆಡಂಬರ. ಎಲ್ಲರಿಗೂ ಊಟ ಹಾಕುತ್ತಾರೆ, ಉಪಚಾರ ಮಾಡುತ್ತಾರೆ. ಊಟಕ್ಕೆ ೨-೩ ಪರಮಾನ್ನಗಳನ್ನು (ಒಂದು ರೀತಿಯ, ಸಕ್ಕರೆಯಿಂದ ಮಾಡಿದ ಪರಿಮಳ ಯುಕ್ತವಾದ ಸಿಹಿದ್ರವ) ತಯಾರಿಸುವುದಲ್ಲದೆ ಲಡ್ಡು ಮೊದಲಾದ ವಿವಿಧ ರೀತಿಯ ಸಿಹಿತಿಂಡಿಗಳನ್ನು ಮಾಡುತ್ತಾರೆ. ಆಗಂತುಕರಿಗೆ ಪ್ರತಿಯೊಬ್ಬರಿಗೂ ಬೇಡ ಬೇಡವೆಂದರೂ ಒತ್ತಾಯಿಸಿ ಬಡಿಸಿ, ಅವರು ಬಿಸಾಡುವಂತೆ ಮಾಡು ತ್ತಾರೆ. ಏಕೆಂದರೆ ಅದು ದೊಡ್ಡಸ್ತಿಕೆಯ ಲಕ್ಷಣವೆಂಬುದಾಗಿ ತಿಳಿಯಲ್ಪಡು ತ್ತಿದೆ.

ಭಾರತದ ಶ್ರೀಮಂತರು ಒಂದೆರಡು ಸಾವಿರ ರೂಪಾಯಿಗಳಿಂದ ತೊಡಗಿ, ಲಕ್ಷಗಟ್ಟಲೆ ರೂಪಾಯಿಗಳ ತನಕವೂ ಇಂತಹ ಸಮಾರಂಭಗಳಿಗಾಗಿ ವ್ಯಯಿಸಿ, ಹೆಮ್ಮೆ ಪಟ್ಟುಕೊಳ್ಳುತ್ತಾರೆ. ಅವರ ದಾರಿಯನ್ನನುಸರಿಸಿ, ಕೇವಲ ಬಡವರೂ, ಯಾರ್‍ಯಾರ ಮರೆಹೊಕ್ಕು ಸಾಲ ತಂದು ವ್ಯಯಿಸುತ್ತಾರೆ. ಬ್ಯಾಂಡು, ವಾಲಗ ಇತ್ಯಾದಿಗಳನ್ನೂ, ಸಿಡಿಮದ್ದುಗಳನ್ನೂ, ಮದುವೆ ಸಂಭ್ರಮಕ್ಕಾಗಿ ಕೇವಲ ಬಡವರೂ ವ್ಯಯಿಸುತ್ತಾರೆ.

ಭಾರತದ ಕರಾಳ ದಾರಿದ್ರ್ಯದೆಡೆಯಲ್ಲಿ, ಇಲ್ಲಿಯ ಶ್ರೀಮಂತರು ಈ ರೀತಿ ಅಪವ್ಯಯಮಾಡಿ ರಾಷ್ಟ್ರೀಯ ಸಂಪತ್ತನ್ನು ನಾಶಪಡಿಸುವುದನ್ನು ನೋಡುವಾಗ ಯಾರಾದರೂ ವ್ಯಥೆ ಪಡಲೇಬೇಕು.

ಮದ್ರಾಸಿನಲ್ಲಿ ಇತ್ತೀಚೆಗೆ ಸಂಪದ್ಗಿರಿ ಮುದಲಿಯಾರ್ ಎಂಬೊಬ್ಬರ ಮನೆ ಯಲ್ಲಿ ಭಾರೀ ಆಡಂಬರದ ಒಂದು ವಿವಾಹ ಸಮಾರಂಭದಲ್ಲಿ ಭಾಗವಹಿಸುವ ಒಂದು ಸಂದರ್ಭ ನನಗೆ ಬಂದಿತ್ತು. ಜಯನಾಥರಿಗೆ ಅವರು ಸ್ವಲ್ಪ ಸಂಬಂ ಧಿಕರಾದುದರಿಂದ ನನಗೂ ಒಂದು ಆಮಂತ್ರಣ ಕೊಡಿಸಿದರು. ಹಾಗೆಯೇ ಜಯನಾಥರನ್ನನುಸರಿಸಿ ನಾನೂ ಹೋಗಿದ್ದೆ.

ಅವರ ವಿಶಾಲವಾದ ಗೃಹದ ಅಂಗಳದಲ್ಲಿ ಹಾಕಿದ ಆ ಚಪ್ಪರವನ್ನು [Pandal] ನೋಡಿ ನಾನು ಸ್ತಂಭೀಭೂತನಾದೆ. ಅದರ ಕುರಿತಾಗಿ ವಿಚಾ ರಿಸಿದಾಗ, ಆ ಚಪ್ಪರಕ್ಕೇನೇ 50,000 ರೂಪಾಯಿಗಳು ವ್ಯಯವಾಗಿವೆಯೆಂದು ತಿಳಿಯಿತು. ಆದರೆ ಸ್ವಲ್ಪ ಹೊತ್ತಿನಲ್ಲಿ, ಬೊಂಬ್ಯಾಯಲ್ಲಿಯೂ ಇಂಥದೇ ಒಂದು

ಸಂದರ್ಭ ಬಂದುದು, ಹಾಗೂ ಭಾರತದ ಶ್ರೀಮಂತರು ಈ ರೀತಿ ಮದುವೆಗ
ವ್ಯಯಿಸುವುದು ರೂಢಿಯಾಗಿದೆ ಎಂಬುದಾಗಿ ಬೊಂಬ್ಬಾಯ ಮಿತ್ರ
ಹೇಳಿದ ಮಾತು ಸರಿಯಾಗಿ ನೆನಪಾಯಿತು.

ಆದರೆ ಈ ಮದುವೆಯ ಕುರಿತಾದ ಕೆಲವು ವಿವರಗಳನ್ನು ನಿನಗೆ ನೀ
ತ್ತೇನೆ.

ಹತ್ತು ಪ್ರತಿ ವಾಲಗದವರು ಅಲ್ಲಿದ್ದರು. ಒಂದೊಂದು ಪ್ರತಿಯವ
ಭಾರತದ ಒಂದೊಂದು ಭಾಗದಿಂದ ತರಿಸಲ್ಪಟ್ಟವರಂತೆ. ಒಂದೊಂ
ಪಾರ್ಟಿಯ ಚಾರ್ಜು ರೂ. 1000ದಿಂದ ರೂ. 2000ದ ತನಕ. ಅಲ್ಲ
ಪಾಶ್ಚಾತ್ಯ ಸಂಗೀತದ ಭಾರತೀಯ ಮಾದರಿಯಾಗಿರುವ 2-3 ಪ್ರತಿ ಬ್ಯಾಂಡಿ
ವರು ಬೇರೆ. ಅವರೂ ಬಹಳ ಮೇಲ್ತರದವರೇ. ಅವರಿಗೂ ಸಾವಿರಗಟ್ಟ
ಲೆಯ ಕಂಟ್ರಾಕ್ಟು. ಒಂದೊಂದು ಪಾರ್ಟಿಯವರಿಗೆ ಕೇವಲ ಅರ್ಧ ಗಂ
ಗಳ ವಾದನದ ಕಾರ್ಯಕ್ರಮವಿತ್ತು. ಸರದಿಯಾಗಿ ಎಲ್ಲರಿಗೂ ಅವಕಾ
ಕೊಡಲಾಗಿತ್ತು.

ಮದುವೆ ಮಧ್ಯಾಹ್ನಕ್ಕಿತ್ತು. ಸಾಯಂಕಾಲ ದಕ್ಷಿಣ ಭಾರತದ ಪ್ರಸಿದ್ಧ
ಸಂಗೀತ ವಿದುಷಿಯೋರ್ವಳಿಂದ ಒಂದು ಸಂಗೀತ ಕಛೇರಿ. ಆಕೆಗೆ ರೂ.
5000/-ನಿಶ್ಚಯವಾಗಿತ್ತಂತೆ. ನಂತರದ ಸರದಿ ಒಂದು ನರ್ತನ ಕಾರ್ಯ
ಕ್ರಮಕ್ಕೆ. ಅದು ರಾತ್ರೆಗೆ ಇಡಲ್ಪಟ್ಟಿತ್ತು. ಭಾರತದ ಅತಿ ಪ್ರಸಿದ್ಧ ನರ್ತಕಿ
ಯರಂತೆ ಅವರು. ಅವರಿಗೆ ರೂ. 6000/-ನಿರ್ಣಯವಾಗಿತ್ತಂತೆ. ಎಲ್ಲರೂ
ತಂತಮ್ಮ ಕಾರ್ಯಕ್ರಮ ಚಂದವಾಗಿಯೇ ಪೂರೈಸಿದ್ದಾರೆನ್ನು. ಆದರೆ ಯಾವ
ಖರ್ಚಿನಲ್ಲಿ ಎಂಬುದಷ್ಟೇ ಪ್ರಶ್ನೆ.

ಮಧ್ಯಾಹ್ನ ಡಿನ್ನರ್ ಪಾರ್ಟಿ ಇತ್ತು. ಮದ್ರಾಸಿನಲ್ಲಿ ಪ್ರಸಿದ್ಧ ಹೋಟೆ
ಲೊಂದಿದೆ. ವುಡ್‌ಲೇಂಡ್ಸ್ ಎಂಬುದಾಗಿ ಅದರ ಹೆಸರು. 2000 ಪ್ಲೇಟು
ಊಟಗಳಿಗೆ ಆದೇಶ ಹೋಗಿತ್ತಂತೆ. ಒಂದೊಂದು ಪ್ಲೇಟಿಗೆ 20 ರೂಪಾಯಿ
ಚಾರ್ಜು. ಈ ಪ್ರಕಾರ ರೂ. 40,000 ಕೇವಲ ಊಟಕ್ಕೆ.

ಆ ಊಟದ ವೇಳೆ ಜನ ತಿನ್ನಲಾರದೆ ಬಿಸಾಡಿದ್ದನ್ನು ನೋಡಿ ನಾನು
ವ್ಯಥೆಪಟ್ಟೆ. ಜಯನಾಥರು ನನ್ನನ್ನು ನೋಡಿ ನಗುತ್ತಲೇ ಇದ್ದರು. ನನ
ಗಂತೂ ಆ ಊಟ ಊಟವಾಗಿ ಕಾಣಲಿಲ್ಲ—ವಿಷವಾಗಿ ಕಂಡಿತು.

ಹಾಗೆ ಖರ್ಚು ಮಾಡಿ ಭಾರತದ ಮಹಾರಾಜರಂತೆ ವೈಭವ ಮೆರೆಸ

ಬೇಕಿದ್ದರೆ ಯಾರ್ಯಾರ ರಕ್ತವನ್ನಾತ ಹೀರಿ ಹಣ ಸಂಪಾದಿಸಿದ್ದನೋ ಯಾರಿಗೆ ಗೊತ್ತು?

ನಾನು ಊಟವಾದೊಡನೆಯೇ ಹೇಸಿಕೊಂಡು ಹೊರಡಬೇಕೆಂದು ಮಾಡಿದರೂ ಜಯನಾಥರು ನನ್ನನ್ನು ಬಿಡಲೊಲ್ಲರು. "ಭಾರತವನ್ನೆಲ್ಲ ನೋಡಬೇಕೆಂದು ಹೇಳಿದಿರಲ್ಲ-ಎಲ್ಲವನ್ನೂ ನೋಡಿಯೇ ನೀವು ಹೋಗಬೇಕು. ಈಗ ಹೋಗಬಾರದು. ಭಾರತದ ಪೂರ್ಣ ಅನುಭವ ನಿಮಗಾಗಲಿ" ಎಂದು ಹೇಳಿದರು.

ಹಾಗಾಗಿ ಎಲ್ಲವನ್ನೂ ನೋಡುತ್ತ ನಿಂತೆ. ಎಲ್ಲಾ ಮುಗಿದು ರಾತ್ರಿ ಆ ಮನೆಯಿಂದ ಹೊರಟಾಗ, ನಾನು ಕಂಡ ದೃಶ್ಯ ಹೃದಯ ವಿದ್ರಾವಕವಾಗಿತ್ತು. ಎಲ್ಲರೂ ತಿಂದುಳಿದ ಭಕ್ಷ್ಯಭೋಜ್ಯಗಳು ರಸ್ತೆಯ ಬದಿಯಲ್ಲಿ ರಾಶಿ ಬಿದ್ದಿತ್ತು. ಹಲವಾರು ನಾಯಿಗಳೂ, ದನಕರುಗಳೂ ಅಲ್ಲಿ ಹಿಂಡು ಕಟ್ಟಿ ನಿಂತಿದ್ದುವು. ಅವುಗಳೊಡನೆ ಜಗಳವಾಡುತ್ತ 10–20 ಭಿಕ್ಷುಕರು ಅಲ್ಲೇ ಕುಳಿತಿದ್ದರು. ಮೇಲೆ ಬೀಳುವ ನಾಯಿಗಳನ್ನು ಕೈಯಲ್ಲಿರುವ ಕೋಲುಗಳಿಂದ ಓಡಿಸುತ್ತ ಉತ್ತಮವಾದ ಭಕ್ಷ್ಯ ಯಾವುದೆಂದು ಹುಡುಕುತ್ತ ಅವರು ತಿನ್ನುತ್ತಿದ್ದರು. ನಾಯಿಗಳು ಅವರಿಗೆ ಕಡಿಯಲು ಬರುತ್ತಿದ್ದುವು. ಅದರ ಮೇಲೆ ಆ ನಾಯಿಗಳೂ ಅವುಗಳೊಳಗೆಯೇ ಪರಸ್ಪರ ಕಚ್ಚಾಟವಾಡಿಕೊಳ್ಳುತ್ತಿದ್ದುವು. ಬಡತನದ ಹಸಿವೆಯಲ್ಲಿ ಮಾನವನು ನಾಯಿಗಳೊಂದಿಗೆ ಜಗಳಾಡುವ ದೃಶ್ಯ ಹೇಗೆ ಸಹಿಸಬೇಕು ಹೇಳು.

ಹುಚ್ಚು ದುಡ್ಡಿನ ಆಡಂಬರದ ಓಕುಳಿ-ಒಳಗೆದಟ್ಟ ದಾರಿದ್ರ್ಯದ ದಾರುಣ ಚಿತ್ರ ಹೊರಗಡೆ-ಹೀಗೂ ಆಗಬೇಕೇ? ಎಂದು ಮುಖ ಮುಚ್ಚಿ ಕಣ್ಣೀರು ಸುರಿಸುತ್ತಲೇ ನಾನು ಕಾರು ಹತ್ತಿದೆ. "ಏನು ಮಿ! ಓರ್‌ಮನ್!" ಎಂಬ ಜಯನಾಥರ ಪ್ರಶ್ನೆಗೆ ಉತ್ತರ ಕೊಡುವುದೇ ನನ್ನಿಂದಾಗಲಿಲ್ಲ.

ವಿವಾಹದ ಈ ಕಾರ್ಯಕ್ರಮ ನಡೆಯುತ್ತಿರುವ ವೇಳೆ ಜನರು ಯಾವ್ಯಾವ ಅಭಿಪ್ರಾಯ ಪಡುತ್ತಿರುವರು ಎಂದು ತಿಳಿಯಬೇಕೆಂದು ನನಗೆ ಬಹಳ ಮೊದಲಿನಿಂದಲೂ ತುಂಬಾ ಕುತೂಹಲವಾಗಿತ್ತು. ನನ್ನಂತೆಯೇ ಇತರರೂ ಇದರಿಂದ ಹೇಸಿಕೊಂಡಿರುವರೇನೋ ಎಂದು ನೋಡುವ ಕುತೂಹಲ ನನಗಿತ್ತು.

ಆದರೆ ಯಾರ ಮುಖದಲ್ಲೂ ತಿರಸ್ಕಾರದ ಭಾವ ಕಾಣುತ್ತಿರಲಿಲ್ಲ. ಎಲ್ಲರೂ ಬಹಳ ಹರ್ಷದಿಂದಲೇ ಇದ್ದರು-ಎಲ್ಲರೂ ಮುದಲಿಯಾರರ ಸಾಹಸವನ್ನೇ ಒಂದಲ್ಲ ಒಂದು ವಿಧದಲ್ಲಿ ಕೊಂಡಾಡುತ್ತಿದ್ದರು. ಅವರು ಏರ್ಪಡಿಸಿದ

ಒಂದೊಂದು ಕಾರ್ಯಕ್ರಮವನ್ನೂ ವಿಮರ್ಶಿಸುತ್ತಾ ಮೆಚ್ಚಿಕೆಯ ಮಾತು
ಗಳನ್ನು ಹೇಳುತ್ತಿದ್ದರು.

ಅಷ್ಟು ಜನ ಸೇರಿದವರಲ್ಲಿ ಯಾರಿಗೂ ಭಾರತದ ಕುರಿತಾಗಿ ಒಂದ
ಕಳಕಳಿ ಬರಲಿಲ್ಲವಲ್ಲ. ಎಂದು ನನಗೆ ಆಶ್ಚರ್ಯವಾಯಿತು. ಆದರೇನ
ಮಾಡಬಹುದು?

ಹಾಂ, ಒಂದು ವಿಷಯ ಮರೆತೇ ಬಿಟ್ಟೆ, ಸಿಲ್ವರ್. ಆ ವಿವಾಹ
ಕಾರ್ಯಕ್ರಮಕ್ಕೆ ಹಲವು ರಾಜಕೀಯ ಮುಖಂಡರೂ, ಕೆಲವರು ಸಚಿವರೂ
ಕೂಡಾ ಬಂದಿದ್ದರು. ಇಂಥ ಮುಖಂಡರಿಗೂ ಈ ವಿಷಯ ತಲೆಗೇ ಬರಲಿಲ್ಲ
ವಲ್ಲ ಎಂದು ನನಗನಿಸಿತು.

ಇಲ್ಲ, ಸಿಲ್ವರ್, ಭಾರತದಲ್ಲಿ ಜನಜೀವನ ಹೀಗೆಯೇ ಮುಂದರಿದರೆ
ಇದರಿಂದ ಬಹಳ ದೊಡ್ಡ ಅಪಾಯವಿದೆ. ರಾಷ್ಟ್ರಕ್ಕೆ ಅಪಾಯವಿದೆ; ಜನತೆಗೆ
ಅಪಾಯವಿದೆ; ರಾಷ್ಟ್ರದ ಮುಂದಿನ ಅಭಿವೃದ್ಧಿಗೆ ಅಪಾಯವಿದೆ.

ಇಲ್ಲಿಯ ಬಡಜನರಲ್ಲಿಯೂ ಕಾಣುವ ದೋಷವಿದೇ. ನಾನು ಹಿಂದೆ
ಯೇ ಬರೆದಂತೆ ಯೋಜನಾತ್ಮಕ ಜೀವನ ಅವರಿಗೆ ಇಲ್ಲ. ಕೂಡಿಡುವ ಅಭ್ಯಾಸ
ಇಲ್ಲ. ವೈಜ್ಞಾನಿಕ ತಳಹದಿಯ ಯಾವ ವಿಚಾರ, ವಿಮರ್ಶೆಯೂ ಇಲ್ಲ. ಈ
ಮೊದಲಿನ ಪತ್ರಗಳಲ್ಲಿ ಬರೆದಂತೆ, ಈ ಮೊದಲು ಅವರಲ್ಲಿದ್ದ ಕಷ್ಟಪಟ್ಟು
ದುಡಿಯುವ ಗುಣವೂ ಈಗ ಮಾಯವಾಗಿಬಿಟ್ಟಿದೆ.

ಬಡತನದೆಡೆಯಲ್ಲಿ ಹೆಚ್ಚು ದುಡಿಯಬೇಕಾಗಿದ್ದ ಭಾರತೀಯರು ದಿನೇ
ದಿನೇ ಕಡಿಮೆ ದುಡಿಯುತ್ತಿದ್ದಾರೆ.

ಇಲ್ಲಿಯ ಶ್ರೀಮಂತರ ಮತ್ತು ವಿದ್ಯಾವಂತರ ಜೀವನದಲ್ಲಿ ದೈಹಿಕ ದುಡಿ
ಮೆಗೆ ಏನೂ ಮಹತ್ವವಿಲ್ಲದುದೇ ಇದಕ್ಕೆ ಕಾರಣವಾಗಿದೆ. ಇದು ಇಲ್ಲಿಯ
ವಿದ್ಯಾರ್ಥಿಗಳ ಜೀವನದಲ್ಲಿಯೂ, ಬ್ರಾಹ್ಮಣರೇ ಮೊದಲಾದವರ ಜೀವನದಲ್ಲಿ
ಯೂ ಎದ್ದು ಕಾಣುತ್ತದೆ.

ಇಲ್ಲಿಯ ಬ್ರಾಹ್ಮಣರು ಬೇಡುವುದನ್ನಾದರೂ ಮಾಡಿಯಾರು–ಕೆಲವರು
ಅಗತ್ಯಬಿದ್ದರೆ ಮೋಸವನ್ನಾದರೂ ಮಾಡಿಯಾರು; ಇನ್ನೂ ಕೆಲವರು ಕಳ್ಳರಿಗೆ
ಪ್ರೋತ್ಸಾಹ ಕೊಟ್ಟು ಅವರಿಗೆ ಸಿಗುವ ಕೊಳ್ಳೆಯಲ್ಲಿ ತಾವೂ ಒಂದಷ್ಟು ತೆಗೆದು
ಕೊಂಡಾದರೂ ಜೀವನ ಸಾಗಿಸಿಯಾರು. ಆದರೆ ಹಲವು ರೀತಿಯ ದೈಹಿಕ
ಕೆಲಸವನ್ನು ಮಾಡಲಾರರು!

ಉದಾಹರಣೆಗೆ ಕ್ಷೌರದಂಗಡಿ ಇಡಬೇಕಾದರೆ ಜೀವ ಕ್ಕೊಡರೂ ಒಪ್ಪರಿಡಲಾರರು. ಧೋಬಿ ಕೆಲಸ ಮಾಡಬೇಕೆಂದರೆ ಖಂಡಿತ ಮಾಡಲಾರರು. ಹೀಗೆಯೇ ತಮ್ಮ ಘನಸ್ಥಿಕೆಗೆ ಕುಂದುಂಟಾಗುವುದೆಂದು ಅವರು ಭಾವಿಸಿಕೊಂಡ ಹಲವು ಉದ್ಯೋಗಗಳನ್ನವರು ಮಾಡುವುದೇ ಇಲ್ಲ.

ಆದರೆ ಬಡತನವು ಬಹಳ ತೀವ್ರವಾದರೆ ಅನಾಚಾರ ಮಾಡಿ ಹೊಟ್ಟೆ ಹೊರೆಯುವುದು ಖಂಡಿತ ಅಗೌರವವೆಂದು ಅವರಿಗೆ ತಲೆಗೆ ಬರುವುದೇ ಇಲ್ಲ. ಇದುವೇ ಭಾರತದ ದುರಂತಗಳಲ್ಲೊಂದು.

ಬ್ರಾಹ್ಮಣನು ಮಾಡತಕ್ಕದ್ದಲ್ಲದ ಕಾರ್ಯ ತಾನು ಮಾಡಲಾರೆ ಎಂದು ಆತನು ಕುಳ್ಳಿರುವುದಿದ್ದರೆ ಕುಳ್ಳಿರಲಿ. ಹಾಗೆಂದಾದರೆ ಆತನು ಹೊಟ್ಟೆಗಾಗಿ ಮೋಸ ಕೃತ್ಯವನ್ನೂ ಮಾಡಬಾರದು. "ದೇಹ ಹೋದರೂ ಹೋಗಲಿ" ಎಂಬ ಎದೆಗಾರಿಕೆಯಿಂದ ಕುಳಿತು ಆತನ ಬ್ರಾಹ್ಮಣತ್ವದ ಯೋಗ್ಯತೆ ತೋರಬೇಕು. ಅಲ್ಲವಾದರೆ ಆ ಕೆಲಸ, ಈ ಕೆಲಸ ಎಂದು ನೋಡದೆ ರಾಷ್ಟ್ರಕ್ಕೆ ಹಾಗೂ ಸಮೂಹಕ್ಕೆ ದೋಷವಾಗದ ರೀತಿಯ ಯಾವುದಾದರೂ ಉದ್ಯೋಗವನ್ನು ಕೈಕೊಂಡಾದರೂ ಹೊಟ್ಟೆ ಹೊರೆಯ ಬೇಕು. ನಮ್ಮ ದೇಶದಲ್ಲಿ ವಿದ್ಯಾರ್ಥಿಗಳು ರಜೆ ಸಮಯದಲ್ಲಿ ವಿವಿಧ ಕಾರ್ಯ ಕೈಕೊಂಡು ಅವರ ವಿದ್ಯಾರ್ಜನೆಗೆ ಬೇಕಾದ ದುಡ್ಡನ್ನು ಅವರೇ ಸಂಪಾದಿಸಿಕೊಳ್ಳುತ್ತಾರೆ ಎಂಬುದಾಗಿ ಇಲ್ಲಿಯ ವಿದ್ಯಾರ್ಥಿಗಳ ಕೂಡೆ ಹೇಳಿದರೆ ಮುಖ ಸೆಟೆದುಕೊಂಡು ಎತ್ತಲೋ ಹೋಗಿ ಬಿಡುತ್ತಾರೆ; ಅಥವಾ ಕೋಪಿಸಿಕೊಂಡು ಏನಾದರೂ ಅನ್ನುತ್ತಾರೆ; ಇಲ್ಲವೇ ತಲೆ ಕೆಳಗೆ ಹಾಕುತ್ತಾರೆ. ಖಂಡಿತ ಅಂತಹ ಕಾಯಕಷ್ಟ ಅವರು ಮಾಡುವುದಿಲ್ಲ. ಅದು ಅವರ ಗೌರವಕ್ಕೆ ಕುಂದೆಂದೇ ಅವರ ಭಾವನೆ.

ವರ್ಷದಲ್ಲಿ ಒಂದೆರಡು ಸಲ 'ಶ್ರಮದಾನ' ಎಂಬುದಾಗಿ ಇಲ್ಲಿ ಕರೆಯಲ್ಪಡುತ್ತಿರುವ ಸಾಮೂಹಿಕ ಸೇವಾ ಕಾರ್ಯದಲ್ಲಿ ಅವರು ಭಾಗವಹಿಸುವುದಿದೆ. ಆದರೆ ದೇಹ ಶ್ರಮದಿಂದ ಉತ್ಪತ್ತಿ ಮಾಡಿಕೊಳ್ಳುವುದನ್ನು ಅವರು ಮೆಚ್ಚುವುದಿಲ್ಲ.

ನಮ್ಮ ದೇಶದಲ್ಲಿ ಎಷ್ಟು ಜನ ವಿದ್ಯಾರ್ಥಿಗಳು ವೃತ್ತಪತ್ರಿಕೆ ಮಾರಾಟ ಮಾಡಿ ಧನಸಂಪಾದಿಸುತ್ತಿಲ್ಲ? ಎಷ್ಟು ಜನರು ಮಕ್ಕಳನ್ನು ಲಾಲನೆ ಮಾಡಿ ಉತ್ಪತ್ತಿ ಮಾಡುತ್ತಿಲ್ಲ? ಎಷ್ಟು ಜನ ಆಫೀಸು ಕೆಲಸಮಾಡಿ ಹಣ ಗಳಿಸುತ್ತಿಲ್ಲ?

ನಾನು ಈ ಕುರಿತಾಗಿ ಹಲವು ವಿದ್ಯಾರ್ಥಿಗಳ ಕೂಡೆ ಮಾತನಾಡಿರುತ್ತೇನೆ- ಮಾತ್ರವಲ್ಲ, ಉಪಾಧ್ಯಾಯರುಗಳ ಕೂಡೆಯೂ ಮಾತನಾಡಿರುತ್ತೇ[illegible] ಅವುಗಳ ಪೈಕಿ ಒಂದು ಅನುಭವ ಮಾತ್ರ ನಿನ್ನ ಮುಂದಿಡುತ್ತೇನೆ.

ನಾನೂ ಜಯನಾಥರೂ, ಒಂದು ದಿನ ಅವರ ಕೋಣೆಯಲ್ಲಿ ಕು[illegible] ದ್ದೆವು. ಇದು ನಡೆದದ್ದು ಕಳೆದ ಮೇ ತಿಂಗಳಲ್ಲಿ. ಒಬ್ಬ ಕಾಲೇಜು ವಿದ್ಯಾರ್ಥಿ[illegible] ಒಳ ಬಂದು ಒಂದು ಪುಸ್ತಕ ತೋರಿದ. ಅದು ಧನ ಸಹಾಯ ಯಾಚಿಸು[illegible] ಪಟ್ಟಿಯಾಗಿತ್ತು. ಅದನ್ನು ನೋಡಿ ಜಯನಾಥರು ಮುಗುಳ್ನಕ್ಕರು. ಏಕೆ[illegible] ದರೆ ಈ ಸಮಸ್ಯೆಯ ಕುರಿತಾಗಿ ನಾವು ಈ ಮೊದಲೇ ಹಲವು ಸಲ ಮಾತನಾ[illegible] ಡಿದ್ದೆವು.

ನಾನು ಕೇಳಿದೆ, "ಗೆಳೆಯಾ, ಜಯನಾಥರಿಗೆ ಸಹಾಯಕ್ಕೆ ಒಬ್ಬ ಹುಡುಗ[illegible] ಬೇಕಾಗಿದ್ದಾನೆ. "ಪ್ರೆಶರ್ ಕುಕ್ಕರ್" ಇದೆ. ಅದರಲ್ಲಿ ಅಡಿಗೆ ಮಾಡಬೇಕು. ಅವರಿಗೆ ಬೇಕಾದ ಇತರ ಸಹಾಯ ಎಲ್ಲ ನೀಡಬೇಕು. ನಿನ್ನ ರಜೆಯಲ್ಲಿ ಇಲ್ಲೇ ಇದ್ದು ಬಿಡು. ಆಗ ನಿನ್ನ ಬರುವ ವರ್ಷದ ವಿದ್ಯಾಭ್ಯಾಸಕ್ಕೆ ತುಂಬಾ ಸಹಾಯವಾಗುವುದಲ್ಲಾ!" ಅದಕ್ಕಾತನ ಉತ್ತರ ಟಪ್ಪನೇ ಬಂತು. "ನಾನು ಅಡಿಗೆಯವನಲ್ಲ; ಇಷ್ಟವಿದ್ದರೆ ಸಹಾಯ ಕೊಡಿ. ಇಲ್ಲವಾದರೆ ನಾನು ಹೋಗಿ ಬಿಡುತ್ತೇನೆ. ನನ್ನಮಾನಖಂಡನೆ ಮಾಡುವುದು ಬೇಡ!" ಆತನನ್ನು ನೋಯಿ ಸುವುದಕ್ಕಾಗಿ ಹೇಳಿದ್ದಲ್ಲವೆಂದೂ, ನನ್ನ ಗೆಳೆಯರಿಗೆ ಯಥಾರ್ಥವಾಗಿ ಒಂದು ಜನ ಬೇಕಾಗಿದೆಯೆಂದೂ, ಅವನಿಗೆ ಇಷ್ಟವಿದ್ದರೆ ಕೆಲಸ ಸ್ವೀಕರಿಸಬಹು ದೆಂದೂ ನಾನೂ, ಜಯನಾಥರೂ ಜತೆಯಾಗಿ ಹೇಳಿದೆವು. ನಮ್ಮ ಕೈಯ್ಯ ಲ್ಲಿದ್ದ ಪುಸ್ತಕವನ್ನು ಎಳೆದುಕೊಂಡು ಆತನು ಹೋಗಿಯೇ ಬಿಟ್ಟನು. ಪುನಃ ಕರೆದರೂ ಬರಲಿಲ್ಲ. ಹೀಗಿದೆ ಇಲ್ಲಿಯ ಪರಿಸ್ಥಿತಿ.

ಸಿಲ್ವರ್, ಈ ಎಲ್ಲಾ ಗಂಭೀರ ಪರಿಸ್ಥಿತಿಗಳನ್ನು ಯೋಚಿಸುವಾಗ, ಒಂದು ವಿಷಯ ಸದಾ ನೆನಪು ಬೇಕು. ಏಕೆಂದರೆ ನೂರೈವತ್ತು ವರ್ಷಗ ಳಿಗೂ ಮಿಕ್ಕಿದ ಪಾರತಂತ್ರ್ಯದ ನಂತರ,ಈಗ ಕೆಲವು ವರ್ಷಗಳಿಂದ ಭಾರತವು ಸ್ವಾತಂತ್ರ್ಯವನ್ನನುಭವಿಸುತ್ತಿದೆ- ಹಿಂದೆ ಇಲ್ಲಿ ತೀವ್ರವಾದ ಜಡತೆಯಿತ್ತು. ಇದು ವಿದ್ಯಾವಂತರಾದ ಮಧ್ಯ ವಯಸ್ಸಿನವರು ಹೇಳುವ ಮಾತು. ಆಗ ಜನತೆಯಲ್ಲಿ ಯಾವುದೇ ತೆರನಾದ ಚಟುವಟಿಕೆಯೇ ಇರಲಿಲ್ಲವಂತೆ. ಯಾವ ಹೊಸದನ್ನೂ ಅವರು ಸ್ವೀಕರಿಸುತ್ತಿರಲಿಲ್ಲವಂತೆ.

ಆದರೆ ಈಗ ಭಾರತದ ಆದ್ಯಂತ ಈ ನಾಲ್ವತ್ತನಾಲ್ಕು ಕೋಟಿ ಜನರು ಎಚ್ಚತ್ತಿದ್ದಾರೆ. ಎಲ್ಲರೂ ತೀವ್ರವಾದ ಚಟುವಟಿಕೆಯಲ್ಲಿ ಬಿದ್ದಿದ್ದಾರೆ. ಆ ಚಟುವಟಿಕೆ ಸ್ವಾರ್ಥಪರವಾದದ್ದೇ ಆಗಿರಬಹುದು. ಭೋಗಲಾಲಸೆಯ ಉದ್ದೇಶದ್ದೇ ಆಗಿರಬಹುದು. ಆದರೂ ಎಚ್ಚತ್ತಿದ್ದಾರೆ.

ಎಚ್ಚತ್ತೊಡನೆಯೇ ಡಾರ್ವಿನನ ವಿಕಾಸವಾದದಂತೆ ಮೊದಲು ಬರುವುದು ಪಶುವೃತ್ತಿ. ಆ ಪಶು ವೃತ್ತಿಯಿಂದ ಸಾಮೂಹಿಕ ಕಷ್ಟ, ನಷ್ಟ, ಭ್ರಷ್ಟಗಳು ಸಂಭವಿಸುವವೆಂದೂ, ಎಲ್ಲರೂ ಭದ್ರವಾಗಿ ಬದುಕಲು, ನಾಗರಿಕ ಜವಾಬ್ದಾರಿಗಳನ್ನು ತಿಳಿದುಕೊಂಡು, ಮಾನವೀ ಗುಣಗಳನ್ನು ಬೆಳೆಸಿಕೊಂಡು ಸುಸಂಸ್ಕೃತರಾಗುವುದು ಅವಶ್ಯವೆಂದೂ, ಕನಿಷ್ಟಪಕ್ಷ ಮನುಷ್ಯನಲ್ಲಿ ನ್ಯಾಯಸೂತ್ರದ ತಳಹದಿಯ ಆಡಳಿತ ಹಾಗೂ ಪ್ರಾಮಾಣಿಕತೆ–ಇಷ್ಟಾದರೂ ಬೇಕೆಂದೂ, ಬಹುಸಂಖ್ಯಾಕರು ಅರಿತು ಕೊಂಡರೆ ಭಾರತವು ಅಭಿವೃದ್ಧಿ ಹೊಂದುವುದರಲ್ಲಿ ಏನೂ ಸಂಶಯವಿಲ್ಲ.

ಆದರೆ ಅಂಥಾ ಕಾಲ ಬರುವ ಮೊದಲು ನಮ್ಮಂಥಾ ಭಾರತದ ನಿಜ ಮಿತ್ರರು ಎಷ್ಟು ಹೃದಯ ವೇದನೆಯನ್ನನುಭವಿಸಬೇಕೋ ಏನೋ, ಅಲ್ಲವೇ ಸಿಲ್ವರ್?

ಅಯ್ಯೋ ಸಿಲ್ವರ್, ನೋಡು ನಿನ್ನ ಹಟಕ್ಕಾಗಿ ಇಷ್ಟು ಉದ್ದ ಬರೆದೆ. ಬರೆಬರೆದು ಕೈ ಸೋತು, ನೋಡು ನನ್ನ ಪಾರ್ಕರ್ ಪೆನ್ನುಕೆಳಗೆ ಬಿದ್ದು ಮೊನೆ ಮೊಂಡಾಯಿತು. ಇದರ ತಪ್ಪಿಗಾಗಿ ನನಗೆ ಒಂದು ಹೊಸ ಪಾರ್ಕರ್ ಇಲ್ಲವೇ ಶೇಫ್ಫಿಯರ್ಸ್ ಪೆನ್ನನ್ನು ತತ್‍ಕ್ಷಣ ನೀನು ಕಳುಹಿಸಿಕೊಡಬೇಕು. ಕಡೆಯ ಈ ಶಬ್ದಗಳನ್ನು ನೋಡು ಪೆನ್ಸಿಲಿನಲ್ಲಿ ಬರೆಯುತ್ತಿದ್ದೇನೆ.

ನನ್ನೊಂದಿಗೆ ಭಾರತವನ್ನು ಇಷ್ಟು ಸಮಯ ಸಂಚರಿಸಿ, ನನ್ನ ಭಾವಗಳನ್ನು ನಿನಗೆ ಈ ತನಕ ತಿಳಿಸುತ್ತಾ ವಿಶ್ವಾಸದ ಸೇವೆ ಮಾಡುತ್ತಿದ್ದ ನನ್ನ ಲೇಖನಿಗೆ ಬಂದೊದಗಿದ ವಿಪತ್ತು ನೋಡಿ ತುಂಬಾ ವ್ಯಥೆಯಾಗುತ್ತಿದೆ. ಆದರೆ ಮಾನವನ ಬಾಳುವೆಗೆ ಅಂತ್ಯವಿದೆಯಂತೆ. ಒಂದು ಲೇಖನಿಗಿಲ್ಲವೇ?

ಹಾಕು ಸಿಲ್ವರ್. ಮುದ್ದು ಕೇನ್ನಿಗೆ ಇದರೊಂದಿಗೆ ತುಂಬಾ ಬಿಸಿ ಬಿಸಿ ಪ್ರೇಮ ರವಾನಿಸಿದ್ದೇನೆಂದು ತಿಳಿಸುವೆಯಾ?

ಇತಿ, ನಿನ್ನ ಆಪ್ತಮಿತ್ರ,

**ಜೋನ್ ಓರ್‌ಮನ್.**

# ೧೩

ಮದ್ರಾಸು
7-7-1962

ಪ್ರಿಯ ಸಿಲ್ವರ್,

ನೀನು ಬರೆದ ಪತ್ರ ಬಂದು ತಲಪಿದೆ. ಭಾರತದ ವಿದ್ಯಾಕ್ಷೇತ್ರ
ಕುರಿತಾಗಿ ಈ ಸಲ ಬರೆಯಬೇಕೆಂದು ನೀನು ಪತ್ರದಲ್ಲಿ ಒತ್ತಾಯಿಸಿರುವ
ಸತ್ಯ ನುಡಿಯುವುದಿದ್ದರೆ, ನಾನೀಸಲ ಅದರ ಕುರಿತಾಗಿಯೇ ಬರೆಯುವುದ
ಲ್ಲಿದ್ದೆ. ಆದ್ದರಿಂದ ಎಲ್ಲವೂ ಸರಿ ಹೋಯಿತು.

ಸಿಲ್ವರ್, ಭಾರತದ ಇಂದಿನ ಶಿಕ್ಷಣ ಸಮಸ್ಯೆಗಳ ಕುರಿತಾಗಿ ಬರೆಯು
ವುದರ ಮೊದಲೇ ಇಲ್ಲಿಯ ಪ್ರಾಚೀನ ಪರಂಪರೆಯೇನೆಂಬುದನ್ನು ನಿನಗೆ ತಿ
ಸುವುದು ಅಗತ್ಯವಾಗಿದೆ.

ಭಾರತದ ವಿದ್ಯಾದಾನ ಕ್ರಮದ ಪ್ರಾಚೀನತೆಯ ಕುರಿತಾಗಿ ಹೇಳುವು
ದಿದ್ದರೆ ಜಗತ್ತಿನಲ್ಲಿಯೇ ಅದು ಮೊಟ್ಟ ಮೊದಲಿನದು ಎಂದರೂ ತಪ್ಪಾಗಲಾ
ರದು. ಸಂಯುಕ್ತ ಅಮೇರಿಕಾ ಎಂಬ ನಮ್ಮ ಬೃಹತ್ ರಾಷ್ಟ್ರವು ರೂಪಿತವಾ
ಗುವ ಎಷ್ಟೋ ಶತಮಾನಗಳ ಮೊದಲು, ಅಂದರೆ ನಮ್ಮ ಅಮೇರಿಕಾ ಭೂ
ಖಂಡದಲ್ಲಿ ಅನಾಗರಿಕ ಕೆಂಪು ಜನರು ಸುತ್ತಾಡುತ್ತಿದ್ದ ವೇಳೆ, ಪಾಶ್ಚಾತ್ಯ
ದೇಶಗಳಲ್ಲಿ ಹಳೆ ಶಿಲಾಯುಗ ಮತ್ತು ಹೊಸ ಶಿಲಾಯುಗಗಳ ಮೂಲಕ
ಮಾನವೀಯತೆಯ ಇತಿಹಾಸ ಹಾಯ್ದು ಹೋಗುತ್ತಿರುವ ವೇಳೆ-ಅಷ್ಟೇಕೆ-ಆದ
ಕ್ಕಿಂತಲೂಮೊದಲೇ ಭಾರತದ ಸುಸಂಸ್ಕೃತ, ಸುಶಿಕ್ಷಿತ ಸಮಾಜವು ವಿದ್ಯಾ
ಭ್ಯಾಸಕ್ಕೆ ಬಹಳ ಪ್ರಾಧಾನ್ಯತೆಯನ್ನು ಕೊಟ್ಟಿತ್ತು.

ವಿದ್ಯೆ ಎಂಬುದಕ್ಕೆ ಭಾರತದ ಸಂಪ್ರದಾಯದಲ್ಲಿ ಬಹಳ ಭವ್ಯವಾದ ಕಲ್ಪನೆಯಿದೆ. ಭಗವಂತನನ್ನು ತಿಳಿಯುವಂಥದೇ ವಿದ್ಯೆಯೆಂಬುದಾಗಿಯೂ, ಆ ತಿಳಿವಿಗೆ ದೂರವಾಗಿ ಸಾಗುವುದೇ ಅವಿದ್ಯೆಯೆಂಬುದಾಗಿಯೂ ತಿಳಿಯಲ್ಪಟ್ಟಿತ್ತು. ಆದ್ದರಿಂದ ಇತರ ಹಲವು ರೀತಿಯ ಅತ್ಯಾವಶ್ಯಕ ವಿಷಯಗಳು ಕಲಿಸಲ್ಪಡುತ್ತಿದ್ದುವಾದರೂ. ಅವೆಲ್ಲವೂ ಆತ್ಮ ವಿದ್ಯೆಯ ಸುತ್ತು ಮುತ್ತಲೂ ಸುಂದರವಾಗಿ ಹೆಣೆಯಲ್ಪಟ್ಟಿದ್ದುವು—

ಆತ್ಮ ವಿದ್ಯೆಯನ್ನು ಸಂಗ್ರಹಿಸುವುದೇ ಬದುಕಿನ ಭವಿತವ್ಯವೆಂದೂ, ಆ ಬದುಕುವಿಕೆಗಾಗಿಯೇ ಇತರ ವಿದ್ಯೆಗಳೆಂದೂ ಪ್ರಾಯಶಃ ತಿಳಿಯಲ್ಪಟ್ಟಿರಬೇಕು.

ಬ್ರಾಹ್ಮಣರಿಗೆ ನೀಡುವ ವಿದ್ಯೆಯಲ್ಲಿ ವೇದ, ಉಪನಿಷತ್ತುಗಳು, ಇತಿಹಾಸ, ಪುರಾಣಗಳು, ಧರ್ಮಶಾಸ್ತ್ರ ಇತ್ಯಾದಿಗಳೂ ಅಲ್ಲದೆ ಭಾಷಾಜ್ಞಾನ, ಗಣಿತ, ಖಗೋಲ ಶಾಸ್ತ್ರ, ತರ್ಕಶಾಸ್ತ್ರ, ವ್ಯಾಕರಣ ಮೊದಲಾದವುಗಳು ಪ್ರಾಮುಖ್ಯ ಪಾತ್ರವನ್ನು ವಹಿಸುತ್ತಿದ್ದುವು. ಕ್ಷತ್ರಿಯರಿಗೆ ನೀಡುವ ವಿದ್ಯೆಯಲ್ಲಿ, ಶಸ್ತ್ರವಿದ್ಯೆ, ರಾಜನೀತಿ, ಭಾಷಾಜ್ಞಾನ, ಗಣಿತ, ತರ್ಕಶಾಸ್ತ್ರ, ಧರ್ಮಶಾಸ್ತ್ರ, ಇತ್ಯಾದಿಗಳು ಮುಖ್ಯವಾಗಿದ್ದುವು. ಇದಕ್ಕೆಲ್ಲ ಭಗವದ್ಭಕ್ತಿಯೇ ಹಿನ್ನೆಲೆಯಾಗಿತ್ತು.

ಆಗಿನ ಕಾಲದ ವೈಶ್ಯ ಸಮಾಜವೆಂಬುದು ಸಣ್ಣದು. ಅವರಿಗೂ ಭಾಷಾಜ್ಞಾನ, ಗಣಿತ, ನೀತಿ, ಮೊದಲಾದವುಗಳು ಕಲಿಸಲ್ಪಡುತ್ತಿದ್ದಿರಬೇಕು. ಕೇವಲ ದೈಹಿಕ ದುಡಿಮೆಯಲ್ಲಿ ನಿರತರಾಗುತ್ತಿದ್ದ ಶೂದ್ರರಿಗೆ ಯಾವುದೇ ತರದ ವಿದ್ಯೆಯು ಸರ್ವಸಾಮಾನ್ಯವಾಗಿ ಸಿಗುತ್ತಿದ್ದ ಆಧಾರಗಳು ದೊರೆಯುತ್ತಿಲ್ಲ. ಅವರು ತಂತಮ್ಮ ಹಿರಿಯರ ಜತೆಯಲ್ಲಿ ದುಡಿದು, ಕಾಯಕವೇ ಕೈಲಾಸವೆಂಬುದನ್ನು ಸಾಕ್ಷಾತ್ಕರಿಸುವ ಸಾಧನೆಯಲ್ಲಿದ್ದರು ಎನ್ನಬಹುದು.

ಸಿಲ್ವರ್, "ಹಿಂದಿನ ವಿದ್ಯೆಯ ಕುರಿತು ಯಾರು ಕೇಳಿದ್ದಾರೆ. ಅಧಿಕ ಪ್ರಸಂಗದ ಬರಹವೇಕೆ? ಈಗಿನದನ್ನು ಮಾತ್ರವೇ ಬರೆಯ ಬಾರದೆ?" ಎಂಬುದಾಗಿ ನೀನು ಕೇಳಬಹುದು, ನನಗೆ ಗೊತ್ತು.

ಆದರೆ ಇಂದಿನ ಮಾನವ ಜನಾಂಗಕ್ಕೆ ಬೇಕಾದ ಒಂದು ದಿವ್ಯವಾದ ತಿರುಳು ಭಾರತದ ಪ್ರಾಚೀನ ವಿದ್ಯಾಭ್ಯಾಸದಲ್ಲಿ ಅಡಗಿದೆ—ಅದಕ್ಕಾಗಿ ಬರೆಯ ಹೊರಟೆ.

ನಾನು ಹಿಂದೆಯೇ ಬರೆದಂತೆ ಭಾರತದ ಆಧ್ಯಾತ್ಮಿಕ ಸಿದ್ಧಾಂತದ ಪ್ರಕಾರ ಪರಮಾತ್ಮನು ಎಲ್ಲಿಯೋ ಕಣ್ಣಿಗೆ ಕಾಣದ, ಕಿವಿಗೆ ಕೇಳದ ರಾಜ್ಯ

ದಲ್ಲಿ ಬೃಹತ್ ಸಿಂಹಾಸನದಲ್ಲಿ ಕುಳಿತು ರಾಜ್ಯಭಾರವಾಡುತ್ತಿರುವುದಿಲ್ಲ. ಆತ
ಕಣ್ಣಿಗೆ ಕಾಣುವ ಯಾ ಕಾಣದ ಸಜೀವಿ-ನಿರ್ಜೀವಿಗಳೆಲ್ಲದರಲ್ಲೂ ಚಿನ್ಮ
ಮಹಾಪ್ರಜ್ಞೆಯಾಗಿ, ಸಚ್ಚಿದಾನಂದ ಮೂರ್ತಿಯಾಗಿ ಬೆಳಗುತ್ತಿದ್ದಾನೆ. ಆ
ರಿಂದಲೇ ಭಾರತೀಯರು ಪ್ರತಿಯೊಂದು ವಸ್ತುವಿನಲ್ಲಿಯೂ ದೇವತ್ವದ ದೈ
ಕಲ್ಪನೆಯನ್ನು ಕಂಡುಕೊಂಡು, ದೈವೀ ಭಾವದಲ್ಲೇ ಮೆರೆಯಲು ಯತ್ನಿ
ತ್ತಾರೆ. [ಅಂದರೆ ಇಂದಿನ ಭಾರತೀಯರೆಲ್ಲ ಹೀಗಿದ್ದಾರೆ ಎಂಬರ್ಥವಲ್ಲ!]

ಆದ್ದರಿಂದಲೇ ಭಾರತದ ಜೀವನದಲ್ಲಿ ಅಶ್ವತ್ಥ, ತುಳಸಿಯಂತಹ ಸಸ್ಯ
ಳಿಗೂ, ನಾಗರ ಹಾವು ಮತ್ತು ಗೋವಿಗೂ ಮನುಷ್ಯರಲ್ಲಿ ಬ್ರಾಹ್ಮಣರಿಗೂ
ಗುರುಗಳಿಗೂ, ಮಾತಾಪಿತರಿಗೂ ದೇವರ ಸ್ಥಾನವನ್ನು ಕಲ್ಪಿಸಿ ಅವರ
ಪೂಜಿಸುತ್ತಾರೆ.

ಇದರ ಉದ್ದೇಶ ಎಲ್ಲೆಲ್ಲೂ ದೈವತ್ವವನ್ನು ಕಂಡು, ಪಾಶವೀ ಭಾವ
ವನ್ನು ತೊರೆದು ವಿನೀತ ಭಾವವನ್ನು ಬೆಳೆಸಿ, ಜ್ಞಾನದ ಸೋಪಾನದಲ್ಲಿ ನಡೆದು
ವಿಶ್ವಾತ್ಮರೂಪನಾದ ಭಗವಂತನಲ್ಲಿ ಐಕ್ಯವಾಗಬೇಕು ಎಂಬುದೇ ಆಗಿದೆ.

ಆದ್ದರಿಂದ ಭಾರತೀಯ ಜೀವನದ ಹಿನ್ನೆಲೆಯಲ್ಲಿ, ಹಾಗೂ ಭಾರತದ
ಎಲ್ಲಾ ರೀತಿಯ ಪ್ರೇಮ ಮತ್ತು ಸ್ನೇಹಗಳ ಆಳದಲ್ಲಿ, ಒಂದು ರೀತಿಯ
ಜ್ಞಾನ ಸಂಬಂಧ ಅಥವಾ ಒಂದು ರೀತಿಯ ಗುರು ಶಿಷ್ಯ ಸಂಬಂಧವೇ
ಹಾಸುಹೊಕ್ಕಾಗಿದೆ.

ಆದ್ದರಿಂದ ಅಂದಿನ ವಿದ್ಯಾಭ್ಯಾಸ ಕ್ರಮದಲ್ಲೂ ಅತೀ ಪ್ರಾಮುಖ್ಯವಾದ
ಜೀವಾಳವೆಂದರೆ ಆ ಪವಿತ್ರವಾದ, ಅಭೇದ್ಯವಾದ ಗುರುಶಿಷ್ಯಸಂಬಂಧ. ಅಧ್ಯಾ
ಪಕರೆಂದರೆ ಗುರುಗಳೆಂದೂ, ಅವರು ಭಗವಂತನ ಸಾಕ್ಷಾತ್ ಪ್ರತಿನಿಧಿಗ
ಳೆಂದೂ ಅಂದಿನ ವಿದ್ಯಾರ್ಥಿಗಳು ತಿಳಿಯಬೇಕಾಗಿತ್ತು. ಅದಕ್ಕಾಗಿಯೇ ಸಂಸ್ಕೃ
ತದಲ್ಲಿ ಒಂದು ಶ್ಲೋಕವಿದೆ. "ಗುರುರ್ಬ್ರಹ್ಮಾ, ಗುರುರ್ವಿಷ್ಣೋ, ಗುರು
ದೇವೋ ಮಹೇಶ್ವರಃ, ಗುರು ಸಾಕ್ಷಾತ್ ಪರಬ್ರಹ್ಮಾ, ತಸ್ಮೈ ಶ್ರೀ ಗುರುವೇ
ನಮಃ". ಇದರರ್ಥ "ಗುರುವೇ ಬ್ರಹ್ಮ, ಗುರುವೇ ವಿಷ್ಣು, ಗುರುವೇ ಶಿವ,
ಗುರುವೇ ಸಾಕ್ಷಾತ್ ಪರಬ್ರಹ್ಮ; ಆ ಮಹಾ ಗುರುವಿಗೆ ನಮಸ್ಕಾರ."

ಇದೇ ಭಕ್ತಿ ಭಾವದಿಂದ ಅಂದಿನ ಗುರುಗಳು ನೋಡಲ್ಪಡುತ್ತಿದ್ದರು.
ಗುರುವಾದವನ ಯೋಗ್ಯತೆಯು ಹೆಚ್ಚಾಗಿದ್ದಷ್ಟೂ ಆತನು ಪಡೆಯುತ್ತಿದ್ದ
ಗೌರವ ಮತ್ತು ಆದರಗಳು ಅದ್ವಿತೀಯ ಸ್ಥಾನವನ್ನು ಪಡೆಯುತ್ತಿದ್ದುವು.

ಅಂದಿನ ಗುರುವಾದರೂ ಹೇಗಿದ್ದನು? ಆತನು ವಿದ್ಯಾದಾನವನ್ನು ಮಾಡುತ್ತಿದ್ದುದಾದರೂ ಎಲ್ಲಿ? ಪ್ರಕೃತಿಯ ಮಡಿಲಲ್ಲಿ ಪುಷ್ಕಳವಾಗಿ ಬೆಳೆದ ಭಾರತದ ಸುಂದರ ಕಾನನಗಳೇ ಆ ವಿದ್ಯೆಯ ತಾಣಗಳಾಗಿದ್ದುವು. ಏಕೆಂದರೆ ಜೀವನದ ಬಾಹ್ಯ ವೈಭವಗಳನ್ನೆಲ್ಲ ತೊರೆದು, ನಾರುಡೆಯನ್ನುಟ್ಟು ಅರಣ್ಯ ವಾಸಿಗಳಾದ, ಬ್ರಹ್ಮ ಸಾಕ್ಷಾತ್ಕಾರದ ಮಹಾಪಯಣದಲ್ಲಿ ಮುಂದೆ ಸಾಗುತ್ತಿದ್ದ ಋಷಿವರ್ಯರೇ ಅಂದಿನ ಗುರುಗಳಾಗಿದ್ದರು. ಅವರು ತ್ಯಾಗದ ನಿಧಿಗಳಾಗಿದ್ದರು. ತಪೋಧನರಾಗಿದ್ದರು. ಶಾಂತಿ ಸೌಜನ್ಯತೆಯ ನೆಲೆವೀಡಾಗಿದ್ದರು. ಪ್ರಕೃತಿಯ ಸುಂದರ ಮಡಿಲಲ್ಲೇ ವಿಹರಿಸುತಿದ್ದ ಅವರು, ಪ್ರಕೃತಿದತ್ತವಾಗಿ ಬೆಳೆದ ತಲೆ ಮತ್ತು ಮೈಯ ಕೂದಲನ್ನೂ ತೆಗೆಸದೆ, ಕೇಸರ ತುಂಬಿದ ಕೇಸರಿಗಳಂತೆ ಗೊಂಡಾರಣ್ಯಗಳಲ್ಲಿ ನಿರ್ಭೀತಿಯಿಂದ ವಾಸಿಸುತ್ತಿದ್ದರು. ವಿಶ್ವ ಕುಟುಂಬಿಗಳಾದ ಅವರಿಗೆ ಪ್ರಾಣಿ ಸಂಕುಲವೆಲ್ಲಾ ಗೆಳೆಯರ ಬಳಗವಾಗಿತ್ತು-ತಮ್ಮಂತೆಯೇ ತ್ಯಾಗದ ಬೆಂಕಿಯಲ್ಲಿ ಬೆಂದು ಪಕ್ವರಾದ ಅವರ ಪತ್ನಿಯರೂ, ಅವರೊಂದಿಗೆ ವಾಸಿಸಿ, ಪ್ರೇಮ ಭಕ್ತಿಗಳ ಭಿಕ್ಷೆಯನ್ನು ಮಾತ್ರವೇ ಪತಿಯಿಂದ ಬೇಡುತ್ತ, ಸೇವೆ ಶೀಲಗಳ ಕಾಣಿಕೆಯನ್ನು ನೀಡುತ್ತ ಬದುಕುತ್ತಿದ್ದರು.

ಎಲೆ ಮನೆಗಳೇ ಅವರ ಗೃಹಗಳು; ಕಂದ ಮೂಲಗಳೇ ಅವರ ಭಕ್ಷ್ಯ ಭೋಜ್ಯಗಳು; ನಿರ್ಭಯತೆಯೇ ಅವರ ಕೋಟೆ ಕೊತ್ತಲಗಳು; ಭಗವತ್ ವಿಶ್ವಾಸವೇ ಅವರ ಶ್ವಾಸೋಚ್ಛ್ವಾಸಗಳಾಗಿದ್ದುವು.

ಅಂತಹ ದಿವ್ಯಾತ್ಮರನ್ನು ಪರಶಿವನೆಂದೇ ಭಾವಿಸಿ, ವಿದ್ಯಾರ್ಥಿಗಳು ಗೌರವಿಸಬೇಕೆಂಬುದರಲ್ಲಿ ಎಷ್ಟೊಂದು ಮಹತ್ವವಿಲ್ಲ! ಆದ್ದರಿಂದಲೇ ಕೆಲವೇ ಸಂಖ್ಯೆಯಲ್ಲಿದ್ದ ವಿದ್ಯಾರ್ಥಿಗಳು ಗುರು ಮತ್ತು ಗುರು ಪತ್ನಿಯ ಸೇವೆಯನ್ನು ಮಾಡುತ್ತಾ ಅವರ ಹೋಮ ಹವನಗಳಿಗೆ ಬೇಕಾದ ಸಮಿತ್ತುಗಳನ್ನೂ, ಆಹಾರಕ್ಕೆ ಬೇಕಾದ ಕಂದಮೂಲಗಳನ್ನೂ ತಂದು, ವಿವಿಧ ರೀತಿಯಲ್ಲಿ ಗುರುಗಳಿಗೆ ನೆರವಾಗುತ್ತಿದ್ದರು. ಗುರುಗಳಾದರೋ ಅವರಲ್ಲಿ ಭಗವದ್ಭಕ್ತಿಯ ಹಿನ್ನೆಲೆಯಲ್ಲಿ ಮೇಲೆ ಹೇಳಿದ ರೀತಿಯ ವಿವಿಧ ವಿದ್ಯೆಗಳನ್ನು ಪ್ರೇಮದಿಂದ ಕಲಿಸಿಕೊಡುತ್ತಿದ್ದರು.

ಆ ಗುರುಗಳಲ್ಲಿ ಆಧ್ಯಾತ್ಮಿಕ ಆನಂದ ಮತ್ತು ದೈವೀ ತೇಜಸ್ಸು ತುಂಬಿ ತುಳುಕುತ್ತಿತ್ತು. ಅವರ ಸಂಪರ್ಕದಲ್ಲಿ ಆ ಶಿಷ್ಯರಿಗೂ, ಅಂತಹ ಆಧ್ಯಾತ್ಮಿಕ ಆನಂದದ ರುಚಿ ಸಿಗುತ್ತಿತ್ತು. ಅಲ್ಲದೆ, ಅವರು ತಮ್ಮ ಮಧುರ ವಚನಗಳಿಂದ, ಅನಿರ್ವಚನೀಯವಾದ ಆತ್ಮ ತತ್ವಗಳನ್ನು ಬೋಧಿಸಲು ಯತ್ನಿಸುತ್ತಿದ್ದರು.

ಇದರಿಂದ ಆ ಶಿಷ್ಯರ ಅಂತರಂಗದಲ್ಲಿ ಆತ್ಮಾನಂದದ ಕಿರಣಗಳು ಮೂಡು ತ್ತಿದ್ದುವು. ಆ ಕಿರಣಗಳ ರುಚಿಯನ್ನು ಆಸ್ವಾದಿಸುತ್ತಿದ್ದ ಆ ಬಾಲಕರು ಸಹಜವಾಗಿಯೇ ಪ್ರಾಪಂಚಿಕವಾದ ಆಶಾ ಪಾಶಗಳನ್ನು ಬದಿಗೊತ್ತಿ, ಜ್ಞಾನ ಧನರಾಗಲು ಯತ್ನಿಸುತ್ತಿದ್ದರು. ಅಸೀಮಿತವಾದ ಶಾಂತಿಯು ಅವರ ವ್ಯಕ್ತಿ ತ್ವವನ್ನು ಸದಾ ಆವರಿಸಿ ಇರುತ್ತಿತ್ತು. ಆದ್ದರಿಂದ ಅವರಲ್ಲಿ ಹೆಚ್ಚಿನ ಮನೋ ವಿಕಾರಗಳಿಗೂ ಆಸ್ಪದವಿರಲಿಲ್ಲ. ಇದರ ಪರಿಣಾಮವಾಗಿ ಪ್ರಜ್ವಲಿತವಾದ ಬುದ್ಧಿಯು ಯಾವುದೇ ವಿಚಾರವಾಗಿ ಆಳವಾಗಿ, ಕೇಂದ್ರೀಕೃತವಾಗಿ ಆಲೋ ಚಿಸಿ, ಸತ್ಯವಾದ ನಿರ್ಧಾರಕ್ಕೆ ಬರಲು ಸಮರ್ಥವಾಗುತ್ತಿತ್ತು.

ಆದ್ದರಿಂದಲೇ, ಅಂದಿನ ಕಾಲದಲ್ಲೇ ಜ್ಯೋತಿಶ್ಶಾಸ್ತ್ರ, ಖಗೋಲಶಾಸ್ತ್ರ, ತರ್ಕ, ನ್ಯಾಯ, ವಿಜ್ಞಾನ,ಆಯುರ್ವೇದ ಮೊದಲಾದ ಸಕಲ ಶಾಸ್ತ್ರಗಳಲ್ಲೂ ಆಳವಾದ ಸಂಶೋಧನೆ ಮಾಡಿ ಮುಂದರಿಯಲು ಅಂದಿನ ಭಾರತೀಯರಿಗೆ ಸಾಧ್ಯವಾಗಿತ್ತು.

ಆಳವಾದ ಮತ್ತು ನಿಸ್ಸೀಮವಾದ ಭಕ್ತಿ, ಗೌರವಗಳಿಂದ ಗುರುಗಳ ಸೇವೆಯನ್ನು ನಡೆಸುತ್ತಿದ್ದ. ಆ ವಿದ್ಯಾರ್ಥಿಗಳು, ಸಹಜವಾಗಿಯೇ ಆ ಗುರುಗಳ ಹೃದಯವನ್ನು ಕರಗಿಸಿ. ಅಲ್ಲಿ ಪ್ರೇಮಜಲವು ಅವ್ಯಾಹತವಾಗಿ ಹರಿಯು ವಂತೆ ಮಾಡುತ್ತಿದ್ದರು. ಅದರ ಪರಿಣಾಮವಾಗಿ ಆಳವಾದ ವಿಶ್ವಾಸದ ಆಧಾ ರದಲ್ಲಿ ಮಾತ್ರ ತಿಳಿಸಬಹುದಾದ ಹಲವು ಆಪ್ತ ವಾಕ್ಯ (ಗುರುವು ಶಿಷ್ಯನಿಗೆ ನೀಡುವ ಗುಪ್ತ ಉಪದೇಶಗಳು)ಗಳು, ಗುರುವಿನ ವಚನಗಳಿಂದ ಹೊರಟು ಗಹನವಾದ ಆತ್ಮ ತತ್ವಗಳನ್ನು ಬೋಧಿಸುತ್ತಿದ್ದುವು. ಆದ್ದರಿಂದಲೇ ಆ ವಿದ್ಯಾರ್ಥಿಗಳು ತಮ್ಮ ಇಂದ್ರಿಯಗಳನ್ನು ಹತೋಟಿಯಲ್ಲಿಟ್ಟುಕೊಂಡವರಾಗಿ, ವಿನಯದ ನಿಧಿಗಳಾಗಿ, ಪ್ರೇಮದ ತವರಾಗಿ, ಅಧ್ಯಾತ್ಮಿಕತೆಯ ಒಸರಾಗಿ, ನೀತಿಯ ನೆಲೆಗಟ್ಟಾಗಿ, ಬೆಳೆದರು. ಅಂಥವರೇ ಸಮಾಜದ ಮುಖಂಡ ರಾಗಿ ಬರುತ್ತಿದ್ದರು--ಆದ್ದರಿಂದ ಸಮಾಜವೇ ಅಂದು ತೊಳಗಿ ಬೆಳಗಿತು. ಬೆಳಗಿ ಪ್ರಜ್ವಲಿತವಾಯಿತು. ಭಾರತವು ಜಗತ್ತಿಗೇ ಕಣ್ಣಾಯಿತು— ಶಾಂತಿಯ ನಂದಾದೀಪವಾಯಿತು.

ಭಾರತದ ಈ ಪ್ರಾಚೀನ ಹಾಗೂ ನಿತ್ಯ ನೂತನ ವಿದ್ಯಾಕ್ರಮದ ಹಿನ್ನೆ ಲೆಯಲ್ಲಿ ನಮ್ಮ ಸಂಯುಕ್ತ ಅಮೇರಿಕಾ ದೇಶದಲ್ಲಿ, ಅಷ್ಟೇಕೆ ಇತರ ಹಲವು ಮುಂದರಿದ ಪಾಶ್ಚಾತ್ಯ ದೇಶಗಳಲ್ಲಿ ನೀಡಲ್ಪಡುತ್ತಿರುವ ಶಿಕ್ಷಣವನ್ನು ಒಂದಿಷ್ಟು

ನೀನು ತುಲನೆ ಮಾಡು.

ಭೋಗ ಲಾಲಸೆಯಲ್ಲಿ ಮುಳುಗಿರುವ, ಪ್ರಾಪಂಚಿಕ ವೈಭವದ ಮೆರುಗಿನಲ್ಲಿ ಮಿನುಗಲೆತ್ನಿಸುವ ಅಶಾಂತ ಉಪಾಧ್ಯಾಯರ ಮನವು ಆಧ್ಯಾತ್ಮದಲ್ಲಿ ಬೇರು ಬಿಟ್ಟಿರುವ ಬದಲು, ಪ್ರಾಪಂಚಿಕ ವಿಚಾರಗಳಲ್ಲೇ ಬೇರು ಬಿಟ್ಟಿದೆ. ಇಂದ್ರಿಯ ಸುಖದ ಸುಪ್ಪತ್ತಿಗೆಯಲ್ಲೇ ಒರಗುತ್ತಿರುವ ವಿದ್ಯಾರ್ಥಿಗಳು,–ತ್ಯಾಗದ ಗಂಧ ಗಾಳಿಯೇ ಅವರಿಗೆ ತಿಳಿದಿಲ್ಲ. ಭೋಗದ ಚಿತ್ರವೇ ಸದಾಕಾಲ ಅವರ ಕಣ್ಣ ಮುಂದೆ ಸುಳಿದಾಡುತ್ತಿದೆ. ಪೇಟೆ ಪಟ್ಟಣಗಳಲ್ಲಿ ಅಷ್ಟೇಕೆ, ಹಳ್ಳಿಗಳಲ್ಲಿ ಕೂಡಾ ಅಶ್ಲೀಲ ಪುಸ್ತಕಗಳು ಸಿನಿಮಾ, ಟೆಲಿವಿಶನ್ ಇತ್ಯಾದಿಗಳ ಮೂಲಕವಾಗಿ, ಶೃಂಗಾರ ವಿಲಾಸಗಳ, ಸ್ವೇಚ್ಛಾಚಾರಗಳ, ಪಾಶವೀವೃತ್ತಿಗಳ ಪ್ರಚೋದನೆಗಳು ನಿರಂತರವಾಗಿ ಒದಗಿ ಬರುತ್ತವೆ.

ಆದ್ದರಿಂದ ಪವಿತ್ರ, ತ್ಯಾಗಮಯ ವಾತಾವರಣದಲ್ಲಿ ಬ್ರಹ್ಮಚರ್ಯ ಜೀವನವನ್ನು ಕೈಗೊಂಡು, ವಿದ್ಯಾಭ್ಯಾಸವನ್ನು ಮುಗಿಸಿ, ಗುರುವಿನ ಅನುಮತಿ ಪಡೆದು, ಸ್ವಗೃಹಕ್ಕೆ ತೆರಳಿ, ನೀತಿ, ಕುಲ, ಶೀಲ ಸಂಪತ್ತಿನ ಆಧಾರದಲ್ಲಿ ಹೆತ್ತವರು ಏರ್ಪಡಿಸಿದ ವಧುವನ್ನು ಮದುವೆಯಾಗಿ, ಧರ್ಮಬದ್ಧವಾದ ಸಂಸಾರ ಜೀವನ ನಡೆಸುವ ಆದರ್ಶಕ್ಕೆ ಸರೀ ವಿರುದ್ಧವಾಗಿ ವಿದ್ಯಾರ್ಥಿ ದೆಸೆಯಲ್ಲಿಯೇ ಯುವಕ ಯುವತಿಯರು ಸ್ವಚ್ಛಂದವಾಗಿ ವಿಹರಿಸಿ, ನೀತಿಗೆಟ್ಟು, ಮತಿಗೆಟ್ಟು, ಓಡಾಡುವ ದೃಶ್ಯವನ್ನು ನಮ್ಮ ದೇಶದಲ್ಲಿ ನಾವು ಕಾಣುತ್ತೇವೆ. ಈ ಕೊಳಕು ಕಾರ್ಯಗಳೆಲ್ಲವೂ ನಾಗರಿಕತೆ, ಸಂಸ್ಕೃತಿ, ಕ್ರೈಸ್ತಧರ್ಮಗಳ ಹೆಸರಲ್ಲೇ ನಡೆದು ಬರುತ್ತಿವೆ. ಮಹಾನುಭಾವ ಏಸುಕ್ರಿಸ್ತನ ಉಪದೇಶಗಳ ನೆನಪು ಆಗ ಬರುವುದೇ ಇಲ್ಲ. ಅವೆಲ್ಲವೂ ಸುವರ್ಣ ರಂಜಿತ ಬೈಬಲ್ ಪುಸ್ತಕಗಳ ಒಳಗೆ ಹಾಯಾಗಿ ಸುರಕ್ಷಿತವಾಗಿ ಉಳಿದಿರುತ್ತವೆ.

ಉಪಾಧ್ಯಾಯರ ಎದುರಲ್ಲಿ ನಿಂತೇ ಇರುವ ಮಾತೆಂತಿರಲಿ—ಅವರು ತರಗತಿಗೆ ಬಂದಾಗಲೂ ಎದ್ದು ನಿಂತು ಗೌರವಿಸುವ ಪರಿಪಾಠ ನಮಗಿಲ್ಲ. ವಂದಿಸುವ ತೊಂದರೆಯೇ ಇಲ್ಲ. ಮಿಸ್ಟರ್ ಇಂಥವನೆಂದೇ ಉಪಾಧ್ಯಾಯರನ್ನು ಸಂಬೋಧಿಸಿ, ನಮ್ಮ ವಿದ್ಯಾರ್ಥಿಗಳಿಗೆ ಗೊತ್ತೇ ಹೊರತಾಗಿ, ಅವರನ್ನು ಮರ್ಯಾದೆಯಿಂದ ಸ್ವಾಮಿ, ಸಾರ್ ಎಂದು ಕೂಡಾ ಗೌರವಿಸುವ ಸಂಸ್ಕೃತಿ ನಮ್ಮದಾಗಿಲ್ಲ. ತರಗತಿಯ ಹೊರಗೆ ನಡೆವರಂತೂ, ಉಪಾಧ್ಯಾಯನೆಂದರೆ ಒಬ್ಬ ಪರಿಚಿತ ಸಮಾನಸ್ಕಂಧನಿದ್ದಷ್ಟೇ ಬೆಲೆ. ಆತನ ಎದುರಲ್ಲೇ ಸಿಗರೇಟು ಸೇವ

ನೆಯೂ ನಡೆಯುವುದು-ಲೈಂಗಿಕ ಸ್ವೇಚ್ಛಾಚಾರವೂ ನಡೆಯುವುದು. ಉಪಾಧ್ಯಾಯನಿಗೆ ಅದರಲ್ಲಿ ಪ್ರವೇಶವಾಗುವ ಹಕ್ಕೇ ಇಲ್ಲ.

ನಮ್ಮ ಶೈಕ್ಷಣಿಕ ಮಟ್ಟ ಬಹಳ ಉತ್ತಮವಾಗಿದೆ ಎಂದು ಹೇಳಲಾಗುತ್ತಿದೆ. ಆಧ್ಯಾತ್ಮಿಕ ವಿಚಾರಗಳು ಶಿಕ್ಷಣಕ್ಕೆ ಸಂಬಂಧ ಪಟ್ಟದಲ್ಲವಾದರೆ ವಿಜ್ಞಾನ, ಗಣಿತ ಇತ್ಯಾದಿ ಇತರ ಪಾಠ ವಿಷಯಗಳು ಮಾತ್ರವೇ ಪ್ರಾಮುಖ್ಯವೆಂದಾದರೆ, ಪ್ರಾಯಶಃ ನಾವು ಶೈಕ್ಷಣಿಕವಾಗಿ ಮುಂದಿರಬಹುದು. ಆದರೆ ಆತ್ಮವನ್ನು ಮಾರಾಟ ಮಾಡಿ ನಾವು ಪ್ರಪಂಚವನ್ನು ಕೊಂಡುಕೊಳ್ಳುತ್ತೇವೆ ಅಲ್ಲವೇ ಸಿಲ್ವರ್?

ನಮಗೆ ಸಂಪತ್ತಿದೆ; ವೈಭವವಿದೆ; ವೈಜ್ಞಾನಿಕ ಪ್ರಗತಿಯ ಮಹತ್ಸಾಧನೆಯಿದೆ; ಶೃಂಗಾರ ವಿಲಾಸಗಳಿವೆ; ಮೋಟಾರು ಕಾರುಗಳಿವೆ; ಗಗನ ಚುಂಬಿ ಸೌಧಗಳಿವೆ; ಜಗತ್ತನ್ನೇ ನಡುಗಿಸುವ ಮಾರಕಾಸ್ತ್ರಗಳೂ, ಸೈನಿಕ ಸಾಮಗ್ರಿಗಳೂ ಇವೆ. ಆದರೆ ನಮಗೆ ಶಾಂತಿಯೊಂದಿಲ್ಲ. ನಿಂತಿರುವ ನೆಲದಡಿಯೇ ನಮಗಿಲ್ಲ-ಜೀವನದ ತಳಪಾಯವೇ ಇಲ್ಲ.

ಭಾರತದ ಇಂದಿನ ಯುವ ಜನಾಂಗ ನಮ್ಮ ದೇಶದೆಡೆಗೆ ಆಶಾದೃಷ್ಟಿಯಿಂದ ನೋಡಿ "ಅಯ್ಯೋ, ನಮಗೂ ಹೀಗೆಯೇ ಆಗಬೇಕಿತ್ತು!" ಎಂಬ ಆಸೆ ವ್ಯಕ್ತಪಡಿಸುವಾಗ ನನಗೆ ಅಳಬೇಕೋ ನಗಬೇಕೋ ತಿಳಿಯುವುದಿಲ್ಲ, ಸಿಲ್ವರ್!

ಇರಲಿ, ಗೆಳೆಯಾ, ಭಾರತದ ಕುರಿತಾಗಿ ಬರೆಯುವುದು ಬಿಟ್ಟು ಸಂಯುಕ್ತ ಅಮೇರಿಕಾದ ಕುರಿತಾಗಿ ಬರೆಯುವುದೇಕೆ ಎಂದು ನೀನು ತಿಳಿಯಬಹುದು. ಆದರೆ ಇಂತಹ ತುಲನಾತ್ಮಕ ವಿಮರ್ಶೆಯಿಂದ ಮಾತ್ರವೇ ನಾನಾಗಲೀ, ನೀನಾಗಲೀ ಭಾರತದ ಕುರಿತಾಗಿ ಸರಿಯಾಗಿ ತಿಳಿದುಕೊಳ್ಳಲು ಸಾಧ್ಯ. ಅಲ್ಲವೇ? ಅದಕ್ಕಾಗಿ ಈ ಕುರಿತಾಗಿ ಬರೆದೆ.

ಇನ್ನು ಭಾರತದ ಇಂದಿನ ಶಿಕ್ಷಣ ರಂಗದ ಕುರಿತಾಗಿ ಬರೆಯುತ್ತೇನೆ.

ಭಾರತದ ಇಂದಿನ ಶಿಕ್ಷಣ ಕ್ರಮವನ್ನು ರೂಪಿಸಿದವರು ಹೆಚ್ಚಿನ ಮಟ್ಟಿಗೆ ಬ್ರಿಟಿಷರು. ಪಾಶ್ಚಾತ್ಯ ದೇಶಗಳಲ್ಲಿ, ಮುಖ್ಯವಾಗಿ ಬ್ರಿಟನ್‌ನಲ್ಲಿ ಯಾವ ರೀತಿಯ ವಿದ್ಯೆಯು ನೀಡಲ್ಪಡುತ್ತಿತ್ತೋ ಅದನ್ನೇ ಕೆಲವು ರೀತಿಯಲ್ಲಿ ಬದಲಾಯಿಸಿ, ಭಾರತದ ವಿವಿಧ ಭಾಗಗಳಲ್ಲಿ ಅವರು ಅಳವಡಿಸಿಕೊಂಡರು.

ಕಾರಕೂನರನ್ನು ತರಬೇತಿ ಮಾಡಲು ರೂಪಿಸಿದ ಶೈಕ್ಷಣಿಕ ಪದ್ಧತಿ

ಯುದು ಎಂಬುದಾಗಿ ಭಾರತೀಯರು ಇಂದು ಆಕ್ಷೇಪಿಸುವುದಿದೆ. ಆದರೆ ಅದು ಸತ್ಯವೆಂದು ನನಗನಿಸುವುದಿಲ್ಲ. ಏಕೆಂದರೆ ಆ ಶಿಕ್ಷಣವನ್ನು ಪಡೆದೇ ಭಾರತೀಯರ ಸ್ವಾತಂತ್ರ್ಯ ದಾಹವು ಬೆಳೆದುದು-ಅದರ ಬಲದಿಂದಲೇ ಅವರು ಗಾಂಧೀಜಿಯವರ ನೇತೃತ್ವದಲ್ಲಿ ಸ್ವಾತಂತ್ರ್ಯಕ್ಕಾಗಿ ಹಲವು ಸತ್ಯಾಗ್ರಹ ಸಮರಗಳನ್ನು ಹೂಡಿದುದು.

ಆದರೆ ಭಾರತದ ಮೂಲ ಶಿಕ್ಷಣ ಪದ್ಧತಿಯಲ್ಲಿರುವ ಧಾರ್ಮಿಕ ದೃಷ್ಟಿ ಮತ್ತು ಸಾಂಸ್ಕೃತಿಕ ತರಬೇತಿಯು ಅದರಲ್ಲಿ ಸಿಗುವುದಿಲ್ಲ ಎಂಬುದಂತೂ ನಿಶ್ಚಯವಾಗಿದೆ. ಈ ವಿದ್ಯಾಭ್ಯಾಸದಿಂದ ವಿದ್ಯಾರ್ಥಿಗಳಲ್ಲಿ ಕಾಯಕಷ್ಟ ಮಾಡುವ ಮನೋಭಾವ ಇಲ್ಲವಾಗುವುದು; ಸುಖ ಲೋಲುಪತೆಯು ಬೆಳೆಯುವುದು. ಅದಿರಲಿ, ಇಂದಿನ ಪರಿಸ್ಥಿತಿಯನ್ನು ಸಾಕಷ್ಟು ವಿವರವಾಗಿ ವಿಶ್ಲೇಷಣೆ ಮಾಡುತ್ತೇನೆ.

ಹಿಂದೆಯೇ ನಾನು ಬರೆದಿರುವಂತೆ, ಭಾರತದ ಬಹು ಸಂಖ್ಯಾಕರು ಇನ್ನೂ ಕೂಡಾ ಹಳ್ಳಿಯಲ್ಲಿ ವಾಸವಾಗಿರುವರು-ಆ ಹಳ್ಳಿಗಳಾದರೋ ದೇಶದ ಮೂಲೆ ಮೂಲೆಗಳಲ್ಲಿ ಹರಿಹಂಚಿವೆ. ಕೆಲವು ಪ್ರದೇಶಗಳು ಯಾವುದೇ ರೀತಿಯ ಸಾರಿಗೆ ಸಂಪರ್ಕವಿಲ್ಲದವುಗಳು. ಇನ್ನು ಕೆಲವು ಹಳ್ಳಿಗಳಲ್ಲಿ ಜನರು ಒಂದೇ ಕಡೆಯಲ್ಲಿ ವಾಸಿಸುವ ಬದಲು ಹಳ್ಳಿಯ ಮೂಲೆ ಮೂಲೆಗಳಲ್ಲಿ ದೂರ ದೂರವಾಗಿ ವಾಸವಾಗಿರುವುದಿದೆ. ಆದ್ದರಿಂದ ಕೆಲವೊಂದು ಹಳ್ಳಿಗಳಲ್ಲಿ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸುವುದು ದೊಡ್ಡ ಸಮಸ್ಯೆಯೇ ಆಗಿದೆ.

ಇದರ ಪರಿಣಾಮವಾಗಿಯೇ ಭಾರತದಲ್ಲಿ ಹಿಂದಿನಿಂದಲೂ ಬಹುಸಂಖ್ಯಾಕರು ಅವಿದ್ಯಾವಂತರು, ಮಾತ್ರವಲ್ಲ-ನಿರಕ್ಷರ ಕುಕ್ಷಿಗಳೂ ಆಗಿದ್ದಾರೆ. ಹಾಗಿರುತ್ತಾ ಅಂಥವರಿಗೆ ವಿದ್ಯೆಯ ಮಹತ್ವವೂ ಸಾಕಷ್ಟು ತಿಳಿದಿರುವುದಿಲ್ಲ. ಇದರಿಂದಲಾಗಿಯೇ ಹೊಸ ಹೊಸ ವಿದ್ಯಾಲಯಗಳನ್ನು ಸ್ಥಾಪಿಸುವುದೇ ದೊಡ್ಡ ಸಮಸ್ಯೆಯಾಗಿದೆ.

ನೀನು ಈಗಾಗಲೇ ತಿಳಿದಿರುವಂತೆ, ಭಾರತದ ಹೆಚ್ಚಿನ ಮಂದಿ ಕೇವಲ ಗರೀಬರು. ಒಪ್ಪತ್ತು ಊಟಕ್ಕೂ ಕೊರತೆಯಿರುವ ಸನ್ನಿವೇಶಗಳೇ ಹಲವಿವೆ. ಅಂಥವರ ಮಕ್ಕಳೂ ಏನಾದರೂ ಚಿಲ್ಲರೆ ಕೂಲಿ ಕೆಲಸಮಾಡಿ ಹೊಟ್ಟೆ ತುಂಬಿಕೊಳ್ಳಬೇಕಾಗುತ್ತದೆ — ಅಥವಾ ಮನೆಯವರ ಹೊಟ್ಟೆ ತುಂಬಲು

ಘುತ್ತಿಸ ಬೇಕಾಗುತ್ತದೆ. ಇನ್ನು ಹಲವು ಕಡೆಗಳಲ್ಲಿ, ತಂದೆ, ತಾಯಿ ಏನ
ದರೂ ಕಾಯಕಷ್ಟ ಮಾಡುವಾಗ, ಆ ಎಳೆಹರೆಯದ ಮಕ್ಕಳು ಮನೆಯ
ನಿಂತುಕೊಂಡು, ಅಲ್ಲಿರುವ ಚಿಕ್ಕ ಮಕ್ಕಳನ್ನು ನೋಡಿಕೊಳ್ಳಬೇಕಾಗುತ್ತದೆ-
ಮನೆಯ ರಕ್ಷಣೆಯನ್ನೂ ನೋಡಿಕೊಳ್ಳಬೇಕಾಗುತ್ತದೆ. ಆದ್ದರಿಂದ ದೇಶದ
ಎಷ್ಟೋ ಮಿಲಿಯಾಂತರ ಬಾಲಕ ಬಾಲಕಿಯರಿಂದೂ ವಿದ್ಯಾಭ್ಯಾಸವಿಲ್ಲದ
ವರಾಗಿರುತ್ತಾರೆ.

ಅದಕ್ಕೆ ಭಾರತ ಸರಕಾರ ಮತ್ತು ಪ್ರಾಂತೀಯ ಸರಕಾರಗಳು, ಕಡ್ಡಾಯ
ಶಿಕ್ಷಣದ ಯೋಜನೆಯನ್ನಿಟ್ಟುಕೊಂಡಿವೆ. ಕೆಲವು ಪ್ರಾಂತ್ಯಗಳು ಇದನ್ನು
ಜ್ಯಾರಿಗೊಳಿಸಿವೆಯಾದರೂ, ಹೆಚ್ಚಿನ ಪ್ರಾಂತ್ಯಗಳು ಇದನ್ನು ಇನ್ನೂ ನಿಯಮ
ಬದ್ಧವಾಗಿ ಮಾಡಿರುವುದಿಲ್ಲ.

ಕಡ್ಡಾಯ ಶಿಕ್ಷಣದ ಕ್ರಮವನ್ನು ಕಾರ್ಯಗತಗೊಳಿಸಿದಾಗ ಭಾರತದ
ಹಳ್ಳಿಗರು ಕಣ್ಣೀರು ಸುರಿಸುವುದಿದೆ. ಅವರ ದೃಷ್ಟಿಯಲ್ಲಿ, ಕಾರಾಗೃಹ ವಿಧಿ
ಸುವುದಕ್ಕಿಂತಲೂ ಕಠಿಣವಾದ ಶಿಕ್ಷೆಯಾಗಿದೆ–ಕಡ್ಡಾಯ ಶಿಕ್ಷಣವು. ಉಚಿತ
ವಾಗಿಯೇ ಪ್ರಾಥಮಿಕ ಶಿಕ್ಷಣ ಕೊಡಲು ಸರಕಾರವು ಮುಂದೆ ಬಂದರೂ
ಹಲವು ಜನರು ಮೆಚ್ಚುವುದಿಲ್ಲ. ಇತ್ತೀಚೆಗೆ ಪರಿಸ್ಥಿತಿಯು ಬದಲಾಗುತ್ತಿದೆ
ಯಾದರೂ ಇನ್ನೂ ಅದು ಪೂರ್ತಿ ಮಾಯವಾಗಿಲ್ಲ.

ಅದಕ್ಕಾಗಿ ಕೆಲವು ಪ್ರಾಂತ್ಯದ ಸರಕಾರಗಳು ಮಧ್ಯಾಹ್ನಕ್ಕೆ ಉಚಿತ
ಊಟದ ವ್ಯವಸ್ಥೆಯನ್ನು ಮಾಡಿವೆ–ಹಾಗಿದ್ದರೂ ಸಮಸ್ಯೆಯು ಇನ್ನೂ ಉಳಿ
ದಿದೆ. ಆದರೆ ಸರಕಾರವು ಇನ್ನಷ್ಟು ಉಗ್ರವಾಗಿ ಕ್ರಮ ಕೈಗೊಂಡರೆ ಸಾರ್ವ
ತ್ರಿಕ ವಿದ್ಯಾಭ್ಯಾಸವು ಬೆಳೆಯಬಹುದು. ಆದರೆ ಭಾರತದ ಆರ್ಥಿಕ ಸ್ಥಿತಿಗ
ತಿಗೆ ಇಲ್ಲಿಯ ವಿದ್ಯಾಭ್ಯಾಸವು ನೇರವಾಗಿ ಸಂಬಂಧಿಸಿದೆ. ದಾರಿದ್ರ್ಯ ಪರಿಹಾರ
ವಾಗದೆ ವಿದ್ಯೆಯು ಬೆಳವಣಿಗೆಯಾಗುವಂತಿಲ್ಲ.

ಇಲ್ಲಿಯ ಪ್ರಾಥಮಿಕ, ಮಾಧ್ಯಮಿಕ ಹಾಗೂ ಸೆಕೆಂಡರಿ ಶಾಲೆಗಳ ಆಡ
ಳಿತ ಸಂಸ್ಥೆಗಳನ್ನು ಹೀಗೆ ಐದು ವಿಧವಾಗಿ ವಿಂಗಡಿಸಬಹುದು. 1] ಖಾಸಗಿ
ವ್ಯಕ್ತಿಗಳು 2] ಕ್ರೈಸ್ತ ಮಿಶನರಿ ಸಂಸ್ಥೆಗಳು. 3] ಇತರ ಖಾಸಗಿ ಸಂಸ್ಥೆಗಳು.
4] ಪಂಚಾಯತ್, ತಾಲೂಕು ಬೋರ್ಡ್, ಮುನಿಸಿಪಾಲಿಟಿ ಮೊದಲಾದ
ಲೋಕಲ್ ಬೋರ್ಡುಗಳು. 5] ಸರಕಾರ.

ಈ ಎಲ್ಲಾ ತರದ ಮತ್ತು ಎಲ್ಲಾ ವರ್ಗದ ಶಾಲೆಗಳನ್ನೂ ತೆಗೆದು ಕೊಂಡು ಒಟ್ಟಾಗಿ ಹೇಳುವುದಿದ್ದರೆ, ಅವುಗಳಲ್ಲಿ ಈಗ ಕೊಡಲ್ಪಡುತ್ತಿರುವ ರೀತಿಯ ಶಿಕ್ಷಣ ಕೊಡಲು ಬೇಕಾದ ಉಪಕರಣಗಳಿಲ್ಲ. ಇರುವ ಕೆಲವು ಉಪಕರಣಗಳು ಹಳೆಯ ಕಾಲದವುಗಳು; ತೃತೀಯ ದರ್ಜೆಯವುಗಳು.

ಭಾರತದ ಉಪಾಧ್ಯಾಯರು ಆರ್ಥಿಕವಾಗಿ ಬಹಳ ಕೆಳಮಟ್ಟದಲ್ಲಿದ್ದಾರೆ. ಅವರ ಉತ್ಪತ್ತಿಯು ಬಹಳ ಕಡಿಮೆ. ಭಾರತದ ಎಲ್ಲಾ ನೌಕರರ ವೇತನವೂ ಕಡಿಮೆಯಲ್ಲವೇ ಎಂಬ ಪ್ರಶ್ನೆಯೇಳಬಹುದು. ಆದರೆ ಪೇದೆಗಳಿಂದ ಪ್ರಾರಂಭವಾಗಿ ಎಲ್ಲಾ ವರ್ಗದ ನೌಕರರಿಗೂ ಒಂದಲ್ಲ ಒಂದು ರೀತಿಯ ಇತರ ಉತ್ಪತ್ತಿಯ ದಾರಿಗಳಿವೆ. ಅದು ವಿವಿಧ ವ್ಯಕ್ತಿಗಳಿಂದ ಪಡೆಯುವ ಭಕ್ಷೀಸು, ಇನಾಂ, ಲಂಚ ಮೊದಲಾದ ವಿವಿಧ ರೂಪಗಳನ್ನು ತಾಳುವುದು. ಆದರೆ ಉಪಾಧ್ಯಾಯರಿಗೆ ಇತ್ತೀಚೆಗಿನ ತನಕವೂ ಅಂತಹ ಅವಕಾಶಗಳು ಕಡಿಮೆ ಎನ್ನಬಹುದು.

ಮಾತ್ರವಲ್ಲ, ಸಮಾಜದಲ್ಲಿ ಅವರಿಗೆ ಗೌರವದ ಸ್ಥಾನವಿಲ್ಲ. ಭಾರತದ ಪ್ರಾಚೀನ ಪರಂಪರೆಯಲ್ಲಿ ಅವರಷ್ಟು ಗೌರವಾನ್ವಿತ ಸ್ಥಾನವು ಯಾರದೂ ಇರಲಿಲ್ಲ. ಸಮಾಜವು ಅವರನ್ನು ಬಹಳಷ್ಟು ಪೂಜ್ಯ ಭಾವನೆಯಿಂದ ಕಾಣುತ್ತಿತ್ತು.

ಆದರೆ ಇಂದು ಭಾರತೀಯ ಸಮಾಜದಲ್ಲಿ ಅವರಷ್ಟು ಅಗೌರವದ ಸ್ಥಾನ ಯಾರಿಗೂ ಇಲ್ಲ ಎಂಬುದಾಗಿ ಖಚಿತ ಹೇಳಬಹುದು. ಉಪಾಧ್ಯಾಯನೆಂದರೆ ಒಂದು ನಿಕೃಷ್ಟ ಪ್ರಾಣಿ ಎಂಬ ಭಾವನೆಯೇ ಜಾಸ್ತಿ.

ಹೀಗೆ ಆರ್ಥಿಕ ಅವನತಿ ಮತ್ತು ಸಾಮಾಜಿಕ ಸ್ಥಾನ ಮಾನದ ಕೊರತೆಯ ಕಾರಣದಿಂದ ಭಾರತದಲ್ಲಿ ಉಪಾಧ್ಯಾಯನ ಉದ್ಯೋಗಕ್ಕೆ ಏನೇನೊ, ಆಕರ್ಷಣೆಯಿಲ್ಲ. ಆದ್ದರಿಂದಲೇ ಹೆಚ್ಚಿನ ಮಟ್ಟಿಗೆ ಕುಲೀನ ಮನೆತನದವರು, ಶ್ರೀಮಂತರು ಹಾಗೂ ಬುದ್ಧಿಶಾಲಿಗಳು ಈ ಉದ್ಯೋಗಕ್ಕೆ ಆಕರ್ಷಿತರಾಗುವುದಿಲ್ಲ.

ಭಾರತದ ಯುವಕರು ಬೇರೆ ಯಾವ ಉದ್ಯೋಗಕ್ಕಾದರೂ ಸೇರುವ ಕುರಿತಾಗಿ ಕನಸು ಕಾಣುತ್ತಾರೆ-ಆದರೆ ಉಪಾಧ್ಯಾಯನಾಗಿ ಸೇರುವ ಕುರಿತು ಅವರು ಕನಸು ಕಾಣುವುದೇ ಇಲ್ಲ.

ತಮ್ಮ ಮಕ್ಕಳು ಅಪ್ಪಿತಪ್ಪಿಯಾದರೂ ತಾವು ಉಪಾಧ್ಯಾಯರಾಗಿ ದುಡಿಯುತ್ತೇವೆ ಎಂದರೆ ತತ್‌ಕ್ಷಣ ಹೆತ್ತವರು ರೇಗಿ ಬೀಳುತ್ತಾರೆ.

"ಉಪಾಧ್ಯಾಯರಂತೆ ಉಪಾಧ್ಯಾಯರು ! ಅದಕ್ಕಿಂತ ಸರಕಾರಿ ಕಚೇರಿಯ ಪೇದೆಯಾಗಬಾರದೇ?" ಎಂದು ಬಿಡುತ್ತಾರೆ.

ಸಮಾಜದಲ್ಲೂ ಅಷ್ಟೇ-ಯಾರಾದರೂ ಆ ದುರದೃಷ್ಟಕರ ಮಾತನ್ನು ಹೇ ಬಿಟ್ಟರೆ ಸಾಕು; ತಲೆ ಕೆಳಗೆ ಹಾಕಿ ತಿರಸ್ಕಾರದಿಂದ "ಉಪಾಧ್ಯಾಯರಾಗುವುದೇ? ಎಂದು ಹೇಳಿಬಿಡುತ್ತಾರೆ. ಯುವಕರ ಮನಸ್ಸಿನ ಮೇಲೆ ಇಷ್ಟುವಿಷದ ಬೀ ಬಿತ್ತಿ ಬಿಟ್ಟರೆ ಸಾಕು. ಅವರೂ ಅದನ್ನು ತಿರಸ್ಕರಿಸಿ ಬಿಡುತ್ತಾರೆ.

ಆದರೆ ಉಪಾಧ್ಯಾಯರುಗಳಾದರೂ, ತಮ್ಮ ವಿದ್ಯಾರ್ಥಿಗಳು ಈ ಉದಾತ್ತ ಉದ್ಯೋಗವನ್ನು ಆರಿಸಿಕೊಳ್ಳುವಂತೆ ಬೋಧಿಸುವುದಿಲ್ಲವೇ ಎಂದು ನೀನು ಕೇಳಬಹುದು.

ಆದರೆ ಸಿಲ್ವರ್, ಭಾರತದ ಉಪಾಧ್ಯಾಯ ಸಂಕುಲವು ತಮ್ಮ ವಿದ್ಯಾರ್ಥಿ ಬಳಗಕ್ಕೆ ನೀಡುವ ಉಪದೇಶವು ಬಹಳ ಸ್ವಾರಸ್ಯವಾಗಿದೆ. "ಯಾವ ಉದ್ಯೋ ಗಕ್ಕಾದರೂ ಹೋಗಿರಿ—ಉಪಾಧ್ಯಾಯನ ಕೆಲಸ ಬೇಡ. ಅದನ್ನು ಬಿಟ್ಟು ಬಿಡಿ" ಎಂಬುದೇ ಅವರ ನಿರಂತರ ಉಪದೇಶ.

ಹಿಂದಿನ ಮಾಸದಲ್ಲಿ ನಾನು ಮದ್ರಾಸಿನ ಒಂದುಪ್ರಸಿದ್ಧ ಹೈಸ್ಕೂಲನ್ನು ಸಂ ದರ್ಶಿಸುವ ಸಂದರ್ಭ ಬಂದಿತ್ತು. ಅದು ಸಾಮಾನ್ಯ ಜೂನ್ ಪ್ರಾರಂಭದಲ್ಲಿ. ಕ್ಲಾಸುಗಳಲ್ಲಿ ಇನ್ನೂ ಪಾಠಗಳು ಪೂರ್ತಿಯಾಗಿ ಪ್ರಾರಂಭಿಸಲ್ಪಟ್ಟಿರಲಿಲ್ಲ. [ಭಾರತದ ಹೆಚ್ಚಿನ ಹೈಸ್ಕೂಲುಗಳಲ್ಲಿ ಜೂನ್ ಆರಂಭದಿಂದ ಶಾಲಾ ವರ್ಷವು ಪ್ರಾರಂಭವಾಗುವುದು.] ನಾನು ಮುಖ್ಯ ಕಟ್ಟಡದ ಜಗಲಿಯಲ್ಲಿ ಮುಖ್ಯೋ ಪಾಧ್ಯಾಯರ ಜತೆಯಲ್ಲಿ ಹೋಗುತ್ತಾ ಇದ್ದೆ. ಆಗ ಫಕ್ಕನೇ "ಬೇರೇನೂ ಉದ್ಯೋಗ ಸಿಗದಿದ್ದರೆ - ಹೊಟ್ಟೆ ಹೊರೆಯಬೇಕಲ್ಲ-ಉಪಾಧ್ಯಾಯರಾದರೂ ಆಗಿರಿ. ಆದರೆ ಆ ದುರವಸ್ಥೆ ನಿಮಗೆ ಬಾರದಿರಲಿ, ಎಂದು ಪ್ರಾರ್ಥಿಸುತ್ತೇನೆ" ಎಂಬುದಾಗಿ, ಒಂದು ತರಗತಿಯಲ್ಲಿ ಒಬ್ಬ ಉಪಾಧ್ಯಾಯರು ಹೇಳುತ್ತಿದ್ದುದು ಕೇಳಿತು. ಪ್ರಾಯಶಃ ಬೇರೆ ಬೇರೆ ಉದ್ಯೋಗಾವಕಾಶಗಳ ಕುರಿತಾಗಿ ಅವರು ಹೇಳುತ್ತಿದ್ದಿರಬೇಕು.

ಆ ಮಾತು ಸಿಡಿಲಿನಂತೆ ನನ್ನೆದೆಗೆ ನಾಟಿತು. ಆ ನಂತರ ಒಂ ದರ್ಧ ಘಂಟೆ ಮುಖ್ಯೋಪಾಧ್ಯಾಯರು ನನ್ನ ಕೂಡೆ ಏನೆಲ್ಲಾ ಹೇಳಿದರೋ ಅದೊಂದೂ ನನ್ನ ಮನಸ್ಸಿಗೆ ಪ್ರವೇಶವಾಗಲೇ ಇಲ್ಲ. ಸ್ವಲ್ಪ ಕಾಲದ ನಂತರ ಚೇತರಿಸಿಕೊಂಡು "ನಿಮ್ಮ ಕೈಕೆಳಗಿನ ಉಪಾಧ್ಯಾಯರು ಆತಹ ಮಾತುಗ

ಳನ್ನು ಹೇಳಲು ಏಕೆ ಅಸ್ಪದ ಕೊಡುತ್ತೀರಿ, ಸ್ವಾಮಿ?" ಎಂದು ನಾನು ಮುಖ್ಯೋಪಾಧ್ಯಾಯರ ಕೂಡೆ ಕೇಳಿದೆ.

ಆಶ್ಚರ್ಯಚಕಿತರಾದ ಮುಖ್ಯೋಪಾಧ್ಯಾಯರು "ಎಂತಹ ಮಾತು ಗಳು ಮಿ. ಓರ್‌ಮನ್?" ಎಂದು ಕೇಳಿಯೇ ಬಿಟ್ಟರು. "ವಿದ್ಯಾರ್ಥಿಗಳು ಮುಂದೆ ಉಪಾಧ್ಯಾಯ ವೃತ್ತಿಯನ್ನು ಕೈಗೊಳ್ಳುವುದರ ವಿರುದ್ಧವಾಗಿ ನಿಮ್ಮ ಸಹೋದ್ಯೋಗಿಗಳು ಹೇಳಿದರಲ್ಲ?" ಎಂದು ನಾನು ಪ್ರಶ್ನಿಸಿದೆ. ಅವರಿಗೆ ಮತ್ತೆಯೂ ಪೂರ್ತಿ ಜ್ಞಾಪಕಕ್ಕೆ ಬರಲಿಲ್ಲ. ಕಡೆಗೆ ನಾನು ಸಂದರ್ಭವನ್ನು ಪೂರ್ತಿಯಾಗಿ ವರ್ಣಿಸಿದೆ. ಆಗ ಅವರಂದರು "ಓಹೋ ಅದೋ? ಅದರ ಲ್ಲೇನಿದೆ ಸ್ವಾಮಿ? ಇದ್ದ ವಿಷಯವನ್ನೇ ಸತ್ಯವಾಗಿ ಅವರು ಮಕ್ಕಳ ಮುಂದಿ ಟ್ಟರು. ನಾವು ಮಕ್ಕಳಿಂದ ಸತ್ಯವನ್ನು ಬಚ್ಚಿಡುವ ಕ್ರಮವಿಲ್ಲ!" ಎಂಬುದಾಗಿ ತಾತ್ವಿಕ ಉಪದೇಶದ ಧಾಟಿಯಲ್ಲಿ ಮಾತನಾಡಿದರು.

"ಉಪಾಧ್ಯಾಯರೇ ತಮ್ಮ ವೃತ್ತಿಯನ್ನು ಹಳಿದುಕೊಂಡರೆ ಮತ್ತೆ ಉಪಾ ಧ್ಯಾಯರಾಗಿ ಬರುವವರು ಯಾರು?" ಎಂಬುದಾಗಿ ನಾನು ಪ್ರಶ್ನಿಸಿದೆ. "ನಿಮ್ಮದು ಸಿದ್ಧಾಂತ, ಮಿ. ಓರ್‌ಮನ್! ಆದರೆ ವ್ಯವಹಾರದಲ್ಲಿ ಎಲ್ಲಾ ಉಪಾ ಧ್ಯಾಯರೂ ಈ ಮಾತನ್ನು ಹೇಳಿಯೇ ಹೇಳುತ್ತಾರೆ!" ಎಂದವರು ಸ್ವರಕೂಡಿ ಸಿದರು.

ನಿಜವಾಗಿ ಅವರು ಹೇಳಿದ್ದು ಒಂದು ರೀತಿಯಲ್ಲಿ ಸತ್ಯವಾಗಿತ್ತು. ಎಲ್ಲಾ ಉಪಾಧ್ಯಾಯರೂ ತಮ್ಮ ವಿದ್ಯಾರ್ಥಿಗಳಿಗೆ ಆ ತೆರನಾದ ಉಪದೇಶ ನೀಡುವು ದು ನನಗೂ ಗೊತ್ತಿತ್ತು. ಆದರೂ ಆ ವಿಷಯವನ್ನು ಅಷ್ಟಕ್ಕೇ ಬಿಡಲು ನನಗಿಷ್ಟ ವಿರಲಿಲ್ಲ. ಅದೇ ಹೈಸ್ಕೂಲಿನಲ್ಲಿ ಅದೇ ದಿನ ನನ್ನ ಒಂದು ಭಾಷಣವನ್ನೇರ್ಪಡಿಸಿ ಸಿದ್ದರು. ಹಲವರು ಉಪಾಧ್ಯಾಯರಾಗಿ ನಾಡಿಗೆ ಸೇವೆ ಸಲ್ಲಿಸುವುದರ ಅವಶ್ಯ ಕತೆಯ ಕುರಿತಾಗಿ ನಾನು ಒತ್ತಿ ಹೇಳಿದೆ. ತಮ್ಮ ವಿದ್ಯಾರ್ಥಿಗಳು ಉಪಾ ಧ್ಯಾಯರಾಗಲು, ಇಂದಿನ ಉಪಾಧ್ಯಾಯರೇ ಪ್ರೋತ್ಸಾಹ ನೀಡಬೇಕೆಂದೂ ನಾನು ಆಶಯವನ್ನು ವ್ಯಕ್ತಪಡಿಸಿದೆ.

ಸುಮಾರು ಒಂದು ಗಂಟೆಯ ಭಾಷಣ ಮಾಡಿ ನಾನು ಉತ್ತಮ ಕೆಲಸ ಮಾಡಿದೆನೆಂದು ತೃಪ್ತಿ ಪಟ್ಟುಕೊಂಡೆ. ವಿದ್ಯಾರ್ಥಿಗಳು ಆಗಾಗ ಕರತಾಡನ ಮಾಡಿ ನನ್ನ ಮಾತುಗಳಿಗೆ ಮೆಚ್ಚಿಗೆಯನ್ನೂ ಸೂಚಿಸಿದ್ದರು. ಆದರೆ ಆ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದ ಮುಖ್ಯೋಪಾಧ್ಯಾಯರು ತಮ್ಮ ಸಮಾ ರೋಪ ಭಾಷಣದಲ್ಲಿ ಹೀಗೆಂದರು "ಮಿ। ಓರ್‌ಮನ್‌ರು ಹೇಳಿದ ಮಾತಿನರ್ಥ

ಹೀಗೆ-ಬೇರೆ ಯಾವ ಉದ್ಯೋಗವೂ ಸಿಗದಿದ್ದರೆ, ಉಪಾಧ್ಯಾಯರಾಗಿಯ
ದರೂ ನಾಡಿಗೆ ಸೇವೆ ಸಲ್ಲಿಸಬಹುದೆಂದೇ ಆಗಿದೆ! ಹೊಟ್ಟೆ ತುಂಬಿಸಲಾರ
ವೃತ್ತಿಯನ್ನು ಮೇಲೆ ಬಿದ್ದು ಕೈಗೊಳ್ಳಬೇಕೆಂದು ಮೇಧಾವಿಗಳಾದ ಅವರ
ಹೇಳಿದ್ದಾಗಿರಲಾರದು!" ಆಗ ಅವರ ಸಹೋದ್ಯೋಗಿಗಳೆಲ್ಲ ಕೈ ಚಪ್ಪಾ
ಬಾರಿಸಿ, ಹರ್ಷಧ್ವನಿಗೈದರು. ವಿದ್ಯಾರ್ಥಿಗಳೆಲ್ಲ ಬೆಪ್ಪರಾಗಿ ಆಲಿಸಬೇಕಾ
ಬಂತು.

ಅಧ್ಯಕ್ಷರೇ ಈ ರೀತಿ ಮಾತನಾಡಿರಲು, ನಾನಿನ್ನು ಕಾರ್ಯಕ್ರಮವನ್ನು
ಕೆಡಿಸಬೇಕೇಕೆ ಎಂದು ಸುಮ್ಮನಾದೆ. ಭಾರತದಲ್ಲಿ ಪ್ರಚಲಿತವಿರುವ ಒಂದು
ಗಾದೆಯಿದೆ. "ನಾಯಿಯ ಬಾಲ ನೆಟ್ಟಗಾದೀತೇ?" ಎಂದು. ನನಗಾ
ಮಾತು ನೆನಪಾಗಿ ನಾನು ನಸುನಕ್ಕೆ. ಒಳಗಿಂದೊಳಗೇ ನನಗೆ ಅತೀವ ಸಂಕ
ಟವಾಗದಿರಲಿಲ್ಲ.

ಸಿಲ್ವರ್, ಇದೊಂದು ಬಿಡಿಯಾದ ಅನುಭವವಲ್ಲ. ದೇಶದ ಒಂದು
ಮೂಲೆಯಿಂದ ಇನ್ನೊಂದು ಮೂಲೆಯ ತನಕ ಈ ಮಾತು ಪ್ರತಿಧ್ವನಿತವಾ
ದ್ದನ್ನು ನಾನು ಕೇಳಿದ್ದೇನೆ.

ಹಾಗಿದ್ದರೆ ಭಾರತದ ಇಷ್ಟು ವಿದ್ಯಾಮಂದಿರಗಳಲ್ಲಿ ದುಡಿಯಲು ಇಷ್ಟಾ
ದರೂ ಉಪಾಧ್ಯಾಯರು ಹೇಗೆ ದೊರೆತರು? ನಿನಗೆ ಕೇಳಿದರೆ ಅಚ್ಚರಿಯಾಗ
ಬಹುದು. ಬಹಳ ಸಮಯ ಇತರ ಬೇರೆಬೇರೆ ಉದ್ಯೋಗಾವಕಾಶಗಳಿಗಾಗಿ
ಒದ್ದಾಡಿ, ಸೋತು ಸುಣ್ಣವಾಗಿ ಅತೃಪ್ತರಾದವರೆಲ್ಲಾ ಇದಕ್ಕೆ ಬಂದಿದ್ದಾರೆ.

ನಾನು ಹಲವು ಉಪಾಧ್ಯಾಯರ ಕೂಡೆ ಪ್ರಶ್ನಿಸಿದ್ದುಂಟು. "ನೀವು
ಎಷ್ಟು ಸಮಯದ ತನಕ ಈ ವೃತ್ತಿಯಲ್ಲಿರಲು ಬಯಸುತ್ತೀರಿ?"ಎಂದು. ಅದಕ್ಕೆ
ಸೇಕಡಾ 99 ಸಲವೂ ಬೇರೆ "ಉದ್ಯೋಗ ಸಿಗುವ ತನಕ" ಎಂದು ಉತ್ತರ
ಬಂದಿದೆ.

ನಾನು ವಿದ್ಯಾ ಇಲಾಖೆಯ ಅಧಿಕಾರಿಗಳ ಕೂಡೆ ಪ್ರಶ್ನಿಸಿದ್ದುಂಟು–
ಇಂತಹ ಪರಿಸ್ಥಿತಿ ಏಕೆ ಬಂತು ಎಂಬುದಾಗಿ. "ಏನು ಮಾಡಲಿ? ಸಾಮಾಜಿಕ
ಸ್ಥಿತಿಗತಿಯೇ ಹಾಗಿದೆ!" ಎಂಬುದಾಗಿ ಅವರು ಕೈಮುಗುಚುತ್ತಾರೆ.

ಭಾರತದ ಕೆಲವು ಪ್ರಾಂತ್ಯಗಳಲ್ಲಿ ಒಬ್ಬ ಕೂಲಿ ಕೆಲಸದವನಿಗಿರುವಷ್ಟು
ಒಬ್ಬ ಅಧ್ಯಾಪಕನ ಸಂಬಳವಿಲ್ಲ ಎಂದರೆ ನಿನಗೆ ಆಶ್ಚರ್ಯವಾಗಬಹುದು. ಉದಾ

ಹರಣೆಗೆ ಕೇರಳ ಪ್ರಾಂತ್ಯವನ್ನು ತೆಗೆದುಕೊಳ್ಳಬಹುದು. ಕೆಲವು ಕಡೆಗಳಲ್ಲಿ ಅಲ್ಲಿಯ ಮಜೂರರು ದಿನವೊಂದರ ರೂಪ್ಯಾ ಮೂರರಂತೆ ಸಂಪಾದಿಸುವುದಿದೆ. ಸ್ತ್ರೀಯರೂ ರೂಪ್ಯಾ ಎರಡರಿಂದ ಎರಡೂವರೆ ತನಕ ಸಂಪಾದಿಸುತ್ತಾರೆ. ಅಂದರೆ ಒಂದು ಮನೆಯ ಉತ್ಪತ್ತಿ ದಿನವೊಂದರ ಐದು ರೂಪ್ಯಾ ಆಗುವುದಿದೆ; ತಿಂಗಳೊಂದರ ರೂ. 150 ಆಯಿತು. (30 ಡಾಲರು. ಮೂಗಿನ ಮೇಲೆ ಕೈಬೆರಳಿಡಬೇಡ, ಸಿಲ್ವರ್! ಇದು ಭಾರತ-ಇಲ್ಲಿಯ ಆರ್ಥಿಕ ಸ್ಥಿತಿಗತಿ ಹಿಂದೆಯೇ ಬರೆದಿದ್ದೇನೆ–ಆದ್ದರಿಂದ ಸಂಯುಕ್ತ ಅಮೇರಿಕಾದ ಸ್ಥಿತಿಗತಿಗೆ ಹೋಲಿಸಬೇಡ.) ಅಲ್ಲಿಯ ಬಡ ಉಪಾಧ್ಯಾಯನು ಎಂಭತ್ತರಲ್ಲೋ, ತೊಂಭತ್ತರಲ್ಲೋ ತೃಪ್ತಿಪಟ್ಟುಕೊಂಡಿರಬೇಕು.

ಇನ್ನು ಕೆಲವು ಪ್ರಾಂತ್ಯಗಳಲ್ಲಿ ಕೂಲಿಯವರಷ್ಟೇ ವೇತನ ಸಿಗುವುದಿದೆ-ಅಂದರೆ ಪ್ರಾಥಮಿಕ ಶಾಲೆಗಳ ಅಧ್ಯಾಪಕರಿಗೆ. ಅವರು ಕಲಿತು ಅದಕ್ಕಾಗಿ ಹಲವು ವರ್ಷಗಳನ್ನು ವ್ಯಯಿಸಿ, ಅದರ ಮೇಲೆ ಉಪಾಧ್ಯಾಯ ತರಬೇತಿಯನ್ನೂ ಪಡೆದುಕೊಂಡು ಹೀಗಾದರೆ ಉಪಾಧ್ಯಾಯ ವೃತ್ತಿ ಯಾರಿಗೆ ಬೇಕೆನಿಸೀತು?

ಸತ್ಯ ಹೇಳುವುದಿದ್ದರೆ ಇಲ್ಲಿಯ ಉಪಾಧ್ಯಾಯನು ಮರ್ಯಾದೆಯಿಂದ ಬದುಕುವ ಮಾತಂತಿರಲಿ-ಹೊಟ್ಟೆ ತುಂಬಾ ಊಟ ಮಾಡುತ್ತ; ಸಂಸಾರವನ್ನು ಅಸಮರ್ಥನಾಗಿದ್ದಾನೆ. ಭಾರತದ ಪರಿಸ್ಥಿತಿ ನಿನಗೆ ಗೊತ್ತು. ಪ್ರತಿ ತಾಯಿಯೂ ನಾಲ್ಕೈದು ಮಕ್ಕಳನ್ನು ಪಡೆಯುತ್ತಾಳೆ. ಬಡತನದ ಬೇಗೆ ಹೆಚ್ಚಾದವರಿಗೆ ಸಾಕಲೂ ಮಕ್ಕಳ ಬೆಳೆ ಇಮ್ಮಡಿಯಾಗುವುದಿದೆ. ಆಗ ಪರಿಸ್ಥಿತಿ ಹೇಗೆ ನಿಂತೀತು ಎಂದು ನೀನೇ ಯೋಚಿಸು.

ಈ ಬಡ ಉಪಾಧ್ಯಾಯರು ಹೊಟ್ಟೆತುಂಬಿಕೊಳ್ಳುವುದಕ್ಕಾಗಿ, ಮೆನೇಜುಮೆಂಟಿನವರ ಕೂಡೆ ಅಥವಾ ಮಕ್ಕಳ ಹೆತ್ತವರ ಕೂಡೆ ಸಾಲ ಕೇಳುವುದಿದೆ. ವೇತನ ಬಂದೊಡನೆಯೇ ಆ ವೇತನವೆಲ್ಲಾ ಸಾಲ ಸಂದಾಯಕ್ಕೆ ಹೋಗುವುದು-ಮತ್ತೆನಾಲ್ಕೈದು ದಿನ ಕಳೆದರೆ ಪುನಃ ಸಾಲಕ್ಕಾಗಿ ಅಲೆದಾಟ, ಪರಪಾಟ.

ಅಂದರೆ ಉಪಾಧ್ಯಾಯನ ಲಕ್ಷ್ಯವೆಲ್ಲಾ ನಾಳೆ ತನ್ನ ಮತ್ತು ಹೆಂಡಿರು ಮಕ್ಕಳ ಹೊಟ್ಟೆಯ ಗತಿಯೇನು ಎಂಬುದಕ್ಕೇ ವಿನಿಯೋಗವಾಗುತ್ತಿದೆ. ಅಂಥವರಿಗೆ ಪಾಠದ ಕಡೆಗೆ ಅಥವಾ ಮಕ್ಕಳ ಉನ್ನತಿಯ ಕಡೆಗೆ ಲಕ್ಷ್ಯವಾದರೂ ಇರಬೇಕು ಹೇಗೆ?

ಇನ್ನೊಂದು ಸ್ವಾರಸ್ಯದ ಪ್ರಸಂಗವಿದೆ. ಭಾರತದ ಕೆಲವು ಪ್ರಾಂತ್ಯಗಳಲ್ಲಿರುವ ಲೋಕಲ್ ಬೋರ್ಡು, ಇಲ್ಲವೇ ಖಾಸಗೀ ಶಾಲೆಗಳಲ್ಲಿ, ಸರಕಾರ

ದಿಂದ ಗ್ರಾಂಟು [ಸಹಾಯ ಧನ] ಬಂದುದನ್ನು, ಹಾಗೆಯೇ ಉಪಾಧ್ಯಾಯ
ರಿಗೆ ವೇತನವಾಗಿ ಹಂಚುವ ವ್ಯವಸ್ಥೆಯಿದೆ. ಹೀಗಿರುತ್ತಾ 3-4 ತಿಂಗಳಾದರು
ಸರಕಾರದಿಂದ ವೇತನವೇ ಬಾರದಿರುವುದಿದೆ. ಆಗ ಉಪಾಧ್ಯಾಯನ ಸ್ಥಿತಿಗ
ಯೇನೆಂಬುದನ್ನು ನೀನೇ ಊಹಿಸಿಕೋ. ಬದುಕುವುದಕ್ಕಾಗಿ ಆತನು ಶ್ರೀ
ಮಂತರ ಅಂದರೆ ಎಷ್ಟೋ ಸಲ ಮಕ್ಕಳ ಹೆತ್ತವರ ಮನೆ ಬಾಗಿಲಿಗೆ ಹೋಗಿ
ಅಕ್ಕಿ ಇತರ ಆಹಾರ ಧಾನ್ಯಗಳಿಗಾಗಿ ಕಾಡಬೇಕಾಗಬಹುದು. ಹಣದ ಸಾಲ
ಕೇಳಬೇಕಾಗಬಹುದು. ಆ ಶ್ರೀಮಂತರಿಂದ ತಿರಸ್ಕಾರದ ಮಾತುಗಳನ್ನೂ
ಪಡೆಯಬೇಕಾಗಿ ಬರಬಹುದು. ಅಂತೂ ಏನೋ ಪಡೆದುಕೊಂಡು, ಅವರು
ಜೀವಧಾರಣೆ ಮಾಡುತ್ತಾರೆನ್ನು. ಆದರೆ ಅಂಥವರು ಸಮಾಜದಲ್ಲಿ ತಮ್ಮ ಗೌರ
ವವನ್ನು ಕಾಯ್ದು ಕೊಳ್ಳುವುದು ಹೇಗೆ? ಮಕ್ಕಳ ಮುಂದೆ ಅವಮಾನಕ್ಕೆ ಗುರಿ
ಯಾಗದಿರುವುದೆಂತು?

ಹಾಗಿರಲು ಮಕ್ಕಳ ಮುಂದಿರುವ ಉಪಾಧ್ಯಾಯನ ಸಾಮಾನ್ಯ ಚಿತ್ರ
ವ್ಯಾವುದು? ವ್ಯಾಕುಲತೆಯಿಂದ ಕೂಡಿದ, ಬಾಡಿದ ಮೊಗದ, ಅಧ್ಯಾಪಕನು
ಇನ್ನೊಬ್ಬರ ಮನೆ ಬಾಗಿಲಲ್ಲಿ ಸಾಲಕ್ಕಾಗಿ ಕೈನೀಡಿಕೊಂಡಿರುವ ದೈನ್ಯ
ತೆಯ ಚಿತ್ರ! ಇದನ್ನು ನೋಡಿ ಯಾವ ಮಗುವಿಗೆ ತಾನೇ, ತಾನೂ ಉಪಾ
ಧ್ಯಾಯನಾಗಬೇಕು ಎಂಬ ಸ್ಫೂರ್ತಿ ಬಂದೀತು?

ಇನ್ನೂ ತಮಾಷೆಯ ವಿಷಯಗಳಿವೆ. ಕೆಲವು ಖಾಸಗಿ ಮೇನೇಜು
ಮೆಂಟಿನವರು ಉಪಾಧ್ಯಾಯರಿಗಾಗಿ ಬರುವ ಸಹಾಯ ದ್ರವ್ಯದಲ್ಲಿ ಒಂದಷ್ಟನ್ನು
ಪ್ರತಿ ತಿಂಗಳು ತಾವೇ ಗಿಟ್ಟಿಸಿಕೊಂಡು ಪೂರ್ತಿ ಮೌಲ್ಯಕ್ಕೆ, ಅಧ್ಯಾಪಕರಿಂದ
ಸಹಿ ಹಾಕಿಸುವುದಿದೆ. ಸಹಾಯಧನ ಪಡೆಯಲು ಹಾಗೆ ಖರ್ಚಾಯಿತು
ಹೀಗೆ ಖರ್ಚಾಯಿತು. ಎಂದು ಹೇಳಿ, ಅದರ ಬಗ್ಗೂ ಹಣ ಪಡೆದುಕೊಳ್ಳುವು
ದಿದೆ. ಅಂಥವರಿಗೆ ಶಾಲಾಡಳಿತವೆಂಬುದೊಂದು ಪಕ್ಕವೃತ್ತಿಯೇ ಆಗಿದೆ.

ಇಲ್ಲಿಯ ಅಧ್ಯಾಪಕರಲ್ಲಿ ಸರಕಾರೀ ಶಾಲೆಗಳಲ್ಲಿರುವವರಿಗೆ ಮಾತ್ರವೇ
ನಿವೃತ್ತಿ ವೇತನ ಸಿಗುವುದಿದೆ. ಉಳಿದ ಯಾರಿಗೂ ಆ ವ್ಯವಸ್ಥೆಯಿಲ್ಲ. ಅಂಥ
ವರಿಗಾಗಿ ಪ್ರೊವಿಡೆಂಟ್ ಫಂಡ್ ಎಂಬೊಂದು ಏರ್ಪಾಡಿದೆ. ಅದಕ್ಕೆ ಸರಕಾರ
ದವರು ಸೇಕಡಾ 50, ಮೇನೇಜುಮೆಂಟು ಸೇಕಡಾ 25, ಉಪಾಧ್ಯಾಯನು
ಸೇಕಡ 25, ಹೀಗೆ ಪ್ರತಿ ತಿಂಗಳಲ್ಲೂ ತೆತ್ತುಕೊಂಡು ಬರಬೇಕೆಂದಿದೆ. ಆದರೆ
ಹಲವು ಮೇನೇಜುಮೆಂಟಿನವರು, ಮುಖ್ಯವಾಗಿ ಪ್ರಾಥಮಿಕ ಶಾಲೆಗಳಲ್ಲಿ,

ತಮ್ಮ ಪಾಲಿನ ಮೌಲ್ಯವನ್ನು ತಾವು ಕೊಡದೆ, ಉಪಾಧ್ಯಾಯರೇ ಅದನ್ನು ಕೊಡುವಂತೆ ಮಾಡುವುದಿದೆ.

ಸರಕಾರವಿರಲು ಇಂತಹ ಅನ್ಯಾಯಗಳೆಲ್ಲಾ ಹೇಗೆ ನಡೆಯುತ್ತವೆ ಎಂದು ನೀನು ಪ್ರಶ್ನಿಸಬಹುದು. ತಮ್ಮ ಶಾಲೆಗಳಿಗೆ ಉಪಾಧ್ಯಾಯರನ್ನು ಸೇರಿಸುವಾಗಲೇ ಮೇನೇಜುಮೆಂಟಿನವರು ತಮ್ಮ ಶರತಗಳನ್ನು ಹಾಕಿ ಬಿಟ್ಟು, ಅದಕ್ಕೆ ಮನಸಾ ಒಪ್ಪಿಕೊಂಡವರನ್ನು ಮಾತ್ರವೇ ನೇಮಿಸಿಬಿಡುತ್ತಾರೆ. ಅಲ್ಲದೆ ಬಡವಾಗಿರುವ ಉಪಾಧ್ಯಾಯನು ಸದಾ ಮೇನೇಜುಮೆಂಟಿನ ಸಹಾಯವನ್ನ ಪೇಕ್ಷಿಸಬೇಕಾಗುವ ಕಾರಣ ಆತನು ಯಾವ ಅನ್ಯಾಯವನ್ನೂ ಸಹಿಸಿಕೊಂಡಿರ ಬೇಕಾಗುತ್ತದೆ.

ಭಾರತದ ಕೆಲವು ಪ್ರಾಂತ್ಯಗಳಲ್ಲಿ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ, ತರಗತಿಗೊಬ್ಬರಂತೆ ಉಪಾಧ್ಯಾಯರಿಲ್ಲ–ಬದಲಿಗೆ ವಿದ್ಯಾರ್ಥಿಗಳ ಸಂಖ್ಯೆ ಹೊಂದಿಕೊಂಡು ಉಪಾಧ್ಯಾಯರಿರುತ್ತಾರೆ. ಉದಾಹರಣೆಗೆ ಮೈಸೂರು ಪ್ರಾಂತ್ಯದಲ್ಲಿ ಮೊದಲು 30 ಜನ ವಿದ್ಯಾರ್ಥಿಗಳಿಗೊಬ್ಬ ಉಪಾಧ್ಯಾಯರಿದ್ದರೆ, ಈಗ 40 ಜನ ವಿದ್ಯಾರ್ಥಿಗಳಿಗೊಬ್ಬ ಉಪಾಧ್ಯಾಯರಿರುತ್ತಾರೆ. ಇದರ ಪರಿಣಾಮವಾಗಿ 5 ತರಗತಿಗಳಿರುವ ಪ್ರಾಥಮಿಕ ಶಾಲೆಯಲ್ಲಿ ಒಬ್ಬನೇ ಉಪಾಧ್ಯಾಯನಿರುವುದಿದೆ–ಅಥವಾ 7 ತರಗತಿಗಳಿರುವ ಮಾಧ್ಯಮಿಕ ಶಾಲೆಗಳಲ್ಲಿ 3, 4 ಯಾ 5 ಉಪಾಧ್ಯಾಯರಿರುವುದೂ ಇದೆ.

ಯಾವುದೇ ಒಂದು ತಿಂಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ, ಆ ಶಾಲೆಯಲ್ಲಿರುವ ಉಪಾಧ್ಯಾಯರ ದಾಮಾಶಯಕ್ಕಿಂತ ಕಡಿಮೆಯಾದರೆ, ಉಪಾಧ್ಯಾಯರ ವೇತನವನ್ನೇ ವಿದ್ಯಾ ಇಲಾಖೆಯವರು ಕಡಿತಗೊಳಿಸುತ್ತಾರೆ.

ಈ ಒಂದು ನಿಯಮದ ಕಾರಣದಿಂದ ದೇಶದ ಪ್ರಾಮಾಣಿಕತೆಯ ರಕ್ಷಕರಾಗಿರಬೇಕಾದ ಉಪಾದ್ಯಾಯರೇ, ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಸುಳ್ಳು ಹಾಜರಿಯನ್ನು ಹಾಕುವುದಿದೆ. ಶಾಲೆಗೆ ಒಮ್ಮೆಯೂ ಬಾರದ ಬಾಲಕ, ಬಾಲಕಿಯರೂ ಹಾಜರಿಪಟ್ಟಿಯಲ್ಲಿರುವುದಿದೆ. ಕೆಲವೊಮ್ಮೆ, ಪರೀಕ್ಷಾಧಿಕಾರಿಗಳು ಪರೀಕ್ಷೆಗೆ ಬಂದಾಗ, ಆಯಾ ಬಾಲಕ, ಬಾಲಕಿಯರನ್ನು ಹೇಗಾದರೂ ಬರಮಾಡಿ, ಕ್ಲಾಸಿನಲ್ಲಿ ಕುಳ್ಳಿರಿಸಿ ಬಿಡುತ್ತಾರೆ–ಅಥವಾ ಯಾವುದಾದರೂ ಮಕ್ಕಳ ಬದಲಿಗೆ ಯಾವುದಾದರೂ ಮಕ್ಕಳನ್ನು ಕುಳಿತುಕೊಳ್ಳಿಸುವುದೂ ಇದೆ.

ಇನರಲ್ಲಿ ಇನ್ನೂ ಆಶ್ಚರ್ಯದ ಮಾತೆಂದರೆ, ಪರೀಕ್ಷಾಧಿಕಾರಿಗ
ತಿಳುವಳಿಕೆಯಲ್ಲೇ ಹೀಗಾಗುವುದೂ ಇದೆ. ಎಲ್ಲಾ ಪರೀಕ್ಷಾಧಿಕಾರಿಗಳ
ಪ್ರಾಮಾಣಿಕರಾಗಿರುವುದಿಲ್ಲ–ಅಪ್ರಾಮಾಣಿಕರಾಗಿರುವವರು ಲಂಚಕ್ಕೆ ಬಾಂ
ಬಿಟ್ಟು ಇದಕ್ಕೆ ಪ್ರೋತ್ಸಾಹ ನೀಡುತ್ತಾರೆ.

ನಾನೊಮ್ಮೆ ಜಯಸಾಥರೊಂದಿಗೆ ಒಂದು ಪ್ರಾಂತ್ಯದ ಮುಖ್ಯ ಪಟ್ಟಣಕ
ಹೋದಾಗ ಒಬ್ಬ ಬಡ ಉಪಾಧ್ಯಾಯರು ಸಿಕ್ಕಿದರು. ಅವರಿಗೆ ಇಂಗ್ಲಿಷ
ಭಾಷೆ ಮಾತನಾಡುವಷ್ಟು ಬರುವುದಿಲ್ಲವಾದರೂ, ಒಬ್ಬ ತರ್ಜುಮೆಗಾರರ
ಮೂಲಕವಾಗಿ ಅವರನ್ನು ಮಾತನಾಡಿಸುವ ಪ್ರಸಂಗ ಬಂತು. ಅವರು
ಸುಳ್ಳು ಹಾಜರಿ ಹಾಕುವುದಿಲ್ಲವಂತೆ. ಅವರ ಮೇನೇಜರರು ಸುಳ್ಳು ಹಾಜರಿ
ಹಾಕಲೇಬೇಕೆಂದು ಒತ್ತಾಯಿಸಿದರೂ, ಇವರು ದೃಢಮನಸ್ಕರಾಗಿದ್ದಾರೆ.
ಇದರ ಪರಿಣಾಮವಾಗಿ ಆ ಶಾಲೆಯಲ್ಲಿ ಇಬ್ಬರೇ ಉಪಾಧ್ಯಾಯರು ಇರುವಂ
ತಾಗಿದೆ. ಒಂದರಿಂದ ಐದರ ತನಕದ ಎಲ್ಲಾ ತರಗತಿಗಳಿಗೂ ಇಬ್ಬರೇ ಕಲಿಸಿ
ಕೊಡಬೇಕು. ಅದು ಕೇವಲ ಹಳ್ಳಿಗಾಡಿನಲ್ಲಿರುವ ಶಾಲೆಯಾದ್ದರಿಂದ ಸಾಕಷ್ಟು
ಮಕ್ಕಳ ಸಂಖ್ಯೆ ಇಲ್ಲ. ಹಾಜರಿಯಲ್ಲಿರುವ ಮಕ್ಕಳೂ ನಿತ್ಯ ಬರುವುದಿಲ್ಲ.
ಸುಳ್ಳು ಹಾಜರಿ ಹಾಕಿ ಮೂವರು ಉಪಾಧ್ಯಾಯರಾಗುವಂತೆ ಮಾಡಬೇಕೆಂದು
ಮೇನೇಜರರ ಒತ್ತಾಯ.

ಸತ್ಯವನ್ನೇ ಅನುಸರಿಸಿದ್ದರ ಪರಿಣಾಮವಾಗಿ ಶಾಲೆಯ ಹಾಜರಿ ಕಡಿಮೆ
ಯಾಗುವುದು–ಇದರಿಂದ ಆ ಉಪಾಧ್ಯಾಯರ ವೇತನದಲ್ಲೂ ಕಡಿತ. ಇವರು
ಮುಖ್ಯೋಪಾಧ್ಯಾಯರು. ಇವರು ಸಂಬಳದ ಕಡಿತವನ್ನು ಸಹಿಸಿಕೊಂಡರೂ,
ಇವರ ಕೈಕೆಳಗಿನ ಇನ್ನೊಬ್ಬರು ಉಪಾಧ್ಯಾಯರು ಅದಕ್ಕೆ ಸಿದ್ಧರಿಲ್ಲ–ಅದರಿಂದ
ಅವರು ಇವರ ಕೂಡೆ ನಿತ್ಯ ಜಗಳ ಮಾಡುತ್ತಿರುತ್ತಾರೆ.

ಇವರ ಸಂಸಾರ ಬೇರೆ ದೊಡ್ಡದು; ಐದಾರು ಜನ ಮಕ್ಕಳು, ಪತ್ನಿ.
ಅಲ್ಲದೆ ಮುದುಕಿ ತಾಯಿ. ಇಷ್ಟು ಜನರ ಹೊಟ್ಟೆ ಹೊರೆಯಬೇಕು. ಬಹಳ
ಕಷ್ಟ, ಪಾಪ!

ಅವರ ಮೇಲಾಧಿಕಾರಿಗಳೂ ಅವರಿಗೆ ಸುಳ್ಳು ಹಾಜರಿ ಹಾಕುವಂತೆ
ಪ್ರೋತ್ಸಾಹಿಸುತ್ತಿದ್ದಾರಂತೆ. ನಾನು ಪರೀಕ್ಷೆಗಾಗಿ ಕೇಳಿದೆ–ಅವರೇ ಪ್ರೋತ್ಸಾ
ಹಿಸುತ್ತಾರಾದರೆ ನೀವೇಕೆ ಸುಮ್ಮನಿರಬೇಕು, ಎಂದು. ಆಗ ಅವರು ಹೇಳಿದರು

"ಅಯ್ಯೋ ಸ್ವಾಮಿ, ಅವರು ಹೇಳಿಬಿಟ್ಟರೆಂದು ನಾವು ಹಾಕಿದರೆ, ವಿಷಯ ಅಷ್ಟಕ್ಕೇ ಮುಗಿಯಲಿಲ್ಲ. ಅವರಿಗೆ ಬೇರೆ ಭಕ್ಷೀಸು ನೀಡಬೇಕು. ಇಲ್ಲವಾದರೆ ನಮ್ಮ ಸುಳ್ಳು ಹಾಜರಿಯನ್ನು ಅವರು ಪತ್ತೆ ಮಾಡಿ, ನಮ್ಮನ್ನು ಮನೆಗೆ ಕಳುಹಿಸಿಯಾರು. ನನಗೆ ಇದೆಲ್ಲಾ ಆಗುವುದಿಲ್ಲ. ನಾನು ಸತ್ಯ ಪ್ರಕಾರ ಹೋಗುವಾತ"

ಬಡವರಾಗಿದ್ದೂ, ಅವರು ಆ ಕೇಂದ್ರ ಪಟ್ಟಣಕ್ಕೆ ಬಂದುದೇಕೆಂದು ನಾನು ಪ್ರಶ್ನಿಸಿದೆ. ಆಗ ಕಣ್ಣೀರು ಸುರಿಸಿ, ಅವರು ಹೇಳಿದರು. ಒಂದು ದಿನ ಒಬ್ಬ ಬಾಲಕನಿಗೆ ಸೌಖ್ಯವಿಲ್ಲವೆಂದು ಪೂರ್ವಾಹ್ನದ ಕಡೆಯ ಎರಡು ಪಿರೆಡುಗಳಲ್ಲಿ, ಅವರು ಆತನನ್ನು ಮನೆಗೆ ಹೋಗಲು ಬಿಟ್ಟಿದ್ದರು. ಅದೇ ಸಮಯದಲ್ಲೇ ಅವರ ಪರೀಕ್ಷಾಧಿಕಾರಿ ಬಂದೇ ಬಿಟ್ಟರು. ಇವರು ಎಲ್ಲಿ ಸಿಕ್ಕಿ ಬೀಳುತ್ತಾರೆ, ಎಂದು ಹಲ್ಲು ಮಸೆಯುತ್ತಿದ್ದ ಆ ಅಧಿಕಾರಿಗೆ ಈ ದಿನ ಬಹಳ ಸಂತಸವಾಯಿತು. "ನೀವು ಸುಳ್ಳು ಹಾಜರಿ ಹಾಕಿದ್ದೀರಿ" ಎಂಬ ಆರೋಪ ಹೊರಿಸಿದರಂತೆ. ಈ ಬಡ ಮುಖ್ಯೋಪಾಧ್ಯಾಯರು ಎಷ್ಟು ವಿವರಿಸಿದರೂ ಅವರಿಗೆ ಹೃದಯ ಕರಗಲಿಲ್ಲ.

ಇವರ ಸಹಾಯಕ ಉಪಾಧ್ಯಾಯರಿಗೆ ಇವರನ್ನು ಹೇಗಾವರೂ ಓಡಿಸ ಬೇಕಾಗಿತ್ತು. ಆದ್ದರಿಂದ ಅವರನ್ನು ವಿಚಾರಿಸುವಾಗ ಅವರು ಬೇಕೆಂದೇ ತನಗೆ ಸತ್ಯ ಸಂಗತಿ ಗೊತ್ತಿಲ್ಲ ಎಂದು ಕೈ ಮುಗುಚಿ ಬಿಟ್ಟರು. ಮಕ್ಕಳ ಕೂಡೆ ಕೇಳಿ ಎಂಬುದಾಗಿ ಈ ಮುಖ್ಯೋಪಾಧ್ಯಾಯರು ಹೇಳಿದರೂ, ಆ ಪರೀಕ್ಷಾಧಿಕಾರಿ ಕೇಳಲೇ ಇಲ್ಲ. ಇವರ ಮೇಲೆ ಚಾರ್ಜ್ ಮಾಡಿ ಮೇಲಕ್ಕೆ ರಿಕಾರ್ಡನ್ನು ಕಳುಹಿಸಿಕೊಟ್ಟರು. ಅದಕ್ಕೆ ವಿದ್ಯಾ ಇಲಾಖೆಯಿಂದ ಇವರನ್ನು ಕೆಲಸದಿಂದ ಏಕೆ ವಜಾ ಮಾಡಬಾರದು ಎಂಬುದಕ್ಕೆ ವಿವರಣೆ ನೀಡಬೇಕೆಂದು ನೋಟೀಸು ಬಂತಂತೆ. ಇವರೆಲ್ಲಾ ವಿವರಣೆ ನೀಡಿದರಂತೆ. ಆದರೆ ಮೇಲಾ ಧಿಕಾರಿಗಳಿಗೆ ಬೇಕಾದುದು ವಿವರಣೆಯಲ್ಲ–ವಿತರಣೆ. ಒಬ್ಬಿಬ್ಬರು ಪೇದೆಗಳು ಈ ಉಪಾಧ್ಯಾಯರಿಗೆ ಬುದ್ಧಿವಾದ ಹೇಳಿದರಂತೆ– "ದಕ್ಷಿಣೆ ಕೊಟ್ಟುಬಿಡಿ– ಎಲ್ಲಾ ಸರಿಹೋಗುತ್ತದೆ; ಐದು, ಹತ್ತು ರೂಪಾಯಿಯೂ ಸಾಕು!" ಎಂಬುದಾಗಿ. ಆದರೆ ಉಪಾಧ್ಯಾಯರು ಲಂಚ ಕೊಡುವುದಿಲ್ಲ ಎಂಬ ಹಠವಾದಿಗಳು-ಪರಿಣಾಮ ವಾಗಿ ಕೆಲಸ ಹೋಯಿತು. ಅವರು ಆ ಕುರಿತಾಗಿ ಮೇಲಧಿಕಾರಿಗಳನ್ನು ಕಂಡು, ನ್ಯಾಯ ಸಿಗುವುದೇ ಎಂದು ನೋಡುವುದಕ್ಕಾಗಿ ಆ ಪಟ್ಟಣಕ್ಕೆ ಬಂದುದಂತೆ.

ಇದು ಯಾವ ಪ್ರಾಂತ್ಯದಲ್ಲಿ ಹೀಗಾಯಿತು ಎಂಬುದಾಗಿ ನೀನು ಕ
ಬೇಡ–ಅದನ್ನೆಲ್ಲಾ ನಾನು ಬರೆದು ತಿಳಿಸುವುದು ತುಂಬಾ ತಪ್ಪು.

ಅಂತೂ ಈಗ ಆ ಬಡ ಉಪಾಧ್ಯಾಯರು ನಿರ್ಗತಿಕರಾಗಿದ್ದಾರೆ. ನಾನ
ಅವರ ಪರವಾಗಿ ಸ್ವಲ್ಪ ಯತ್ನಿಸಿದೆ. ಆದರೆ ಅಧಿಕಾರಿಗಳಿಂದ ಬಂದ ಉತ್ತ
ಇಷ್ಟೆ "ನಿಮಗೆ ವಿದೇಶಿಯರಿಗೆ ಈ ಅಪ್ರಾಮಾಣಿಕ ಉಪಾಧ್ಯಾಯರ ಗೋಜೇಕ
ಅದನ್ನೆಲ್ಲಾ ಸರಕಾರವೇ ನೋಡಿಕೊಳ್ಳುವುದು!"

ನನಗಿದೊಂದು ಅದ್ಭುತ ಅನುಭವ–ಅಲ್ಲ ಒಂದು ರೀತಿಯಿಂದ ನೋ
ದರೆ ಅದ್ಭುತವೇನು? ಇಂತಹ ಕತೆ ನೂರಾರು ನಾನು ಕೇಳಿಲ್ಲವೇ? ಮನ
ಪೂರ್ವಕವಾಗಿ ಪ್ರಾಮಾಣಿಕನಾಗಿರುವಾತನಿಗೆ ಮೋಸಗಾರಿಕೆಯ ಹೆಸರ
ಪ್ರಾಮಾಣಿಕತೆಯ ಬಗ್ಗೆ ಶಿಕ್ಷೆ. ಮೋಸಗಾರರಿಗೆ ರಕ್ಷೆ!

ಈ ಉಪಾಧ್ಯಾಯರನ್ನು ಓಡಿಸುವುದಕ್ಕಂತೂ, ಅವರ ಮೇನೇಜರರೂ
ಅವರ ಸಹಾಯಕ ಅಧ್ಯಾಪಕರೂ ಕೂಡಾ ನೆರವಾಗಿದ್ದರಂತೆ.

ನನಗೆ ಅವರ ಮೇಲೆ ಅಸಹನೀಯವಾದ ಕನಿಕರ ಬಂದು ಬಿಟ್ಟಿತು–
ಏನು ಮಾಡಲಿ ಎಂದು ಯೋಚಿಸಿ, ಯೋಚಿಸಿ ಅವರಿಗೆ ಆ ಮುಖ್ಯ ಪಟ್ಟಣ
ದಲ್ಲೇ ಒಂದು ಕೆಲಸ ಕೊಡಿಸಬೇಕೆಂದು ನಿಶ್ಚಯಿಸಿದೆ. ಪುಣ್ಯವಶಾತ್ ಜಯ
ನಾಥರ ಆಪ್ತ ಗೆಳೆಯರೊಬ್ಬರು ಅಲ್ಲಿ ಪ್ರಸಿದ್ಧ ವಕೀಲರಾಗಿದ್ದರು. ಅವ
ಕೈಕೆಳಗೆ ಗುಮಾಸ್ತಿಕೆಯ ಕೆಲಸ ಅವರಿಗೆ ದೊರೆತಿತು. ಆ ಉಪಾಧ್ಯಾಯ
ಸಂತೋಷಕ್ಕೆ ಪಾರವೇ ಇರಲಿಲ್ಲ!

ಅಂತೂ ಹೀಗೆ ಸರಕಾರ ಮತ್ತು ಸಮಾಜವು ಭಾರೀ ಸಾಹಸ ಮಾಡಿ
ಒಬ್ಬ ಪ್ರಾಮಾಣಿಕನಾದ ಬಡ ಉಪಾಧ್ಯಾಯನನ್ನು ಕೆಲಸದಿಂದ ವಜಾಪಡಿಸಿ
ಸಾರ್ಥಕತೆಯನ್ನನುಭವಿಸಿದುವು.

ಸಿಲ್ವರ್, ಸರಕಾರದವರು ವಿದ್ಯಾರ್ಥಿ ಸಂಖ್ಯೆಯ ಆಧಾರದಲ್ಲಿ ಉಪಾ
ಧ್ಯಾಯರನ್ನು ನೇಮಿಸುವ ಈ ನಿಯಮವನ್ನಿಟ್ಟುದರಿಂದ, ವಿದ್ಯಾಭ್ಯಾಸಕ್ಕೆ
ಎಷ್ಟು ದೊಡ್ಡ ಘಾಸಿಯಿದೆ ನೀನೇ ಯೋಚಿಸು. ಪ್ರಾಥಮಿಕ ಶಾಲೆಗಳೆಂಬವು
ಇಡೀ ವಿದ್ಯಾಭ್ಯಾಸದ ಬುನಾದಿ—ಹಾಗಿರಲು ಒಂದರಿಂದ ಹೆಚ್ಚು ತರಗತಿ
ಗಳನ್ನು ಒಬ್ಬನೇ ಉಪಾಧ್ಯಾಯನು ನೋಡಿಕೊಳ್ಳುವುದೆಂದರೆ, ಅದರಿಂದ
ವಿದ್ಯಾಭ್ಯಾಸದ ಮಟ್ಟವು ಕೆಳಗಿಳಿಯುವುದರಲ್ಲಿ ಸಂದೇಹವಿಲ್ಲ. ಮಾತ್ರವಲ್ಲದೆ
ಅವರಿಂದ ಅಧ್ಯಾಪಕ ವರ್ಗದವರಲ್ಲಿ ಅಪ್ರಾಮಾಣಿಕ ವರ್ತನೆಯನ್ನು ಪ್ರೇರಿಸ

ದಂತೆಯೂ ಆಗುವುದು! ಅಧ್ಯಾಪಕರೇ ಹೀಗೆ ಮಾಡಬೇಕಾಗಿ ಬಂದರೆ ಇತರರ ಪಾಡೇನು? ವಿದ್ಯಾರ್ಥಿಗಳ ಪಾಡೇನು?

ಸಿಲ್ವರ್, ನಮ್ಮ ದೇಶ ಹಾಗೂ ಇತರ ಪಾಶ್ಚಾತ್ಯ ರಾಷ್ಟ್ರಗಳ ಸ್ಥಿತಿಗತಿಯೊಂದಿಗೆ ಹೋಲಿಸಿ ನೋಡಿದಾಗ, ಭಾರತದ ಉಪಾಧ್ಯಾಯರುಗಳಿಗೆ ಆರ್ಥಿಕ ಅಥವಾ ಇತರ ರೀತಿಯ ಭದ್ರತೆಗಳಿಲ್ಲ ಎಂದು ನನಗೆ ತೋರುತ್ತಿದೆ. ನಾನು ಹಿಂದೆಯೇ ತಿಳಿಸಿದಂತೆ ವಿವಿಧ ಕಾರಣಗಳಿಂದ ಭಾರತದಲ್ಲಿ ಅವರಿಗೆ ಸಾಮಾಜಿಕ ಸ್ಥಾನಮಾನಗಳೂ ಇಲ್ಲ.

ಪರಿಣಾಮವು ಬಹಳ ಭೀಕರವಾಗಿದೆ. ಏನೆಂದರೆ ಯೋಗ್ಯ ವ್ಯಕ್ತಿಗಳು ಸಾಕಷ್ಟು ಸಂಖ್ಯೆಯಲ್ಲಿ ಈ ಉದ್ಯೋಗಕ್ಕೆ ಆಕರ್ಷಿತರಾಗಿ ಬರುತ್ತಿಲ್ಲ. ಅಧ್ಯಾಪಕರಾಗುವ ಮನಸ್ಥಿತಿಯುಳ್ಳವರು, ಸಮರ್ಥರು, ಮೇಧಾವಿಗಳು ಹಾಗೂ ಆಡಳಿತದಲ್ಲಿ ದಕ್ಷರಾಗಿರುವವರು ಈ ಉದ್ಯೋಗಕ್ಕೆ ಬಹಳವಾಗಿ ಕಾಲಿಡುತ್ತಿಲ್ಲ. ಅಂದರೆ ಯಾವುದೇ ವಿಚಾರದಲ್ಲಿ ಪ್ರಥಮ ದರ್ಜೆಯ ಜನರು ಈ ಕಡೆಗೆ ಇಣಿಕಿ ನೋಡುವುದೂ ಇಲ್ಲ—ದ್ವಿತೀಯ ಅಥವಾ ತೃತೀಯ ಶ್ರೇಣಿಯವರು ಮಾತ್ರವೇ ಬರುತ್ತಾರೆ.

ಇಲ್ಲಿಯ ವಿದ್ಯಾಕ್ಷೇತ್ರದಲ್ಲಿ ಇನ್ನೊಂದು ದುಃಖದಾಯಕ ಪ್ರಸಂಗವಿದೆ. ತಮ್ಮ ಆರ್ಥಿಕ ಸ್ಥಿತಿಗತಿಯು ಉತ್ತಮವಾಗಿಲ್ಲದ ಕಾರಣದಿಂದ ಹಲವು ಅಧ್ಯಾಪಕರು ಕೆಲವು ಉಪವೃತ್ತಿಗಳನ್ನು ಅನುಸರಿಸಿಕೊಂಡಿದ್ದಾರೆ. ಕೃಷಿ ಕೆಲಸಕ್ಕೆ ಇಳಿಯುವವರು ಹಲವು ಮಂದಿಯಿದ್ದಾರೆ—ಅಲ್ಲದೆ ಒಂದಲ್ಲ ಒಂದು ರೀತಿಯ ವ್ಯಾಪಾರ ಪ್ರಾರಂಭಿಸುತ್ತಾರೆ. ಕೆಲವರು ಇನ್ಶ್ಯೂರೆನ್ಸ್‌ನ ಕೆಲಸ ಮಾಡುವುದೂ ಇದೆ. ಅವರೇ ಸ್ವತಃ ಈ ವೃತ್ತಿಯನ್ನು ಕೈಗೊಳ್ಳಬಾರದೆಂಬುದಕ್ಕಾಗಿ ತಮ್ಮ ಪತ್ನಿಯ ಹೆಸರಲ್ಲಿ ಏಜೆನ್ಸಿಯನ್ನಿಟ್ಟುಕೊಂಡು ಇನ್ಶ್ಯೂರೆನ್ಸ್ ಪ್ರಚಾರ ಕೈಗೊಂಡು ಆ ರೀತಿಯಲ್ಲಿ ಜೀವನ ಸಾಗಿಸುತ್ತಾರೆ. ವ್ಯಾಪಾರಗಳಲ್ಲಿ ಕಟ್ಟಿಗೆ, ಧಾನ್ಯಗಳು ಬೈಹುಲ್ಲು, ಕಟ್ಲೇರಿ ಸಾಮಾನುಗಳು, ಜವ್ಳಾನ ಮೊದಲಾದ ಹಲವು ವಸ್ತುಗಳ ವ್ಯಾಪಾರ ಪ್ರಾರಂಭಿಸುವುದಿದೆ.

ಕೆಲವರು ದೂರದ ಊರಿನಲ್ಲಿ ಸಾಲಮಾಡಿಯಾದರೂ ಆಸ್ತಿಯನ್ನು ಕೊಂಡುಕೊಂಡು ಅದರ ಸಾಗುವಳಿಯಲ್ಲೇ ಪೂರ್ಣ ಲಕ್ಷ್ಯವಿಟ್ಟುಕೊಂಡವರಿರುತ್ತಾರೆ. ಇದರಿಂದ ಅಂಥವರಿಗೆ ಪಾಠಗಳ ಕಡೆಗಾಗಲೀ ಮಕ್ಕಳ ಅಭಿವೃದ್ಧಿಯ ಕಡೆಗಾಗಲೀ, ಸಾಕಷ್ಟು ಆಸಕ್ತಿತೋರಲು ಸಾಧ್ಯವಾಗುವುದಿಲ್ಲ.

ಈ ಉಪ ವೃತ್ತಿಗಳ ಕಾರಣದಿಂದ ಉಪಾಧ್ಯಾಯರು, ಊರಲ್ಲಿರುವ ಹ
ವು ದಲ್ಲಾಳಿಗಳು, ಅಪ್ರಾಮಾಣಿಕ ವ್ಯಕ್ತಿಗಳ ಕೂಡೆ ವ್ಯವಹಾರಕ್ಕೆ ಕೈಹಾಕು
ದಿದೆ. ತಮ್ಮ ಮಾನಸಿಕ, ನೈತಿಕ ನೆಲೆಯನ್ನೂ ಕೆಡಿಸಿಕೊಳ್ಳುವವರಿದ್ದಾ
ಇತರರನ್ನು ಮೆಚ್ಚಿಸಿ ದುಡ್ಡು ಮಾಡುವುದಕ್ಕೆಂದು ಹಲವು ದುರಭ್ಯಾಸಗಳಿಗೆ ಕ
ಯಿಕ್ಕುವುದೂ ಇದೆ. ಎಲ್ಲದಕ್ಕಿಂತಲೂ ಹೆಚ್ಚಾಗಿ, ಸಮಯಕ್ಕೆ ಮುಂದಾ
ಬರುವ ಪ್ರಶ್ನೆಯಿರಲಿ–ಸಮಯಕ್ಕೆ ಸರಿಯಾಗಿಯೂ ಶಾಲೆಗೆ ಬರಲು ಉಪ
ಧ್ಯಾಯರಿಗೆ ಹಲವು ಸಲ ಕಷ್ಟವಾಗುವುದಿದೆ. ಶಾಲೆಯಲ್ಲಿಯೇ ಬಹ
ಸಮಯ ಇದ್ದು ತಯಾರಿ ಮಾಡುವುದು, ವಿದ್ಯಾರ್ಥಿಗಳ ವಿವಿಧ ಬರಹ
ಗಳನ್ನು ತಿದ್ದುವುದು ಇತ್ಯಾದಿ ಕೆಲಸ ಮಾಡಲು ಅವರು ಸಮರ್ಥರಾಗುವುದೂ
ಇಲ್ಲ–ಅದನ್ನು ಇಷ್ಟ ಪಡುವುದೂ ಇಲ್ಲ.

ಕೆಲವು ವಿದ್ಯಾರ್ಥಿಗಳ ಕೂಡೆ ಮಾತನಾಡಿದಾಗ, ತರಗತಿಗೆ 10-15 ಮಿನಿಟುಗಳಷ್ಟು ತಡವಾಗಿ ಬಂದು, 10–15 ಮಿನಿಟುಗಳಷ್ಟು ಬೇಗನೆ ಹೋಗುವ ಉಪಾಧ್ಯಾಯರೂ ಇದ್ದಾರೆ ಎಂಬುದಾಗಿ ತಿಳಿದು ಬರುತ್ತದೆ. ಇದು ಎಷ್ಟರ ಮಟ್ಟಿಗೆ ಸತ್ಯವೆಂದು ನನಗೇ ತಿಳಿಯುವ ಅವಕಾಶ ಸಿಕ್ಕಿಲ್ಲ.

ಕೆಲವು ಪ್ರಾಥಮಿಕ ಶಾಲೆಗಳಲ್ಲಿ ಮೆನೇಜರರು ಮತ್ತು ಮುಖ್ಯೋಪಾಧ್ಯಾಯರ ಒಳ ಸಂಚಿನಿಂದ ಉಪಾಧ್ಯಾಯನು, ಆತನ ದೂರದ ಮನೆಯಲ್ಲಿದ್ದು, ಅವಕಾಶವಿದ್ದಾಗ ಶಾಲೆಗೆ ಆಗಮಿಸಿ, ಬೇಕಾದ ಸಹಿಯೆಲ್ಲಾ ಹಾಕಿಬಿಟ್ಟು ಸುಧಾರಿಸುವ ಕ್ರಮವೂ ಇದೆಯೆಂದು ತಿಳಿದು ಬರುತ್ತಿದೆ. ಶಾಲಾ ಪರೀಕ್ಷೆ ಸಮೀಪಿಸಿದಾಗ ಮುಖ್ಯೋಪಾದ್ಯಾಯರು ತಿಳಿಸಿಬಿಡುತ್ತಾರೆ–ಆಗ ಆ ಉಪಾದ್ಯಾಯರು ಬಂದು ಬಿಟ್ಟು ಕೆಲವು ದಿನ ಇದ್ದೂ ಬಿಡುತ್ತಾರೆ. ಶಾಲಾ ಪರೀಕ್ಷೆ ಕಳೆದು, ಪರೀಕ್ಷಾಧಿಕಾರಿ ಮರಳಿದೊಡನೆ ಇವರೂ ಮನೆಗೆ ಮರಳುತ್ತಾರೆ. ಇದರ ಸತ್ಯಾಸತ್ಯತೆ ನನಗೆ ತಿಳಿದಿಲ್ಲ. ಅಂತೂ ಇಲ್ಲಿಯ ಜನರನ್ನು ವಿಚಾರಿಸಿದಾಗ "ಓಹೋ ಅಂಥ ವಿಷಯಗಳೆಲ್ಲಾ ಸರ್ವ ಸಾಮಾನ್ಯ" ಎಂಬುದಾಗಿ ಅವರು ಹೇಳುತ್ತಾರೆ.

ನಮ್ಮ ದೇಶದಲ್ಲಿ ಹಲವು ರೀತಿಯ ಭೋಗ ವಿಲಾಸಗಳೂ, ಲೈಂಗಿಕ ಭ್ರಷ್ಟಾಚಾರಗಳೂ ಇರುವವಾದರೂ, ಇಂತಹ ಪರಿಸ್ಥಿತಿಗಳು ಇಲ್ಲವೆಂಬುದು ಖರೆ. ಹಾಗಿರುತ್ತಾ ಈ ಪ್ರಸಂಗಗಳು ತೀರಾ ದುಃಖದಾಯಕವಾಗಿ ನನಗೆ ಕಾಣುತ್ತಿದೆ.

ಇಲ್ಲಿಯ ಹಲವು ಶತಮಾನಗಳ ದಾಸ್ಯ ಶೃಂಖಲತೆಯೇ ಇಂತಹ ಎಲ್ಲ ದುಷ್ಟ ಶಕ್ತಿಗಳು ಮೇಲೇಳಲು ಕಾರಣವಾಗಿದೆ! ಆದ್ದರಿಂದ ಆ ಬಗ್ಗೆ ಕ್ಷಿಪ್ರ ವಾಗಿ ಯಾರೇನೂ ಮಾಡುವಂತಿಲ್ಲ. ಎಲ್ಲರೂ ಸಹಿಸಬೇಕು.

ಆದ್ದರಿಂದಲೇ ನಾನಿದನ್ನೆಲ್ಲಾ ಬರೆಯುತ್ತಾಹೋದಂತೆ ನಾನು ಭಾರತದ ಜನತೆಯ ಮೇಲಿನ ತಿರಸ್ಕಾರದಿಂದ ತುಂಬಿ ತುಳುಕುತ್ತಿದ್ದೇನೆ ಎಂದು ಭಾವಿ ಸಬೇಡ. ನಾನು ನಿಷ್ಪಕ್ಷಪಾತ ಬುದ್ಧಿಯಿಂದ ವಿಮರ್ಶೆ ಮಾಡಿಬಿಟ್ಟರೆ ನಂತರ ಅವರ ಮೇಲೆ ಬಹಳ ವಿಶಾಲವಾದ ಪ್ರೇಮವನ್ನಿಡಲು ಸಹಾಯಕವೇ ಸರಿ! ಯಾವುದೇ ಒಂದು ಜನಾಂಗದ ಕುರಿತಾದ ಪೂರ್ತಿ ಸತ್ಯವನ್ನು ನಾವು ತಿಳಿದು ಕೊಳ್ಳದೆ ಆ ಜನಾಂಗವನ್ನು ಪೂರ್ತಿಯಾಗಿ ಪ್ರೀತಿಸಲಾರೆವು ಎಂಬುದೇ ನನ್ನ ಸಿದ್ಧಾಂತ- ನೀನದನ್ನು ನಂಬುವೆಯೋ ಇಲ್ಲವೋ ನನಗೆ ತಿಳಿದಿಲ್ಲ.

ನನ್ನ ವಿಮರ್ಶೆ ಇನ್ನೂ ಮುಗಿದಿಲ್ಲ-ಆದ್ದರಿಂದ ಮುಂದರಿಸಿ ಬಿಡಲೇ? ಶಿಕ್ಷಣ ವೃತ್ತಿಯಲ್ಲಿ ಅಭಿರುಚಿಯಿಲ್ಲದ ಉಪಾಧ್ಯಾಯರಿಂದ ಬಹಳ ದೊಡ್ಡ ಒಂದು ಅನ್ಯಾಯ ನಡೆಯುತ್ತಿದೆ. ತಾವು ಕಲಿಸತಕ್ಕ ಪಾಠವನ್ನು ವಿದ್ಯಾರ್ಥಿ ವಿದ್ಯಾ ರ್ಥಿನಿಯರ ಬುದ್ಧಿಗೆ ಹೀರಲ್ಪಡುವಂತೆ ತಾವು ಹೇಗೆ ಮುಂದರಿಯಬೇಕು ಎಂಬು ದರ ಕುರಿತಾಗಿ ಹಲವು ಮಂದಿ ಯೋಚಿಸುವಂತೆ ನನಗೆ ಕಾಣುವುದಿಲ್ಲ—ಮಾತ್ರ ವಲ್ಲ, ತಾವು ಕಲಿಸುವ ವಿಷಯದ ಪೂರ್ಣತೆಯ ಕುರಿತಾಗಿಯೂ ಅವರು ಜಾಗ್ರತೆ ವಹಿಸುವಂತೆ ನನಗೆ ಕಾಣುತ್ತಿಲ್ಲ.

ಉಪಾಧ್ಯಾಯ ವೃತ್ತಿಯನ್ನು ಕೈಗೊಂಡ ಪ್ರಾರಂಭದಲ್ಲಿ ಕೆಲವರು ಪಾಠ ಕ್ಕೆ ತಯಾರಿ ಎಂಬುದನ್ನೇನೋ ಮಾಡುವುದಿದೆ. ಆದರೆ ಒಂದೆರಡು ವರ್ಷ ಕಳೆದು ಬಿಟ್ಟರೆ ನಂತರ ಯಾವ ತಯಾರಿಯಾದರೂ ಬೇಕೆಂದು ಇಲ್ಲಿ ಹಲವು ಮಂದಿ ಭಾವಿಸುವಂತೆ ಕಾಣುವುದಿಲ್ಲ. ಅವರು ಮನೆಗೆ ಬರಿಗೈಯಲ್ಲಿ ತೆರಳು ತ್ತಾರೆ—ಬರಿಗೈಯಿಂದಲೇ ಬರುತ್ತಾರೆ. ಹಲವರು ಸಮಯಕ್ಕೆ ತಪ್ಪುತ್ತಾರೆ —ಕೆಲವರು ಸಮಯಕ್ಕೆ ಸರಿಯಾಗಿ ಬಂದು ಹೋಗುತ್ತಾರೆ. ಆದರೆ ನಾನು ನೋಡಿದ ವಿದ್ಯಾಸಂಸ್ಥೆಗಳ ಪೈಕಿ ಎಲ್ಲದರಲ್ಲಿಯೂ ಹೆಚ್ಚಿನ ಉಪಾಧ್ಯಾಯ ರೂ ಶಾಲಾ ಸಮಯದ ನಂತರ ಶಾಲೆಯಲ್ಲಿ ಮಾಡತಕ್ಕ ಕೆಲಸವಿದೆಯೆಂದು ಭಾವಿಸುವುದಿಲ್ಲ.

ಬಹುಸಂಖ್ಯಾಕರಿಗೆ ಅನ್ವೇಷಣಾ ದೃಷ್ಟಿಯಿಲ್ಲ—ಕಲಿಯುವ ಮನಸ್ಸಿಲ್ಲ. ಇನ್ನೂ ಕಲಿಯುತಕ್ಕದ್ದೇನಿದೆ ಎಂಬುದೇ ಅವರ ವಾದ.

ನೀನೇ ಹೇಳು, ಸಿಲ್ವರ್. ಉಪಾದ್ಯಾಯನು ಗ್ರಂಥಗಳನ್ನು ಪ್ರೇಮಿಸಿ,

ಅವುಗಳನ್ನು ಓದಿ ಜ್ಞಾನಾರ್ಜನೆ ಮಾಡಿಕೊಳ್ಳುವುದರಲ್ಲಿ ಅಭಿರುಚಿ ತೋರದಿ ಷ್ಟರೆ, ಇನ್ಯಾರು ತೋರಬೇಕು? ಆದರೆ ನಾನು ಹಲವು ಮಂದಿ ಉಪಾಧ್ಯಾಯ ರನ್ನು ಸಂದರ್ಶಿಸಿರುವೆನು. ಓದುಗಾರಿಕೆಯ ವಿಷಯ ಪ್ರಶ್ನಿಸಿದಾಗ "ಓದು ವುದೇನನ್ನು? ಅದೆಲ್ಲಾ ವಿದ್ಯಾಭ್ಯಾಸದ ಸಮಯದಲ್ಲೇ ಮುಗಿಸಿ ಬಿಟ್ಟಿದ್ದೇನೆ" ಅನ್ನುತ್ತಾರೆ. ಕೆಲವರು ವೃತ್ತ ಪತ್ರಿಕೆಗಳನ್ನಾದರೂ ಓದುತ್ತಾರೆ. ಆದರೆ ವಿಚಾರಾತ್ಮಕ ಗ್ರಂಥಗಳನ್ನು ಓದುವುದಿಲ್ಲ.

ಇದರಿಂದ ಅವರು ತರಗತಿಯಲ್ಲಿ ಮಕ್ಕಳಿಗೆ ಏನನ್ನು ಕಲಿಸುತ್ತಾರೆ? ತಾವು ಹಳೆಯ ಕಾಲದಲ್ಲಿ ಕಲಿತುದೇನು? ಅದರ ಪೈಕಿ ಮರೆಯದೆ ಉಳಿದುದೇ ನು? ಅದನ್ನು ಹೊರಹಾಕುತ್ತಾರೆ. ಮಕ್ಕಳು ಅವುಗಳನ್ನು ತೆಗೆದುಕೊಂಡರೋ ಇಲ್ಲವೋ ನೋಡುವವನಾರು?

ವಿದ್ಯಾರ್ಥಿಗಳು ಕ್ಲಾಸಿನಲ್ಲಿ ತೂಕಡಿಸಿದರೆ ಮಾತ್ರವಲ್ಲ, ನಿದ್ರಿಸಿದರೂ, ಹಲವರು ಏನೇನೂ ವ್ಯಥೆ ಪಡುವುದಿಲ್ಲ. ಅದನ್ನು ತಲೆಗೇ ಹಚ್ಚಿಕೊಳ್ಳುವು ದಿಲ್ಲ—ವಿದ್ಯಾರ್ಥಿಗಳು ಹಲವರು ಮಾತನಾಡುತ್ತಿದ್ದರೂ, ಅವರೇನೂ ಆ ಕಡೆಗೆ, ಲಕ್ಷ್ಯ ಕೊಡುವುದಿಲ್ಲ. ಹೇಳುವುದನ್ನಷ್ಟು ಹೇಳಿಬಿಟ್ಟು ಅವರು ಹೋಗಿಬಿಡುತ್ತಾರೆ.

ಕೆಲವು ತೀಕ್ಷ್ಣಮತಿಗಳಾದ ಮಕ್ಕಳು, ಯಾವುದಾದರೊಂದು ಭಾಗವು ಅರ್ಥವಾಗಲಿಲ್ಲವೆಂದು ಪುನಃ ಪ್ರಶ್ನಿಸುವುದುಂಟು. ಅದಕ್ಕೆ ಹಲವರು ಕೊಡುವ ಉತ್ತರವು ಬಹಳ ಸ್ವಾರಸ್ಯವಾಗಿದೆ. "ತಿಳಿದವರ ಕೂಡೆ ಕೇಳಿ ಕೊಳ್ಳಿ!" ಎಂಬುದಾಗಿ. ಆದ್ದರಿಂದ ವಿದ್ಯಾರ್ಥಿಗಳು ಪುನಃ ಪ್ರಶ್ನಿಸಿ ಫಲವಿಲ್ಲ ವೆಂದು ಸುಮ್ಮನಿರುವುದೇ ಜಾಸ್ತಿ ಎಂಬುದಾಗಿ ನಾನು ತಿಳಿಯುತ್ತೇನೆ.

ಕೆಲವು ಹೈಸ್ಕೂಲುಗಳಲ್ಲಿ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಕೂಡಾ ಹಿಂದುಳಿದ ಮಕ್ಕಳಿಗೆ ಆ ಶಾಲೆಯ ಉಪಾಧ್ಯಾಯರೇ ಟ್ಯೂಶನ್ ಕೊಡುವ ಕ್ರಮವೊಂದಿದೆ. ಆದರಿಂದ ಉಪಾಧ್ಯಾಯರಿಗೆ ಸ್ವಲ್ಪ ಉತ್ಪತ್ತಿಯಾಗುವು ದಲ್ಲದೆ, ಅಂತಹ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಗೆ ಪ್ರಯೋಜನವಾಗುವುದು. ಕೆಲವು ಪ್ರಾಂತೀಯ ಸರಕಾರಗಳು ಆ ಕುರಿತಾಗಿ ಕೆಲವೊಂದು ನಿಯಮಗಳನ್ನು ಹೇರಿರುವುವು. ಅವುಗಳ ಪೈಕಿ ಆಡಳಿತ ಸಂಸ್ಥೆಯ ಒಪ್ಪಿಗೆ ಶಿವಾಯಿ ಟ್ಯೂಶನ್ ಕೊಡಬಾರದು ಎಂಬುದು ಒಂದು.

ಕೆಲವರು ಆಡಳಿತ ಸಂಸ್ಥೆಯ ಒಪ್ಪಿಗೆ ಪಡೆಯುತ್ತಾರೆ-ಕೆಲವರು ಪಡೆ

ಯುವುದೇ ಇಲ್ಲ. ಒಳಗಿನಿಂದೊಳಗೇನೇ ಟ್ಯೂಶನ್ ಕೊಟ್ಟುಬಿಡುತ್ತಾರೆ.

ಪೇಟೆ ಪಟ್ಟಣಗಳಲ್ಲಿ ಬಹಳ ಮಂದಿ ಉಪಾಧ್ಯಾಯರು ಈ ಟ್ಯೂಶನ್ ವಿಧಾನಗಳಿಂದಲೇ ಬಹಳ ಹಣ ಗಳಿಸಲು ಸಾಧ್ಯವಾಗುತ್ತದೆ. ಒಬ್ಬೊಬ್ಬ ವಿದ್ಯಾರ್ಥಿಗೆ ಒಂದೊಂದು ಪಾಠಗಳಲ್ಲಿ ತಿಂಗಳೊಂದರ 10–15 ರೂಪಾಯಿಗಳನ್ನು ವಿಧಿಸುವವರೂ ಇದ್ದಾರೆ–ದಕ್ಷ ಉಪಾಧ್ಯಾಯರ ಬಳಿ 20ರಿಂದ ತೊಡಗಿ 30 ಜನ ವಿದ್ಯಾರ್ಥಿಗಳು ಟ್ಯೂಶನ್ ಪಡೆದುಕೊಳ್ಳುವುದೂ ಇದೆ.

ಆದರೆ ಈಗೀಗ ಭಾರತದ ಕೆಲವು ಪ್ರಾಂತ್ಯಗಳ ಕೆಲವು ಪ್ರದೇಶಗಳಲ್ಲಿ ಈ ಟ್ಯೂಶನ್‌ನ ನೆಪದಲ್ಲಿ ಭ್ರಷ್ಟಾಚಾರ ಪ್ರಾರಂಭವಾಗಿರುವುದು ಎಂಬ ಗುಜು ಗುಜು ವಾರ್ತೆ ದಟ್ಟವಾಗಿ ಹಬ್ಬಿದೆ. ಇದಕ್ಕೆ ಬೇಕಾದ ಕೆಲವು ಪುರಾವೆಗಳೂ ನನಗೆ ಸಿಕ್ಕಿವೆ.

ಮಕ್ಕಳು ಕ್ಲಾಸಿನಲ್ಲಿ ಅರ್ಥವಾಗದುದನ್ನು ಪುನಃ ವಿವರಿಸುವಂತೆ ಉಪಾಧ್ಯಾಯರ ಕೂಡೆ ಕೇಳಿಕೊಂಡಾಗ, ಕೆಲವರು ಹೀಗೆ ಹೇಳುವುದಿದೆಯಂತೆ "ಕ್ಲಾಸಿನಲ್ಲಿ ಇಷ್ಟೇ ವಿವರಿಸುವುದು–ಇನ್ನು ಹೆಚ್ಚಿಗೆ ಬೇಕೆಂದಾದರೆ, ಟ್ಯೂಶನ್ ತೆಗೆದುಕೊಳ್ಳಿರಿ" ಎಂದು.

ಟ್ಯೂಶನ್‌ನಲ್ಲಿ ಮೂಲ ವಿವರಣೆ ಕೊಡುವವರೂ ಇದ್ದಾರೆ–ಅಥವಾ ಪ್ರಶ್ನೆಗಳಿಗೆ ಉತ್ತರಗಳನ್ನೂ ಬರೆಬರೆಸಿ, ಕೋಚಿಂಗ್ ಮಾಡುವವರೂ ಇದ್ದಾರಂತೆ. ಅಷ್ಟೇ ಅಲ್ಲ, ಇನ್ನೂ ಸ್ವಾರಸ್ಯದ ವಿಷಯವೆಂದರೆ, ಶಾಲೆಯ ಖಾಸಗಿ ಪರೀಕ್ಷೆಗಳಲ್ಲಿ ತಂತಮ್ಮ ಪಾಠಗಳ ಪ್ರಶ್ನೆ ಪತ್ರಿಕೆಗಳನ್ನೇ ವಿದ್ಯಾರ್ಥಿಗಳಿಗೆ ಕೊಟ್ಟು, ಅದಕ್ಕೆ ಉತ್ತರ ಬರೆಯಿಸಿ, ಅದನ್ನು ತಿದ್ದಿಕೊಡುವವರೂ ಇದ್ದಾರಂತೆ.

ಅಂದರೆ, ಪರೀಕ್ಷೆಯ ತೇರ್ಗಡೆಯನ್ನೂ ಮಾರುಕಟ್ಟೆಯಲ್ಲಿ ಇತರ ವಸ್ತುಗಳನ್ನು ಕೊಂಡು ಕೊಂಡಂತೆಯೇ, ಕ್ರಯಕ್ಕೆ ಪಡೆಯಲಾಗುವುದು. ಹೀಗಾದರೆ ವಿದ್ಯಾ ಕ್ಷೇತ್ರಕ್ಕೂ ಭ್ರಷ್ಟಾಚಾರವು ನೇರವಾಗಿ ಪ್ರವೇಶಿಸಿದಂತಾಯಿತು. ಇದರಿಂದಲೂ ದುಃಖದ ಪ್ರಸಂಗವಿನ್ನೇನು ಸಿಲ್ವರ್, ನೀನೇ ಹೇಳು. ಅದೂ ಭಾರತದ ಭವ್ಯವಾದ ಪ್ರಾಚೀನ ವಿದ್ಯಾಗುರುಗಳ ಪವಿತ್ರ ಜೀವನದ ಹಿನ್ನೆಲೆಯಲ್ಲಿ ಹೀಗೆ ನಡೆಯುವುದೆಂದರೆ ಭಾರತಕ್ಕೆ ಮತ್ತು ಭಾರತದ ಸಂಸ್ಕೃತಿಗೆ ದೊಡ್ಡ ಅಪಚಾರವಲ್ಲವೇ ಹೇಳು.

ಹಾಗೆಂದು, ಎಲ್ಲಾ ವಿದ್ಯಾ ಸಂಸ್ಥೆಗಳೂ, ಎಲ್ಲಾ ಉಪಾಧ್ಯಾಯರು ಈ ಮಟ್ಟಕ್ಕಿಳಿದಿದ್ದಾರೆ ಎಂದು ಭಾವಿಸಿದರೆ ಬಹಳ ದೊಡ್ಡ ಅಪರಾಧವಾದೀತು. ಹಾಗೆ ಭಾವಿಸಿಕೊಳ್ಳಬೇಡ. ಬಹಳ ಉದಾತ್ತ ರೀತಿಯ ಉಪಾಧ್ಯಾಯರೂ ಇದ್ದಾರೆ-ಬಹಳ ಆದರ್ಶ ರೀತಿಯಲ್ಲಿ ನಡೆಯುವ ಹೈಸ್ಕೂಲುಗಳೂ, ಮಾಧ್ಯಮಿಕ ಮತ್ತು ಪ್ರಾಥಮಿಕ ಶಾಲೆಗಳೂ ಇವೆ. ಭಾರತದ ಕೆಲವು ಕ್ಷೇತ್ರಗಳಂತೂ ವಿದ್ಯೆಯ ಕುರಿತಾಗಿ, ಇಂದಿಗೂ ಉನ್ನತ ಮಟ್ಟವನ್ನು ಕಾಯ್ದುಕೊಂಡು ಪ್ರಸಿದ್ಧವಾಗಿವೆ.

ಆದರೆ ಬಹುಕಡೆಗಳಲ್ಲಿ ಕೊಳಕು ತುಂಬಿ ಬಿಟ್ಟರೆ ಉಳಿದೆಡೆಗಳಿಗೂ ನಿಧಾನವಾಗಿ ಪ್ರಸಾರವಾಗುವ ಒಂದು ಅಪಾಯವಿದೆ, ಖಂಡಿತ. ಆದಕ್ಕಾಗಿ ಈ ಬೆಳವಣಿಗೆಗಳನ್ನು ತೀರಾ ಖೇದದಿಂದ ನಾವು ವೀಕ್ಷಿಸಬೇಕಾಗುತ್ತದೆ.

ಸಿಲ್ವರ್, ಇಲ್ಲಿಯ ವಿದ್ಯೆಯ ಕ್ಷೇತ್ರದ ಕುರಿತಾಗಿ, ಬರೆದು ಮುಗಿಸಲು ಇಂತಹ ಎಷ್ಟು ಪತ್ರಗಳು ಬೇಕೋ ನನಗರಿತಿಲ್ಲ. ಆದರೆ ಸಂಕ್ಷೇಪವಾಗಿಯೇ ಮುಗಿಸುವುದಿದ್ದರೂ, ಇನ್ನೂ ಒಂದೆರಡು ಪತ್ರಗಳಾದರೂ ಬೇಕಾಗಬಹುದು. ಆದ್ದರಿಂದ ಈ ದಿನವೇ ಮುಗಿಸುವ ಯೋಚನೆಗೆ ಹೋಗುವುದಿಲ್ಲ.

ಅಲ್ಲದೆ ಈ ದಿನ ನಾನು ಮೈಲಾಪುರದಲ್ಲಿ ಒಂದು ಉಪನ್ಯಾಸ ನೀಡಲಿದೆ. ನೋಡು, ಜಯನಾಥರು ಕಾರು ತೆಗೆದುಕೊಂಡು ಬಂದೇ ಬಿಟ್ಟರು. ಆದ್ದರಿಂದ ಈ ದಿನ ಇಲ್ಲಿಗೇ ನಿಲ್ಲಿಸಿ ಬಿಡುತ್ತೇನೆ.

ನಿನ್ನ ನಾಜಿ ಶ್ರೀಮತಿಯ ಸದ್ಯದ ಕತೆ ಏನೆಲ್ಲಾ ಆಗಿದೆ? ಎಂಬುದನ್ನು ವಿವರವಾಗಿ ತಿಳಿಸು. ಮುದ್ದು ಕೆನ್ನಿಗೆ ನನ್ನ ಪ್ರೇಮದ ಶುಭಾಶಯವನ್ನೂ ತಿಳಿಸು. ಈಗ ನಿನ್ನ ಅನುಮತಿಯ ನಿರೀಕ್ಷಣೆಯಿಂದ ವಿರಮಿಸುತ್ತೇನೆ—

ಇತಿ, ನಿನ್ನ ಆಪ್ತಮಿತ್ರ
ಜೋರ್ನ್ ಓರ್ಮನ್-

# ೧೪

ಮದ್ರಾಸು
20-7-1962

ಪ್ರಿಯ ಸಿಲ್ವರ್,

ಇಲ್ಲಿಯ ವಿದ್ಯೆಯ ಕುರಿತಾಗಿ ನಾನು ಬರೆದುದನ್ನು ನೀನು ಮೆಚ್ಚಿಕೊಂಡೆ ಎಂಬುದಾಗಿ ನಿನ್ನ ಪತ್ರದಿಂದ ತಿಳಿಯಿತು. ಬಹಳ ಸಂತೋಷ. ನಾನೀದಿನ ಪತ್ರ ಬರೆಯುತ್ತಿರಲಿಲ್ಲ. ಬರೆಯುವ ಮನಸ್ಸೇ ಇಲ್ಲ; ಏಕೋ ತಿಳಿಯದು. ದೇಹ ವಿಶ್ರಾಂತಿಯನ್ನು ಬಯಸುತ್ತಿದೆ. ಆದರೆ "ಮುಂದಿನ ವಿಷಯಗಳನ್ನು ಕೂಡಲೇ ಬರೆ; ಒಂದು ಪತ್ರದಿಂದ ಇನ್ನೊಂದು ಪತ್ರಕ್ಕೆ ಬಹಳ ತಡಮಾಡುತ್ತೀಯಾ; ಬೇಗಬೇಗನೆ ಬರೆ" ಎಂಬ ನಿನ್ನ ಮಾತುಗಳು ಹೃದಯದಲ್ಲಿ ಮಾರ್ದನಿಕೊಡುತ್ತಿವೆ. ಆದ್ದರಿಂದ ಸ್ವಲ್ಪವಾದರೂ ಈ ದಿನ ಬರೆಯದಿರಲಾರೆ.

ನಾನು ಹಿಂದಿನ ಪತ್ರದಲ್ಲಿ ಇಲ್ಲಿಯ ಇಂದಿನ ವಿದ್ಯಾಭ್ಯಾಸದ ಕುರಿತಾದ ಕಪ್ಪು ಬದಿಗಳನ್ನೇ ಹೇಳಿದ್ದೇನೆ. ಈ ಸಲ ಇಲ್ಲಿರುವ ಉದಾತ್ತ ವಿಚಾರಗಳನ್ನು—ನಾವು ಅನುಕರಿಸತಕ್ಕ ಭಾಗಗಳನ್ನು ತಿಳಿಸುತ್ತೇನೆ.

ಭಾರತದಲ್ಲಿ ಹಿಂದೆ ವಿದ್ಯಾಭ್ಯಾಸದ ಪರಿಸ್ಥಿತಿ ಹೇಗಿತ್ತು ಎಂಬುದನ್ನು ಬರೆದೆನಲ್ಲ? ಅದರಲ್ಲಿರುವ ಕೆಲವು ಉತ್ತಮ ಅಂಶಗಳು ಇಂದಿಗೂ ಹೇಗೆ ಇಳಿದು ಬಂದಿವೆ ಎಂಬುದು ತುಂಬಾ ಸುಖಕರವಾದ ವಿಷಯವಾಗಿದೆ.

ಇಲ್ಲಿ ಒಂದನೆಯ ದರ್ಜೆಯಿಂದ ತೊಡಗಿ ವಿಶ್ವ ವಿದ್ಯಾಲಯಗಳ ತನಕ

ಕಲಿಯುವ ಎಲ್ಲಾ ವಿದ್ಯಾರ್ಥಿಗಳೂ, ಉಪಾಧ್ಯಾಯರು ತರಗತಿಗೆ ಪ್ರವೇ
ವಾದೊಡನೆಯೇ ಎದ್ದು ನಿಂತು ಗೌರವಿಸುತ್ತಾರೆ. ಕೆಲವೊಂದು ವಿದ್ಯಾಸಂ
ಗಳಲ್ಲಿ ಕೈಜೋಡಿಸಿ ನಮಸ್ಕರಿಸುವ ಕ್ರಮವೂ ಇದೆ. ಅಧ್ಯಾಪಕರು ತಮ
ಸ್ಥಾನಗಳಲ್ಲಿ ಕುಳಿತ ನಂತರ ಅಥವಾ ಕುಳಿತುಕೊಳ್ಳಲು ಅವರು ಒಪ್ಪಿಗೆ ಕೊಟ್
ನಂತರವೇ ಅವರು ಕುಳಿತಿರುತ್ತಾರೆ.

ಇದರಿಂದಾಗಿ ಉಪಾಧ್ಯಾಯರ ಮೇಲೆ ವಿದ್ಯಾರ್ಥಿ ವಿದಾರ್ಥಿನಿಯರಿ
ಗೌರವ ಬೆಳೆಯಲು ತುಂಬಾ ಅನುಕೂಲವಾಗುವುದು. ಈ ಗೌರವದಿಂದ
ಸಿಗುವ ಲಾಭವೇನೆಂದರೆ, ಅಧ್ಯಾಪಕನು ವಿದ್ಯಾರ್ಥಿಗಳಲ್ಲಿ ಅತ್ಯುತ್ತಮವಾದ
ಶೀಲ, ಸೌಜನ್ಯಗಳನ್ನೂ ಜೀವನದ ಉದಾತ್ತ ತತ್ವಗಳನ್ನೂ ಕಲಿಸಿಕೊಡುವು
ದಿದ್ದರೆ, ವಿದ್ಯಾರ್ಥಿಗಳು ಅವುಗಳನ್ನು ಅಳವಡಿಸಿಕೊಳ್ಳಲು ಈ ಗೌರವ ಬೇಕೇ
ಬೇಕು. ಆ ಗೌರವವಿಲ್ಲವಾದರೆ ಆ ಅಧ್ಯಾಪಕನು ಬೋಧಿಸುವ ತತ್ವಗಳ
ಮೇಲೂ ಗೌರವ ಬರಲಾರದು.

ನಿಜವಾಗಿ ಯಾವುದೇ ದೇಶದ ನೈತಿಕ ಮತ್ತು ಸಾಮಾಜಿಕ ಸಮಸ್ಯೆಗ
ಳನ್ನು ಪರಿಹರಿಸಲು, ಆ ದೇಶದ ವಿದ್ಯಾರ್ಥಿಗಳ ಮಾನಸಿಕ ಸ್ಥಿತಿಗತಿಗಳನ್ನು
ಉತ್ತಮ ನೈತಿಕ ಸೂತ್ರಗಳ ತಳಹದಿಯಲ್ಲಿ ರೂಪಿಸಲೇ ಬೇಕು.

ನಮ್ಮ ದೇಶದಲ್ಲಿ ಇಂದು ಯುವಜನರ ಅನೈತಿಕತೆ ಮತ್ತು ಅಶಿಸ್ತುಗಳು
ವಿಪರೀತವಾಗಿ ಬೆಳೆದು ಸರಕಾರಕ್ಕೂ ದೇಶದ ನಿಜವಾದ ಮುಖಂಡರಿಗೂ ತಲೆ
ನೋವನ್ನು ಕೊಡುತ್ತಿದೆಯೆಂಬುದು ನಿನಗೇ ತಿಳಿದ ವಿಚಾರ. ಅಲ್ಲಿ ನೈತಿಕ
ಸೂತ್ರಗಳನ್ನೂ, ನೈತಿಕ ಸೂತ್ರಗಳಿಗೆ ಹಿನ್ನೆಲೆಯೂ, ತಳಹದಿಯೂ, ಆಗಿರುವ
ಆಧ್ಯಾತ್ಮಿಕ ಸೂತ್ರಗಳನ್ನೂ (ವಿಶಾಲ ತಳಹದಿಯಲ್ಲೇ ಆದರೂ) ಕಲಿಸಿಕೊಡುವ
ಉಪಾಧ್ಯಾಯರೇ ಬಹಳ ಮಟ್ಟಿಗೆ ಇಲ್ಲ. ಆದರೆ ಅಂತಹ ಉಪಾಧ್ಯಾಯ
ರನ್ನು ನಾವೂ ನೇಮಿಸಿದೆವೆನ್ನು. ಆದರೆ ವಿದ್ಯಾರ್ಥಿಗಳಲ್ಲಿ ಈ ಗೌರವದ ಹಿನ್ನೆ
ಲೆಯಿಲ್ಲವಾದರೆ, ಅವರು ಅಂತಹ ಬೋಧನೆಗಳಿಂದ ಏನು ಪ್ರಯೋಜನವನ್ನು
ಪಡಕೊಳ್ಳುವರು?

ಆದ್ದರಿಂದಲೇ ನಮ್ಮ ವಿದ್ಯಾಸಂಸ್ಥೆಗಳಲ್ಲಿ ನಾವು ಯಾವುದನ್ನು ಶಿಸ್ತು ಎಂದು
ಕರೆಯುತ್ತೇವೆಯೋ ಅದು ಭಾರತದ ಉಚ್ಚ ಶಿಕ್ಷಣ ತಜ್ಞರ ದೃಷ್ಟಿಯಿಂದ ಶಿಸ್ತು
ಎಂದು ಕರೆಯಲ್ಪಡುವುದಿಲ್ಲ. ಏಕೆಂದರೆ ನಮ್ಮ ವಿದ್ಯಾರ್ಥಿ ಬಳಗವು ಸದಾ
ಚಂಚಲತೆಯ ಪರಾಕಾಷ್ಠೆಯಲ್ಲಿರುವುದು—ಅವರ ಮನಸ್ಸು ಬಹಿರ್ಮುಖವಾಗಿ

ಯೇ ಹರಿಯುವುದು. ಇದರಿಂದ ವಿದ್ಯಾರ್ಜನೆಗೆ ಬೇಕಾದ ಆ ಪ್ರಶಾಂತ ವಾತಾ
ವರಣವು ಅಲ್ಲಿ ಉಳಿಯುವುದಿಲ್ಲ. ಆದ್ದರಿಂದ ಇಲ್ಲಿಯ ಅತ್ಯುತ್ತಮ ವಿದ್ಯಾಸಂಸ್ಥೆ
ಗಳಲ್ಲಿ ಪಾಠ ನಡೆಯುವ ಸಮಯ ಕಾಣುವ ರೀತಿಯ ಪ್ರಶಾಂತತೆ, ವ್ಯವಸ್ಥೆಗಳು
ಅಲ್ಲಿ ಕಾಣುವಂತಿಲ್ಲ. ನಮ್ಮಲ್ಲಿ ವಿದ್ಯಾರ್ಥಿ ಬಳಗದ ಚಟುವಟಿಕೆಯೇ ಹದ
ಮೀರಿದೆಯೆಂದರೂ ತಪ್ಪಲ್ಲ.

ಯಾವುದೇ ವಿಷಯದ ಕುರಿತಾಗಿ ಸ್ವತಂತ್ರವಾಗಿಯೂ, ಆಳವಾಗಿಯೂ
ವಿಚಾರಿಸಲು, ಇಂತಹ ಪ್ರಶಾಂತತೆ, ಗಂಭೀರತೆ, ಸ್ಥಿರತೆ, ಕುತೂಹಲ,
ಉಪಾಧ್ಯಾಯರಲ್ಲಿ ಗೌರವ ಮೊದಲಾದ ಸ್ಥಿತಿಗತಿಗಳು ಮಾನಸಿಕ ಹಿನ್ನೆಲೆಯಲ್ಲಿ
ಬೇಕೇ ಬೇಕು. ಈ ಎಲ್ಲಾ ಭಾವಗಳಿಗೂ ಪರಸ್ಪರ ಸಂಬಂಧವಿದೆ. ಆದ್ದರಿಂ
ದಲೇ ನಾನಿದರ ಪ್ರಾಮುಖ್ಯತೆಯನ್ನು ಒತ್ತಿ ಹೇಳುತ್ತಿದ್ದೇನೆ. ವಿದ್ಯಾರ್ಥಿಯ
ಚಿತ್ತಚಾಂಚಲ್ಯವನ್ನು ಹದಕ್ಕೆ ತರಲು, ಆ ಅಧ್ಯಾಪಕನ ಮೇಲಿರಬೇಕಾದ
ಗೌರವವು ನಮ್ಮಲ್ಲಿ ಸಹಾಯಕ್ಕೆ ಬರುವುದೇ ಇಲ್ಲ.

ಇದರ ಕೆಟ್ಟ ಪರಿಣಾಮವು ಬಹಳ ವ್ಯಾಪಕವಾಗಿ ನಮ್ಮ ದೇಶದಲ್ಲಿ
ಹಬ್ಬಿದೆಯೆಂದರೆ ಅದು ಸತ್ಯವಾದ ಮಾತು.

ನೋಡು, ಸಿಲ್ವರ್, ನಮ್ಮಲ್ಲಿ ಎಷ್ಟು ದೊಡ್ಡ ದಾಮಾಶಯದಲ್ಲಿ ಜನರು
ಅಸ್ತಿತ್ವವಾದಿಗಳಾಗಿಲ್ಲ! [Existentialist]. ಅಂದರೆ ಅವರು ಫ್ರ್ಯೋಡ್‌ನ
ಸಿದ್ಧಾಂತವನ್ನನುಸರಿಸುತ್ತ ಮನಸ್ಸಿನ ಚಪಲತೆಯನ್ನು ತಡೆ ಹಿಡಿಯಬಾರದು
ಎನ್ನುತ್ತಾರೆ. ಅದು ಕೇವಲ ಒಬ್ಬ ವ್ಯಕ್ತಿಯ ಕೊರತೆಯಾಗಿದ್ದರೆ ನಾವೇನೇನೂ ಚಿಂ
ತೆಯಿಲ್ಲದೆ ಇರಬಹುದಾಗಿತ್ತು. ಆದರೆ ಅದು ಸಾಮೂಹಿಕವಾದ ಒಂದು ಲಕ್ಷಣ
ವಾದಾಗ ಮತ್ತು ಒಂದು ಸಿದ್ಧಾಂತದ ಆಧಾರದಲ್ಲಿಯೇ ಅದು ಅನುಸರಿಸಲ್ಪಡ
ತೊಡಗಿದಾಗ ನಿಜವಾದ ಅಪಾಯವು ಇಡಿಯ ರಾಷ್ಟ್ರಕ್ಕೇನೇ ಇದೆ ಎಂದು
ನಾನು ಭಾವಿಸುತ್ತೇನೆ. ನಮ್ಮ ಸ್ಥಿತಿ ಈಗ ಹಾಗೆಯೆ ಆಗಿಲ್ಲವೇ?

ಸಮಾಜದ ಬಹುಸಂಖ್ಯಾಕರು ಹಾಗಾಗಲು, ಬಹುಸಂಖ್ಯಾಕ ವಿದ್ಯಾ
ರ್ಥಿಗಳು ಹಾಗಾದ್ದೇ ಕಾರಣ. ವಿದ್ಯಾರ್ಥಿಗಳು ಹಾಗಾಗಲು ಅವರ ಮನ
ಸ್ಸಿನ ಓಟವನ್ನು ತಡೆಹಿಡಿಯುವ ಕ್ರಮವಿಲ್ಲದುದು ಮತ್ತು ಅದಕ್ಕೆ ಬೇಕಾದ
ಶಿಕ್ಷಣವಿಲ್ಲದುದೇ ಕಾರಣ. ಅಂತಹ ಕ್ರಮವಿಲ್ಲದಿರಲು, ಅದಕ್ಕೆ ಅವಶ್ಯವಿರುವ
ವಾತಾವರಣ, ಸಂಸ್ಕಾರಗಳು ನಮ್ಮ ಶಾಲೆಗಳಲ್ಲಿ ಇಲ್ಲದಿರುವುದೇ ಕಾರಣ.

ಗೆಳೆಯ, ಆಗ ನೀನು ಆಕ್ಷೇಪವೆತ್ತಬಹುದು–"ನಾವು ಮನಶ್ಶಾಸ್ತ್ರದ ಬಹಳ ಮುಂದರಿದಿರುವೆವಲ್ಲ!" ಎಂದು. ಹೌದು ಮನಸ್ಸಿನ ಕುರಿತಾ ಮಾಡಿಕೊಂಡ ಕೆಲವು ಸಿದ್ಧಾಂತಗಳಲ್ಲಿ ಬಹಳ ದೂರ ಸಾಗಿರುವೆವು. ಆದ ಮನಶ್ಶಾಸ್ತ್ರದ ಉಪಯೋಗವೇನು? ಮಾನವನ ಮನಸ್ಸನ್ನು ರೂಪಿಸಿ, ಅದ ಸರ್ವಾಂಗ ಸುಂದರವಾಗುವಂತೆ ಬೆಳೆಸಿ, ವ್ಯಕ್ತಿಯ ಮತ್ತು ಸಮಾಜದ ಸಿ ವಾದ ಸುಖಕ್ಕೆ ಕಾರಣವಾಗುವಂತೆ ಮಾಡುವುದಾಗಿದೆ. ಆದರೆ ನಮ್ಮ ಮನ ಶ್ಶಾಸ್ತ್ರ? ಅದೇನು ಮಾಡಿದೆ? ಮನುಷ್ಯನು ಸ್ವೇಚ್ಛಾಚಾರಿಯಾಗುವಂತೆಮಾಡಿದೆ ಜೀವನದಲ್ಲಿ ಒಂದರೆಕ್ಷಣವೂ ತೃಪ್ತಿಯನ್ನನುಭವಿಸದಂತೆ ಮಾಡಿದೆ. ಸಾಮಾ ಜಿಕ, ವೈವಾಹಿಕ, ಕೌಟುಂಬಿಕ ಭದ್ರತೆಯು ಯಾರಿಗೂ ಇಲ್ಲದಂತೆ ಮಾಡಿದೆ ಭೌತಿಕವಾಗಿ ನಾವು ಪ್ರಪಂಚದಲ್ಲಿ ಅತಿ ದೂರ ಮುಂದೆ ಸಾಗಿರಬಹುದು. ಆದರೆ, ಮಿತ್ರ, ನೀನೇ ಈಗಾಗಲೇ ಅನುಭವಿಸಿರುವಂತೆ ಭೌತಿಕಾನುಕೂಲ ತೆಯೇ ಮಾನಸಿಕ ಸುಖವಲ್ಲ. ಸುಖವು ಬೇರೆಯೇ ಆಗಿದೆ.

ನಿನ್ನ ಇತ್ತೀಚೆಗಿನ ಜೀವನದ ಸ್ಥಿತಿಗತಿಗಳನ್ನೇ ನೀನು ಎಣಿಸಿಕೊಂಡರೆ ಈ ಮಾತನ್ನು ನೀನು ಕೂಡಲೇ ಒಪ್ಪಿಕೊಳ್ಳುವೆಯಲ್ಲ!

ಉಪಾಧ್ಯಾಯನಿಗೆ ಗೌರವ ಕೊಡುವುದರ ಅವಶ್ಯಕತೆಯೇನು ಎನ್ನುವು ದನ್ನು ವಿವರಿಸುತ್ತಾ ಬಹಳ ದೂರ ಮುಂದೆ ಸಾಗಿದೆ, ಕ್ಷಮಿಸಿಬಿಡು.

ಅಂತೂ ಇಲ್ಲಿಯ ಸ್ಥಿತಿ ಪೂರ್ತಿ ಹೇಳಿಬಿಡುತ್ತೇನೆ. ಕ್ಲಾಸಿನ ಹೊರಗೆ ಉಪಾಧ್ಯಾಯರನ್ನು ಕಂಡಾಗಲೂ ಇಲ್ಲಿಯ ವಿದ್ಯಾರ್ಥಿಗಳು ಒಂದಲ್ಲ ಒಂದು ರೀತಿಯ ಗೌರವ ತೋರುತ್ತಾರೆ. ಹಲವರು ಭಾರತೀಯ ಪದ್ಧತಿಯಂತೆ ಕೈ ಜೋಡಿಸಿ ವಂದಿಸುತ್ತಾರೆ. ಅಥವಾ ಪೇಟೆಪಟ್ಟಣಗಳಲ್ಲಾದರೆ ತಲೆಯನ್ನಾ ದರೂ ಬಾಗುತ್ತಾರೆ.

ಸ್ತ್ರೀಯರೂ ಸಿಗರೇಟು ಸೇದುವ ನಮ್ಮ ನಾಡಿನಲ್ಲಿ ಮಕ್ಕಳಿಗೂ ಸಿಗ ರೇಟು ಸೇದಲು ಸಹಜವಾಗಿಯೇ ಪ್ರಚೋದನೆ ಜಾಸ್ತಿಯಿದೆ. ಆದ್ದರಿಂದ ಅವರೂ ಸರಾಗವಾಗಿ ಸೇದುತ್ತಾರೆ. ಕಾಲೇಜು ವಿದ್ಯಾರ್ಥಿಗಳಂತೂ, ಅದನ್ನು ಅನ್ನನೀರುಗಳಷ್ಟೇ ಪ್ರಧಾನವಾಗಿ ಭಾವಿಸುತ್ತಾರೆ. ಹಾಗಿರುತ್ತಾ ಉಪಾಧ್ಯಾಯ ರೆದುರಲ್ಲೇ ಅವರು ಧೂಮಪಾನ ಮಾಡುತ್ತಾರೆ—ತಮ್ಮ ಅಧ್ಯಾಪಕರಿಗೂ ನೀಡುತ್ತಾರೆ.

ಭಾರತದಲ್ಲಿ ಪ್ರೌಢಶಾಲೆ [ಹೈಸ್ಕೂಲು]ಗಳ ತನಕದ ಅವಧಿಯಲ್ಲಿ ಧೂಮ ಪಾನ ಮಾಡಲೇ ಬಾರದೆಂಬುದು ಸಾಮಾಜಿಕ ನಿರೀಕ್ಷಣೆಯಾಗಿದೆ. ಅಡಗಿ ಕೆಲವು ಬಾಲಕರು ಸೇದಬಹುದೆನ್ನು. ಆದರೆ ತಮ್ಮ ಅಧ್ಯಾಪಕರೆದುರಲ್ಲಿ ಅವರು ಖಂಡಿತ ಸೇದುವಂತಿಲ್ಲ. ಕಾಲೇಜು ವಿದ್ಯಾರ್ಥಿಗಳಲ್ಲಿ ಬಹಳ ದೊಡ್ಡ ದಾಮಾ ಶಯದಲ್ಲಿ ಸೇದತೊಡಗಿದ್ದಾರೆ. [ಅದಕ್ಕೆ ನಮ್ಮ ನಾಗರಿಕತೆಯೇ ಕಾರಣ ವೆಂದು ನನ್ನ ಅಭಿಪ್ರಾಯ]. ಆದರೆ ಅವರೂ ತಮ್ಮ ಪ್ರಾಧ್ಯಾಪಕರೆದುರಲ್ಲಿ ಹೆಚ್ಚಿನ ಮಟ್ಟಿಗೆ ಸೇದುವುದಿಲ್ಲ. ಒಂದು ಗೌರವ ಪ್ರದರ್ಶನಕ್ಕಾಗಿಯಾದರೂ ಈ ರೀತಿ ಇರುತ್ತಾರೆ.

ನಿನಗೆ ಇನ್ನೊಂದು ಸ್ವಾರಸ್ಯವಾಗಿ ಕಾಣಬಹುದಾದ ವಿಷಯವೆಂದರೆ ನಮ್ಮಲ್ಲಿಯಂತೆ ಇಲ್ಲಿಯ ವಿದ್ಯಾರ್ಥಿನಿಯರು ಸಿಗರೇಟು ಸೇದುವುದೇ ಇಲ್ಲ. ಅವರು ಸೇದುವುದು ಯಾರ ಕಣ್ಣಿಗಾದರೂ ಬಿದ್ದರೆ ಅವರು ಗಂಡು ಬೀರಿ [ಅಂದರೆ ಸ್ತ್ರೀತ್ವವನ್ನು ಬಿಟ್ಟವರು]ಯೆಂದೇ ಅಭಿಧಾನ ಕಟ್ಟಿಕೊಳ್ಳುತ್ತಾರೆ.

ಈ ಸಂದರ್ಭ ನನಗೆ ಒಂದು ಘಟನೆ ನೆನಪಾಗುತ್ತದೆ-ಹೇಳಿಬಿಡುತ್ತೇನೆ. ನಮ್ಮ ಸಂಯುಕ್ತ ಅಮೇರಿಕಾ ದೇಶದ ಒಬ್ಬ ಪ್ರಸಿದ್ಧ ಪ್ರಾಧ್ಯಾಪಕಿ ಇತ್ತೀಚೆಗೆ ಭಾರತಕ್ಕೆ ಬಂದಾಗ ಆಕೆಯ ಒಂದು ಉಪನ್ಯಾಸವನ್ನೇರ್ಪಡಿಸಿದ್ದರು. ಆಕೆ ಮನಶ್ಶಾಸ್ತ್ರದ ಕುರಿತಾಗಿ ಮಾತನಾಡಿದಳು-ಪ್ರಾಯಶಃ ಅರ್ಧ ಗಂಟೆಗಿಂತ ಹೆಚ್ಚು ಉದ್ದವಾಗಿ ಆಕೆಯ ಉಪನ್ಯಾಸ ಸಾಗಿರಲಿಕ್ಕಿಲ್ಲ. ನಾನೂ ಆ ಉಪ ನ್ಯಾಸಕ್ಕೆ ಹೋಗಿದ್ದೆ-[ಇಲ್ಲಿಯ ಗೋಖಲೆ ಹಾಲಿನಲ್ಲೇರ್ಪಡಿಸಿದ್ದರು].

ಆಕೆ ಏನು ಮಾಡಿ ಬಿಟ್ಟಳು ಗೊತ್ತೇ? ಉಪನ್ಯಾಸ ಮುಗಿಯುವುದ ರೊಳಗೇನೇ, ಮಾತನಾಡುತ್ತಿದ್ದಂತೆಯೇ, ವೇದಿಕೆಯ ಮೇಲೆ ನಿಂತಂತೆಯೇ ಏಳೆಂಟು ಸಿಗರೇಟುಗಳನ್ನು ಹಚ್ಚಿ ಸೇದಿಬಿಟ್ಟಳು. ಇದನ್ನು ನೋಡಿ, ಅಲ್ಲಿ ಸೇರಿದ್ದ ಗೌರವಸ್ಥ ಜನತೆ ಹಾಗೂ ವಿದ್ಯಾರ್ಥಿ ಸಮೂಹ ಮುಖ ಮುಚ್ಚಿ ಕೊಂಡು ಗುಸಗುಸ ನಗುತ್ತಿತ್ತು. ನಾನು ವೇದಿಕೆಯಲ್ಲಿ ಕುಳ್ಳಿರಬೇಕಾಗಿ ಬಂದುದರಿಂದ ಎಲ್ಲರ ಪ್ರತಿಕ್ರಿಯೆ ನನಗೆ ಸರಿಯಾಗಿ ತಿಳಿಯುತ್ತಿತ್ತು.

ಆದರೆ ಪಾಪ! ಅಮೇರಿಕಾ ದೇಶದಲ್ಲಿ ಉಪನ್ಯಾಸ ಮಾಡಿ ತಿಳಿದಿದ್ದ ಆಕೆಗೆ ಅರ್ಥವೇ ಆಗಲಿಲ್ಲ. ನಾನು ನಾಚಿಕೊಂಡೆ. ಆಕೆ ಸ್ತ್ರೀಯಾಗಿ ಸಿಗ ರೇಟು ಸೇದಿದ್ದು; ಉಪನ್ಯಾಸ ಮಾಡುವಾಗಲೂ ಸಿಗರೇಟು ಬಿಟ್ಟರಲು

ಸಾಧ್ಯವಾಗದುದು; ಅರ್ಧ ಗಂಟೆಯೊಳಗೆ 7-8 ಸಿಗರೇಟು ಸೇದಿದುದು ಈ ಮೂರು ವಿಷಯಗಳೂ ಸೇರಿ ನಮ್ಮ ಕುರಿತಾಗಿ ಬಹಳ ಕೆಟ್ಟ ಚಿತ್ರವು ಮದ್ರಾಸಿನ ಜನತೆಯಲ್ಲಿ ಉಂಟಾಗುವಂತಾಯಿತು.

ಭಾಷಣ ಮುಗಿದೊಡನೆಯೇ ಕೆಲವು ತುಂಟ ಹುಡುಗರು ನನ್ನನ್ನು ಸುತ್ತುವರಿದು ಕೇಳಿಯೇ ಬಿಟ್ಟರು "ಈಕೆಯ ಮನಶ್ಶಾಸ್ತ್ರದ-ಜ್ಞಾನ ಉಪನ್ಯಾಸ ಮಾಡುವಾಗ ಆದರಲ್ಲೂ ಸ್ತ್ರೀಯರು ಸಿಗರೇಟು ಸೇದಬಾರದು ಎಂದು ಕಲಿಸ ಲಿಲ್ಲವೇ!" ಎಂದು. ನಾನು ನಸುನಕ್ಕು "ದೇಶದಂತೆ ದೇಶವಿಲ್ಲ-ಏನು ಮಾಡಲಿ?" ಎಂದು ಉತ್ತರಿಸಿದೆ. ನಾನು ಬಹಳ ನಾಚಿದ್ದೆ. ಪ್ರಾಯಶಃ ಬಿಳಿ ಯುವತಿ ಯರಂತೆ ನಾನು ನಾಚಿ ಮುಖ ಕೆಂಪು ಮಾಡಿಕೊಂಡಿದ್ದಿರಬಹುದು.

ಸಿಲ್ವರ್, ಕ್ಷಮಿಸು; 8 ಪುಟ ಈಗಾಗಲೇ ಬರೆದೆ. ಪ್ರತಿ ಸಲವೂ 30ರಿಂದ 40 ಪುಟಗಳ ತನಕ ಬರೆದು ನೀನು ಓದಿ ದಣಿಯುವಂತೆ ಮಾಡುವ ಶೂರ ನಾನು. ಆದರೆ ಈ ದಿನ ಇಷ್ಟರಲ್ಲೇ ನಿಲ್ಲಿಸಿಬಿಡುತ್ತೇನೆ. ನೋಡು ಆಕಳಿಕೆ ಬರುತ್ತಿದೆ. ಕೈ ಮುಂದೆ ಹೋಗುವುದಿಲ್ಲ. ನಿನ್ನ ಮಕ್ಕಳಿಗೆ ಈ ಕವರು ತುಂಬಾ ಪ್ರೇಮದೊಂದಿಗೆ ಕೊನೆಗೊಳಿಸುತ್ತೇನೆ.

ಇತಿ, ನಿನ್ನ ಆಪ್ತಮಿತ್ರ.
ಜೋನ್ ಓರ್‌ಮನ್



# ೧೫

ಮದ್ರಾಸು,
2–8–'62

ಪ್ರಿಯ ಸಿಲ್ವರ್,

ಹೌದು, ನೀನು ಮುನಿದಿರಬೇಕು. 20-7–'62ರಲ್ಲು ನಾನು ಬರೆದ ಪತ್ರಕ್ಕೆ ನಿನ್ನ ಉತ್ತರವೇ ಇಲ್ಲ. ಅಷ್ಟು ಚಿಕ್ಕ ಪತ್ರ ಬರೆಯುವುದೇಕೆ ಎಂಬುದೇ ನಿನ್ನ ಆಕ್ಷೇಪವಾಗಿದೆ, ನನಗೆ ಗೊತ್ತು. ನನಗೆ ಶಿಕ್ಷೆ ಕೊಡುವುದಕ್ಕಾಗಿಯೇ ನೀನು ಪತ್ರ ಬರೆಯದೆ ಕುಳಿತಿರಬೇಕು, ಅಲ್ಲವೇ?

ಇರಲಿ, ಗೆಳೆಯಾ. ನಿನ್ನ ಮುನಿಸೂ ಪ್ರೇಮದಿಂದಲೇ ಉದ್ಭವಿಸಿದ್ದು. ಹಾಗಾಗಿ ಅದು ನನಗೆ ಬಹಳ ಹಿತಕರವಾಗಿದೆ. ಆದ್ದರಿಂದ ನಾನು ಪುನಃ ಬರೆಯುತ್ತಾ ಹೋಗುತ್ತೇನೆ.

ಸಿಲ್ವರ್, ಇಲ್ಲಿಯ ವಿದ್ಯಾರ್ಥಿಬಳಗದ ಅದರಲ್ಲೂ ಹೈಸ್ಕೂಲುಗಳಲ್ಲಿ ಕಲಿಯುವ ಬಾಲಕ ಬಾಲಕಿಯರ ಉಡುಗೆ ತೊಡುಗೆಗಳು ಬಹಳ ಸರಳವಾಗಿವೆ. ಹೈಸ್ಕೂಲುಗಳಲ್ಲಿ ಹೆಚ್ಚಿನ ಮಟ್ಟಿಗೆ ಕಾಣುವುದು ಹುಡುಗರಲ್ಲಿ ಒಂದು ಚಡ್ಡಿ ಮತ್ತು ಶರ್ಟು. ಹುಡುಗಿಯರಿಗಾದರೆ ಒಂದು ನೀಳವಾದ ಅಂಗಿ [ಗವನು] ಅಥವಾ ಲಂಗ ಮತ್ತು ಕುಪ್ಪ. ಲಂಗವೆಂದರೆ ಭಾರತದ ಬಾಲಕಿಯರು ಹಾಗೂ ಕಿಶೋರಿಯರು ಕಾಲಿನ ಮಣಿಗಂಟಿನ ತನಕವೂ ಬರುವಂತೆ ಉಡುವ ನೀಳವಾದ ಅಂಗಿ. ಕುಪ್ಪವೆಂದರೆ ಸೊಂಟದ ಮೇಲೆ ಹಾಕಿಕೊಳ್ಳುವ ರವಿಕೆ.

ಹುಡುಗ ಹುಡುಗಿಯರಲ್ಲಿ ಬಹಳ ಮಟ್ಟಿಗೆ ಟೈ ಕಟ್ಟುವುದೇ ಇಲ್ಲ—

ಹ್ಯಾಟ್ ಧರಿಸುವುದೇ ಇಲ್ಲ. ಆದರೆ ಪೇಟೆ ಪಟ್ಟಣಗಳಲ್ಲಿ ಅಪರೂಪವಾಗಿ ಅವುಗಳನ್ನು ಉಪಯೋಗಿಸುವವರೂ ಅಲ್ಪ ಸಂಖ್ಯೆಯಲ್ಲಿ ಇದ್ದಾರೆ. ಅಂಥವರಲ್ಲಿ ಜಾಸ್ತಿಯಾಗಿರುವವರು ಕ್ರೈಸ್ತ ಸಮಾಜದವರು ಹಾಗೂ ಇತರ ಮತಗಳ ಬಹಳ ಶ್ರೀಮಂತ ವರ್ಗದವರು.

ನಮ್ಮವರಂತೆ ಅಥವಾ ಇತರ ಪಾಶ್ಚಾತ್ಯ ದೇಶಗಳ ವಿದ್ಯಾರ್ಥಿ ವಿದ್ಯಾರ್ಥಿನಿಯರಂತೆ, ಕಾಲುಚೀಲ ಮತ್ತು ಬೂಟುಗಳನ್ನು ಧರಿಸುವವರು ಇಲ್ಲಿ ಬಹಳ ಅಪರೂಪವೇ ಸರಿ. ಆದರೆ ಪೇಟೆಗಳಲ್ಲಾದರೆ ಬಹು ಸಂಖ್ಯಾಕರೂ ಹಳ್ಳಿಗಳಲ್ಲಾದರೆ ಅಲ್ಪ ಸಂಖ್ಯಾಕರೂ ಪಾದರಕ್ಷೆ (Sandals)ಗಳನ್ನು ಧರಿಸುವುದಿದೆ; ಉಳಿದವರು ಬರಿಗಾಲಿನಲ್ಲಿ ನಡೆಯುತ್ತಾರೆ.

ಇದನ್ನು ನಿನಗೆ ಊಹಿಸಲೂ ಆಗುವುದಿಲ್ಲ ಅಲ್ಲವೇ? ಅಲ್ಲಿ, ನಮ್ಮ ಸಂಯುಕ್ತ ಅಮೇರಿಕಾದಲ್ಲಿ ನಿಕೃಷ್ಟರಾದ ಬಡವರಾದರೂ ಹರಿದ ಕಾಲುಚೀಲ ಹಾಗೂ ಜೀರ್ಣವಾದ ಬೂಟ್ಸನ್ನಾದರೂ ಹಾಕಿಕೊಂಡು ಬರುತ್ತಾರೆನ್ನುವಾಗ ಹಾಗಾಗುವುದು ಸಹಜವೇ ಆಗಿದೆ. ಆದರೆ ಇಲ್ಲಿ ಅವುಗಳೆಲ್ಲ ಅತಿ ಮೇಲ್ಮಟ್ಟದ ಆರ್ಥಿಕ ಉತ್ಕರ್ಷದ ಲಕ್ಷಣಗಳು.

ಶಾಲಾಮಕ್ಕಳು ಹಾಕುವ ಉಡುಪುಗಳ ಇನ್ನೂ ಕೆಲವು ವಿವರಣೆಗಳು ನಿನಗೆ ಸ್ವಾರಸ್ಯವಾದಾವು. ನಮ್ಮಲ್ಲಿಯಂತೆ ಒಳಧರಿಸುವ [Underwear] ಚಡ್ಡಿಗಳನ್ನು ಉಪಯೋಗಿಸುವವರು ಅಪರೂಪ. ಎಲ್ಲಾ ಹಿಂದುಗಳಿಗೂ ಸೊಂಟದಲ್ಲಿ ಒಂದು ಉಡುದಾರವಿರುತ್ತದೆ. ಈ ಉಡುದಾರದ ಮೂಲಕ ಕೌಪೀನ ಅಥವಾ ಲಂಗೋಟಿಯೆಂಬುದಾಗಿ ಕರೆಯಲ್ಪಡುವ ಒಂದು ನೀಳವಾದ ಬಟ್ಟೆಯ ತುಂಡನ್ನು ಧರಿಸಿಕೊಳ್ಳುವುದು ಇಲ್ಲಿಯ ಪದ್ಧತಿ.

ಈ ಉಡುದಾರವು ನಿನಗೆ ಹೊಸ ವಿಷಯವಾದುದರಿಂದ ಅದರ ಕುರಿತು ಒಂದೇ ಒಂದು ಮಾತು. ಕೇವಲ ಹತ್ತಿಯ ನೂಲಿನಿಂದ ಪ್ರಾರಂಭಿಸಿ, ಬೆಳ್ಳಿ, ಚಿನ್ನದ ಎಳೆಗಳಿಂದ ತಯಾರಿಸಿದ ಉಡುದಾರಗಳನ್ನು ತೊಡುವವರು ಹಾಗೂ ಮಕ್ಕಳಿಗೆ ತೊಡಿಸುವವರು ಇದ್ದಾರೆ. ಶ್ರೀಮಂತ ಮಕ್ಕಳಿಗೆ ಚಿನ್ನದ ಉಡುದಾರವನ್ನು ಹಾಕುವುದು ಶ್ರೀಮಂತಿಕೆಯ ಲಕ್ಷಣವೆಂಬುದಾಗಿ ತಿಳಿಯಲ್ಪಡುವುದು. ಸರ್ವ ಸಾಮಾನ್ಯ ಮಧ್ಯಮ ವರ್ಗದವರು ಕೂಡಾ ಬೆಳ್ಳಿಯ ಉಡುದಾರವನ್ನು ಧರಿಸಿಕೊಳ್ಳುವರು.

ಸಿಲ್ವರ್, ಒಳಚಡ್ಡಿಯಂತೆಯೇ ಬನಿಯನುಗಳನ್ನು ಧರಿಸುವ ವಿದ್ಯಾರ್ಥಿಗಳೂ ಕಡಿಮೆಯೇ. ಒಂದು ದಪ್ಪವಾದ ಬಟ್ಟೆಯ ಚಡ್ಡಿ ಮತ್ತು ಶರ್ಟು-ಇಷ್ಟೇ ಅವರ ಉಡುಪು.

ಕಾಲೇಜುಗಳಲ್ಲಿ ಯುವಕರು ಪ್ಯಾಂಟ್ ಮತ್ತು ಬುಶ್ ಶರ್ಟು ಅಥವಾ ಶರ್ಟನ್ನು ಧರಿಸಿಕೊಳ್ಳುತ್ತಾರೆ. ಕೆಲವರು, ದಕ್ಷಿಣ ಭಾರತದಲ್ಲಿ ಪಂಚೆಯನ್ನು ಮದ್ರಾಸಿನ ಮತ್ತು ಕೇರಳದ ಜನರಂತೆ, ಹಾಗೂ ಬರ್ಮಾದ ಜನರಂತೆ ಅಡ್ಡವಾಗಿ ಸೊಂಟದಲ್ಲಿ ಉಡುವುದಿದೆ. ಉತ್ತರ ಹಿಂದೂಸ್ಥಾನದ ನಗರಗಳಲ್ಲಿ ಪ್ಯಾಂಟು ಧರಿಸದವರು "ಪ್ಯಾಜಾಮಾ" ಎಂಬ ಒಂದು ಉಡುಪನ್ನೂ ಶರ್ಟನ್ನೂ ಧರಿಸುವುದಿದೆ. "ಪ್ಯಾಜಾಮಾ" ಎಂದರೆ ಬೆಳ್ಳಗಿರುವ ಹಾಗೂ ತೆಳ್ಳಗಾದ ಒಂದು ಬಟ್ಟೆಯಿಂದ ಹೊಲಿದ ವಿಸ್ತಾರವಾದ ಹಾಗೂ ನೆಲವನ್ನು ಮುಟ್ಟುವಂತಿರುವ ಉದ್ದವಾದ ಟ್ರೌಸರುಗಳು ಎಂದೆನ್ನಬಹುದೇನೋ? ಇವುಗಳ ಮಹತ್ವವೇನೆಂದರೆ ಇಸ್ತ್ರಿಯಿಲ್ಲದೇನೇ ಅವುಗಳನ್ನು ಧರಿಸಿಕೊಳ್ಳಬಹುದು.

ಕಾಲೇಜು ಯುವತಿಯರು ಹೆಚ್ಚಿನಂಶ ನಿನಗೆ ಸರಿಯಾಗಿ ತಿಳಿದಿರುವ ಸೀರೆ ಮತ್ತು ರವಿಕೆಗಳನ್ನುಟ್ಟುಕೊಳ್ಳುವರು. ಕೆಲವರು ಮುಖ್ಯವಾಗಿ ಕ್ರೈಸ್ತ ಯುವತಿಯರು ಗವನು ತೊಟ್ಟುಕೊಳ್ಳುವುದೂ ಇದೆ. ಪಂಜಾಬು, ಡೆಲ್ಲಿ ಇತ್ಯಾದಿ ಕಡೆಗಳಲ್ಲಿ ಯುವತಿಯರು ಒಂದು ವಿಚಿತ್ರ ರೀತಿಯ ಸಪುರವಾದ ಪ್ಯಾಜಾಮುವನ್ನೂ ನೀಳ ಕೈಯ ಒಂದು ಜುಬ್ಬವನ್ನೂ ಧರಿಸಿ, ಒಂದು ತೆಳ್ಳನೆಯ ಬಟ್ಟೆಯನ್ನು ಎದೆಯ ಮೇಲಕ್ಕೆ ಬೀಳುವಂತೆ ಹೆಗಲಲ್ಲಿ ಹಾಕಿಕೊಳ್ಳುತ್ತಾರೆ.

ಕ್ರೈಸ್ತರನ್ನು ಬಿಟ್ಟುಳಿದ ಇಲ್ಲಿಯ ಯುವತಿಯರು ಪಾಶ್ಚಾತ್ಯ ಸ್ತ್ರೀಯರಂತೆ ತಲೆಕೂದಲನ್ನು ಕತ್ತರಿಸಿಕೊಳ್ಳುವುದಿಲ್ಲ. ಬದಲಿಗೆ ತಲೆಕೂದಲನ್ನು ಉದ್ದವಾಗಿ ಬೆಳೆಸಿ ಇಳಿಯಬಿಟ್ಟು ಅದನ್ನು ಹೆಣೆದು ಜಡೆ(Pigtail)ಯಾಗಿ ಮಾರ್ಪಡಿಸಿಕೊಳ್ಳುತ್ತಾರೆ. ಒಂದು ಜಡೆಯನ್ನು ಇಳಿಸಿ ಬಿಡುವುದು ಹಳೆಯ ಪದ್ಧತಿಯಾದರೆ ಎರಡು ಜಡೆಯನ್ನು ಬಿಟ್ಟಿರುವುದು ಆಧುನಿಕ ಪದ್ಧತಿ.

ಭಾರತದ ಯುವತಿಯರು ಉಡುಪಿನಲ್ಲಿ ಇಲ್ಲಿಯ ಸ್ತ್ರೀಯರನ್ನೇ ಅನುಸರಿಸುತ್ತಾರೆ. ಸ್ತ್ರೀಯರ ಕುರಿತಾಗಿಯಂತೂ ನಾನು ಹಿಂದೆಯೇ ನಿನಗೆ ಬರೆದಿರುತ್ತೇನೆ.

ಬಟ್ಟೆ ಬರೆಯಂತಹ ಕ್ಷುಲ್ಲಕ ವಿಷಯಗಳನ್ನೂ ಏಕೆ ಬರೆಯುತ್ತಾ ಕುಳಿತೆಯಪ್ಪಾ ಎಂದು ನೀನು ಕೇಳಬಹುದು. ಆದರೆ ಒಂದು ರಾಷ್ಟ್ರದ ನಿಜವಾದ ಸ್ಥಿತಿಗತಿಗಳನ್ನೂ, ಆ ರಾಷ್ಟ್ರದ ಹೃದಯವನ್ನೂ, ಕರುಳನ್ನೂ ತಿಳಿಯಲು ಈ ಎಲ್ಲಾ ಸೂಕ್ಷ್ಮ ವಿವರಗಳು ಬೇಕೇ ಬೇಕು. ಆದ್ದರಿಂದಲೇ ಬರೆಯುತ್ತಾ ಹೋಗುತ್ತಿದ್ದೇನೆ. ಆದರೆ ಸುಮಾರು ಒಂದು ತಿಂಗಳ ಹಿಂದೆ ನೀನು ಸೂಚಿಸಿದಂತೆ ನನ್ನ ಇಚ್ಛೆಗೆ ವಿರುದ್ಧವಾಗಿ ಈ ಪತ್ರ ಸಂಕಲನವನ್ನು ಎಲ್ಲಿಯಾದರೂ ನೀನು ಆಂಗ್ಲ ಭಾಷೆಯಲ್ಲಿ ಗ್ರಂಥ ರೂಪದಲ್ಲಿ ಪ್ರಕಟಿಸಿದೆಯಾದರೆ ನನ್ನ ಮುಖಕ್ಕೆ ಮಸಿಯಾಗದಿರದು. ಏಕೆಂದರೆ ಈ ಜೋನ್‌ಓರ್‌ಮನ್‌ನಿಗೆ ಬೇರೆ ವಿಷಯ ಬರೆಯಲು ಸಿಗಲಿಲ್ಲವೇ ಎಂದು ಯಾರಾದರೂ ಪ್ರಶ್ನಿಸದಿರರು. ಆದ್ದರಿಂದ ಸಿಲ್ವರ್, ನನ್ನ ಕತ್ತು ಹಿಸುಕಲಾರೆಯಷ್ಟೇ?

ವಿಷಯಾಂತರ ಮಾಡಿದ್ದಕ್ಕೆ ಕ್ಷಮಾಯಾಚನೆ ಮಾಡಿ ಮರಳಿ ಹಿಂದಿನ ವಿಷಯಕ್ಕೇ ಬರುತ್ತೇನೆ. ಇಲ್ಲಿಯ ಹೈಸ್ಕೂಲ್ ವಿದ್ಯಾರ್ಥಿಗಳ ಉಡುಪುಗಳು ಬಹಳ ಮಟ್ಟಿಗೆ ವಾರಕ್ಕೊಮ್ಮೆ ಅಥವಾ ಎರಡು ಸಲ ಮಾತ್ರವೇ ತೊಳೆಯಲ್ಪಟ್ಟರೂ ಬಹಳ ಆಶ್ಚರ್ಯವೇನಿಲ್ಲ. ಅಂಗಿಬಟ್ಟೆಗಳು ಇಸ್ತ್ರಿಯನ್ನು ಕಂಡಿರುವಂತಿಲ್ಲ.

ತಲೆಯನ್ನು ಬಾಚಣಿಗೆಯಿಂದ ಬಾಚಿಕೊಳ್ಳುತ್ತಾರೆ, ನಿಜ. ಆದರೆ ಕೂದಲನ್ನು ಪೂರ್ತಿ ತೆಗೆಸಿ, ತಲೆಬಿಟ್ಟು ತಿರುಗುವ ಬಾಲಕರಿಗೂ ಇಲ್ಲಿ ಕಡಿಮೆಯೇನಿಲ್ಲ. ಇತ್ತೀಚೆಗೆ ಕಾಲೇಜು ವಿದ್ಯಾರ್ಥಿಗಳಲ್ಲಿಯೂ ಅದೊಂದು ಫ್ಯಾಷನ್ ಆಗಿ ಬರುತ್ತಿದೆ.

ಈ ಸ್ಥಿತಿಗತಿಗೆಲ್ಲಾ ಮೂಲಕಾರಣವಾಗಿ ಎರಡು ವಿಷಯಗಳನ್ನು ಮುಂದಿಡಬಹುದು. ಒಂದನೆಯದು ಇಲ್ಲಿಯ ಬಡತನ-ಎರಡನೆಯದು ಇಲ್ಲಿಯ ಹವಾಮಾನ.

ಕೂಳಿಗೇ ಗತಿಯಿಲ್ಲದವರು ತರ ತರದ ಬಟ್ಟೆಯನ್ನೆಲ್ಲಿ ಪಡೆಯಬೇಕು? ಅದನ್ನು ಬೇಕಾದಂತೆ ತೊಳೆಯುವ ಅನುಕೂಲತೆಯನ್ನೆಲ್ಲಿಂದ ಪಡೆಯಬೇಕು? ಅಲ್ಲದೆ ಇಲ್ಲಿಯ ಬಹು ಭಾಗಗಳು ಉಷ್ಣ ಪ್ರದೇಶಗಳು. ದಿನದ ಹೆಚ್ಚಿನ ಸಮಯದಲ್ಲೂ ಮೈಯಿಂದ ಬಟ್ಟೆಯನ್ನು ತೆಗೆದು ಬಿಸುಡೋಣ ಎಂಬುದಾಗಿ ಕಾಣುವ ಪರಿಸ್ಥಿತಿಯೇ ಇರುವಾಗ ಹೆಚ್ಚು ಬಟ್ಟೆ ಬರೆಗಳನ್ನು ಹೇಗೆ ಹಾಕಿಕೊಳ್ಳಬಹುದು? ಬೆಂಗಳೂರು, ಊಟಿ, ಮುಸ್ಸೂರಿ, ಡಾರ್ಜಿಲಿಂಗ್, ಕಾಶ್ಮೀರ,

ಮಡಿಕೇರಿ ಮೊದಲಾದ ಪ್ರದೇಶಗಳು ಮಾತ್ರವೇ ಈ ಮಾತಿಗೆ ಅಪವಾದವಾಗಿರುವವು.

ಇದೇ ಪರಿಸ್ಥಿತಿಯಿಂದಾಗಿಯೇ ಇಲ್ಲಿ ಕಾಲುಚೀಲ, ಮತ್ತು ಬೂಟುಗಳ ಉಪಯೋಗವು ಕಡಿಮೆಯಿರಲು ಕಾರಣ–ಅದೇ ಕಾರಣಕ್ಕಾಗಿಯೇ ಪಾದ ರಕ್ಷೆಯ ಉಪಯೋಗವೂ ಸಾರ್ವತ್ರಿಕವಾಗದಿರಲು ಕಾರಣ.

ಇತ್ತೀಚೆಗೆ ಭಾರತದ ಕಾಲೇಜು ಯುವತಿಯರ ಉಡಿಗೆ ತೊಡಿಗೆಗಳು ವಿಕಾರವಾಗ ತೊಡಗಿದಂತೆಯೇ ಯುವಕರ ಉಡಿಗೆತೊಡಿಗೆಗಳೂ ವಿಕಾರವಾಗ ತೊಡಗಿವೆ. ಫ್ಯಾಶನ್ನಿನ ಹೆಸರಲ್ಲಿ ವಿಚಿತ್ರ ರೀತಿಯ ಪ್ಯಾಂಟುಗಳನ್ನು ತೊಟ್ಟು ಕೊಳ್ಳತೊಡಗಿದ್ದಾರೆ. ನಾಭಿಯಿಂದಲೂ ಆರು ಇಂಚುಗಳಷ್ಟು ಕೆಳಗೆ ನಿಲ್ಲುವ ಒಂದು ವಿಚಿತ್ರ ರೀತಿಯ ಲಕೋಟೆಗಳಂತಹ ಪ್ಯಾಂಟುಗಳನ್ನು ಧರಿಸಿ, ಪೇಂಟಿನೊಳಗೆ ತುರುಕಿಸಿದ ಶರ್ಟು ಕಂಠದಿಂದ ಹೊಟ್ಟೆಯ ಅಡಿಭಾಗದ ತನಕ ಕಾಣುತ್ತಿದ್ದೂ, ಜೋತಾಡುತ್ತಿರುವುದು ಅತ್ಯಾಧುನಿಕ ಫ್ಯಾಶನ್ ಆಗಿದೆ. ಹಾಕಿಕೊಳ್ಳುವ ತೆಳ್ಳಗಿನ ಮಣಿಲಾ ಶರ್ಟು, ಅಥವಾ ಬುಶ್ ಶರ್ಟುಗಳಲ್ಲೂ ನಮ್ಮ ಸಿನೆಮಾ ನಟಿಯರ ಭಂಗಿಯಲ್ಲಿರುವ ಚಿತ್ರಗಳಿದ್ದರೆ ಅದು ಇನ್ನಷ್ಟು ಆಕರ್ಷಣೆಯಾಗುವುದು. ಫ್ಯಾಶನ್ನುಗಳ ಹೆಸರಲ್ಲಿ ಕಾಡು ಜನರಂತೆ ವಿಚಿತ್ರ ಉಡುಪುಗಳನ್ನು ಮಾಡತೊಡಗಿರುವ ಅಮೇರಿಕನ್ ಮಹಿಳೆಯರೇ–ಭಾರತದ ಯುವಕ ಯುವತಿಯರ ಫ್ಯಾಶನ್ನಿನ ಇತ್ತೀಚೆಗಿನ ಗುರುಗಳೋ ಏನೋ ಎಂದೆನ್ನಿಸುತ್ತಿದೆ, ನನಗೆ.

ಭಾರತದ ಸಾರ್ವಜನಿಕ ಜೀವನದಂತೆಯೇ ಇಲ್ಲಿಯ ವಿದಾರ್ಥಿ, ವಿದ್ಯಾರ್ಥಿನಿಯರ ಆಹಾರ ವಿಹಾರಗಳಲ್ಲಿಯೂ ಸರಳತೆಯಿದೆ. ಅವರ ಆವಶ್ಯಕತೆಗಳೇ ಕಡಿಮೆ. ಆ ಕುರಿತಾಗಿ ನಾನು ಇಂದು ವಿಸ್ತಾರವಾಗಿ ಹೇಳುವ ಬದಲು, ಇನ್ನೊಮ್ಮೆ ಆಹಾರದ ಕುರಿತಾಗಿಯೇ ಒಂದೆರಡು ಪತ್ರಗಳನ್ನು ವಿಾಸಲಾಗಿಟ್ಟರೆ ಉಪಯೋಗವಾಗಬಹುದು ಎಂದೆನಿಸುತ್ತಿದೆ, ನನಗೆ.

ಆದರೆ ಒಂದು ಮಾತು ಈಗಲೇ ಬರೆಯಬೇಕು. ಇಲ್ಲಿಯ ಹಲವು ವಿದ್ಯಾರ್ಥಿಗಳು ಸರಿಯಾದ ಆಹಾರವಿಲ್ಲದೆ ಬಡವಾಗಿರುತ್ತಾರೆ. ಅವರ ದೇಹವು ಬೆಳವಣಿಗೆಯಿಲ್ಲದೆ ಒಣಕಲಾಗಿ ಇರುತ್ತದೆ. ಎಷ್ಟೋ ಬಾಲಕ ಬಾಲಕಿಯರು ಮಧ್ಯಾಹ್ನದ ಊಟವಿಲ್ಲದವರಾಗಿ, ಉಣ್ಣುವ ಸಮಯದಲ್ಲಿ ಕೂಡಾ ಕೇವಲ ಹಿಷ್ಟಮಾತ್ರದಿಂದ ಕೂಡಿದ ಗಂಜಿ ಕುಡಿದು ತೃಪ್ತಿಪಡಬೇಕಾಗುತ್ತದೆ.

ನಾನು ಹಲವಾರು ಹಳ್ಳಿಗಳಿಗೂ, ಸಣ್ಣ ಪೇಟೆಗಳಿಗೂ ಸಂದರ್ಶನ ವಿತ್ತಿದ್ದೇನೆ. ಅಲ್ಲಿರುವ ಮಾಧ್ಯಮಿಕ ಶಾಲೆ ಮತ್ತು ಹೈಸ್ಕೂಲುಗಳನ್ನು ಕಂಡಿದ್ದೇನೆ. ಆ ಸಂದರ್ಭಗಳಲ್ಲಿ ಮನೆಯು ದೂರವಾಗಿರುವ ಮಕ್ಕಳು ಶಾಲೆಯಲ್ಲೇ ನಿಂತಿರುವ ಪ್ರಸಂಗಗಳನ್ನು ಹಲವು ನೋಡಿದ್ದೇನೆ. ಆ ಸಂದರ್ಭಗಳಲ್ಲೆಲ್ಲಾ ನಾನು ಆ ಮಕ್ಕಳನ್ನು ಮಾತನಾಡಿಸದಿರುವುದಿಲ್ಲ. ಅವರ ಕಂದಿದ ಮುಖ, ಗುಳಿಬಿದ್ದ ಕಣ್ಣುಗಳು, ಒಳಹೋದ ಕಪೋಲಗಳು, ಸೊರಗಿದ ದೇಹಗಳನ್ನು ನೋಡಿ ನಾನು ಒಳಗೊಳಗೇ ಕಣ್ಣೀರು ಮಿಡಿಯುತ್ತೇನೆ. ಮೊದಮೊದಲು ಕುತೂಹಲದಿಂದ ಅಂತಹ ಮಕ್ಕಳ ಕೂಡೆ ಈ ರೀತಿ ನಾನು ಪ್ರಶ್ನೆಗಳನ್ನು ಹಾಕುತ್ತಿದ್ದೆ.

"ಊಟವಾಯಿತೇ ಮಗೂ?"

"ಇಲ್ಲ ಸಾರ್"

"ಯಾತಕ್ಕೆ? "

"ಊಟಕ್ಕೆ ಮಧ್ಯಾಹ್ನ ಮನೆಗೆ ಹೋಗಿಲ್ಲ. "

" ಯಾತಕ್ಕೆ ಹೋಗಿಲ್ಲ ? "

" ಮನೆ ದೂರ ಸಾರ್ ! "

" ಬುತ್ತಿ ತರಬಹುದಿತ್ತಲ್ಲ? "

" ಬೆಳಿಗ್ಗೆ ಶಾಲೆಗೆ ಬರುವಾಗ ಅಡಿಗೆ ಆಗುವುದಿಲ್ಲ "

" ಇಲ್ಲೇ ಹೋಟೆಲಿನಲ್ಲಿ ಅಥವಾ ಹಾಸ್ಟೆಲಿನಲ್ಲಿ ಉಣ್ಣಬಹುದಲ್ಲ? "

" ದುಡ್ಡಿಲ್ಲ ಸಾರ್ ! "

" ಒಂದಿಷ್ಟು ತಿಂಡಿಯಾದರೂ ಮನೆಯಿಂದ ತರಬಹುದಿತ್ತಲ್ಲ?"

ಇದಕ್ಕೆ ಹೆಚ್ಚಾಗಿ ಆತನ ಉತ್ತರವಿಲ್ಲ. ಏಕೆಂದರೆ ಮನೆಯಿಂದ ಅನ್ನದ ಬುತ್ತಿ ತರುವ ಸ್ಥಿತಿಯಲ್ಲೂ ಆತನಿಲ್ಲ; ಅಡಿಗೆ ಆಗುವುದಿಲ್ಲ ಎಂಬುದು ಆತನ ನೆಪ ಮಾತ್ರ. ಹಾಗಿರಲು ತಿಂಡಿಯಾದರೂ ತರಬಹುದಲ್ಲಾ ಎಂದೊಡನೆಯೇ ಆತನು ಸೋತು ಬಿಡುತ್ತಾನೆ. ನಂತರ ಉತ್ತರ ಕೊಡದೆ ತಲೆಕೆಳಗೆ ಹಾಕಿ, ಕಣ್ಣೀರು ತುಂಬಿಕೊಳ್ಳುತ್ತಾನೆ.

ಆಗ ಅವರ ಗಲ್ಲ ಮುಟ್ಟಿ, ಅವರ ಮುಖವನ್ನು ಎತ್ತಿ ಹಿಡಿದು ಅವರ ನೀರು ತುಂಬಿದ ಹೊಳೆವ ಕಣ್ಣುಗಳನ್ನು ನೋಡದೆ ಇರಲು ನನ್ನಿಂದಾಗದು. ಆ ಕಣ್ಣುಗಳಲ್ಲಿ ಭಾರತದ ಬಡತನದ ರುದ್ರ ಭೀಕರ ದೃಶ್ಯ ನನ್ನ ಮುಂದೆ

ತಾಂಡವವನ್ನಾಡುವುದು. ಆದರೂ ನಾನು ಆ ದೃಶ್ಯವನ್ನು ಪುನಃ ಪುನಃ ನೋಡದಿರಲಾರೆ. ಸೋದರಿ ಬಡಪೆಯೆಂದುಕೊಂಡು ಆಕೆಯನ್ನು ನೋಡದಿರಲಾಗುವುದೇ?

ನಾನೊಬ್ಬ ವಿಚಿತ್ರ ಮನುಷ್ಯ ಸಿಲ್ವರ್. ನಿನಗಿದೆಲ್ಲಾ ಅತಿಯಾಗಿ ಕಾಣಬಹುದು. ಆದರೆ ನನಗೇಕೋ ಇದು ನನ್ನ ಜೀವ ಜೀವಾಳ.

ಆದರೆ ಇತ್ತೀಚೆಗೆ ಹಾಗೆ ಪ್ರಶ್ನೆ ಕೇಳುವುದನ್ನು ಬಿಟ್ಟದ್ದೇನೆ. ನಾಲ್ಕಾಣೆ ನಾಣ್ಯಗಳನ್ನು ನನ್ನೆದುರಿಗೆ ಬಂದವರ ಕಿಸೆಗೆ ತುರುಕಿ 'ತಿಂಡಿ ತಿನ್ನು ಮಗೂ' ಎಂದು ಹೇಳುವುದು ನನ್ನ ಕ್ರಮ. ಆಗ ಆ ಎಳೆಯರು ಕಪ್ಪೆಗಳಂತೆ ಜಿಗಿದು ಆನಂದದಿಂದ ಓಡುತ್ತಾರೆ-ತಿಂಡಿ ಕೊಂಡು ಕೊಳ್ಳಲು.

ಆದರೆ ಒಬ್ಬ ಬಾಲಕನ ಕುರಿತು ನನಗೆ ಇಂದಿಗೂ ನಿಚ್ಚಳವಾಗಿ ನೆನಪಾಗುತ್ತಿದೆ. ಆತನ ಆ ಸುಂದರವಾದ ಬಡ, ಮುಗ್ಧ ಮುಖ ನನಗೆ ಈಗಲೂ ಕಣ್ಣಿಗೆ ಕಟ್ಟಿದಂತಿದೆ. ನಾನು ಮದ್ರಾಸು ಪ್ರಾಂತ್ಯದ ವೆಲ್ಲೂರಿನ ಬಳಿಯ ಗುಡಿಯಾತ್ತಮ್ ಎಂಬ ಊರಿಗೆ ಹೋಗಿದ್ದೆ. ಅಲ್ಲಿಯ ಹೈಸ್ಕೂಲನ್ನು ಸಂದರ್ಶಿಸಿದೆ. ಮಧ್ಯಾಹ್ನ ನಾನು ನಿಂತಾಗ ಹೊರ ಜಗುಲಿಗೆ ಬರುವ ಚಪಲತೆ ಬಂತು. ಅತ್ತಿತ್ತ ಕಣ್ಣು ಹಾಯಿಸುವಾಗ ಆತ ನಿಂತದ್ದು ಕಣ್ಣಿಗೆಬಿತ್ತು. ಚಡ್ಡಿಯ ಕಿಸೆಯೊಳಗೆ ಕೈಹಾಕಿ ದೂರದ ಆಗಸದೆಡೆಗೆ ಒಂದೇ ಸವನೆ ನೋಡುತ್ತಾ ಇದ್ದ. ತತ್ವವೇತ್ತನಂತೆ ಕಾಣುತ್ತಿದ್ದ. ಆತನ ದೃಷ್ಟಿ ನನ್ನ ಮನಸೆಳೆಯಿತು. ಆತನ ಬಳಿಸಾರಿ, ಹೆಗಲ ಮೇಲೆ ಕೈಯಿಕ್ಕಿ "ಮಗೂ, ಏನನ್ನು ನೋಡುತ್ತಿರುವೆ ?" ಎಂದು ಕೇಳಿದೆ. ಕೂಡಲೇ ಆತನು ನನ್ನೆಡೆಗೆ ತಿರುಗಿ "ಏನಿಲ್ಲ, ಸಾರ್. ಸುಮ್ಮನೆ ಮುಗಿಲನ್ನೇ ನೋಡುತ್ತಾ ಇದ್ದೆ" ಎಂದ. ಆತನ ಮನಸೆಳೆದ ಆ ಅದ್ಭುತ ಮುಗಿಲ್ಯಾವುದು ಎಂದು ನೋಡಲು ನಾನು ಆ ಕಡೆಗೆ ದೃಷ್ಟಿ ಹಾಯಿಸಿದೆ.

ಆದರೆ ಗೆಳೆಯಾ, ಆಶ್ಚರ್ಯ ಗೊತ್ತೇ? ಆಕಾಶದಲ್ಲಿ ಒಂದೇ ಒಂದು ಮುಗಿಲಿರಲಿಲ್ಲ. ನಾನು ಆತನ ಗಲ್ಲ ಮುಟ್ಟಿ "ಮುಗಿಲೇ ಇಲ್ಲವಲ್ಲ ಮಗೂ? " ಎಂದು ಕೇಳಿದೆ. ಆತನೂ ಆಗಸದೆಡೆಗೆ ನೋಡಿದ. ಆತನ ಸುಳ್ಳು ಋಜುವಾತಾಗಿತ್ತು. ನಾಚಿ ತಲೆ ಬಾಗಿಸಿದ. ನಾನು ತಲೆ ಎತ್ತಿ ನೋಡಿದಾಗ ಕಣ್ಣಿನಲ್ಲಿ ನೀರು ತುಂಬಿತ್ತು. ನನ್ನ ಕರವಸ್ತ್ರದಲ್ಲೇ ನಾನದನ್ನು ಉಜ್ಜಿ, ಆತನನ್ನು ತಬ್ಬಿಕೊಂಡೆ. ನನಗೆ ಆತನ ಸುಳ್ಳಿನಲ್ಲಿ ಅಡಗಿದ್ದ ಸತ್ಯ ಅರ್ಥವಾಗಿತ್ತು.

ನಾನು ಒಂದು ರೂಪ್ಯಾ ನೋಟೊಂದನ್ನು ತೆಗೆದು ಆತನ ಕಿಸೆಗೆ ತುರು
ಪುನಃ ತಬ್ಬಿಕೊಂಡೆ. ಆತನು ಕಿಸೆಗೆ ಕೈ ಹಾಕಿ ನೋಟನ್ನು ತೆಗೆದು "ಇದ
ಯಾತಕ್ಕೆ ಸಾರ್?" ಎಂದು ಕೇಳಿದ. "ಊಟ ಮಾಡು, ಮಗೂ" ಎಂದೆ
ಆಗ ಆ ಅಭಿಮಾನಿಯಾದ ಬಾಲಕ ನೋಟನ್ನು ಪುನಃ ನನ್ನ ಕೈಗಿಟ್ಟ
"ಸಾರ್, ನನಗೆ ಬೇಡ!" ಎಂದು ಹೇಳಿದ. "ಯಾಕೆ?" ಎಂದು ನಾನ
ಆಶ್ಚರ್ಯದಿಂದ ಕೇಳಿದೆ.

ಬಾಲಕ ಹೇಳಿದ "ಬೇಡ, ಸಾರ್, ನನಗೆ ಹಣ ಬೇಡ". ಆತನ ಕಣ್ಣು
ಗಳಿಂದ ಈಗ ಕಣ್ಣೀರು ಧಾರಾಕಾರವಾಗಿ ಇಳಿಯತೊಡಗಿತು. ಅದರ ಒಂದು
ಹನಿ ನನ್ನ ಪಾದದ ಮೇಲೂ ಬಿತ್ತು.

ಕಾರಣ ಕೇಳಿದರೆ, ಹುಡುಗ ಹೇಳಲೊಲ್ಲ. ಕಡೆಗೆ "ನನಗೆ ಹಸಿವೆ
ಯಿಲ್ಲ" ಎಂದು ಹೇಳಿದ. ನಾನು ಆತನನ್ನು ಬೇರೊಂದು ಮೂಲೆಗೆ ಕರೆ
ದೊಯ್ದು, ಆತನನ್ನು ಪ್ರೇಮದಿಂದ ಮಾತನಾಡಿಸಿ ಕಾರಣ ತಿಳಿಯಲು
ಉದ್ಯುಕ್ತನಾದೆ.

ಕಟ್ಟಕಡೆಗೆ ಬಹಳ ಪ್ರಯತ್ನದ ನಂತರ ತಿಳಿಯಿತು–ಆತನ ತಂದೆ
ಯಾರಿಂದಲೂ ಹಣ ತೆಗೆದುಕೊಳ್ಳಲು ಬಿಡುವುದಿಲ್ಲ, ಎಂದು. ಅವರು ಬಡ
ವರಾದರೂ ಅಭಿಮಾನಿ. ಇತರರ ಕೃಪೆಗೆ ಕೈ ಚಾಚಲು ಅವರು ಸಿದ್ಧರಿಲ್ಲ.

ನಾನು ಕೇಳಿದೆ "ಅವರಿಗೆ ತಿಳಿಸಬೇಕೆಂದೇನು? ರೂಪ್ಯಾ ತೆಗೆದುಕೋ,"
ಎಂದು. "ತಂದೆಗೆ ತಿಳಿಸದೆ ನಾನು ರೂಪ್ಯಾ ತೆಗೆದುಕೊಳ್ಳುವುದಿಲ್ಲ" ಎಂದ
ನಾತ. ಆತನ ಆತ್ಮಗೌರವವನ್ನು ಕೆಡಿಸಲು ನಾನು ಬಯಸಲಿಲ್ಲ. ನಾನೇ
ಸೋಲನ್ನೊಪ್ಪಬೇಕಾಯಿತು. ಆದರೆ, ನಾನೂ ಅಷ್ಟಕ್ಕೇ ಬಿಡಲಿಲ್ಲ. ಕಾಫಿ
ತಿಂಡಿ ತರಿಸಿ, ಅವನಿಗೆ ಉಣ ಬಡಿಸಿದೆ. ಅವನು ಆಗಲೂ ನನ್ನ ಒತ್ತಾಯಕ್ಕೆ
ತಿಂದನೇ ಹೊರತು ಸಂತೋಷ ತೃಪ್ತಿಗಳಿಂದ ಅಲ್ಲ.

ಭಾರತದ ಅಮೂಲವಾದ ಯೋಗ್ಯತೆಗೆ ಹಿರಿಯ ಸಾಕ್ಷಿಯಾಗಿ
ನಿಲ್ಲುವಾತನೇ ಆ ಬಾಲಕ.

ಇನ್ನೊಂದು, ವಿಷಯ, ಸಿಲ್ವರ್. ಅರೆಹೊಟ್ಟೆ ಉಂಡಾದರೂ ಇಲ್ಲಿಯ
ಬಾಲಕ ಬಾಲಕಿಯರೆಲ್ಲರಿಗೂ ವಿದ್ಯಾಭ್ಯಾಸ ಸಿಗುತ್ತಿದ್ದರೆ ಅದಾದರೂ ಸಹನೀ
ಯವಾಗುತ್ತಿತ್ತು. ಆದರೆ ಹೆಚ್ಚು ಕಡಿಮೆ ಹತ್ತರಲ್ಲೊಂದಂಶದ ಮಕ್ಕಳಿಗೆ

ಇಂದೂ ಪ್ರಾಥಮಿಕ ವಿದ್ಯಾಭ್ಯಾಸ ಸಿಗುತ್ತಿಲ್ಲ. ಸುಮಾರು ಕಾಲಂಶ ವಿದ್ಯಾರ್ಥಿಗಳಿಗೆ ಮಾಧ್ಯಮಿಕ ವಿದ್ಯಾಭ್ಯಾಸ ಸಿಗುತ್ತಿಲ್ಲ.

ಅಂಥವರು, ವಿದ್ಯಾರ್ಜನೆ ಮಾಡಬೇಕಾದ ತಮ್ಮ ಎಳವೆಯಲ್ಲಿ, ತಮ್ಮ ತಂದೆ, ತಾಯಿ, ಅಣ್ಣ, ತಮ್ಮ, ಅಕ್ಕ, ತಂಗಿಯರ ಹೊಟ್ಟೆ ತುಂಬಿಸುವುದಕ್ಕಾಗಿ ಒದ್ದಾಡುತ್ತಿರುತ್ತಾರೆ.

ಲಕ್ಷೋಪಲಕ್ಷ ಜನ ಬಾಲಕರು ಬಿಕ್ಕೆ ಬೇಡುತ್ತಿದ್ದಾರೆ. ಹಲವರು ಬೂಟ್ ಪೋಲಿಶ್, ಮೆಟ್ಟು ರಿಪೇರಿ, ಪೆಟ್ಟಿಗೆ ಹೊರುವುದು, ಚಿಲ್ಲರೆ ತಿಂಡಿ ಮಾರುವುದು ಇತ್ಯಾದಿ ಉದ್ಯೋಗಗಳಲ್ಲಿ ನಿರತರಾಗಿ ಹೊಟ್ಟೆ ಹೊರೆಯುತ್ತಿದ್ದಾರೆ. ಪೇಟೆಗಳ ಕಲುಷಿತ ವಾತಾವರಣದಲ್ಲಿ, ಅವರು ವಿವಿಧ ರೀತಿಯ ದುರಭ್ಯಾಸಗಳನ್ನು ಬೆಳೆಸುತ್ತಾ ಜೀವನ ಸಾಗಿಸುತ್ತಾರೆ. ಭಾರತದ ಐಶ್ವರ್ಯಕ್ಕೆ-ತಾಯ್ನಾಡಿನ ಸಂಪದಭಿವೃದ್ಧಿಗೆ, ಸಾಂಸ್ಕೃತಿಕ ಪುನರುತ್ಥಾನಕ್ಕೆ ನೆರವಾಗಬೇಕಾಗಿದ್ದ ಅವರು, ಇಲ್ಲಿಯ ಈ ಬೃಹತ್ ನಗರಗಳಲ್ಲಿ ಕೇವಲ ಪಶುಗಳಂತೆ ಬದುಕುತ್ತಿದ್ದಾರೆ—ಭಾರತ ಮಾತೆಗೆ ಭಾರವಾಗುತ್ತಿದ್ದಾರೆ.

ಸಂಯುಕ್ತ ಅಮೇರಿಕಾ ದೇಶದಲ್ಲೂ ಇಂತಹ ಜನರಿಲ್ಲವೆಂದು ಭಾವಿಸಬೇಡ. ನ್ಯೂಯೋರ್ಕಿನ ಹಾರ್ಲೆಮ್‌ನ ಭಾಗವೇ ಸಾಲದೇ? ಆದರೆ ಇಲ್ಲಿಯ ಸ್ಥಿತಿಗೆ ಹೋಲಿಸಿದಾಗ ಅಲ್ಲಿ ಬಹಳ ಕಡಿಮೆ ಸಂಖ್ಯೆಯಲ್ಲಿ ಅಂಥವರಿರುತ್ತಾರೆ. ಅದೇ ನಮಗೆ ಒಂದು ತೃಪ್ತಿ.

ನಿನಗೆ ಸ್ವಾರಸ್ಯವಾಗಬಹುದಾದ ಇನ್ನೊಂದು ವಿಷಯ ವಿವರಿಸುತ್ತೇನೆ. ನಮ್ಮ ದೇಶದಂತೆ ಈ ದೇಶದ ಬಾಲಕ ಬಾಲಕಿಯರು ತರಗತಿಗಳಲ್ಲಿ ಜತೆಯಾಗಿ ಕುಳಿತಿರುವುದಿಲ್ಲ. ಹೆಣ್ಮಕ್ಕಳು ಬೇರೆಯಾಗಿ, ಬೇರೆಯೇ ಬೆಂಚುಗಳಲ್ಲಿ ಕುಳಿತಿರುತ್ತಾರೆ. ಪ್ರಾಥಮಿಕ ಶಾಲೆಗಳಲ್ಲೂ ಹೆಚ್ಚಿನ ಮಟ್ಟಿಗೆ ಈ ಕ್ರಮವು ಅನುಸರಿಸಲ್ಪಡುತ್ತಿದೆ.

ಪ್ರಾಥಮಿಕ ಶಾಲೆಗಳ ಬಾಲಕ ಬಾಲಕಿಯರು ಪರಸ್ಪರ ಒಡನಾಟ, ಮಾತುಕತೆ ಇಟ್ಟುಕೊಳ್ಳುತ್ತಾರೆ. ಮಾಧ್ಯಮಿಕ ಮತ್ತು ಪ್ರೌಢಶಾಲೆ [ಹೈಸ್ಕೂಲು]ಗಳಲ್ಲಿ ಅವರು ಪರಸ್ಪರ ಸ್ಪರ್ಶಿಸಬಾರದು–ಒಡನಾಡಬಾರದು, ಹಾಗೂ ಮಾತನ್ನೂ ಆಡಬಾರದು ಎಂಬ ಭಾವನೆಯೇ ಸಮಾಜದಲ್ಲಿ ಇರುತ್ತದೆ. ಪೇಟೆಗಳಲ್ಲಿ ಈ ಕಟ್ಟುನಿಟ್ಟು ಸ್ವಲ್ಪ ಸಡಿಲಾಗುತ್ತಿದೆಯಾದರೂ ಇನ್ನೂ ಅದರ ಬಿಗಿ ಹೋಗಿಲ್ಲ.

ಆದರೆ ಪೇಟೆ, ಪಟ್ಟಣಗಳಲ್ಲಿ ಇತ್ತೀಚೆಗೆ ಹೆಣ್ಮಕ್ಕಳಿಗಾಗಿ ಬೇರೆಯೇ ಹೈಸ್ಕೂಲುಗಳನ್ನೂ, ಕಾಲೇಜುಗಳನ್ನೂ ಸ್ಥಾಪಿಸುವ ಒಂದು ಪದ್ಧತಿಯು ರೂಢಿಯಲ್ಲಿ ಬರುತ್ತಾ ಇದೆ.

ಭಾರತದಲ್ಲಿ ಸಹಶಿಕ್ಷಣ (Co-education) ಇದೆ, ನಿಜ–ಆದರೆ ಅದು ನಮ್ಮ ಪಾಶ್ಚಾತ್ಯ ದೇಶಗಳಂತಲ್ಲ. ಇಲ್ಲಿ ಸಹ ಶಿಕ್ಷಣವೆಂದರೆ ಒಂದೇ ಶಾಲೆಯಲ್ಲಿ ಹುಡುಗರೂ, ಹುಡುಗಿಯರೂ ಕೂಡಾ ಕಲಿಯುತ್ತಾರೆ ಎಂದಷ್ಟೇ ಅರ್ಥ. ನಮ್ಮಲ್ಲಿ ಸಹ ಶಿಕ್ಷಣವೆಂದರೆ ನಿನಗೆ ತಿಳಿದೇ ಇದೆ. ಒಂದೇ ಬೆಂಚಿನಲ್ಲಿ ಬಾಲಕ ಬಾಲಕಿಯರು ಜತೆ ಜತೆಯಾಗಿಯೇ ಕುಳ್ಳಿರುತ್ತಾರೆ.

ಭಾರತ ಮತ್ತು ಸಂಯುಕ್ತ ಅಮೇರಿಕಾ ದೇಶಗಳಲ್ಲಿ ಕಾಣುವ ಈ ವ್ಯತ್ಯಾಸಕ್ಕೆ ಸಮಾಜದ ಸಂಸ್ಕೃತಿಯ ವ್ಯತ್ಯಾಸವೇ ಕಾರಣವೆಂದರೆ ತಪ್ಪಲ್ಲ.

ಪಾಶ್ಚಾತ್ಯ ದೇಶಗಳಲ್ಲಿ ಗಂಡೇ ತನಗೆ ಬೇಕಾದ ಹೆಣ್ಣನ್ನು ಪ್ರೇಮವೆಂಬುದಾಗಿ ಕರೆಯಲ್ಪಡುವ ಮೋಹದ ಆಧಾರದಲ್ಲಿ ಪಡಕೊಳ್ಳಬೇಕು. ಅದೇ ರೀತಿ ಹೆಣ್ಣು ತನಗೆ ಬೇಕಾದ ಗಂಡನ್ನು ಪಡಕೊಳ್ಳಬೇಕು. ಆದ್ದರಿಂದ ಹಿಂದಿನ ಪತ್ರಗಳಲ್ಲಿ ನಾನು ವರ್ಣಿಸಿದಂತೆ, ಗಂಡು ಹೆಣ್ಣುಗಳು ತಂತಮ್ಮ ಜೀವನದ ಸಂಗಾತಿಗಳನ್ನು ತಾವು ತಾವೇ ನಿರ್ಣಯಿಸಿಕೊಳ್ಳಬೇಕು. ಆದ್ದರಿಂದ ಅವರು ಪರಸ್ಪರ ಕಾಮಪ್ರಚೋದನೆ ಮಾಡಿಕೊಂಡು, ಇತರರನ್ನು ಆಕರ್ಷಿಸಬೇಕಾಗುತ್ತದೆ. ಆ ತಯಾರಿ ಪ್ರೌಢ ಶಾಲೆಗಳಲ್ಲೇ ಪ್ರಾರಂಭವಾಗಬೇಕು. ಆದ್ದರಿಂದ ಅದಕ್ಕೆ ಅನುಕೂಲವಾಗುವಂತೆ ನಮ್ಮ ಸಮಾಜ, ನಮ್ಮ ವಿದ್ಯಾಸಂಸ್ಥೆಗಳಲ್ಲಿಯೂ ಅದಕ್ಕೆ ಬೇಕಾದ ತಯಾರಿಯನ್ನು ಮಾಡುವುದಕ್ಕಾಗಿಯೇ ನಮ್ಮ ರೀತಿಯ ಸಹಶಿಕ್ಷಣದ ವ್ಯವಸ್ಥೆ ಮಾಡಿದೆ.

ಭಾರತದ ವೈವಾಹಿಕ ಪದ್ಧತಿ ನಿನಗೆ ಹಿಂದೆಯೇ ಬರೆದಿದ್ದೇನೆ–ಅದರ ಹಿಂದಿರುವ ಭವ್ಯತೆಗೆ, ದಿವ್ಯತೆಗೆ ಸಾಕ್ಷಿಯಾಗಿ ಜಾನಕೀದೇವಿ ಹೇಗೆ ನಿಂತಿದ್ದಾಳೆಂಬುದನ್ನೂ ಹಿಂದೆ ವರ್ಣಿಸಿದ್ದೇನೆ.

ಆಲ್‌ಸೆಶಿಯನ್ ಅಥವಾ ಇತರ ಉತ್ತಮ ಜಾತಿಯ ನಾಯಿಗಳನ್ನು ಆರಿಸಿಕೊಳ್ಳುವಾಗ ನಾವು ಜಾಗ್ರತೆ ಮಾಡುವ ಕ್ರಮ ನಿನಗೆ ತಿಳಿದಿದೆಯೇ? ಯಾಕೆ ತಿಳಿದಿಲ್ಲ? ನಿನ್ನ ಲಾಸ್ಸೀ ನಾಯಿಯನ್ನು ಅಂದು ಆರಿಸಿಕೊಳ್ಳುವಾಗ ಅದರ ಹಿಂದಿನ ಹತ್ತು ತಲೆಯ ಕುಲ ಚರಿತ್ರೆ (Pedigree) ನೀನು

ತಿಳಿದುಕೊಳ್ಳಲಿಲ್ಲವೇ? ಒಂದು ನಾಯಿಯ ಸಂಗ ಪಡೆಯಲು ಅಷ್ಟೊಂದು ಜಾಗ್ರತೆ ಬೇಕಾದರೆ ಜೀವನದ ಸಂಗಾತಿಯಾಗಬೇಕಾದ ಹೆಣ್ಣನ್ನು ಆರಿಸಿ ಕೊಳ್ಳಲು ಕುಲಗೋತ್ರ, ಪೂರ್ವ ಚರಿತ್ರೆಗಳನ್ನು ಎಷ್ಟೊಂದು ಆಳವಾಗಿ ಅಧ್ಯಯನ ಮಾಡಬೇಡ! ಎಂಬುದು ಭಾರತೀಯರ ವಾದ.

ಸಿಲ್ವರ್, ಭಾರತೀಯರ ವಾದ ಸರಿಯೋ, ಸಂಯುಕ್ತ ಅಮೇರಿಕದವರ ಹಾಗೂ ಪಾಶ್ಚಾತ್ಯ ಪ್ರಪಂಚದ ವಾದ ಸರಿಯೋ ಎಂಬುದನ್ನು ನಿನ್ನ ಶ್ರೀಮತಿ– ಅಲ್ಲ ಮಾಜಿ ಶ್ರೀಮತಿ ಋಜುವಾತು ಮಾಡಿದ್ದಾಳೆ. ಅಲ್ಲವೇ? ಆದ್ದರಿಂದ ನಾನು ಈ ಕುರಿತಾಗಿ ಹೆಚ್ಚು ಹೇಳಬೇಕಾಗಿಲ್ಲ.

ಆದ್ದರಿಂದಲೇ ನಮ್ಮ ದೇಶದಲ್ಲಿ ಯುವಕ ವಿದ್ಯಾರ್ಥಿಗಳು ಯುವತಿ ವಿದ್ಯಾರ್ಥಿನಿಯರ ಜತೆಯಲ್ಲಿ ಸಂಚರಿಸುವುದನ್ನೂ ಸ್ವೇಚ್ಛಾಚಾರದಲ್ಲಿ ನಿರತ ರಾಗುವುದನ್ನೂ ಪ್ರೋತ್ಸಾಹಿಸುತ್ತಾರೆ–ಆ ರೀತಿ ಸಂಚರಿಸದ ಯುವಕನು ಏನೋ ಮಾನಸಿಕ ರೋಗಕ್ಕೆ ತುತ್ತಾಗಿದ್ದಾನೆ ಎಂಬುದಾಗಿ ತಿಳಿಯಲ್ಪಡು ತ್ತಾನೆ. ಭಾರತದಲ್ಲಿ ಅಂತಹ ಸ್ವಾತಂತ್ರ್ಯವು ಖಂಡನೀಯ. ಅದರ ಆವಶ್ಯಕ ತೆಯೇ ಇಲ್ಲಿಯ ಹೆತ್ತವರಿಗಿರುವುದಿಲ್ಲ. ಆದ್ದರಿಂದ ಸರ್ವಸಾಮಾನ್ಯವಾಗಿ ಕುಲವಂತರು ತಮ್ಮ ಕಿಶೋರಿಯರನ್ನು ಇತರ ಯುವಕರ ಸಂಗಡ ಹೋಗ ಗೊಡುವುದಿಲ್ಲ. ಆದ್ದರಿಂದಲೇ ಅವರು ಜತೆಯಲ್ಲಿ ಕುಳಿತಿರುವಂತಿಲ್ಲ.

ಆದರೆ ಲೈಂಗಿಕ ಸ್ವಾತಂತ್ರ್ಯದ ಸನ್ನಿವೇಶವನ್ನು ಪರಿಮಳವೆಂಬಂತೆ ಆಘ್ರಾಣಿಸುವ ಹಲವು ಭಾರತೀಯರು ಇಂತಹ "ಸುಧಾರಣೆ"ಗಿಳಿಯಬೇಕೆಂದು ತಾವೂ ತಮ್ಮ ಮಕ್ಕಳಿಗೆ ಆ ತೆರನಾದ ಪ್ರಚೋದನೆ ಕೊಡತೊಡಗುತ್ತಾರೆ. ಆದರೆ ಅದೃಷ್ಟವಶಾತ್ ಅದು ಇನ್ನೂ ಸಾರ್ವತ್ರಿಕವಾಗಿ ಹಬ್ಬಿಲ್ಲ. ಎಷ್ಟು ದಿನ ಹೀಗೆಯೇ ಉಳಿಯುವುದೋ ಹೇಳುವಂತಿಲ್ಲ.

ಇಲ್ಲಿ ಸ್ತ್ರೀಯರಿಗೆ ಪ್ರತ್ಯೇಕ ಶಾಲಾ ಕಾಲೇಜುಗಳನ್ನು ಏಕೆ ಮಾಡು ತ್ತಾರೆ ಎಂದು ನೀನು ಕೇಳಬಹುದು.

ಇತರ ದೇಶಗಳಲ್ಲೂ ಹೀಗೆ ಪ್ರತ್ಯೇಕ ಸಂಸ್ಥೆಗಳನ್ನು ಅವರಿಗಾಗಿ ಸ್ಥಾಪಿ ಸುವುದಿದೆ. ಇಲ್ಲಿ ಹಾಗೆ ಮಾಡುವುದಕ್ಕಿರುವ ಕಾರಣವನ್ನು ನಾನು ಕೆಲವು ಮಟ್ಟಿಗೆ ಊಹಿಸಿದ್ದೇನೆ.

ಇಲ್ಲಿಯ ವಿದ್ಯಾರ್ಥಿಗಳು, ಪೌರ್ವಾತ್ಯ ಸಿದ್ಧಾಂತವನ್ನು ಪೂರ್ತಿ

ನ್ನೈಗೂಡಿಸಿಕೊಳ್ಳದೆ, ಆದರೆ ಸಾಮಾಜಿಕ ಕಟ್ಟಳೆಯಿಂದಾಗಿ, ಅದನ್ನು ಬಿಡಲಾರದೆ ಇರುವ ಸಂದರ್ಭ, ಅವರ ಮನಸ್ಸಿನಲ್ಲಿ ಸ್ತ್ರೀ ಸಮುದಾಯದ ಕುರಿತಾದ ಒಂದು ರೀತಿಯ ವಿಚಿತ್ರ ವಿಕಾರವುಂಟಾಗಲು ಸಾಧ್ಯವಿದೆ. ಅಂದರೆ ತಮ್ಮ ಮನದಂತರಾಳದ ಇಚ್ಛೆ ಪೂರೈಕೆಯಾಗದ ಸೇಡನ್ನು ಸ್ತ್ರೀಯರಿಗೆ ಚೇಷ್ಟೆಮಾಡಿ ತೀರಿಸಿಕೊಳ್ಳುತ್ತಾರೆ. ಆದ್ದರಿಂದಲೇ ಬಹುಶಃ ಇಲ್ಲಿಯ ವಿದ್ಯಾರ್ಥಿನಿಯರು ಪ್ರತ್ಯೇಕವಾಗಿ ಕಲಿಯಲು ಇಷ್ಟಪಡುತ್ತಾರೆ. ಇದೇ ಒಂದು ಕಾರಣವಾಗಿರಬಹುದು.

ಒಟ್ಟಿನಲ್ಲಿ ನನ್ನ ಪತ್ರಗಳಲ್ಲಿ ಹಲವು ಕಡೆ ನಾನು ಬರೆದಂತೆ, ಇತ್ತೀಚೆಗಿನ ವಿದ್ಯಮಾನಗಳನ್ನು ನೋಡಿದಾಗ, ಇಲ್ಲಿಯ ಯುವಕ, ಯುವತಿಯರ ಪವಿತ್ರತೆಯ ಭವ್ಯ ಕೋಟೆಯಲ್ಲಿ ಕೆಲವು ಬಿರುಕುಗಳು ಕಾಣುತ್ತಿವೆ. ಇದನ್ನು ತಡೆಯುವವರು ಯಾರೋ ಯಾರಿಗೆ ಗೊತ್ತು?

ಸಿಲ್ವರ್, ಇನ್ನು ನಿನ್ನನ್ನು ಇಲ್ಲಿಯ ಶಿಕ್ಷಣದ ಇನ್ನೊಂದು ಬದಿಗೆ ಕೊಂಡೊಯ್ಯುತ್ತೇನೆ. ಅದೇ ಇಲ್ಲಿಯ ಶೈಕ್ಷಣಿಕ ಆಡಳಿತೆ.

ಇಲ್ಲಿ ಶಿಕ್ಷಣವು ಕೇಂದ್ರ ಮತ್ತು ಪ್ರಾಂತ್ಯ ಸರಕಾರಗಳ ಭದ್ರ ಮುಷ್ಟಿಯೊಳಗಿದೆ. ಸರಕಾರವೇ ಶಿಕ್ಷಣದ ಧೋರಣೆಯನ್ನು ರೂಪಿಸುವುದು. ಕಲೆ ಮತ್ತು ವಿಜ್ಞಾನದ ಕಾಲೇಜುಗಳನ್ನು ಪ್ರಾರಂಭಿಸಲು ವಿಶ್ವ ವಿದ್ಯಾಲಯಗಳು ಒಪ್ಪಿಗೆ ನೀಡಬೇಕಾದರೂ ತಾಂತ್ರಿಕ ಕಾಲೇಜುಗಳಿಗೆ ಸರಕಾರವೇ ಒಪ್ಪಿಗೆ ನೀಡಬೇಕು. ಅಲ್ಲದೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳನ್ನೂ ಮತ್ತು ಹೈಸ್ಕೂಲುಗಳನ್ನೂ ಪ್ರಾರಂಭಿಸಲು ಸರಕಾರದ ಶಿಕ್ಷಣ ಇಲಾಖೆಯೇ ಅನುಮತಿಯನ್ನು ನೀಡಬೇಕು.

ಎಲ್ಲಾ ತರದ ಕಾಲೇಜುಗಳಿಗೆ ಅಫಿಲಿಯೇಶನ್ ನೀಡುವುದು ವಿಶ್ವ ವಿದ್ಯಾಲಯಗಳು-ಎಲ್ಲಾ ಕೆಳಮಟ್ಟದ ವಿದ್ಯಾ ಸಂಸ್ಥೆಗಳಿಗೆ ಮಂಜುರಾತಿ ಅಥವಾ ಮಾನ್ಯತೆ [Recognition] ಕೊಡುವುದೂ ಸರಕಾರವೇ.

ಕಾಲೇಜುಗಳನ್ನು ಬಿಟ್ಟು ಎಲ್ಲಾ ಮಟ್ಟದ ಶಾಲೆಗಳ ಕುರಿತಾಗಿ ಹೇಳುವುದಿದ್ದರೆ ಇಂತಹ ಪಾಠಗಳಲ್ಲಿ ಇಂತಿಂತಹ ವಿಷಯಗಳೆಲ್ಲಾ ಒಳಗೊಂಡಿರಬೇಕೆಂಬ ವಿವರವಾದ ಪಾಠಪಟ್ಟಿಯನ್ನು ಸರಕಾರವು ತಯಾರಿಸಿ, ಅದರ ಆಧಾರದಲ್ಲಿ ಪಠ್ಯ ಪುಸ್ತಕಗಳು ಬರೆಯಲ್ಪಡಬೇಕೆಂದು ಆದೇಶ ನೀಡುವುದು.

ಕೆಲವೊಂದು ಪ್ರಾಂತ್ಯಗಳಲ್ಲಿ ಕೆಲವೊಂದು ಪಠ್ಯ ಪುಸ್ತಕಗಳ ಪಟ್ಟಿ ನೀಡಿ ಬೇಕಾದ್ದನ್ನು ಆರಿಸಿಕೊಳ್ಳಬಹುದೆಂದು ಸರಕಾರಗಳು ನಿಯಮಿಸಿದರೆ ಕೆಲವು ಪ್ರಾಂತ್ಯಗಳಲ್ಲಿ ಇಂತಿಂತಹ ಊರುಗಳಲ್ಲಿ ಇಂತಿಂತಹ ಪಠ್ಯ ಪುಸ್ತಕಗಳನ್ನೇ ಉಪಯೋಗಿಸಬೇಕೆಂದು ನಿಯಮಿಸುವುದಿದೆ.

ಪಾಠದ ರೀತಿ ನೀತಿಗಳನ್ನೂ ಸರಕಾರವೇ ನಿಯಮಿಸುವುದು. ಸರಕಾರದ ಗೆರೆ ಮೀರಿ ಉಪಾಧ್ಯಾಯನು ಚಾಚೂ ಅತ್ತಿತ್ತ ಚಲಿಸುವಂತಿಲ್ಲ.

ಶಾಲೆಗಳಿಗೆ ಬೇಕಾದ ಸಹಾಯಧನಗಳನ್ನು ನೀಡುವುದು ಅಥವಾ ಪ್ರೌಢ ಶಾಲಾಂತ್ಯದ ಪರೀಕ್ಷೆ ನಡೆಸುವುದು, ಉಪಾಧ್ಯಾಯರ ನೇಮಕವನ್ನು ಮಂಜೂರು ಮಾಡುವುದು ಇತ್ಯಾದಿ ಸಕಲ ಅಧಿಕಾರಗಳನ್ನೂ ಸರಕಾರವೇ ಹಿಡಿದುಕೊಂಡಿದೆ.

ಹೀಗೆ ಇಲ್ಲಿಯ ಶಿಕ್ಷಣದಲ್ಲಿ ಉಪಾಧ್ಯಾಯನು ತನ್ನ ಸ್ವಂತ ಪ್ರತಿಭೆಯನ್ನು ತೋರುತ್ತಾ ಉತ್ತಮವಾದ ದಾರಿಯನ್ನು ಅನುಸರಿಸಲು ಅಧಿಕಾರವುಳ್ಳವನಾಗಿಲ್ಲ. ಆತನು ಹೇಗೆ ಕಲಿಸಿದರೆ ಉತ್ತಮವೆಂದು ಆತನಿಗಿಂತಲೂ ಹೆಚ್ಚಾಗಿ ಸರಕಾರಕ್ಕೆ ತಿಳಿದಿದೆ ಎಂಬುದು ಸರಕಾರದ ನಿರೀಕ್ಷಣೆ. ಆದ್ದರಿಂದ ಸರಕಾರದ ಆದೇಶಕ್ಕನುಸಾರವೇ ಆತನು ವರ್ತಿಸಬೇಕು.

ಕಮ್ಯುನಿಸ್ಟ್ ಅಥವಾ ಸೈನಿಕ ಸರ್ವಾಧಿಕಾರಗಳಿರುವಲ್ಲಿ ಸರಕಾರದ ನಿಯಂತ್ರಣವು ಶಿಕ್ಷಣ ಕ್ಷೇತ್ರದ ಮೇಲೆ ಇನ್ನಷ್ಟು ಬಿಗುವಾಗಿರಬಹುದು. ಆದರೆ ಪ್ರಜಾಪ್ರಭುತ್ವವಾದೀ ರಾಷ್ಟ್ರಗಳ ಪೈಕಿ, ಶಿಕ್ಷಣದ ಮೇಲೆ ಇಷ್ಟು ಅಧಿಕಾರವನ್ನು ಹೇರುವ ಸರಕಾರಗಳು ಬಹಳ ಮಟ್ಟಿಗೆ ಬೇರೆ ಇರಲಾರವು ಎಂಬುದಾಗಿ ನನಗೆ ಅನ್ನಿಸುತ್ತಿದೆ. ನಾನು ತಪ್ಪಿರಲೂಬಹುದು–ಅಂತೂ ನನ್ನ ಅನುಭವ ಹಾಗೆ.

ಈ ರೀತಿ ಪ್ರಾಮುಖ್ಯವಾದ ಕ್ಷೇತ್ರದ ಮೇಲೆ ಸರಕಾರವು ತನ್ನ ಅಂಕೆಯನ್ನಿಟ್ಟುಕೊಂಡಿರಬೇಕಿದ್ದರೆ ಸರಕಾರದ ಧೋರಣೆಗಳು ಎಷ್ಟು ಜಾಗ್ರತೆಯಿಂದ, ಅನುಭವದ ಹಿನ್ನೆಲೆಯಲ್ಲಿ, ದೂರದರ್ಶಿತ್ವದಿಂದ ರೂಪಿಸಿದವುಗಳಾಗಿರಬೇಕು ಎಂಬುದನ್ನು ನೀನು ಊಹಿಸಿಯೇ ತಿಳಿದುಕೊಳ್ಳಬಹುದು.

ಆದರೆ ಗೆಳೆಯ, ಇಲ್ಲಿ ಶಿಕ್ಷಣವು ರಾಜಕಾರಣಿಗಳ ಚದುರಂಗದಾಟದ ಒಂದು ಕಾಯಾಗಿ (Chessman) ನಿಂತು ಬಿಟ್ಟಿದೆ. ಇಲ್ಲಿಯ ರಾಜಕಾರಣಿಗಳು ತಮ್ಮ ಅಧಿಕಾರವನ್ನು ಬಲಪಡಿಸುವ ಅಥವಾ ಬೆಳೆಸುವ ಸಾಧನ

ವಾಗಿ ಅದನ್ನು ಉಪಯೋಗಿಸುತ್ತಾರೆಯೇ ವಿನಹ, ತಮ್ಮ ರಾಷ್ಟ್ರದ ಸರ್ವಾಂಗೀಣ ಬೆಳವಣಿಗೆಗಾಗಿರುವ ಅದ್ಭುತ ಸಾಧನವದು ಎಂಬುದಾಗಿ ಭಾವಿಸುತ್ತಿಲ್ಲ.

ಭಾರತದ ಜನತೆಯಲ್ಲೂ, ರಾಜಕಾರಣಿಗಳಲ್ಲೂ ಇಂದಿನ ಭಾರತದ ಶಿಕ್ಷಣ ಪದ್ಧತಿಯು, ಇಲ್ಲಿಯ ಜಾಯಮಾನಕ್ಕೆ ಹಿತವಾಗಿಲ್ಲವೆಂದೂ, ಭಾರತದ ಆಶೋತ್ತರಗಳನ್ನು ಪೂರೈಸಲು ಅದು ಸಮರ್ಥವಾಗಿಲ್ಲವೆಂದೂ ಒಂದು ರೀತಿಯ ಅತೃಪ್ತಿಯಿದೆ. ರಾಜಕಾರಣಿಗಳು ಈ ಕುರಿತಾಗಿ ದಿನ ಬಿಡದೆ ಹೋದಲ್ಲೆಲ್ಲಾ ಬೊಬ್ಬಿಡುತ್ತಿದ್ದಾರೆ.

ಜನತೆಯನ್ನು ಕೃತ್ರಿಮವಾಗಿ ತೃಪ್ತಿ ಪಡಿಸುವುದಕ್ಕಾಗಿಯೋ ಅಥವಾ ಇನ್ನಾವುದೋ ಸ್ವಾರ್ಥದ ಬೇಳೆ ಬೇಯಿಸುವುದಕ್ಕಾಗಿಯೋ, ಅಥವಾ ನಿಜವಾದ ಅಭಿವೃದ್ಧಿಯ ದೃಷ್ಟಿಯಿಂದಲೋ ವಿವಿಧ ಪ್ರಾಂತ್ಯಗಳ ವಿದ್ಯಾ ಮಂತ್ರಿಗಳು ವಿವಿಧವಾದ ಹೊಸ ಹೊಸ ಧೋರಣೆಗಳನ್ನು ಜ್ಯಾರಿಗೊಳಿಸುತ್ತಾರೆ.

ಈ ವಿದ್ಯಾ ಮಂತ್ರಿಗಳಾದರೂ ಯಾರು ಎಂದು ನೀನು ಕೇಳಬಹುದು. ಶಿಕ್ಷಣದ ಕ್ಷೇತ್ರಕ್ಕೆ ಸಾಧ್ಯವಿರುವಷ್ಟು ದೂರವಿದ್ದು, ಅದರ ಗಂಧಗಾಳಿ ಗೊತ್ತಿಲ್ಲದವರನ್ನೇ ಶಿಕ್ಷಣ ಮಂತ್ರಿಯಾಗಿ ಮಾಡುವುದು ಭಾರತದ ಆಧುನಿಕ ಫ್ಯಾಶನ್ನುಗಳಲ್ಲೊಂದು. ಅವರು ಶಿಕ್ಷಣ ರಂಗದಲ್ಲಿ ಸಮರ್ಥವಾಗಿ ಕೆಲಸ ಮಾಡುವುದು ಏನೇನೂ ಮುಖ್ಯವಲ್ಲ–ಆದರೆ ಆ ಪ್ರಾಂತ್ಯದ ಮುಖ್ಯ ಮಂತ್ರಿಯ ಅಧಿಕಾರ ಹಸ್ತವನ್ನು ಬಲಪಡಿಸಲು ಆತನು ನೆರವಾಗುವನಾದರೆ ಆತನು ಅತ್ಯಂತ ಸಮರ್ಥನಾದ ಶಿಕ್ಷಣ ಸಚಿವನೆನಿಸುವನು.

ಚುನಾವಣೆಯ ಕಾರಣದಿಂದಲಾಗಿ ಅಥವಾ ಒಳಜಗಳಗಳ ಕಾರಣದಿಂದಲಾಗಿ ಇತರ ದೇಶಗಳಂತೆಯೇ ಭಾರತದ ಪ್ರಾಂತ್ಯಗಳಲ್ಲೂ ಸರಕಾರಗಳು ಬದಲಾಗುವುದಿದೆ. ಆಗ ವಿದ್ಯಾಮಂತ್ರಿಯಾಗಿ ಬೇರೊಬ್ಬನು ಬಂದನೆಂದರೆ, ಆತನಿಗೆ ಬೇಕಾದ ಸುಧಾರಣೆ ಮಾಡಿಕೊಳ್ಳಲು ಅನುವಾಯಿತೆಂದರ್ಥ. ಹೀಗೆ ಆತನು ಕೂಡಲೇ ವಿದ್ಯಾ ಕ್ಷೇತ್ರದಲ್ಲಿ "ಸುಧಾರಣೆ"ಯನ್ನು ಮಾಡುವನು. ಪಗಡೆಕಾಯಿಯಂತೆ ದಿನ ಬೆಳಗಾಗಬೇಕಾದರೆ, ವಿದ್ಯಾ ಧೋರಣೆಯು ಬದಲಾಗಿ ಹೊಸ ಸಚಿವನು ಹೊಸ ಒಂದು ಧೋರಣೆಯನ್ನು ರೂಪಿಸುವನು. ಆ ಬದಲಾವಣೆಯು ಯಾರಿಗೆ ಕೂಡಾ ತಿಳಿಯದಿರಬಹುದು.

ಹೀಗೆ ಸಂಯುಕ್ತ ಅಮೇರಿಕದ ಜನರು ಕಾರನ್ನೂ ಸತಿಪತಿಯರನ್ನೂ

ಕ್ಷಣ ಕ್ಷಣ ಬದಲಿಸಿಕೊಂಡಂತೆಯೇ ಭಾರತದ ಶಿಕ್ಷಣ ಧೋರಣೆಗಳೂ, ಶಿಕ್ಷಣ ಕಾಯಿದೆಗಳೂ ಕ್ಷಣ ಕ್ಷಣ ಬದಲಿಸಲ್ಪಡುತ್ತಿವೆ.

ಬಾಲಕರ ಜೀವನವನ್ನೇ ರೂಪಿಸುವಂಥಾದ್ದು ಶಿಕ್ಷಣ. ಆ ಬಾಲಕರ ಮೂಲಕವಾಗಿ ಇಡಿಯ ರಾಷ್ಟ್ರದ ಯೋಗ್ಯತೆಗಳನ್ನೂ, ಶೀಲ ಸಂಪತ್ತನ್ನೂ ಬೆಳೆಸುವಂಥ ಸಾಧನವೇ ವಿದ್ಯೆ. ಹಾಗಿರುತ್ತಾ, ಅಂತಹ ಪ್ರಾಮುಖ್ಯತೆಯುಳ್ಳ ವಿದ್ಯೆಯನ್ನುಯಾವುದೇ ಪ್ರಯೋಗ ವ, ಅನುಭವಗಳ ಹಿನ್ನೆಲೆಯಿಲ್ಲದೆ ಗೊತ್ತು ಗುರಿಯಿಲ್ಲದೆ ಬದಲಿಸುತ್ತ ಹೋಗುವುದೆಂದರೆ ಎಷ್ಟು ಅವಿವೇಕದ ಕಾರ್ಯ!

ಭಾರತದ ಇಂದಿನ ಶಿಕ್ಷಣ ವಿಧಾನದಲ್ಲಿ ಯಾವುದೇ ಬದಲಾವಣೆಯ ಅಗತ್ಯವಿಲ್ಲವೆಂಬುದು ಸತ್ಯಕ್ಕೆ ದೂರವಾದ ಮಾತು. ಆದರೆ ಇಲ್ಲಿಯ ಸಂಸ್ಕೃತಿ, ಆಶೋತ್ತರಗಳು, ಜನಜೀವನ, ಧರ್ಮ ಇವುಗಳಿಗೆ ಸರಿಹೊಂದುವ ವಿದ್ಯಾ ಪದ್ಧತಿಯನ್ನು ಯಾವ ಪ್ರಯೋಗವೂ ಇಲ್ಲದೆ, ಅಷ್ಟೊಂದು ಸುಲಭವಾಗಿ ಕಂಡುಕೊಳ್ಳಬಹುದೆಂಬುದೂ ಸತ್ಯಕ್ಕೆ ದೂರವಾದ ಮಾತು.

ಮುಂದರಿದ ಪಾಶ್ಚಾತ್ಯ ದೇಶಗಳಲ್ಲಾದರೋ, ಆಯ್ದುಕೊಂಡ ಕೆಲ ವೊಂದು ಶಾಲೆಗಳಲ್ಲಿ, ವಿವಿಧ ಸನ್ನಿವೇಶಗಳೆಡೆಯಲ್ಲಿ ದೀರ್ಘಕಾಲದ ಪ್ರಯೋ ಗವನ್ನು ಮಾಡಿ, ಅದರ ಫಲಿತಾಂಶವು ಹಿಂದಿನ ಕೊರತೆಗಳನ್ನು ತೃಪ್ತಿಕರ ವಾಗಿ ಬಗೆಹರಿಸುವುದು ಎಂದು ಗೊತ್ತಾದರೆ ಮಾತ್ರವೇ ಅದನ್ನು ವ್ಯಾಪಕವಾಗಿ ರಾಷ್ಟ್ರದ ಎಲ್ಲಾ ಭಾಗಗಳಿಗೂ ಅನ್ವಯಿಸುವರು, ಅಲ್ಲವೇ? ಆದರೆ ಇಲ್ಲಿ ಅಂತಹ ಒಂದೇ ಒಂದು ಉದಾಹರಣೆಯೂ ನನಗೆ ಕಾಣುವುದಿಲ್ಲ.

ಮಹಾತ್ಮಾ ಗಾಂಧೀಜಿಯವರ ಸಿದ್ಧಾಂತಗಳ ಮೇಲೆ ಆಧರಿತವಾಗಿದ್ದು, ಒಂದು ರೀತಿಯಲ್ಲಿ ಕೈಗಾರಿಕೆಗಳನ್ನು ಬೆಳೆಸಿಕೊಂಡಿರುವ ಬುನಾದಿ ಶಿಕ್ಷಣ [Basic Education) ಎಂಬುದೇ ಭಾರತಕ್ಕೆ ಬೇಕಾದ ಶಿಕ್ಷಣವೆಂದು ಕೊಂಡು ರಾಷ್ಟ್ರದ ಹಲವು ಪ್ರಾಂತ್ಯಗಳಲ್ಲಿ ಅದನ್ನು ಒಮ್ಮೆ ಜ್ಯಾರಿಗೊಳಿಸ ಲಾಯಿತು.

ಅವುಗಳಿಗೆ ಬೇಕಾದ ಉಪಕರಣಗಳಿಲ್ಲ–ತರಬೇತಾದ ಉಪಾಧ್ಯಾಯ ರಿಲ್ಲ–ಅವಶ್ಯವಿರುವ ಆರ್ಥಿಕ ಸವಲತ್ತೂ ಇಲ್ಲ. ಪರಿಸ್ಥಿತಿ ಹೀಗಿದ್ದರೂ ಬುನಾದಿ ಶಿಕ್ಷಣವೇ ಆಗಬೇಕೆಂದು ಸರಕಾರ ಒತ್ತಾಯಿಸಿತು. ಸರಕಾರಿ ಅಧಿ ಕಾರಿಗಳೂ ಬುನಾದಿ ಶಿಕ್ಷಣ, ಬುನಾದಿ ಶಿಕ್ಷಣ ಎಂದು ಹೋದ ಹೋದಲ್ಲಿ

ಬೊಬ್ಬಿಡತೊಡಗಿದರು. ಆದರೆ ಅದನ್ನು ಯಥಾರ್ಥವಾಗಿ ಕಾರ್ಯಕಾರಿಗೊಳಿಸಲು ಎಷ್ಟು ಜನ ಅಧಿಕಾರಿಗಳು ದುಡಿದರು ಎಂದು ಕೈಬೆರಳಿನಲ್ಲೆಣಿಸಬಹುದು.

ಹಾಂ! ಮರೆಯಿತು, ಗೆಳೆಯಾ. ಬುನಾದಿ ಶಿಕ್ಷಣವೆಂದರೆ ಏನು ಎಂದು ವಿವರಿಸದೇನೇ ನಾನು ಮುಂದರಿದೆ. ಪರಿಣಾಮವಾಗಿ ನಿನ್ನ ಬೈಗಳು ಕೇಳಬೇಕು. ಆ ತೊಂದರೆ ಬೇಡ; ಹೇಳಿಬಿಡುತ್ತೇನೆ.

ಮಗುವಿಗೆ, ಅದು ಮೆಚ್ಚುವ ಒಂದು ಚಟುವಟಿಕೆಯ ಮೂಲಕ ವಿದ್ಯಾಪ್ರದಾನ ಮಾಡಿದ್ದರಿಂದ ಅದು ಬಹಳ ಪರಿಣಾಮಕಾರಿಯಾಗುವುದೆಂಬುದು ಶಿಕ್ಷಣದಲ್ಲಿ ಒಂದು ಪ್ರಾಮುಖ್ಯ ನಿಯಮವಷ್ಟೆ! ಮಗುವು ಕೇವಲ ಬೊಂಬೆಯಂತೆ ಯಂತ್ರದಂತೆ ಮಾನಸಿಕ ಪಾಲುಗಾರಿಕೆಯಿಲ್ಲದೆ ನೀಡುವ ವಿದ್ಯೆ ಫಲಕಾರಿಯಲ್ಲ ಎಂಬುದು ಸ್ವೀಕೃತ ಸಿದ್ಧಾಂತವೇ ಆಗಿದೆ.

ಇಂತಹ ಚಟುವಟಿಕೆಯು ಆಟರೂಪವಾಗಿರಬೇಕು. ಅಥವಾ ಮಗು ಮೆಚ್ಚುವ ಒಂದು ಕಲೆ ಯಾ ಕೈಗಾರಿಕೆಯ ರೂಪದಲ್ಲಿರಬೇಕೆಂಬುದು ನಮ್ಮಲ್ಲಿಯ ಸಿದ್ಧಾಂತ. ಅದಕ್ಕೆ ಮಹಾತ್ಮಾ ಗಾಂಧೀಜಿಯವರು ಹಾಗೂ ಬುನಾದಿ ಶಿಕ್ಷಣ ಕ್ರಮದ ಪ್ರಾರಂಭಿಕರು ಒಂದು ಬದಲಾವಣೆ ಸೂಚಿಸಿದರು. "ಭಾರತವು ಬಡ ದೇಶ-ಎಲ್ಲಮಕ್ಕಳಿಗೂ ವಿದ್ಯಾಭ್ಯಾಸ ಕೊಡುವುದು ಹೇಗೆಂಬುದೇ ಒಂದು ಸಮಸ್ಯೆ. ಆದ್ದರಿಂದ ಆಟ ಇತ್ಯಾದಿಗಳಿಂದ ಮಗುವಿನ ಸಮಯ ಕೆಡಿಸುವುದಕ್ಕಿಂತ ಮತ್ತು ರಾಷ್ಟ್ರೀಯ ನಷ್ಟವುಂಟುಮಾಡುವುದಕ್ಕಿಂತ ಮಕ್ಕಳೂ ನೂಲುವುದು, ನೇಯುವುದು, ಮೊದಲಾದ ಕೈಗಾರಿಕೆಗಳನ್ನು ಕಲಿಯುತ್ತ ಅವುಗಳ ಸುತ್ತಲೂ ಇತರ ವಿದ್ಯಾಭ್ಯಾಸದ ಕ್ರಮವನ್ನು ಹೊಸೆದುಬಿಟ್ಟರೆ ಒಂದು ಬದಿಯಿಂದ ರಾಷ್ಟ್ರೀಯ ಉತ್ಪತ್ತಿಯೂ ಆಯಿತು—ಇನ್ನೊಂದು ಬದಿಯಿಂದ ಚಟುವಟಿಕೆಯಿಂದ ಕೂಡಿದ ವಿದ್ಯಾಭ್ಯಾಸವೂ ದೊರೆತಂತಾಯಿತು" ಎಂಬುದಾಗಿ ಅವರು ಅಭಿಪ್ರಾಯಪಟ್ಟರು.

ಆದರೆ ಎಲ್ಲ ಮಕ್ಕಳಿಗೂ ಒಂದೇ ಕೈಗಾರಿಕೆ ಹಿಡಿಸುವುದಿಲ್ಲವಾಗಿ–ಹಿಡಿಸದವರ ಉತ್ಸಾಹ ಕುಂಠಿತವಾಗುವುದು–ಅವರ ಶಿಕ್ಷಣವೂ ಪರಿಣಾಮಕಾರಿಯಾಗುವುದಿಲ್ಲ. ಅಂತಹ ಶಿಕ್ಷಣಕ್ಕೆ ಬೇಕಾದ ಉಪಕರಣಗಳೂ ಇಲ್ಲವಾದರೆ ಮತ್ತು ತರಬೇತಾದ ಉಪಾಧ್ಯಾಯರ ಕೊರತೆಯೂ ಇದ್ದರೆ ಪರಿಸ್ಥಿತಿಯನ್ನು ವಿವರಿಸುವುದಕ್ಕಿಂತಲೂ ಊಹಿಸುವುದೇ ಮೇಲು.

ಪರಿಣಾಮ, ಕೆಲವು ವರ್ಷ ಪ್ರಾಥಮಿಕ ಶಾಲೆಗಳ ಮೂಲಕ ಹಾದು

ಹೋದ ಮಿಲಿಯಾಂತರ ಬಾಲಕ ಬಾಲಕಿಯರು ಸಾಕಷ್ಟು ಶೈಕ್ಷಣಿಕ ಯೋಗ್ಯತೆಯಿಲ್ಲದೆ ಮೇಲಕ್ಕೆ ಸಾಗಿದರು—ಸಾಗಿ ರಾಷ್ಟ್ರಕ್ಕೆ ಅವರು ಭಾರವಾದರು.

ಬುನಾದಿ ಶಿಕ್ಷಣವೇ ದೋಷಕರವೆಂಬುದು ಇದರರ್ಥವಲ್ಲ ಪ್ರಾಯಶಃ ವಿವಿಧ ರೀತಿಯ ವೃತ್ತಿಯನ್ನು ಮಕ್ಕಳ ಅಭಿರುಚಿಗನುಸಾರ ಆರಿಸಿಕೊಂಡು, ಆ ಬಗ್ಗಾಗಿ ಹೇರಳ ದ್ರವ್ಯವನ್ನೂ ವಿನಿಯೋಗಿಸಿ, ತರಬೇತು ಹೊಂದಿದ ಉತ್ತಮ ಉಪಾಧ್ಯಾಯರನ್ನೂ ಶಾಲೆಗಳಿಗೆ ಒದಗಿಸಿಕೊಡುತ್ತಿದ್ದರೆ ಅದು ಬಹುಶಃ ಜಯಪ್ರದವಾಗುತ್ತಿತ್ತು. ಹೇಗೊ ಇರಲಿ-ಸದ್ಯದ ಪರಿಸ್ಥಿತಿಯಲ್ಲಿ ಹೀಗೆ ಹಾನಿಯುಂಟಾಯಿತು.

ಇದು ಬದಲಾವಣೆಯ ಒಂದು ಫಲ. ಹೀಗೆ ಎಲ್ಲಾ ಬದಲಾವಣೆಯ ಫಲಗಳನ್ನು ಬಣ್ಣಿಸಲು ನಾನು ಸಮರ್ಥನಲ್ಲ. ಆದರೆ ಯೋಜನೆಯಿಲ್ಲದ ಅಂತಹ ಬದಲಾವಣೆಗಳ ಕೆಲವು ಪಟ್ಟಿಗಳನ್ನು ಮಾತ್ರ ನಿನ್ನ ಮುಂದಿಡುತ್ತೇನೆ-

ಒಂದು ಪ್ರಾಂತ್ಯದಲ್ಲಿ, ಮಕ್ಕಳಿಗೆ ಮೂರೇ ಗಂಟೆ ಪಾಠ ಸಾಕು-ಉಳಿದರ್ಧ ದಿನ ಅವರು ಹಿರಿಯರ ವೃತ್ತಿಯನ್ನು ಕಲಿಯುವುದುತ್ತಮ ಎಂಬ ನಿಯಮವು ಒಮ್ಮೆ ಜ್ಯಾರಿಗೊಳಿಸಲ್ಪಟ್ಟಿತು. ಇನ್ನೊಬ್ಬರು ವಿದ್ಯಾ ಸಚಿವರು ಬಂದು ಅದನ್ನು ತೆಗೆದು ಹಾಕಿದರು.

ಸೆಕೆಂಡರಿ ಶಿಕ್ಷಣವನ್ನು 11 ವರ್ಷಗಳಲ್ಲಿ ಮುಗಿಸುವ ನಿಯಮವಿತ್ತು. ಅದು 10 ವರ್ಷಗಳಿಗಿಳಿಯಿತು. ಮಾಧ್ಯಮಿಕ ಶಿಕ್ಷಣವು 8 ವರ್ಷಗಳಲ್ಲಿ ಮುಗಿಯುವುದಿತ್ತು. ಅದನ್ನು ಏಳಕ್ಕೆ ಇಳಿಸಲಾಯಿತು. ಸೆಕೆಂಡರಿ ಶಿಕ್ಷಣ ಮುಗಿಯಲು 11 ವರ್ಷ ಬೇಕೆಂಬುದಕ್ಕೆ ಚಳವಳ ಈಗಾಗಲೇ ಭರದಿಂದ ನಡೆಯುತ್ತಿದೆ.

ಶಾಲೆಗಳಲ್ಲಿ ಇಂಗ್ಲಿಷ್ ಭಾಷೆಯ ಸ್ಥಾನದ ವಿಷಯದಲ್ಲಿ ಬಹಳ ಹೊಯ್ದಾಟವಿದೆ. ಕೆಲವು ಪ್ರಾಂತ್ಯಗಳು ಇಂಗ್ಲಿಷ್ ಭಾಷೆಯೇ ಬೇಡ ಎಂಬ ನಿಯಮವನ್ನೊಮ್ಮೆ ತರುವರು. ಇನ್ನೊಂದು ರಾಜಕೀಯ ಪಂಗಡದವರು ಇದರ ವಿರುದ್ಧವಾಗಿ ಚಳವಳ ಪ್ರಾರಂಭಿಸುವರು ಯಾ ಒತ್ತಡ ಹೇರುವರು. ಪರಿಣಾಮವಾಗಿ ಇಂಗ್ಲಿಷ್ ಬೇಕು-ಆದರೆ 8ನೇ ದರ್ಜೆಯಲ್ಲಿ ಪ್ರಾರಂಭವಾದರೆ ಸಾಕು ಎಂದಾಗುವುದು. ಸ್ವಲ್ಪ ಸಮಯದಲ್ಲಿ 6 ಯಾ 7ನೇ ದರ್ಜೆಯಲ್ಲೇ ಕಲಿಸಬೇಕು ಎಂಬ ವಾದ ಮಂಡಿಸಲ್ಪಡುವುದು. 5ನೇ ದರ್ಜೆಯಲ್ಲೇ ಇಂಗ್ಲಿಷ್ ಶಿಕ್ಷಣ ನೀಡಬೇಕು ಎಂಬ ಮತ್ತೊಂದು ಅಭಿಪ್ರಾಯ ತಲೆ ಹಾಕುವುದು.

ಹಲವರು ಹಲವು ರೀತಿಯ ಅಭಿಪ್ರಾಯವನ್ನು ಮುಂದಿರಿಸುತ್ತಾರೆ. ಅವರು ಮಂಡಿಸುವ ಅಭಿಪ್ರಾಯಗಳು ಅನುಭವಜನ್ಯವಾದವುಗಳು ಎಂದೆನ್ನಲು ಸಾಧ್ಯವೇ ಇಲ್ಲ. ಅವರವರ ಚಪಲತೆಗಳೇ ಅವರವರ ಅಭಿಪ್ರಾಯಗಳಿಗೆ ಒಂದು ಕಾರಣವಾದರೆ, ತಮಗೆ ಯಾವುದೋ ರೀತಿಯ ಆರ್ಥಿಕ ಲಾಭವಾಗುವಂತೆ ಮಾಡಿಕೊಳ್ಳುವ ಯತ್ನವೇ ಇನ್ನೊಂದು ಕಾರಣ.

ವಿವಿಧ ರೀತಿಯ ಅಭಿಪ್ರಾಯಗಳಿದ್ದವರು ಆಡಳಿತದ ಪಕ್ಷದ ಮೇಲೆ ಸಾಕಷ್ಟು ಪ್ರಭಾವವಿದ್ದವರಾದರೆ ಸಾಕು–ವಿದ್ಯಾ ಸಚಿವರು ತಮ್ಮ ಅಭಿಪ್ರಾಯವನ್ನು ಸ್ವೀಕರಿಸುವಂತೆ ಮಾಡಿಯೇ ಬಿಡುತ್ತಾರೆ.

ಒಂದು ಸ್ವಾರಸ್ಯದ ಘಟನೆ ನಿನಗೆ ಬಣ್ಣಿಸುತ್ತೇನೆ, ಓದಿ ನೋಡು. ಒಂದು ದಿನ ನಾನು ಭಾರತದ ಒಂದು ಪ್ರಾಮುಖ್ಯ ಪ್ರಾಂತ್ಯದ ರಾಜಧಾನಿಯಿಂದ, ಬೇರೊಂದು ನಗರಕ್ಕೆ ರೈಲಿನಲ್ಲಿ ಪ್ರಯಾಣ ಬೆಳೆಸಿದ್ದೆ. ನಾನು 1ನೇ ತರಗತಿಯ ಡಬ್ಬಿಯಲ್ಲಿ ಪ್ರಯಾಣ ಬೆಳೆಸಿದ್ದೆ. ರೈಲು ಹೊರಡುವ ಅರ್ಧ ಗಂಟೆಗೆ ಮೊದಲೇ ನಾನು ನನ್ನ ಡಬ್ಬಿ ಹತ್ತಿದ್ದೆನಾಗಿ ಭಾರತದ ಕುರಿತಾಗಿ ಯೋಚನೆ ಮಾಡುತ್ತಿರಲು ತುಂಬಾ ಅವಕಾಶ ಸಿಕ್ಕಿತು.

ರೈಲು ಹೊರಡಲು 15 ಮಿನಿಟು ಇದೆಯೆನ್ನುವಾಗ ಕೆಲವು ಜನ ಮಹನೀಯರು ನನ್ನ ಡಬ್ಬಿಗೇ ಪ್ರವೇಶವಾದರು. ಅವರು ಒಮ್ಮೆ ಅವರ ಪ್ರಾಂತೀಯ ಭಾಷೆಯಲ್ಲಿಯೂ, ಎಡೆಯೆಡೆಯಲ್ಲಿ ಇಂಗ್ಲಿಷಿನಲ್ಲಿಯೂ ಮಾತನಾಡುತ್ತಿದ್ದರು. ನನ್ನೊಂದಿಗೆ ನನ್ನ ಗೆಳೆಯರಾರೂ ಇಲ್ಲದ್ದರಿಂದ ಅವರ ಮಾತಿನ ಪ್ರತಿ ಶಬ್ದಗಳ ಅರ್ಥ ನನಗಾಗದಿದ್ದರೂ, ಅದರ ಮುಖ್ಯ ಸಾರಾಂಶ ನನಗೆ ಅಭಿಪ್ರಾಯವಾಯಿತು. ಅವರು ಆಗಾಗ ಎದ್ದು ಬಿದ್ದು ನಗುತ್ತಿದ್ದರು.

ರೈಲು ಹೊರಡುವಾಗ ಅವರ ಪೈಕಿ, ಇಬ್ಬರೇ ಉಳಿದು ಇತರರು ಬಂಡಿಯಿಂದಿಳಿದು ಹೊರಟು ಹೋದರು. ತಮ್ಮ ಗೆಳೆಯರನ್ನು ಬೀಳ್ಕೊಡುವುದಕ್ಕಾಗಿ ಅವರು ಬಂದಿದ್ದರೆಂಬುದು ಸ್ಪಷ್ಟ.

ಅವರು ಇಳಿದು ಹೋದ ಮೇಲೆ, ಉಳಿದವರ ಕೂಡೆ ಇಂಗ್ಲಿಷ್‌ನಲ್ಲಿ ಮಾತನಾಡಿ ಹೆಚ್ಚಿನ ವಿವರ ತಿಳಿದುಕೊಂಡೆ.

ನಾನು ತಿಳಿದುಕೊಂಡ ವಿಷಯ ಹೀಗಿದೆ. ಆ ಪ್ರಯಾಣಿಕರಲ್ಲೊಬ್ಬರ ಹೆಸರು ದಯಾನಂದ. ಇನ್ನೊಬ್ಬರು ರಾಮಕೃಷ್ಣ ಎಂಬವರು. ದಯಾನಂದ

ಎಂಬವರು ದೊಡ್ಡ ಉದ್ಯಮಗಾರರು ಹಾಗೂ ಗ್ರಂಥ ಪ್ರಕಾಶಕರು. ಅದ ರಲ್ಲೂ ಶಾಲಾ ಪುಸ್ತಕಗಳ ಪ್ರಕಾಶನವು ಅವರ ವಿಶೇಷ ಕ್ಷೇತ್ರವಾಗಿತ್ತು. ರಾಮಕೃಷ್ಣ ಎಂಬವರು ಅವರ ಒಬ್ಬ ಗೆಳೆಯರು-ಅವರು ರಾಜಕೀಯ ವ್ಯಕ್ತಿ. ಸ್ವಲ್ಪ ಮಟ್ಟಿಗೆ ಪ್ರಭಾವಶಾಲಿ.

6ನೆ, 7ನೇ ದರ್ಜೆಯ ಮಕ್ಕಳ ಮಟ್ಟಕ್ಕೆ ಆಗುವ ರೀತಿಯ ಇಂಗ್ಲಿಷ್ ಪಠ್ಯಪುಸ್ತಕಗಳನ್ನು ಬರೆದ ಕೆಲವು ಮಹನೀಯರಿಂದ ಪ್ರಕಾಶನದ ಹಕ್ಕುಗ ಳನ್ನು ಈ ಮಹನೀಯರು ಕೊಂಡುಕೊಂಡಿದ್ದರಂತೆ. ಪ್ರಾಂತ್ಯದ 6, 7ನೇ ದರ್ಜೆಗಳಿಗೆ ಪಠ್ಯವಾಗಿ ಅದನ್ನಿಟ್ಟರೆ ಲಕ್ಷಾಂತರ ಪ್ರತಿಗಳು ಖರ್ಚಾಗಿ ಅವರಿಗೆ ಲಾಭ ಬರುವುದು ನಿಶ್ಚಯ. ಆದರೆ ಆ ಪ್ರಾಂತ್ಯದಲ್ಲಿ 8ನೇ ದರ್ಜೆಯಿಂದ ಇಂಗ್ಲಿಷ್ ಕಲಿಸಲು ಪ್ರಾರಂಭ. ಅದು ಅವರ ದಾರಿಯಲ್ಲಿ ಒಂದು ಕಂಟಕ ವಾಗಿತ್ತು. ಹಾಗಿರುತ್ತಾ ಆ ಇಂಗ್ಲಿಷ್ ಪಠ್ಯಪುಸ್ತಕಗಳನ್ನು ಏಕೆ ಕೊಂಡು ಕೊಂಡಿರಿ ಎಂದು ನಾನು ಕೇಳಿಯೇ ಬಿಟ್ಟೆ.

ಆ ಬರಹಗಾರರು ತೀವ್ರವಾದ ಆರ್ಥಿಕ ಮುಗ್ಗಟ್ಟಿನಲ್ಲಿದ್ದರಂತೆ. ಒಂದೊಂದು ಪುಸ್ತಕವನ್ನು ಕೇವಲ 50 ರೂಪಾಯಿಗೆ ಮಾರಲು ಸಿದ್ಧರಾದರು. ಆದ್ದರಿಂದಲೇ ಅದನ್ನು ಕೊಂಡುಕೊಳ್ಳಲು ಅವರು ಮುಂದಾಗಿ ಹಾಗೆಯೇ ಮಾಡಿದರು.

6 , 7ನೇ ದರ್ಜೆಗೆ ಇಂಗ್ಲಿಷನ್ನು ಕಲಿಸುವಂತೆ ಮಾಡಿದರೆ, ತಮಗೆ ಕುಳಿತಲ್ಲೇ ಸಹಸ್ರಾರು ರೂಪಾಯಿಗಳ ಲಾಭವಾಗುವುದಲ್ಲಾ ಎಂದವರ ಆಶೆ ಮತ್ತು ಆಗ್ರಹ. ಕಡಿಮೆಯೆಂದರೂ 50ರಿಂದ 75 ಸಾವಿರದ ತನಕ ತಮಗೆ ಲಾಭವಾಗುವುದೆಂದು ಅವರು ಅಂದಾಜು ಮಾಡುತ್ತಿದ್ದರು.

ಆದ್ದರಿಂದಲೇ ಅವರು ರಾಮಕೃಷ್ಣರೊಂದಿಗೆ ರಾಜಧಾನಿಗೆ ಬಂದು, ಅಲ್ಲಿಯ ಪ್ರಭಾವಶಾಲಿ, ರಾಜಕೀಯ ಸೂತ್ರಚಾಲಕರನ್ನು ಹಿಡಿದು, ವಿದ್ಯಾ ಸಚಿವರ ಹಾಗೂ ಸಚಿವ ಸಂಪುಟದ ಶೈಕ್ಷಣಿಕ ಧೋರಣೆಯನ್ನೇ ಬದಲಿಸಲು ಯತ್ನಿಸಿದ್ದರು. ಅದಕ್ಕಾಗಿ ಆ ನಗರದ ಶಿಕ್ಷಣ ತಜ್ಞರ ಬೆಂಬಲವನ್ನೂ ಅವರು ಪಡೆದುಕೊಂಡರು. ಅವರಿಬ್ಬರು ಮತ್ತು ಅವರ ಸಂಗಡಿಗರು ದಯಾನಂದರನ್ನು ಪ್ರೇಮಾಭಿಮಾನಗಳಿಂದ ಬೀಳ್ಕೊಡಲು ರೈಲ್ವೆ ನಿಲ್ದಾಣಕ್ಕೆ ಬಂದರಂತೆ.

ಅವರ ಪ್ರಯತ್ನದ ಪರಿಣಾಮ ಏನಾಯಿತು ಎಂದು ಕೇಳಿದೆ. ಅವರು ಬಹಳ ಸಡಗರ ಹಾಗೂ ಗೆಲುವಿನಿಂದ "ನಾನು ಯತ್ನಿಸಿದರೆ ಸೋಲೆಂಬುದೇ

ಇಲ್ಲ; ಗೆದ್ದೇಬಿಟ್ಟೆ!" ಎಂದು ಜಂಭ ಕೊಚ್ಚಿಕೊಂಡರು.

ಮತ್ತೆ ಹಲವಾರು ಪ್ರಶ್ನೆಗಳನ್ನು ಹಾಕಿ, ಹೆಚ್ಚಿನ ವಿವರಗಳನ್ನು ತಿಳಿದು ಕೊಂಡೆ. ಮೊದಲು ಆ ಪ್ರಾಂತ್ಯದಲ್ಲಿ 5ನೇ ತರಗತಿಯಿಂದಲೇ ಇಂಗ್ಲಿಷ್ ಶಿಕ್ಷಣವು ಕಲಿಸಲ್ಪಡುತ್ತಿತ್ತು. ಆದರೆ ಯಾರದೋ ರಾಜಕೀಯ ಒತ್ತಡಕ್ಕೆ ಬಲಿಬಿದ್ದು, 8ನೇ ತರಗತಿಯಿಂದ ಇಂಗ್ಲಿಷ್ ಕಲಿಸಿದರೆ ಸಾಕೆಂದು ಕೇವಲ ಒಂದು ವರ್ಷದ ಹಿಂದೆ ವಿದ್ಯಾ ಸಚಿವರು ನಿರ್ಣಯಿಸಿದ್ದರು. ಅದೇ ರೀತಿಯ ಅನುಜ್ಞೆ ಸರಕಾರದಿಂದ ಹೊರಟಿತ್ತು. 5, 6, 7ನೇ ದರ್ಜೆಗಳಲ್ಲಿ ಇಂಗ್ಲಿಷ್ ತೆಗೆಯಲ್ಪಟ್ಟು ಬೇರೆ ಪಾಠಗಳಿಗೆ ಆ ಸಮಯವನ್ನು ಹಂಚಿಕೊಡಲಾಗಿತ್ತು.

ಹಾಗಿರುತ್ತಾ ಅದೇ ವಿದ್ಯಾ ಸಚಿವರು ತಮ್ಮ ಧೋರಣೆಯನ್ನು ಈಗ ಹೇಗೆ ಬದಲಿಸಿಕೊಂಡರು ಎಂದು ಕೇಳಿದೆ, ನಾನು. "ಇದು ಬಹಳ ಸುಲಭ! ಈಗಿನ ವಿದ್ಯಾ ಸಚಿವರು ಬೇರೆ!" ಎಂದವರು ಹೇಳಿಬಿಟ್ಟರು.

ಈ ಹೊಸ ನಿಯಮವು ಎಂದಿನಿಂದ ಕಾರ್ಯಗತವಾಗುವುದು ಎಂದು ನಾನು ಕೇಳಿದೆ. ಅದೇ ಶಾಲಾ ವರ್ಷದಿಂದಲೇ ಪ್ರಾರಂಭ ಎಂದವರು ಇಮ್ಮಡಿ ಉತ್ಸಾಹದಿಂದ ಹೇಳಿದರು. ಗೆಳೆಯಾ, ಇದು ಯಾವ ಮಾಸದಲ್ಲಿ ಗೊತ್ತೇ? ಜೂನ್ ಮಧ್ಯ ಭಾಗ. ಹಿಂದೆಯೇ ನಾನು ಬರೆದಂತೆ ಜೂನ್ ಪ್ರಾರಂಭ ದಲ್ಲಿಯೇ ಶಾಲೆಗಳು ಪ್ರಾರಂಭವಾಗುವವು.

ಶಾಲೆ ಪ್ರಾರಂಭವಾದ ಮೇಲೆ ವಿದ್ಯಾ ಧೋರಣೆಯನ್ನು ತಟಕ್ಕನೇ ಬದ ಲಿಸಿದರೆ ಉಪಾಧ್ಯಾಯರಿಗೂ, ವಿದ್ಯಾರ್ಥಿಗಳಿಗೂ, ಸರಕಾರಕ್ಕೂ, ಆಡಳಿತ ಸಂಸ್ಥೆಗಳಿಗೂ ಬಹಳ ಕಷ್ಟವಲ್ಲವೇ ಎಂದು ನಾನು ಪ್ರಶ್ನಿಸಿದೆ. ಅವರು ವೀಳ್ಯ ಮೆಲ್ಲುತ್ತಾ ಅದರ ಮೇಲೆ ಒಂದು ಸಿಗರೇಟು ಸೇದಿ, ಅದರ ಧೂಮದ ಚಿತ್ರ ವಿಚಿತ್ರಗಳನ್ನು ನೋಡುತ್ತಾ ಹೇಳಿದರು "ಕಷ್ಟವಾದರೆ ನಮಗೇನು? ನಮ್ಮ ಕೆಲಸವಾಯಿತು; ಮತ್ತೇನು?" ನಾನು ಅವರ ಧೋರಣೆ ನೋಡಿ ವಿಸ್ಮಯಾತಿ ಶಯದಿಂದ ಮಂತ್ರಮುಗ್ಧನಾದವನಂತೆ ಸುಮ್ಮನಾದೆ.

ಹತ್ತು ಮಿನಿಟುಗಳ ನಂತರ ಚೇತರಿಸಿಕೊಂಡು ನಾನು ಕೇಳಿದೆ "ಮಿ. ದಯಾನಂದ್, ಪ್ರಾಯಶಃ ಈ ಗ್ರಂಥಗಳ ಲಕ್ಷಾಂತರ ಪ್ರತಿಗಳನ್ನು ಈಗಾಗಲೇ ನೀವು ಮುದ್ರಿಸಿರಬೇಕಲ್ಲವೇ?" ಆಗ ಹಿಂದಿನಂತೆಯೇ "ಛೆ! ನಾನೇನು ಹುಚ್ಚನೇ? ಒಂದೇ ಒಂದು ಪ್ರತಿ ಮುದ್ರಿಸಿಲ್ಲ. ನಿರ್ಣಯವಾಗದೆ ಮುದ್ರಿಸು ವುದೇತಕ್ಕೆ?" ಎಂದವರು ನನಗೇನೇ ಮರು ಸವಾಲು ಹಾಕಿದರು.

ನಾನು ತಡವರಿಸಿ ಕೇಳಿದೆ “ಹಾಗಿದ್ದರೆ.... ಈ ವರ್ಷ 6, 7ನೇ ತರಗತಿಗಳಿಗೆ ಇಂಗ್ಲಿಷ್ ಪಾಠ ಪ್ರಾರಂಭಿಸುವುದು ಹೇಗೆ?” ಅದಕ್ಕೂ ತಟಕ್ಕನೇ ಅವರ ಉತ್ತರ ಬಂತು. “ಪಾಠ ಪ್ರಾರಂಭಿಸದೇನು? ಪಠ್ಯ ಪುಸ್ತಕ ಸೆಪ್ಟಂಬರ್ ಒಕ್ಟೋಬರದಲ್ಲಿ ಮುದ್ರಣವಾಗಿ ಬರುವುದಿಲ್ಲವೇ? ನನ್ನದೇ ಬೃಹತ್ ಮುದ್ರಣಾಲಯವಿದೆ!” ಹೇಗಿದೆ ಉತ್ತರ? ಪಠ್ಯಪುಸ್ತಕ ಒಕ್ಟೋಬರ್‌ನಲ್ಲಿ ಹೊರಬಿದ್ದರೆ ಧಾರಾಳ ಸಾಕು, ಅಲ್ಲವೇ?

ನಾನು ಹೆಡ್ಡನಂತೆ ಮತ್ತೆಯೂ ಪ್ರಶ್ನಿಸುತ್ತಲೇ ಹೋದೆ. ಸಚಿವರನ್ನು ಕಂಡೊಡನೆಯೇ ತೀರ್ಮಾನವಾಗುವುದಾದರೂ ಹೇಗೆ? ಸಚಿವ ಸಂಪುಟದ ತೀರ್ಮಾನವಾಗಬೇಡವೇ? ನಂತರ ಅದರ ಅನುಜ್ಞೆ ಹೊರಡಬೇಕಿದ್ದರೆ ಮತ್ತೆಯೂ ಅರ್ಧ ಮಾಸ ದಾಟಿ ಹೋಗುವುದಿಲ್ಲವೇ?ಅದಕ್ಕವರು ವರ್ಣಿಸಿದರು. ಎಲ್ಲಾ ಅಡೆತಡೆಗಳೂ ನೀಗಲ್ಪಟ್ಟುವಂತೆ. ಒಂದು ವಾರದಿಂದಲೂ ಅವರು ರಾಜಧಾನಿಯಲ್ಲಿ ನಿಂತು ಬೇರೆ ಬೇರೆ ಸಚಿವರನ್ನೂ, ರಾಜಕೀಯ ಧುರೀಣರನ್ನೂ ಕಂಡರಂತೆ. ಶಿಕ್ಷಣ ಸಚಿವರನ್ನು ಕಂಡು ಅವರ ಮನ ಒಲಿಸಿ, ಈ ದಿನ ನಡೆದ ಸಚಿವ ಸಂಪುಟದ ಸಭೆಯಲ್ಲಿಯೂ ಅದನ್ನಿಟ್ಟು ತೀರ್ಮಾನ ಮಾಡಿಸಿದರಂತೆ! ಇನ್ನೇನು, 4–5 ದಿನಗಳೊಳಗೆ ಅನುಜ್ಞೆ ಹೊರಡುವುದು.

“ಶಿಕ್ಷಣ ವಿಭಾಗದ ಡೈರೆಕ್ಟರರನ್ನೂ ಪ್ರಶ್ನಿಸದೆ, ಅವರ ಸಲಹೆ ಕೇಳದೇನೇ ಶಿಕ್ಷಣ ಸಚಿವರು ಮತ್ತು ಸಚಿವ ಸಂಪುಟವು ಈ ತೀರ್ಮಾನವನ್ನು ಕೈಗೊಂಡಿತೇ?” ಎಂದು ನಾನು ಕೇಳಿದೆ. “ಏನು ಮಿ. ಓರ್‌ಮನ್! ಸಚಿವರು ಚುನಾಯಿತ ಅಧಿಕಾರಿ! ಅವರು ಡ್ಯಾರೆಕ್ಟರರ ಕೂಡೆ ಕೇಳಲು ಏನಿದೆ? ಡ್ಯಾರೆಕ್ಟರರ ಕೂಡೆ ಕೇಳಿ ಕಳೆದ ವರ್ಷ ಈ ನಿಯಮ ತಂದದ್ದೇನು? ಅವರು ಬರೇ ಸರಕಾರಿ ನೌಕರ!” (Government servant) ಎಂದವರು ಸಾರಿಬಿಟ್ಟರು !

ಆಗ ಗಹಗಹಿಸಿ ನಗುತ್ತಾ ಶ್ರೀರಾಮಕೃಷ್ಣರು ಹೇಳಿಬಿಟ್ಟರು “ಮಿ. ಓರ್‌ಮನ್, ಈ ದಯಾನಂದರೆಂದರೆ ಸಾಮಾನ್ಯರಲ್ಲ. 8ರಿಂದ ಕೆಳಗಿನ ದರ್ಜೆಗಳಲ್ಲಿ ಇಂಗ್ಲಿಷ್ ಕಲಿಸಬಾರದೆಂಬ ನಿಯಮ ಕಳೆದ ವರ್ಷ ತರಲೂ ಇವರೇ ಕಾರಣರು!” ಶ್ವಾಸ ನಡೆಯದಂತಾಗಿ “ಏನು!” ಎಂದು ನಾನು ಬೆಚ್ಚಿಬಿದ್ದು ಕೇಳಿದೆ. ದಯಾನಂದರ ಆ ಗೆಳೆಯರು, ತಮ್ಮ ಮಿತ್ರರ ಅಪ್ರತಿಮ ಸಾಹಸವನ್ನು ಬಣ್ಣಿಸಿ, ಎಲ್ಲಾ ವಿವರಿಸಿದರು. ಮಂದಹಾಸದಿಂದ ಧೂಮ

ಪಾನ ಮಾಡುತ್ತಿದ್ದ ದಯಾನಂದರು ತಮ್ಮ ಗುಣಗಾನವನ್ನು ಮೌನವಾಗಿ ಹೀರುತ್ತಿದ್ದರು.

ವಿಚಾರಿಸಲಾಗಿ, ಅವರ ಪ್ರತಿಸ್ಪರ್ಧಿ ಪ್ರಕಾಶಕ ಸಂಸ್ಥೆಯೊಂದು ಇವರಿಗೆ ಹಿಂದಿನ ವರ್ಷ 5, 6, 7ನೇ ದರ್ಜೆಯ ಯಾವ ಪಠ್ಯ ಪುಸ್ತಕಗಳೂ ಸಿಗದಂತೆ ಮಾಡಿ, ಮೊದಲಿನ ವರ್ಷದ ನಿಯಮದ ಆಧಾರದ ಮೇಲೆ, ಲಕ್ಷಾಂತರ ಪ್ರತಿಗಳನ್ನು ಮುದ್ರಿಸಿದ್ದರಂತೆ. ಅವರಿಗೆ ಒಂದು ಪಾಠ ಕಲಿಸಿ, ನರಕದ ಹೊಂಡಕ್ಕೆ ತಳ್ಳುವುದಕ್ಕಾಗಿಯೇ ದಯಾನಂದರು, 5, 6, 7ನೇ ತರಗತಿಗಳಿಗೆ ಇಂಗ್ಲಿಷ್ ಪಾಠವೇ ಬೇಡ ಎಂಬ ನಿಯಮವನ್ನು ಹೇರಲು ಕಾರಣರಾದ ಮಹಾ ಪುರುಷ! ಅವರೇ ಪುನಃ ಇಂಗ್ಲಿಷ್ ಬೇಕು ಎಂಬುದಾಗಿ ತುದಿಗಾಲಲ್ಲಿ ನಿಂತು ಸಾರುವ ಪ್ರವಾದಿಗಳು!

ನನಗೆ ನಂತರ ತಿಳಿಯಿತು. ಈ ದಯಾನಂದರು 8, 9ನೇ ದರ್ಜೆಗಿಂತ ಹೆಚ್ಚು ಕಲಿತವರಲ್ಲ. ತಮ್ಮ ಹಣ ಹಾಗೂ ಇತರ ಪ್ರಭಾವಗಳಿಂದ ಸಚಿವರುಗಳನ್ನು ತಕ ತಕ ಕುಣಿಸುತ್ತಿದ್ದಾರೆ ಎಂದು.

ನಾನು ಅವರ ಪರೀಕ್ಷೆಗಾಗಿ, ಒಂದು ಮಾತನ್ನು ಹೇಳಿದೆ "ದಯಾನಂದರೇ, ಪಕ್ಕಾ ಅಸಾಮಿ ನೀವು. ಕುಳಿತಲ್ಲೇ ಮುಕ್ಕಾಲು ಲಕ್ಷ ರೂಪಾಯಿ ಮಾಡಿಬಿಟ್ಟರಿ!" ಆಗ ಅವರು "ಏನು ಮಿ. ಓರ್‌ಮನ್! ರೂಪ್ಯಾ ಹತ್ತು ಸಾವಿರ ಈಗಾಗಲೇ ಖರ್ಚಾಯಿತು! ಇನ್ನು ಕಡಿಮೆಯೆಂದರೂ 15 ಸಾವಿರ ಬೇಕು!" "ಮುದ್ರಿಸುವ ಖರ್ಚು ಅಷ್ಟರಲ್ಲೇ ಆಗಿಹೋಗುವುದೇ?" ಎಂದು ನಾನು ಕೇಳಿದೆ. ಆಗ "ಮಿ. ಓರ್‌ಮನ್! ನೀವು ಅಮೆರೀಕನ್ ಮಹನೀಯರಾಗಿದ್ದೂ, ನಿಮಗೆ ವ್ಯವಹಾರ ಜ್ಞಾನವಿದ್ದಂತಿಲ್ಲ! ಈ 25 ಸಾವಿರ ಪೂರ್ತಿಯಾಗಿ ನನ್ನ ಕಾರ್ಯ ಸಾಧಿಸುವ ಹಂಚಿಕೆಗೆ ಕೆಳಗಿನಿಂದ ಮೇಲೆ ತನಕ ವಿತರಣೆ ಮಾಡಲು!" ಎಂದೂ ಅವರು ಬಾಯಿಬಿಟ್ಟು ಹೇಳಬೇಕೇ?

ಸತ್ಯ ಹೇಳುತ್ತೇನೆ, ಸಿಲ್ವರ್. ನನಗೆ ಅವರ ಮುಖಕ್ಕೇನೇ ಉಗುಳಬೇಕೆಂದಾಯಿತು. ಆದರೆ ಸಹಿಸಿಕೊಂಡೆ. ಸುಮ್ಮನಾದೆ. ಇನ್ನು ಅವರ ಕೂಡೆ ಏನನ್ನೂ ಮಾತನಾಡುವುದೇ ನನಗೆ ಬೇಡವಾಯಿತು. ನನ್ನ ಸ್ಟೇಶನು ಬಂದೊಡನೆಯೇ ನಾನು ತಲೆ ಕೆಳಗುಮಾಡಿ ನಡೆದೇ ಬಿಟ್ಟೆ.

ನಾನು ಇಳಿದ ಮೇಲೆ ಅವರ ಗಹ ಗಹಿಸುವ ನಗೆ ಮಾತ್ರ ನನಗೆ ಕೇಳಿಬಂತು.

ನೋಡು, ಸಿಲ್ವರ್. ಈ ಪತ್ರದಲ್ಲೇ ಶಿಕ್ಷಣ ಕ್ಷೇತ್ರದ ಕುರಿತಾಗಿ ಮುಗಿಸಬೇಕೆಂದು ಭಾವಿಸಿದ್ದೆ. ಆದರೆ ನಾನು ಸೋಲನ್ನೊಪ್ಪಬೇಕಾಗಿದೆ. ಇನ್ನೂ ಒಂದೆರಡು ಪತ್ರ ಬೇಕಾಗುವುದೋ ಏನೋ ಅದನ್ನು ಮುಗಿಸಲು!

ಮಿತ್ರಾ, ನಾನು ಬೆಂಗಳೂರಿಗೆ ಕೆಲವು ಸಲ ಹೋಗಿದ್ದೆನಾದರೂ, ನನಗೆ ಪೂರ್ತಿ ತೃಪ್ತಿಯಾಗಿಲ್ಲ. ಇನ್ನೂ ಸ್ವಲ್ಪ ಸಮಯ ಅಲ್ಲೇ ನಿಲ್ಲಬೇಕೆಂದು ನಿಶ್ಚೈಸಿದ್ದೇನೆ. ಆದ್ದರಿಂದ ಮುಂದಿನ ಪತ್ರವನ್ನು ನೀನು ಬಹುಶಃ ಅಲ್ಲಿಂದಲೇ ಪಡೆಯುವೆ.

ನಿನ್ನ ಪತ್ರದಲ್ಲಿ ಬರೆದಂತೆ, ಮಗು ಕೇನ್ನಿಯು ಈಗ ಅವಳ ಶಾಲಾ ಉಪಾಧ್ಯಾಯಿನಿ ಮತ್ತು ಇತರ ಬಾಲಿಕೆಯರೊಂದಿಗೆ ಕೆನಡಾ ಸಂಚಾರ ಮಾಡುತ್ತಿರಬೇಕು, ಅಲ್ಲವೇ? ಅವಳಿಗೆ ಪತ್ರ ಬರೆಯುವುದಿದ್ದರೆ ನನ್ನ ಶುಭ ಸಂದೇಶವನ್ನೂ ತಿಳಿಸು.

ಮಿತ್ರಾ ಈ ಸಲ ಇಲ್ಲಿಗೇ ನಿಲ್ಲಿಸಲೇ?

ನಿನ್ನ ಆಪ್ತ ಗೆಳೆಯ,
**ಜೋನ್ ಓರ್‌ಮನ್.**

# ೧೬

ಮದ್ರಾಸು,
20-8-'62

ಪ್ರಿಯ ಸಿಲ್ವರ್,

ನಿನ್ನ 15-8-62ರ ಪತ್ರ ಬಂದು ತಲುಪಿತು. ಓದಿ ತುಂಬಾ ಸಂತೋಷವ್ವಾತು. ನಿನ್ನಿಂದ ಏನೂ ಲಿಖಿತ ಬಾರದೆ ಒಂದು ಶತಮಾನವೇ ಸಂದಿತೇನೋ ಎಂಬುದಾಗಿ ಭಾಸವಾಗುತ್ತಾ ಇತ್ತು. ನಿನ್ನೆಯಂತೂ ನಾನು ನಿನ್ನ ಕುರಿತಾಗಿ ಬಹಳ ಕಾಲ ಯೋಚಿಸುತ್ತಾ ಇರುವಾಗಲೇ ನಿನ್ನ ಪತ್ರ ತಲುಪಿತು. ಲಕ್ಕೋಟೆಯನ್ನು ಹರಿಯುವ ಅವಸರದಲ್ಲಿ ನಿನ್ನ ಪತ್ರವನ್ನೂ ಒಂದಿಷ್ಟು ಹರಿದುಬಿಟ್ಟೆ.

ನಾನು ಇನ್ನೂ ಮದರಾಸಿನಿಂದಲೇ ಪತ್ರ ಬರೆಯುತ್ತಿರುವುದು ನೋಡಿ ನಿನಗೆ ಸಹಜವಾಗಿಯೇ ತುಂಬಾ ಆಶ್ಚರ್ಯವಾದೀತು ಅಲ್ಲವೇ? ಹೌದು, ಖಂಡಿತ. ಏಕೆಂದರೆ ಇದನ್ನು ಬೆಂಗಳೂರಿನಿಂದಲೇ ಬರೆಯಬೇಕಾಗಿತ್ತು. ಆದರೆ ಭಾರತದ ಒಂದು ಶೈಕ್ಷಣಿಕ ಪರಿಸ್ಥಿತಿಯೇ ನಾನು ಬೆಂಗಳೂರಿಗೆ ಈ ವೊದಲು ಹೊರಡದಂತೆ ಮಾಡಿತು. ಇರಲಿ ಆ ಕುರಿತು ಪತ್ರದಲ್ಲಿ ಅಂತ್ಯದಲ್ಲಿ ಬರೆಯಲೇ? ಈಗ ಹಿಂದಿನ ಸರಣಿಯನ್ನು ಮುಂದರಿಸುತ್ತೇನೆ.

ಹಿಂದೆ ವರ್ಣಿಸಿದಂತೆ, ವಿವಿಧ ರಾಜಕೀಯ ಚದುರಂಗದಾಟವಾಡುವವರ ಸೂತ್ರಚಾಲನದಿಂದ ಭಾರತದಲ್ಲಿ ಶಿಕ್ಷಣಕ್ರಮವು ಪದೇ ಪದೇ ಬದಲಿಸಲ್ಪಡು

ತ್ತಿದೆ. ಇದರಿಂದ ಸೋತವರು ಕೇವಲ ವಿದ್ಯಾರ್ಥಿ ಸಮುದಾಯ. ಕೋಟ್ಯಾನುಕೋಟಿ ಮಕ್ಕಳ ಜ್ಞಾನಾರ್ಜನೆಯಲ್ಲಿ ದುಷ್ಪರಿಣಾಮವಾದರೆ ದೇಶಕ್ಕೆ ಎಷ್ಟು ಅಪಾರವಾದ ನಷ್ಟವಾದೀತು ಎಂಬುದನ್ನು ನೀನೇ ಊಹಿಸಿಕೋ.

ಇದರಿಂದ ಒಟ್ಟಾರೆಯಾಗಿ ಶಿಕ್ಷಣದ ಮಟ್ಟವೇ ಕೆಳಗೆ ಬಂದಿದೆ. ಅಂದರೆ ಭಾರತೀಯರಲ್ಲಿ ಹಲವರು ಹೇಳಿದಂತೆ ನಾನು ಹೇಳುತ್ತಿಲ್ಲ. ಆದರೆ ವಾಸ್ತವಿಕವಾಗಿ ಅದರ ಕೂಲಂಕುಷ ಅಧ್ಯಯನ ಮಾಡಿ ಹೇಳುತ್ತಿದ್ದೇನೆ. ಇಲ್ಲಿ ಹಿಂದೆ ಇದ್ದ ಸ್ಥಿತಿಗೆ ಇಂದಿನದನ್ನು ಹೋಲಿಸುವಾಗಲೂ ಈ ವ್ಯತ್ಯಾಸ ಕಾಣುತ್ತಿದೆ. ಅಲ್ಲದೆ ಯುರೋಪು ಮತ್ತು ಸಂಯುಕ್ತ ಅಮೇರಿಕಾ ಹಾಗೂ ಕೆನಡಾ ದೇಶಗಳ ಪರಿಸ್ಥಿತಿಯನ್ನು ನೋಡಿದರೆ, ಸರಾಸರಿ, ಅಲ್ಲಿಯ ಮಕ್ಕಳಲ್ಲಿ ಕಾಣುವ ಶೈಕ್ಷಣಿಕ ಮಟ್ಟವು, ಅದೇ ಪ್ರಾಯದ ಈ ಮಕ್ಕಳಲ್ಲಿ ಕಾಣುತ್ತಿಲ್ಲ.

ನಾನು ಈ ಕುರಿತಾಗಿ ಹಲವಾರು ಪರೀಕ್ಷಕರನ್ನೂ, ಉಚ್ಚ ಪರೀಕ್ಷಾಧಿಕಾರಿಗಳನ್ನೂ ಸಂದರ್ಶಿಸಿದ್ದೇನೆ. ಅಲ್ಲದೆ ವಿವಿಧ ಪ್ರಾಂತ್ಯದ, ವಿವಿಧ ತರಗತಿಯ, ಮಕ್ಕಳ ಕೂಡೆಯೂ ಸಂಭಾಷಣೆ ಮಾಡಿ ತಿಳಿದುಕೊಂಡಿದ್ದೇನೆ. ಹಿಂದೆ ಎಸ್. ಎಸ್. ಎಲ್. ಸಿ. (ಅಂದರೆ ಸ್ಕೂಲ್ ಫೈನಲ್ ಪರೀಕ್ಷೆ–ಸೆಕೆಂಡರಿ ಶಾಲೆಯ ಅಂತ್ಯದ ಪರೀಕ್ಷೆ) ಪರೀಕ್ಷೆಗೆ ಯಾವ ಮಟ್ಟವನ್ನಿಡಲಾಗಿತ್ತೋ, ಅದೇ ಮಟ್ಟವನ್ನಿಟ್ಟಾಗ ಕೇವಲ ಸೇಕಡಾ 15ರಷ್ಟು ವಿದ್ಯಾರ್ಥಿಗಳೂ ತೇರ್ಗಡೆ ಹೊಂದುವುದಿಲ್ಲವಂತೆ. ಆದಕ್ಕಾಗಿ ಪ್ರತಿ ಪಾಠದಲ್ಲೂ "ಗ್ರೇಸ್ ಮಾರ್ಕ್ಸ್" ಎಂಬುದಾಗಿ ಎಲ್ಲ ವಿದ್ಯಾರ್ಥಿಗಳ ಪರೀಕ್ಷಾ ಉತ್ತರಪತ್ರಗಳಿಗೂ ಸೇಕಡಾ 10 ಯಾ 15ರಷ್ಟು ಗುಣ (ಮಾರ್ಕು)ಗಳನ್ನು ಸೇರಿಸಬೇಕಾಗುತ್ತದಂತೆ. ಇದು ಒಂದೊಂದು ಪ್ರಾಂತ್ಯದಿಂದ ಬರುವ ವರದಿಯಲ್ಲ. ಹಲವಾರು ಪ್ರಾಂತ್ಯಗಳಿಂದ ಬರುತ್ತಿರುವ ವಾರ್ತೆ.

ಒಂದು ವೇಳೆ ಸರಾಗವಾಗಿ ಪಾಸಾಗುವ ವಿದ್ಯಾರ್ಥಿಗಳೇ ಆದರೂ, ವಿವಿಧ ಪಾಠಗಳಲ್ಲಿ ನಿಜವಾದ ಪರಿಣತಿಯನ್ನು ಪಡೆದಿದ್ದಾರೆನ್ನಬರುವುದಿಲ್ಲ. ಯಾವ ಪ್ರಶ್ನೆಗಳಿಗೆ ಹೇಗೆ ಉತ್ತರ ಕೊಡಬೇಕೆಂಬುದನ್ನು ಅವರು ತಿಳಿದುಕೊಂಡು ಬರೆದಂತೆ ಕಾಣುವುದೇ ಹೊರತಾಗಿ, ನಿಜವಾದ ಪರಿಜ್ಞಾನವು ಅವರಿಗೆ ಇದ್ದಂತೆ ಕಾಣುವುದಿಲ್ಲ.

ಭಾರತದ ಸಾರ್ವಜನಿಕ ಪರೀಕ್ಷೆ (Public Examination) ಗಳಿಗೆ ಕುಳಿತುಕೊಳ್ಳುವ ಬಹುಸಂಖ್ಯಾಕ ವಿದ್ಯಾರ್ಥಿಗಳಲ್ಲಿ ಕಾಣಬರುವ ಒಂದು ಪ್ರಾವೀಣ್ಯತೆಯು ಯಾರನ್ನೂ ನಗೆಗಡಲಲ್ಲಿ ಮುಳುಗಿಸುವುದು. ಅವರು ನಾಲ್ಕಾರು ವರ್ಷಗಳಲ್ಲಿ ಬಂದ ಪ್ರಶ್ನೆಪತ್ರಿಕೆಗಳನ್ನು ಓದಿ ನೋಡಿ, ಚಾಲ್ತಿ ವರ್ಷದಲ್ಲಿ ಯಾವ್ಯಾವ ಪ್ರಶ್ನೆಗಳು ಬರಬಹುದು ಎಂಬುದನ್ನು ಅಂದಾಜು ಮಾಡುತ್ತಾರೆ. ಅದರಲ್ಲಿ ಅಧ್ಯಾಪಕರಿಂದಲೂ ಹೆಚ್ಚಿನ ನೈಪುಣ್ಯತೆಯು ಅವರಿಗಿರುವುದು. ಹೀಗೆ ಅಂದಾಜು ಮಾಡಿ ಬೇಕಾದ ಪ್ರಶ್ನೆಗಳಿಗೆ ಮಾತ್ರವೇ ಉತ್ತರವನ್ನು ತಯಾರು ಮಾಡಿ, ತಿದ್ದಿಸಿ ಅಥವಾ ಇತರರಿಗೆ ಹಣ ಕೊಟ್ಟು ತಯಾರು ಮಾಡಿಸಿ ಅದನ್ನು ಪರೀಕ್ಷೆ ಸಮೀಪಿಸುವಾಗ ಕಂಠಪಾಠ ಮಾಡುತ್ತಾರೆ. ಪರೀಕ್ಷೆಯಲ್ಲಿ ಅದನ್ನೇ ಬರೆಯುತ್ತಾರೆ.

ಪರೀಕ್ಷೆಯಲ್ಲಿ ಅವರು ತಯಾರು ಮಾಡಿದ ಪ್ರಶ್ನೆಗಳೇ ಬಂದಾಗ ಸುಸಂಧಿ! (Chance), ಉತ್ತಮ ಅದೃಷ್ಟ! (Good Luck) ಎಂದು ಅವರು ಕರೆದು ಸಂತೋಷಪಟ್ಟುಕೊಳ್ಳುತ್ತಾರೆ! ಅವರು ನಿರೀಕ್ಷಣೆ ಮಾಡಿದ ಪ್ರಶ್ನೆಗಳು ಒಂದು ವೇಳೆ ಬಾರದೆ ಹೋದರೆ ದುರದೃಷ್ಟ! (bad luck) ಎಂದಷ್ಟೇ ಭಾವಿಸಿ ತಮ್ಮ ವಿಧಿಯನ್ನು ಹಳಿಯುವರು. ತೇರ್ಗಡೆಯಾಗದೆ ಉಳಿದರೆ, ತಮ್ಮ ತಿಳಿವಿನ ಕೊರತೆಯನ್ನು ನಿಂದಿಸಿಕೊಳ್ಳುವ ವಿದ್ಯಾರ್ಥಿ, ವಿದ್ಯಾರ್ಥಿನಿಯರನ್ನು ನಾನು ಭಾರತದಲ್ಲಿ ಬಹಳ ಮಂದಿಯನ್ನು ಕಂಡಿಲ್ಲ.

ಆದುದರಿಂದ ಕ್ಲಾಸಿನಲ್ಲಿ ಪಾಠ ಮಾಡುವುದನ್ನು ಬಿಟ್ಟರೆ, ನಂತರ ಪಠ್ಯ ಪುಸ್ತಕಗಳನ್ನು ಒಮ್ಮೆಯೂ ಓದುವ ಆವಶ್ಯಕತೆಯನ್ನು ಇಲ್ಲಿಯ ಜ್ಞಾನಾರ್ಥಿಗಳು ಕಂಡುಕೊಳ್ಳುವುದಿಲ್ಲ. ಅದರ ಬದಲು, ಅವರು ಪರೀಕ್ಷಕ (Guide) ಎಂಬುದಾಗಿ ಹೆಸರಿರುವ ಪ್ರಶ್ನೋತ್ತರಗಳಿರುವ ಕೋಚಿಂಗ್ ಪುಸ್ತಕಗಳಲ್ಲಿ ಅಗತ್ಯಕಂಡ ಭಾಗಗಳನ್ನು ಮಾತ್ರ ಓದುತ್ತಾರೆ.

ಇದರ ಕುರಿತಾದ ಹೆಚ್ಚಿನ ವಿವರ ತಿಳಿಯುವುದಕ್ಕಿಂತಲೂ, ಅದರ ಕೂಲಂಕುಷ ಕಾರಣಗಳನ್ನು ತಿಳಿಯುವುದೇ ಪ್ರಾಮುಖ್ಯವಾಗಿದೆ ಅಲ್ಲವೇ? ಸರಕಾರವು ದಿನೇ ದಿನೇ ಬದಲಿಸುತ್ತಿರುವ ಶಿಕ್ಷಣ ಸೂತ್ರಗಳೇ ಒಂದು ಕಾರಣವೆಂಬುದು ಸ್ಪಷ್ಟ.

ಹಿಂದೆಯೇ ನಾನು ವಿವರವಾಗಿ ಬರೆದಂತೆ ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳಲ್ಲಿ ಉಪಾಧ್ಯಾಯರ ತುಟ್ಟಿಯಿಂದಾಗಿ, ಅಧ್ಯಾಪಕರ ಯೋಗ್ಯ

ತೆಯ ಕೊರತೆಯಿಂದಾಗಿ, ಶಾಲಾ ಉಪಕರಣಗಳ ಅಭಾವದಿಂದಾಗಿ, ಉತ್ತಮ ರೀತಿಯ ಶಿಕ್ಷಣವು ಬಹುಸಂಖ್ಯಾಕ ವಿದ್ಯಾರ್ಥಿಗಳಿಗೆ ಸಿಗುತ್ತಿಲ್ಲ. ಪ್ರೌಢಶಾಲೆಗೆ (ಸೆಕೆಂಡರಿ ಶಾಲೆಗೆ) ಬರುವ ವಿದ್ಯಾರ್ಥಿಗಳಿಗೆ ತಮ್ಮ ಮಾತೃ ಭಾಷೆಯನ್ನು ಓದಲು ಮತ್ತು ಬರೆಯಲು ಕೂಡಾ ತಿಳಿಯದಿರುವುದಿದೆ ಎಂದರೆ ನಿನಗೆ ಆಶ್ಚರ್ಯ ವಾಗಬಹುದಾದರೂ ಸತ್ಯವಾಗಿದೆ. ಶಿಕ್ಷಣ ಸಂಸ್ಥೆಗಳನ್ನೇನೋ ಸರಕಾರದ ವರು ಹೆಚ್ಚಿಸಿದ್ದಾರೆ. ಆದರೆ ಶಿಕ್ಷಣದ ಮಟ್ಟವು ಇಳಿಯುತ್ತಲೇ ಇದೆ. ಹೀಗಿರಲು ಸೆಕೆಂಡರಿ ಶಾಲೆಗಳಲ್ಲಿಯೂ ಉಪಾಧ್ಯಾಯರು ಇಷ್ಟಪಟ್ಟರೂ ಉತ್ತಮ ಶಿಕ್ಷಣ ನೀಡಲು ತೀವ್ರ ತಡೆಯಾಗಿ ಅವರ ಪ್ರಗತಿಯು ನಿಶ್ಚಯವಾಗಿಯೂ ಕುಂಠಿತವಾಗುವುದು.

ಭಾರತದಲ್ಲಿ ಭಾಷೆಯ ಗೊಂದಲ ಬಹಳವಿದೆ, ನಿನಗೆ ಗೊತ್ತು. ಭಾರತದ ಮಕ್ಕಳಿಗೆ ಪ್ರಾಂತ್ಯ ಭಾಷೆ ಒಂದು; ರಾಷ್ಟ್ರೀಯ ಪ್ರಾಮುಖ್ಯತೆಯಿರುವ ಹಿಂದಿ ಭಾಷೆ ಇನ್ನೊಂದು; ಅಂತರ್ರಾಷ್ಟ್ರೀಯ ಪ್ರಾಮುಖ್ಯತೆಯುಳ್ಳ ಇಂಗ್ಲಿಷ್ ಮತ್ತೊಂದು. ಎಷ್ಟೋ ಸಲ ಅವರ ಮನೆ ಮಾತು ಮತ್ತು ಪ್ರಾಂತ್ಯ ಭಾಷೆಗಳು ಬೇರೆ ಬೇರೆಯಾಗಿಯೇ ಇರಬಹುದು. ಹೀಗೆ ಭಾರತದ ಮಕ್ಕಳ ಬಹುಭಾಗದ ಚೈತನ್ಯ ಭಾಷೆಗಳನ್ನು ಕಲಿಯುವುದರಲ್ಲೇ ಹೋಗಿ ಬಿಡುವುದು. ಅಮೇರಿಕಾ ದೇಶದಲ್ಲಿ ನಮಗೆ ಈ ಸಮಸ್ಯೆಯಿಲ್ಲ. ನಮ್ಮ ಅಂತರ್ರಾಷ್ಟ್ರೀಯ ಭಾಷೆ, ರಾಷ್ಟ್ರೀಯ ಭಾಷೆ, ಪ್ರಾಂತ್ಯ ಭಾಷೆ ಮತ್ತು ಆಡುವ ಭಾಷೆ ಎಲ್ಲವೂ ಒಂದೇ. ಆದುದರಿಂದ ನಮ್ಮ ವಿದ್ಯಾರ್ಥಿಗಳು ಇತರ ವಿಷಯಗಳ ಅಧ್ಯಯನಕ್ಕೆ ಕೊಡಲು ಸಾಧ್ಯವಾಗುವಷ್ಟು ಲಕ್ಷ್ಯವನ್ನು ಸಹಜವಾಗಿಯೇ ಇಲ್ಲಿಯ ವಿದ್ಯಾರ್ಥಿಗಳು ಕೊಡಲು ಸಾಧ್ಯವಾಗುವುದಿಲ್ಲ; ಇದೂ ಇಲ್ಲಿಯ ಮಕ್ಕಳ ತಿಳಿವಳಿಕೆಯ ಮಟ್ಟವು ಕಡಿಮೆಯಾಗಲು ಒಂದು ಕಾರಣವಾಗಿರಬಹುದು.

ಈ ಸಮಸ್ಯೆಯನ್ನು ಹೇಗೆ ಪರಿಹರಿಸಬಹುದೆಂಬುದನ್ನು ಯಾರೂ ಸುಲಭವಾಗಿ ಹೇಳುವಂತಿಲ್ಲ. ಅದಕ್ಕಿರುವ ನನ್ನ ಪರಿಹಾರವನ್ನೆಲ್ಲಿಯಾದರೂ ಸೂಚಿಸಿಬಿಟ್ಟರೆ, ಖಂಡಿತ ಭಾರತೀಯರು ನನ್ನ ಮೇಲೆ ರೇಗಿ ಬೀಳುವರು. ಆದುದರಿಂದ ನಾನೂ ಸುಮ್ಮನಿರುವುದೇ ಒಳಿತು.

ಇನ್ನೊಂದು ವಿಷಯ ಗೆಳೆಯ. ಇಲ್ಲಿಯ ವಿದ್ಯಾ ಸಂಸ್ಥೆಗಳಲ್ಲಿ ಅಗತ್ಯವಿಲ್ಲದ, ಉಪಯೋಗವಿಲ್ಲದ ಹಳೆಯ ಸಿದ್ಧಾಂತಗಳನ್ನು ವಿಜ್ಞಾನ, ಗಣಿತ ಇತ್ಯಾದಿ ಕ್ಷೇತ್ರಗಳಲ್ಲಿ ವಿವರವಾಗಿ ಕಲಿಸಿ ಕೊಡುವುದಿದೆ. ಆದರೆ ಪಾಶ್ಚಾತ್ಯ

ದೇಶಗಳಲ್ಲಿ ಮುಖ್ಯವಾಗಿ ಸಂಯುಕ್ತ ಅಮೇರಿಕಾ ದೇಶದಲ್ಲಿ ಹಳೆಯ ಸಿದ್ಧಾಂತ
ಗಳನ್ನು ಬಿಟ್ಟು ಬಿಟ್ಟು ಅತಿ ಮುಂದರಿದ ಪ್ರಾಮುಖ್ಯ ವಿಷಯುಗಳನ್ನೇ ಕಲಿಸಿ
ಕೊಡುತ್ತಾರೆ. ಇಲ್ಲಿಯ ಶೈಕ್ಷಣಿಕ ಮಟ್ಟವು ಕಡಿಮೆಯಾಗಲು ಅದೂ ಒಂದು
ಕಾರಣವಾಗಿರಬಹುದು.

ವೈಜ್ಞಾನಿಕ ಪ್ರಗತಿಯಲ್ಲಿ ಬಹಳ ಮುಂದರಿದ ಸಂಯುಕ್ತ ಅಮೇರಿಕಾ
ದೇಶದಲ್ಲಿ ಶಹರುಗಳಿಂದ ತೊಡಗಿ ಗ್ರಾಮಾಂತರ ಪ್ರದೇಶಗಳ ತನಕ ಎಲ್ಲೆಡೆಗ
ಳಲ್ಲೂ, ಎಲ್ಲ ಜನರು ಹಲವು ರೀತಿಯ ವೈಜ್ಞಾನಿಕ ಉಪಕರಣಗಳನ್ನು
ಉಪಯೋಗಿಸುತ್ತಿರುತ್ತಾರೆ. ಅಲ್ಲದೆ ನಾಗರಿಕ ಜೀವನವೇ ಹೆಚ್ಚು ಆಧುನಿಕ
ರೀತಿಯಲ್ಲಿ ಮುಂದುವರಿಯುತ್ತಿದೆ. ಮಾತ್ರವಲ್ಲದೆ, ಎಲ್ಲರೂ ಹಲವಾರು
ಯಂತ್ರಗಳ ಮೂಲಕ ತಂತಮ್ಮ ಕೆಲಸಗಳನ್ನು ತಾವು ತಾವೇ, ಇತರ ಮಜೂ
ರರ ಸಹಾಯವಿಲ್ಲದೆ ಸುಧಾರಿಸಿಕೊಳ್ಳುತ್ತಾರೆ. ಆದುದರಿಂದ ಅವರೆಲ್ಲರ
ತಾಂತ್ರಿಕ, ವೈಜ್ಞಾನಿಕ ಪರಿಜ್ಞಾನ ಹಾಗೂ ಅವರ ವ್ಯವಹಾರದ ತಿಳಿವು
ಸಾಮಾನ್ಯ ಭಾರತೀಯನಿಗಿಂತ ಸಹಜವಾಗಿಯೇ ಮೇಲ್ಮಟ್ಟದಲ್ಲಿರುತ್ತದೆ.
ಹಾಗಿರಲು ಅವರ ಮಕ್ಕಳಲ್ಲೂ ಅಂತಹ ಅನುಭವವು ಚಿಕ್ಕಂದಿನಿಂದಲೇ
ಮೈಗೂಡುವುದು ಆಶ್ಚರ್ಯವೇನಲ್ಲ.

ಅಂದರೆ ಭಾರತದಲ್ಲಿ ಯಾವ ವಿಚಾರಗಳ ಅಧ್ಯಯನವನ್ನು ಸೆಕೆಂಡರಿ
ಶಿಕ್ಷಣದ ಅವಧಿಯಲ್ಲಿ ಮಕ್ಕಳು ಕಲಿತುಕೊಳ್ಳುತ್ತಾರೋ ಅವುಗಳು ನಮ್ಮ
ನಾಡಿನಲ್ಲಿ ಎಳೆಯ ಪ್ರಾಯದಲ್ಲೇ ಮೈಗೂಡಿರುತ್ತವೆ. ಆದುದರಿಂದ
ನಮ್ಮವರಿಗೆ ಅದೇ ಅವಧಿಯಲ್ಲಿ ಇನ್ನೂ ಉಚ್ಚಮಟ್ಟದ ಅಧ್ಯಯನವನ್ನು
ಸಾಗಿಸಲು ಸಾಧ್ಯವಾಗುವುದು. ಭಾರತದ ವಿದ್ಯಾರ್ಥಿಗಳ ಅನುಭವದ
ಮಟ್ಟವು ಹಿಂದೆ ಇರಲು ಇದೂ ಒಂದು ಕಾರಣವಾಗಿದೆ, ನಿಶ್ಚಯ.

ಸಿಲ್ವರ್, ಇದೆಲ್ಲಾ ನಿನಗೆ ಒಣಕಲು ವಿಷಯಗಳಾಗಿ
ತೋರಲೂ ಬಹುದು; ನಿನ್ನ ತಲೆವೇದನೆಗೆ ಕಾರಣವಾಗಲೂ ಬಹುದು.
ಆದರೂ ಇಲ್ಲಿಯ ಎಲ್ಲಾ ವಿಷಯಗಳನ್ನು ವಿವರವಾಗಿ ಬರೆಯಬೇಕೆಂದು ನೀನು
ಆಗ್ರಹ ಪಡುವ ಕಾರಣ ಎಲ್ಲವನ್ನೂ ವಿಶ್ಲೇಷಣೆ ಮಾಡುವುದರ ಆವಶ್ಯಕತೆ
ಬರುತ್ತಿದೆ. ಹಾಗಿರುತ್ತಾ ನಿನಗೆ ಹರಟೆಯಾದೀತೇನೋ ಎಂಬ ಸಂಕೋಚ
ವನ್ನನುಭವಿಸಿಕೊಂಡೇ ಮುಂದರಿಸಲೇ?

ನಮ್ಮ ತಾಯಿನಾಡಿನಲ್ಲಿ ಹಾಗೂ, ಪಾಶ್ಚಾತ್ಯ ದೇಶದಂತಹ ಮುಂದರಿದ
ದೇಶಗಳಲ್ಲಿ ಹೆತ್ತವರು ಬಹಳ ಮಟ್ಟಿಗೆ ವಿದ್ಯಾವಂತರಾಗಿರುತ್ತಾರೆ. ಅಥವಾ

ಕೆಲವು ಅಲ್ಪ ಸಂಖ್ಯಾಕರು ವಿದ್ಯಾವಂತರು ಎಂಬುದಾಗಿ ಕರೆಸಿಕೊಳ್ಳಲು ಅರ್ಹ ರಾಗದಿದ್ದರೂ, ಅಕ್ಷರಸ್ಥರಾಗಿರುತ್ತಾರೆ; ಮಾತ್ರವಲ್ಲ, ವಿದ್ಯೆಯ ಮಹತ್ವವನ್ನು ತಿಳಿದವರಿರುತ್ತಾರೆ. ವಿದ್ಯಾವಂತರು ತಮ್ಮ ಮಕ್ಕಳ ಅಧ್ಯಯನಕ್ಕೆ ಹಲವು ರೀತಿಯಲ್ಲಿ ನೆರವಾಗಲೂಬಹುದು. ನೆರವಾಗದಿದ್ದರೂ ಜ್ಞಾನಾರ್ಜನೆಗೆ ಬೇಕಾದ ವಾತಾವರಣವನ್ನು ಅವರು ಮನೆಗಳಲ್ಲಿ ಉಂಟುಮಾಡುತ್ತಾರೆ- ಕಲಿಯುವಿಕೆಗೆ ಪೂರ್ಣ ಪ್ರೋತ್ಸಾಹ ನೀಡುತ್ತಾರೆ. ವಿಶೇಷ ವಿದ್ಯಾಭ್ಯಾಸ ವಿಲ್ಲದವರೂ ಕೂಡಾ ತಮ್ಮ ಮಕ್ಕಳು ಕಲಿಯಲು ಬೇಕಾದ ವ್ಯವಸ್ಥೆಮಾಡಿ ಕೊಡುತ್ತಾರೆ. ಇದರ ಪರಿಣಾಮವಾಗಿ ಕಲಿಯುವಿಕೆಯ ಮಟ್ಟವು ನಮ್ಮ ದೇಶಗಳಲ್ಲಿ ಉಚ್ಚವಾಗಿರಲು ಆಸ್ಪದವಿದೆ.

ಇಲ್ಲಿಯ ಪರಿಸ್ಥಿತಿಯೇ ಬೇರೆ. ಕಲಿತವರು ಕಡಿಮೆ. ಕಲಿಯುವುದಕ್ಕೆ ಪ್ರೋತ್ಸಾಹ ನೀಡುವವರು ಇನ್ನಷ್ಟು ಕಡಿಮೆ; ಮನೆಗಳಲ್ಲಿ ಆ ವಾತಾವರಣ ವಿರುವುದೇ ಅಪರೂಪ.

ಪೇಟೆಗಳಲ್ಲಾದರೂ ಓದಿಗೆ ಬೇಕಾದ ಪ್ರೋತ್ಸಾಹ ದೊರೆಯುತ್ತದೆ. ಹಳ್ಳಿಗಳಲ್ಲಿ ವಿದ್ಯಾವಂತ ಶ್ರೀಮಂತರು ಇದಕ್ಕೆ ಬೇಕಾದ ವ್ಯವಸ್ಥೆ ಸಾಮಾನ್ಯ ಮಟ್ಟಿಗೆ ಮಾಡುತ್ತಾರೆ- ಆದರೆ ಕೇವಲ ಅವಿದ್ಯಾವಂತ ಶ್ರೀಮಂತರು ಮತ್ತು ಬಡ ಜನರಲ್ಲಿ ಅಂದರೆ ರೈತ ಜನರು ಹಾಗೂ ಮಜೂರ ವರ್ಗದವರಲ್ಲಿ ಮನೆ ಯಲ್ಲಿ ಮಕ್ಕಳು ಅಧ್ಯಯನ ಮಾಡುವುದಕ್ಕೆ ಬೇಕಾದ ಪ್ರೋತ್ಸಾಹವಿರುವುದಿಲ್ಲ. ಅದಕ್ಕೆ ಅನುಕೂಲವೂ ಇರುವುದಿಲ್ಲ ಎಂದರೂ ತಪ್ಪಲ್ಲ. ಏಕೆಂದರೆ ಊಟ ಕ್ಕೇನೇ ಕೊರತೆಯಾಗಿರುವಾಗ ದೀಪ ಹಾಗೂ ದೀಪಕ್ಕೆ ಎಣ್ಣೆ ಒದಗಿಸುವುದೂ ಕೂಡ ಬಹಳ ಕಷ್ಟವಾಗಿ ಅವರ ಮಟ್ಟಿಗೆ ಪರಿಣಮಿಸುವುದು.

ಎಷ್ಟೋ ಬಡ ಮನೆಗಳಲ್ಲಿ ಕೇವಲ ಒಂದು ಚಿಮಿಣಿ ದೀಪವಿರಬಹುದು. ಮನೆಯಲ್ಲಿ ಹೆಂಗಸರು ಕೆಲಸ ಮಾಡುವ ಬಗ್ಗೆ ಆ ದೀಪ ಬೇಕು. ಅದನ್ನು ಮಕ್ಕಳು ಓದಲು ಉಪಯೋಗಿಸಿದರೆ ಅವರಿಗೆ ಆಗತಕ್ಕ ಕೆಲಸ ಮಾಡುವಂ ತಿಲ್ಲ. ಅವರು ಕೆಲಸ ಮಾಡಿದರೆ ಮಕ್ಕಳು ಓದುವಂತಿಲ್ಲ.

ಅಂತಹ ಕಡೆಗಳಲ್ಲಿ ಮಕ್ಕಳು ಮಾಡುವ ಅಧ್ಯಯನದ ಕೆಲಸಗಳನ್ನೆಲ್ಲಾ ಸೂರ್ಯಾಸ್ತದ ಮೊದಲೇ ಮುಗಿಸಿಕೊಳ್ಳಬೇಕು. ಅಂದರೆ ಹೆಚ್ಚಿನ ಓದು ಬರಹಗಳೂ ಬಾಕಿಯಾಗಿಯೇ ತೀರುವುವು.

ರೈತಾಪಿ ಜನರಾದರೆ ಮನೆ ತುಂಬಾ ಜನರಿದ್ದರೂ ಎಲ್ಲರಿಗೂ ಕೈತುಂಬ ಕೆಲಸವಿದ್ದೇ ಇರುವುದು. ಆದುದರಿಂದ ವಿದ್ಯಾರ್ಥಿಗಳೂ ದನಕರುಗಳಿ ಹುಲ್ಲು ತರುವುದು, ಕಸಗುಡಿಸುವುದು, ಕೃಷಿಯಲ್ಲಿ ಸಹಕರಿಸುವುದು ಇತ್ಯಾದಿ ಕೆಲಸಗಳನ್ನು ಮಾಡಲು ಸಹಕರಿಸಲೇಬೇಕಾಗುವುದು. ಪರಿಣಾಮವಾಗಿ ಓದುವ ಅವಕಾಶ ಕಡಿಮೆಯಾಗುವುದು.

ಭಾರತದ ಆರ್ಥಿಕ ಪರಿಸ್ಥಿತಿಯನ್ನು ಉತ್ತಮಗೊಳಿಸದೆ, ಈ ದುಸ್ಥಿತಿ ಯನ್ನು ಹೋಗಲಾಡಿಸುವಂತಿಲ್ಲ.

ಇಂತಹ ಪರಿಸ್ಥಿತಿಯನ್ನು ಚಿತ್ರಿಸುವ ಒಂದು ಹೃದಯವಿದ್ರಾವಕ ಘಟನೆ 2–3 ತಿಂಗಳುಗಳ ಹಿಂದೆ ಇಲ್ಲೇ ಬಳಿ ನಡೆಯಿತು.

ಜಯನಾಥರು ಮತ್ತು ನಾನು ನಮ್ಮ ಗೆಳೆಯರೊಬ್ಬರು ಊರಿಗೆ ಹೋಗು ವವರನ್ನು ಬೀಳ್ಕೊಡಲು ನಾವು ಎಗ್ಮೋರ್ ರೈಲ್ವೇಸ್ಟೇಶನ್ನಿಗೆ ಹೋದೆವು. ಆಗ ಅವರು ಇನ್ನೊಬ್ಬರು ಯುವಕರನ್ನು ಕಂಡು ಮಾತನಾಡಿಸಿದರು. ನನಗೂ ಕುತೂ ಹಲ ಕೆರಳಿತು. ನಾನು ಮಧ್ಯೆ ಬಾಯಿಹಾಕಿ, ಮಾತನಾಡಿ ವಿಷಯ ತಿಳಿದು ಕೊಂಡೆ. ಆ ಇನ್ನೊಬ್ಬ ಯುವಕರ ಹೆಸರು–ನೋಡು ಮರೆತೇ ಬಿಟ್ಟಿತು–ಸರಿ, ಸರಿ ನೆನಪಾಯಿತು–ಹೌದು ನಮಶ್ಶಿವಾಯಂ ಎಂಬುದಾಗಿ. ಮದ್ರಾಸಿನ ಹೊರ ವಳಯದ ಒಂದು ಹಳ್ಳಿಯ ಕೃಷಿಕರಂತೆ ಅವರು. ಅವರೂ ರೈಲಿನಲ್ಲಿ ಊರಿಗೆ ಮರಳುತ್ತಿದ್ದರು. ಅವರು ಒಬ್ಬ ವಿದ್ಯಾರ್ಥಿಯ ಒಂದು ದುರಂತದ ಕತೆಯನ್ನು ಹೇಳಿದರು.

ಶಡಗೋಪನ್ ಎಂಬೊಬ್ಬ ವಿದ್ಯಾರ್ಥಿ. ಕೇವಲ ಬಡವ. ಹೈಸ್ಕೂಲಿನ 10ನೇ ತರಗತಿಯಲ್ಲಿ ಓದುತ್ತಿದ್ದ. ಮನೆಯವರು ಕೇವಲ ಬಡ ರೈತಾಪಿ ಜನರು. ಈತನಿಗೆ ಕಲಿಯಲು ತುಂಬ ಇಷ್ಟವಾದರೂ ಮನೆಯವರು ಆತನಿಗೆ ಓದಲು ಅವಕಾಶ ಕೊಡುತ್ತಿರಲಿಲ್ಲ. ಆತನಿಗೆ ಯಸ್.ಯಸ್.ಯಲ್.ಸಿ. ಪರೀಕ್ಷೆಯಲ್ಲಿ ಅತ್ಯುತ್ತಮ ಶ್ರೇಣಿಯಲ್ಲಿ ಮಾರ್ಕು ಪಡೆದು ಸರಕಾರದ ವಿದ್ಯಾರ್ಥಿ ವೇತನ ಪಡೆದು ಮುಂದೆ ಕಾಲೇಜಿನಲ್ಲಿ ಅಧ್ಯಯನ ಸಾಗಿಸಬೇಕೆಂಬ ಹಿರಿಯಾಸೆ ಇತ್ತು. ಅದಕ್ಕಾಗಿ ಮನೆಯವರ ಕೂಡೆ ಆಗಾಗ ವಿವೇಕರಿಗೆ ಬೇಡಿಕೊಳ್ಳುತ್ತಿದ್ದ. ಆದರೆ ಹಠವಾದಿಗಳೂ ಜಿಪುಣರೂ ಆದ ಮನೆಯವರು ಆತನು ಮಾಡತಕ್ಕ ಕೆಲಸಗಳನ್ನು ತಪ್ಪದೆ ಮಾಡಲೇಬೇಕೆಂದು ಒತ್ತಾಯಿಸಿ

ವರು. ಪರೀಕ್ಷೆ ಸಮಯ ಮತ್ತು ಪರೀಕ್ಷೆಗೆ 10 ದಿನಗಳಿಗೆ ಮೊದಲೇ ದಿನದಲ್ಲಿ
ಒಂದೆರಡು ಗಂಟೆ ಸಮಯವಾದರೂ ಓದಲು ಅವಕಾಶ ಕೊಡಬೇಕೆಂದು
ಆತನು ಪಟ್ಟು ಹಿಡಿದ. ಆದರೆ ಮನೆಯವರು ಬಲವಂತ ಮಾಡಿದರು.
ನೊಂದ ಹುಡುಗ ಅತ್ತುಕೊಂಡೇ ಪರೀಕ್ಷಾಮಂದಿರಕ್ಕೆ ತೆರಳಿದ. ಏಕೆಂದರೆ
ಸ್ವಲ್ಪವಾದರೂ ಓದದೆ ತಾನು ಪರೀಕ್ಷೆಗೆ ಹೋಗಬೇಕಾಗಿ ಬಂತಲ್ಲಾ ಎಂಬು
ದಾಗಿ ಅವನಿಗೆ ಸಹಜವಾಗಿಯೇ ವ್ಯಥೆಯಾಯಿತು.

ಪರೀಕ್ಷೆ ಕಳೆಯಿತು. ಪರೀಕ್ಷಾ ಫಲಿತಾಂಶವೂ ಬಂತು. ಅಷ್ಟು
ಸಮರ್ಥನಾದ ವಿದ್ಯಾರ್ಥಿಯಾಗಿಯೂ ಆತನು ಫೈಲಾಗಿದ್ದ. ಆ ಆಘಾತವನ್ನು
ಸಹಿಸಲಾರದೆ, ಹುಡುಗನಿಗೆ ಹುಚ್ಚು ಹಿಡಿಯಿತು. ಅದಕ್ಕಾಗಿ ನಮ್ಮ ಶ್ರೀವಾಯಂ
ಆ ರೋಗಿ ಯುವಕನನ್ನು ಮದ್ರಾಸಿಗೆ ಕರಕೊಂಡು ಬಂದರು. ರೋಗಿಗೆ
ಸ್ವಲ್ಪವೂ ಬುದ್ಧಿ ಸ್ವಾಸ್ಥ್ಯವಿರಲಿಲ್ಲ. ಮಾನಸಿಕ ಚಿಕಿತ್ಸೆಗಿರುವ ಆಸ್ಪತ್ರೆಗೆ
ಸಾಗಿಸಿದರು. ಇನ್ನು ಗುಣವಾಗುವುದು ಬಹಳ ಕಷ್ಟಸಾಧ್ಯವಿದೆ ಎಂದು
ಡಾಕ್ಟರರು ಹೇಳಿದರಂತೆ. ಆದಷ್ಟು ಪ್ರಯತ್ನಪಡುವಂತೆ ಡಾಕ್ಟರರಿಗೆ ಹೇಳಿ
ಆತನು ಊರಿಗೆ ಮರಳುತ್ತಿದ್ದಾನೆ.

ಮನೆಯವರ ಹೆಡ್ಡುತನದಿಂದ ಚಿನ್ನದಂತಹ ಒಬ್ಬ ವ್ಯಕ್ತಿ ಹುಚ್ಚನಾಗಿ
ಬಿಟ್ಟ; ಸಮಾಜಕ್ಕೆ ಭಾರವಾಗಿ ನಿಂತು ಬಿಟ್ಟ. ಇಂತಹ ಘಟನೆ ನಡೆಯು
ವುದು ತೀರಾ ದುಃಖಾವಹವಲ್ಲವೇ?

ಸಿಲ್ವರ್, ಹಿಂದೆ ಆಹಾರ ಧಾನ್ಯಗಳ ಬೆಳೆ ಹೆಚ್ಚಾಯಿತೆಂದು ನಮ್ಮ
ಸಂಘಗಳ ಮೂಲಕ, ಹೆಚ್ಚಾದ ಪರಿಮಾಣವನ್ನು ಸುಟ್ಟು ಬೂದಿ ಮಾಡುತ್ತಿದ್ದ
ದೇಶದವರಾದ ನಾವು ಭಾರತದ ಜನಕೋಟಿಯ ದಾರಿದ್ರ್ಯದ ನಗ್ನ ಚಿತ್ರವನ್ನು
ಊಹಿಸಿಕೊಳ್ಳಲಾರೆವು. ಎಷ್ಟೋ ಮನೆಗಳಲ್ಲಿ ಒಪ್ಪತ್ತೇ ಊಟವಿರುವುದಿದೆ.
ಒಪ್ಪತ್ತು ಊಟವೂ ಇಲ್ಲದೆ ಏನನ್ನೋ ತಿಂದು ಬದುಕುವ ಕುಟುಂಬಗಳೂ
ಇಲ್ಲದಿಲ್ಲ. ಅಂತಹ ಕುಟುಂಬಗಳಲ್ಲಿ ಬೆಳೆಯುವ ಮಕ್ಕಳು ಅಂತಹ ಹಸಿದ
ಹೊಟ್ಟೆಯಲ್ಲಿ ಕಲಿಯುವುದಾದರೂ ಏನನ್ನು ? ಹೇಗೆ? ಬಹು ಸಂಖ್ಯಾತರೇ
ಅಂಥವರೆಂದಾಗ, ಇಲ್ಲಿಯ ಹೈಸ್ಕೂಲುಗಳ ಪರಿಸ್ಥಿತಿ ಹೇಗೆ ನಿಲ್ಲಬಹುದು,
ನೀನೇ ನೋಡು. ಮುಕ್ಕಾಲಂಶ ಅಥವಾ ಅರೆವಾಸಿ ಮಕ್ಕಳು ಹೊಟ್ಟೆಗಿಲ್ಲದ
ಕಾರಣದಿಂದ ಹಿಂದುಳಿದರೆ, ಮುಂದಿದ್ದವರನ್ನು ಮಾಡುವುದಾದರೂ ಏನು?

ಹಿಂದಿನವರ ಜತೆಯಲ್ಲಿ ಅವರು ಬೇಡವೆಂದರೂ ನಿಧಾನವಾಗಿಯೇ ಸಾಗಬೇಕಾ ಗುತ್ತದೆ. ಆಗ ಇಡೀ ತರಗತಿಯ ಕಲಿಯುವಿಕೆಯ ಮಟ್ಟವು ಕೆಳಗಾಗಿಯೇ ತೀರುವುದು.

ಸಹಜವಾಗಿಯೇ ಭಾರತದ ಆರ್ಥಿಕ ಪರಿಸ್ಥಿತಿಯ ಕಾರಣದಿಂದಾಗಿ, ಇಲ್ಲಿ ಹೆಚ್ಚು ಉಪಾಧ್ಯಾಯರನ್ನು ನೇಮಿಸುವಂತಿಲ್ಲ. ಅಲ್ಲದೆ, ಶಾಲಾ ಕಟ್ಟಡ ಗಳನ್ನೂ ಸಾಕಷ್ಟು ರಚಿಸಲು ಇಲ್ಲಿಯ ಪರಿಸ್ಥಿತಿ ಅನುಕೂಲವಿಲ್ಲ. ಪರಿಣಾಮ ತಿಳಿದೇ ಇದೆ. ಹೈಸ್ಕೂಲುಗಳಲ್ಲಿ ಕೂಡಾ ಸಣ್ಣ ಶಾಲಾ ಕೋಣೆಗಳಲ್ಲಿ ಬಹಳ ಮಂದಿ ಮಕ್ಕಳು ಕುಳಿತು ಕಲಿಯಬೇಕಾಗುತ್ತದೆ. ಐವತ್ತೈದು ಮಕ್ಕಳ ತನಕವೂ ಒಂದೇ ತರಗತಿಯಲ್ಲಿರುವುದು ಸಾಮಾನ್ಯ ವಿಚಾರ. ವಿಶೇಷ ಅನುಮತಿಗಳಿಂದ ಇನ್ನೂ ಜಾಸ್ತಿ ಮಕ್ಕಳು ಕಲಿಯುತ್ತಿರಬೇಕಾಗುತ್ತದೆ. ಈ ಕಾರಣದಿಂದ ವೈಯ್ಯಕ್ತಿಕ ಲಕ್ಷ್ಯ ಕೊಟ್ಟು ಪ್ರತಿಯೊಬ್ಬನೂ ಅಭಿವೃದ್ಧಿ ಹೊಂದುವಂತೆ ಮಾಡಲು ಉಪಾಧ್ಯಾಯರಿಗೆ ಏನೇನೂ ಸಾಧ್ಯವಾಗು ವುದಿಲ್ಲ. ಅಂದರೆ ದಿನೇ ದಿನೇ ವಿದ್ಯಾರ್ಥಿಗಳ ಕಲಿಯುವಿಕೆಯ ಮಟ್ಟವು ಕೆಳಗಿಳಿಯುತ್ತಾ ಹೋಗುವುದು.

ಹಿಂದೆಯೇ ನಾನು ತಿಳಿಸಿದಂತೆ ಆರ್ಥಿಕ ಭ್ರಷ್ಟಾಚಾರಗಳ ಕಾರಣದಿಂದ ಕೆಲವೊಂದು ವಿದ್ಯಾರ್ಥಿಗಳು ಯೋಗ್ಯತೆಯಿಲ್ಲದೆಯೇ ತೇರ್ಗಡೆಯಾಗುವುದಿದೆ. ಅಥವಾ ಸ್ಥಾನಮಾನದಲ್ಲಿರುವವರು ಬೀರುವ ಪ್ರಭಾವಗಳಿಂದ ಮೇಲೆ ಬೀಳು ವುದೂ ಇದೆ. ಇಂತಹ ಸನ್ನಿವೇಶಗಳನ್ನು ಕಂಡುಬಿಟ್ಟಾಗ ಅಂತಹ ವಿದ್ಯಾ ಸಂಸ್ಥೆಗಳ ಇತರ ವಿದ್ಯಾರ್ಥಿಗಳ ಅಧ್ಯಯನದ ಮೇಲೆ ಎಂತಹ ದುಷ್ಪರಿಣಾಮ ವಾಗಬಹುದೆಂಬುದನ್ನು ನೀನೇ ಊಹಿಸಿಕೊಳ್ಳಬಹುದು. ಏನೇನೂ ಕಷ್ಟ ಪಟ್ಟು ಅಧ್ಯಯನ ಸಾಗಿಸದ ವಿದ್ಯಾರ್ಥಿಗಳು ಸುಲಭದಲ್ಲಿ ತೇರ್ಗಡೆಯಾದರೆ ನ್ನುವಾಗ, ಇನ್ನು ತಾವೇತಕ್ಕೆ ಕಲಿಯಬೇಕೆಂದು ಇತರರಿಗೂ ಕಾಣುವುದು ಸಹಜವೇ ಆಗಿದೆ. ಪರಿಣಾಮವಾಗಿ ಶಾಲೆಯ ಅಧ್ಯಯನದ ಮಟ್ಟ ಕೆಳಗಿಳಿ ಯುವುದು, ಅಲ್ಲವೇ ಸಿಲ್ವರ್?

ಇನ್ನೊಂದು ವಿಚಿತ್ರ ಸನ್ನಿವೇಶವು ಭಾರತದಲ್ಲಿ ನಡೆಯುತ್ತಿದೆ. ಕಾಲೇ ಜಿಗೆ ಹೋಗಿ ಓದನ್ನು ಸಾಗಿಸಿದವರಿಗೆ ಮಾತ್ರವೇ ಶೈಕ್ಷಣಿಕ ರಂಗದಲ್ಲಿ ಬೆಲೆ ಎಂಬ ಒಂದು ಭಾವನೆ ಸಮಾಜದಲ್ಲಿ ಮೂಡಿ ಬರುತ್ತಿದೆ. ಕಾಲೇಜಿನ ಒಂದು ಡಿಗ್ರಿ ಅಂದರೆ ಸನ್ನದು ಇಲ್ಲದೆ ಇದ್ದ ಯುವಕ ಅಥವಾ ಯುವತಿಯರು

ಪ್ರತಿಷ್ಠಿತರಲ್ಲ ಎಂಬ ದೃಷ್ಟಿ ಬೇರೂರಿರುತ್ತದೆ. ಇದರ ಫಲಶ್ರುತಿಯಾಗಿ ವಿಶ್ವವಿದ್ಯಾಲಯದ ಮಟ್ಟದ ಶಿಕ್ಷಣ ಪಡೆಯುವ ಯೋಗ್ಯತೆಯಿಲ್ಲದವರೂ ಕೂಡ ಕಾಲೇಜಿನ ಮೆಟ್ಟಲನ್ನು ಹತ್ತುತ್ತಾರೆ. ಏನೇನೋ ಮಾಡಿ ಒದ್ದಾಡಿ, ಡಿಗ್ರಿ ಪಡಕೊಂಡು ಬರುತ್ತಾರೆ. ಆದರೆ ಇದೇ ಸಮಯ ಯೋಗ್ಯತೆಯಿದ್ದೂ ಬಡತನದಲ್ಲಿ ನರಳುವ ವಿದ್ಯಾರ್ಥಿಗಳು ಸಹಸ್ರ ಸಂಖ್ಯೆಯಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿ ಇಲ್ಲವೇ ಹೈಸ್ಕೂಲು ವಿದ್ಯಾಭ್ಯಾಸವನ್ನು ಮುಗಿಸಿ ಯಾವಯಾವುದೋ ಉದ್ಯೋಗಗಳಲ್ಲಿಉದರಂಭರಣಕ್ಕಾಗಿ ಸೇರಿಕೊಳ್ಳುತ್ತಾರೆ.

ಹೀಗೆ ಉಚ್ಚ ಮಟ್ಟದ ವಿದ್ಯಾಭ್ಯಾಸದ ಆವಶ್ಯಕತೆಯಿಲ್ಲದೆ ಯಾವುದಾದರೊಂದು ಮನಸ್ಸಿಗೊಪ್ಪುವ ಯೋಗ್ಯ ಉದ್ಯೋಗ ಮಾಡಿ ರಾಷ್ಟ್ರಕ್ಕೆ ಸೇವೆ ಸಲ್ಲಿಸಬೇಕಾದವರು ಉಚ್ಚ ಶಿಕ್ಷಣವನ್ನು ಶಕ್ತಿಯಿಲ್ಲವಾದರೂ ಕಷ್ಟದಿಂದ ಪಡೆಯುವ ಯತ್ನದಲ್ಲಿ ತಮ್ಮ ಚೈತನ್ಯವನ್ನು ನಷ್ಟಗೊಳಿಸುತ್ತಾರೆ. ಬೌದ್ಧಿಕ ಹಾಗೂ ಮಾನಸಿಕ ವಿಕಾಸವನ್ನು ಉಚ್ಚ ಶಿಕ್ಷಣದಿಂದ ಪಡೆಯಬೇಕಾದವರು ಆರ್ಥಿಕ ಸವಲತ್ತು ಇಲ್ಲದ ಕಾರಣಕ್ಕಾಗಿ ಹಿಂದೆಯೇ ಉಳಿದು, ದೇಶಕ್ಕೆ ಸಲ್ಲಿಸತಕ್ಕ ಸೇವೆಯನ್ನು ಸಲ್ಲಿಸದೇ ಉಳಿಯುತ್ತಾರೆ.

ಹೀಗೆ ಪೂರ್ತಿ ಯೋಗ್ಯತೆಯಿಲ್ಲದ ಪದವೀಧರರಲ್ಲಿ ಹಲವರು ಉಪಾಧ್ಯಾಯ ವೃತ್ತಿಗಿಳಿಯುವುದಿದೆ. ಏಕೆಂದರೆ ಹಿಂದೆಯೇ ನಾನು ಬರೆದಂತೆ ಸಮರ್ಥ ಪದವೀಧರರನ್ನು ಆಕರ್ಷಿಸುವ ಸ್ಥಿತಿಯಲ್ಲಿ ಈ ಉದ್ಯೋಗವಿಂದು ಇಲ್ಲಿ ಇರುವುದಿಲ್ಲ.

ಇನ್ನು ಕೆಲವು ಸಮಸ್ಯೆಗಳು ನಮ್ಮ ದೇಶಕ್ಕೂ ಅನ್ವಯವಾಗುವವುಗಳೇ. ಆದರೂ ನಾನವುಗಳನ್ನು ವಿಸ್ತರಿಸಿದ್ದರಿಂದ ದೋಷವಾಗದು ಎಂದು ಭಾವಿಸುತ್ತೇನೆ.

ಹಿಂದೆ ಭಾರತದ ಶಾಲೆಗಳಲ್ಲಿ ಪಾಠಪಟ್ಟಿಯಲ್ಲಿ ನೈತಿಕ ಶಿಕ್ಷಣವೆಂಬುದೊಂದು ಇತ್ತು. ಅದು ಕೆಲವು ಶಾಲೆಗಳಲ್ಲಿ ಪೂರ್ತಿ ವ್ಯರ್ಥವಾಗುತಿತ್ತು. ಅಂತಹ ಪಿರಿಯಡುಗಳಲ್ಲಿ ಉಪಾಧ್ಯಾಯರು ಮಕ್ಕಳನ್ನು ಆಡಲು ಬಿಡುವುದೂ ಇತ್ತಂತೆ-ಇಲ್ಲವೇ ಆ ಸಮಯವನ್ನು ಬೇರಾವುದಾದರೂ, ಪಾಠಕ್ಕಾಗಿ ಉಪಯೋಗಿಸುತ್ತಿದ್ದರು. ಇನ್ನಿತರ ಕೆಲವು ಶಾಲೆಗಳಲ್ಲಿ ಈ ಸಮಯವು ಅರ್ಥವರ್ಥವಾಗಿ ಉಪಯೋಗವಾಗುತ್ತಿತ್ತು. ನೀತಿಬೋಧೆಯನ್ನು ಕೊಡಲಾರದ ಅಧ್ಯಾ

ಪಕರು ತರಗತಿಯಲ್ಲಿ ಏನನ್ನಾದರೂ ಹೇಳುತ್ತಿದ್ದರು. ಕೆಲವರು ಯಾವುದ
ದರೂ ನೀತಿಪರವಾದ ಕತೆ ಹೇಳುತ್ತಿದ್ದರು. ಅಥವಾ ಇನ್ನೂ ಕೆಲವರು ಯಾ
ವುದೋ ಕಥೆಗಳನ್ನು ಓದಿ ಹೇಳುತ್ತಿದ್ದರು. ಅಲ್ಪ ಸಂಖ್ಯೆಯ ಕೆಲವೊಂದ
ಶಾಲೆಗಳಲ್ಲಿ ನಿಷ್ಠಾವಂತ ಉಪಾಧ್ಯಾಯರು ತಮಗೆ ತಿಳಿದಂತೆ ಉತ್ತಮ ನೀ
ಬೋಧೆಯನ್ನು ಕೊಡುತ್ತಿದ್ದರು.

ಅಂತೂ ಒಟ್ಟಿನಲ್ಲಿ ನೀತಿಬೋಧನೆಯ ಈ ಒಂದು ವ್ಯವಸ್ಥೆಯಿಂದ ಸ್ವಲ್ಪ
ವಾದರೂ ಒಳಿತೇ ಆಗುತ್ತಿತ್ತು ಎಂಬುದು ನಿಸ್ಸಂದೇಹ. ಕೆಲವೊಂದು ಶಾಲೆ
ಗಳ ಮಟ್ಟಿಗಂತೂ, ಅಲ್ಲಿಯ ವಿದ್ಯಾರ್ಥಿಗಳಿಗೆ ಅತ್ಯುತ್ತಮ ಪ್ರಯೋಜನವಾ
ಗುತ್ತಿತ್ತು ಎಂದೆನ್ನಬಹುದು.

ಆದರೆ ಹಲವು ಪ್ರಾಂತ್ಯಗಳ ಸರಕಾರಗಳು ಅದೇಕೋ ನೀತಿಪಾಠವೇ
ಅಪ್ರಯೋಜಕವೆಂದು ಭಾವಿಸಿ, ಪಾಠಪಟ್ಟಿಯಿಂದಲೇ ಅದನ್ನು ತೆಗೆದು ಹಾಕಿ
ದುವು. ಈಗಂತೂ ಇಲ್ಲಿಯ ಹೈಸ್ಕೂಲು, ಕಾಲೇಜುಗಳಲ್ಲಿ ನೀತಿಪಾಠಗಳಿಲ್ಲ.
ಆದರೆ ಕ್ರೈಸ್ತ ಮಿಶನರಿ ಸಂಸ್ಥೆಗಳಲ್ಲಿ ಮಾತ್ರ ಇಂದಿಗೂ ಕೆಲವೊಂದು ರೀತಿಯ
ನೈತಿಕ ಪ್ರವಚನವನ್ನು ನೀಡುತ್ತಿದ್ದಾರೆ.

ನಿಜವಾಗಿ ನೋಡು, ಸಿಲ್ವರ್. ನೀತಿಬೋಧೆಯ ವಿರುದ್ಧವಾಗಿ ದೇಶ
ದೇಶಗಳಲ್ಲಿ ಕಾಣುವ ಈ ತಿರಸ್ಕಾರದ ಭಾವನೆಯು ನನಗೆ ಅರ್ಥವೇ ಆಗಲೊ
ಲ್ಲದು. ಮಾನವ ಸಮಾಜವು ನೀತಿಯಿಂದ ವರ್ತಿಸಬೇಕೆಂಬುದಕ್ಕಾಗಿ ಸರ
ಕಾರಗಳು, ಶಾಸನಗಳನ್ನು ರಚಿಸಿವೆ—ಅದಕ್ಕಾಗಿ ಪೋಲೀಸು ಇಲಾಖೆ
ಹಾಗೂ ನ್ಯಾಯಾಂಗಗಳ ರಚನೆಯಾಗಿದೆ. ಆದರೆ ನೀತಿಯ ವಿರುದ್ಧ ವರ್ತ
ನೆಯ ಪರವಾಗಿ, ಅಶ್ಲೀಲ ವರ್ತನೆಯ ಪರವಾಗಿ, ದೇಶ ದೇಶಗಳಲ್ಲಿ ಇಂದು
ದೊಡ್ಡ ಅನಧಿಕೃತ ಬೋಧನೆಯೇ ದೊರೆಯುತ್ತಿದೆ. ಸಿನೆಮಾದ ಮೂಲಕ,
ಪತ್ರಿಕೆಗಳ ಮೂಲಕ, ಕರಪತ್ರಗಳ ಮೂಲಕ, ಭಿತ್ತಿಪತ್ರಗಳ ಮೂಲಕ,
ಪುಸ್ತಕಗಳ ಮೂಲಕ, ಸಾಮಾಜಿಕ ಮಾತುಕತೆಗಳ ಮೂಲಕ, ಅವ್ಯಾ
ಹತವಾಗಿ ಕೆಡುಕಿನ ಪ್ರಚಾರ, ಕೆಡುಕಿನ ಬೋಧನೆ ಸಾಗುತ್ತಲೇ ಇದೆ.
ಅದನ್ನು ಸರಕಾರಗಳು ನೋಡಿ ಕೈಕಟ್ಟಿ ಕುಳಿತಿವೆಯೇನೋ ಎಂದು
ಯಾರಾದರೂ ಭಾವಿಸಬೇಕು. ಅದರ ವಿರುದ್ಧ ಕಾರ್ಯಾಚರಣೆಯಂತೂ
ಕಾಣುವುದೇ ಇಲ್ಲ.

ಹೀಗಿದ್ದರೂ, ಯಾವ ಶಾಸನಗಳನ್ನು ಜನತೆಯ ಪ್ರತಿನಿಧಿಗಳಾದ ಸರ
ಕಾರಗಳು, ಸಮಾಜದ ಸುವ್ಯವಸ್ಥೆಗಾಗಿ ರಚಿಸಿವೆಯೋ, ಅವುಗಳ ಉದ್ದೇಶ
ಗಳು ಪೂರ್ತಿಯಾಗುವಂತೆ ನೀತಿಯು ನೆಲೆಗಟ್ಟನ್ನು ಎಳೆಯ ಜೀವಗಳಲ್ಲಿ
ತುಂಬುವುದು ಅವಶ್ಯ ಎಂಬುದನ್ನು ಯಾಕೆ ಯಾರೂ ಮನಗಾಣುವುದಿಲ್ಲ
ಎಂಬುದೇ ನನಗೆ ಅರ್ಥವಾಗುವುದಿಲ್ಲ.

ತರಬೇತಿಯಿಲ್ಲದೆಯೇ ನೀತಿ ವೈವೆತ್ತು ಬರಬೇಕೆಂಬ ಹಠವೇ? ಮಾನ
ವನ ಜೀವನದಲ್ಲಿ, ಅಷ್ಟೇಕೆ ಪ್ರಾಣಿ ಜೀವನದಲ್ಲೇ ಆದರೂ ಹಿರಿಯರಿಂದ ಕಲಿ
ಸಲ್ಪಡದೆ, ಕಿರಿಯರಿಂದ ಯಾವುದು ಕಲಿಯಲ್ಪಡುವುದು? ಎಷ್ಟೋ ಕಲಿಸುವಿಕೆ
ಗಳು ಅಪ್ರತ್ಯಕ್ಷ ರೂಪವನ್ನು ತಾಳಬಹುದು—ಉಳಿದ ಬಹು ಸಂಖ್ಯೆಯವು
ಗಳು ಉದ್ದೇಶ ಪೂರ್ವಕ ಕಲಿಸಿಯೇ ಬರುವವುಗಳು. ಅದಕ್ಕೇ ತಾನೇ ವಿದ್ಯಾ
ಸಂಸ್ಥೆಗಳ ಅಸ್ತಿತ್ವದ ಉಪಯೋಗ? ಇಲ್ಲವಾದರೆ ಅವುಗಳೇಕೆ? ಹಾಗಿರಲು
ನೀತಿಗೂ ಕಲಿಸುವಿಕೆ ಬೇಡವೆ?

ಪ್ರತ್ಯಕ್ಷ ಕಲಿಸುವಿಕೆ ಪರಿಣಾಮಕಾರಿಯಲ್ಲ ಎನ್ನುವ ಜನ ಇರಬಹುದು.
ಬೇಡ, ಪ್ರತ್ಯಕ್ಷ ಕಲಿಸುವಿಕೆಯ ಮಾತನ್ನು ತ್ಯಜಿಸೋಣ—ಆದರೆ ಅಪ್ರತ್ಯಕ್ಷ
ಕಲಿಸುವಿಕೆಯ ವೈಜ್ಞಾನಿಕ ವ್ಯವಸ್ಥೆಯನ್ನಾದರೂ, ಸರಕಾರ, ಶಿಕ್ಷಣ ವಿಭಾಗ
ಗಳು, ಸಮಾಜದ ಪ್ರಮುಖರು ಮಾಡಲೇ ಬೇಕಲ್ಲ! ಆದರೆ ಅಪ್ರತ್ಯಕ್ಷವಾಗಿ
ಇಂದು ಕಲಿಸಲ್ಪಡುತ್ತಿರುವುದು—ಅನೀತಿ, ನೀತಿಯಲ್ಲ.

ಸಿಲ್ವರ್, ಭಾರತಕ್ಕೆ ಮಾತ್ರವೇ ಮೀಸಲಾಗಿಟ್ಟು ಈ ಮಾತನ್ನು ನಾನ
ನ್ನುತ್ತಿದ್ದೇನೆ ಎಂದು ನೀನು ಭಾವಿಸಬೇಕಾಗಿಲ್ಲ. ಧರ್ಮದ ದೇಗುಲವಾದ
ಭಾರತದಲ್ಲೂ, ಅನ್ಯ ದೇಶಗಳ ಈ ದುಷ್ಟ ಕ್ರಮವನ್ನೇಕೆ ಅನುಸರಿಸಬೇಕು?
ಈ ರಾಷ್ಟ್ರವಾದರೂ ನೀತಿಯ ಅಧ್ಯಯನಕ್ಕೆ ವ್ಯವಸ್ಥೆ ಮಾಡಬಾರದೇ?
ಎಂಬುದು ನನ್ನ ಸಿಡುಕಿನ ಪ್ರಶ್ನೆ.

ಸಿಡುಕು ಯಾರ ಮೇಲೆ? ನನ್ನ ಸಿಡುಕಿಗೆ ಮೌಲ್ಯವೆಲ್ಲಿದೆ? ಆದರೂ
ಸಿಡುಕು ಮಾಡೋಣ ಎಂದೇ ನನಗನ್ನಿಸುತ್ತಿದೆ. ಕೆಡುಕನ್ನು ನೋಡಿ ಸಿಡು
ಕಿಲ್ಲದೆ ಹೇಗೆ ಕುಳಿತಿರಲಿ? ಅಲ್ಲವೇ ಸಿಲ್ವರ್?

ಸಮಾಜದ ಆಗುಹೋಗುಗಳ ಕುರಿತಾಗಿ ವಿಮರ್ಶಿಸಿ, ದುಷ್ಟವಾದವುಗ
ಳೆದುರು ಶಸ್ತ್ರ ಹಿಡಿಯುವ (ತಾತ್ವಿಕ ಶಸ್ತ್ರ, ನೆನಪಿರಲಿ!) ಕೆಲವೊಂದು ವಿಚಾರ
ವಾದಿಗಳ ಯತ್ನದಲ್ಲೇ ಸಾಮಾಜಿಕ ವಿಕಾಸದ ರಹಸ್ಯವಡಗಿದೆಯಲ್ಲ

ಗೆಳೆಯಾ? ಅದುದರಿಂದ ನನಗಾದರೂ ಇಂತಹ ಸಿಡಿಮಿಡಿ ಬರುತ್ತಿದೆಯಲ
ಎಂಬ ಹೆಮ್ಮೆ ನನ್ನನ್ನು ಒಂದಿಷ್ಟು ಬಾಧಿಸಿದರೆ ನನಗೇನೂ ತಪ್ಪೆಂದು ಅನಿ
ವುದಿಲ್ಲ. ಏಕೆಂದರೆ ನನ್ನ ಹೋರಾಟ ಪ್ರಾರಂಭಿಸಲು, ಹಾಗೂ ಮುಂ
ಸಲು ನನಗೊಂದು ಎದೆಗಾರಿಕೆಯಾದರೂ ಬೇಕಲ್ಲ?

ಇತರ ಹಲವಾರು ದೇಶಗಳಂತೆಯೇ ಭಾರತದಲ್ಲೂ ವಿದ್ಯಾ ಸಂಸ್ಥೆಗಳ
ಯಾವುದೇ ರೀತಿಯ ಧಾರ್ಮಿಕ ಅಥವಾ ಅಧ್ಯಾತ್ಮಿಕ ಶಿಕ್ಷಣವನ್ನು ನೀ
ತ್ತಿಲ್ಲ. ಭಾರತವು ಜಾತ್ಯತೀತ ರಾಷ್ಟ್ರ (Secular State) ಎಂಬುದಾ
ತಿಳಿಯಲ್ಪಡುತ್ತಿದೆ. ಯಾವುದೇ ಒಂದು ಧರ್ಮಕ್ಕೆ ಅಂಟಿಕೊಳ್ಳ
ಅಥವಾ ಯಾವುದೇ ಒಂದು ಧರ್ಮವನ್ನು ಮಾತ್ರವೇ ಎತ್ತಿ ಹಿಡಿಯು
ರಾಷ್ಟ್ರಎಂಬುದದರ ಅರ್ಥವಾದರೂ ಇಲ್ಲಿಯ ಹಲವು ರಾಜಕೀಯ ಮುಖಂಡ
ಮತ್ತು ಶಿಕ್ಷಣ ತಜ್ಞರು, ಧರ್ಮವೆಂಬುದರ ಗಂಧಗಾಳಿಯೇ ಈ ರಾಷ್ಟ್ರಕ್ಕೆ
ಎಂಬ ಅರ್ಥವನ್ನು ಆ ಶಬ್ದಕ್ಕೆ ಕೊಡುತ್ತಾರೆ. ಆದ್ದರಿಂದಲೇ ವಿದ್ಯಾಸಂ
ಗಳಲ್ಲಿ ಧರ್ಮಕ್ಕೆ ಸಂಬಂಧಪಟ್ಟ ಶಿಕ್ಷಣವನ್ನು ನೀಡುವ ಹವ್ಯಾಸವೇ ಬೇ
ಎಂಬುದಾಗಿ ಅವರು ಭಾವಿಸಿಕೊಳ್ಳುತ್ತಾರೆ. ಆದ್ದರಿಂದಲೇ ವಿದ್ಯಾಸಂಸ್ಥೆ
ಗಳಲ್ಲಿ ಧಾರ್ಮಿಕ ಶಿಕ್ಷಣವೇ ನೀಡಲ್ಪಡುತ್ತಿಲ್ಲ.

ಇಲ್ಲಿಯ ಶಿಕ್ಷಣ ತಜ್ಞರಲ್ಲಿ ಆ ಕುರಿತಾಗಿ ನಾನು ಬಹಳವಾಗಿ ಚರ್ಚಿ
ಸಿದ್ದೇನೆ. ಧಾರ್ಮಿಕ ವಿಚಾರ ಹೇಳಲು ಹೊರಟಾಗ ಇತರ ಧರ್ಮಗಳಿ
ವಿರೋಧವಾಗುವ ವಿಷಯಗಳನ್ನು ಉಪಾಧ್ಯಾಯರು ತಿಳಿಸಿದರೆ ಧಾರ್ಮಿ
ದ್ವೇಷವುಂಟಾಗುವುದಲ್ಲ, ಎಂಬ ವಾದವನ್ನು ಅವರು ಮುಂದೆ ಮಾಡು
ತ್ತಾರೆ. ಆದರೆ ಯಾವುದೇ ಒಂದು ಧರ್ಮವನ್ನು ಕುರಿತಾಗಿಯೇ ಎತ್ತಿ
ಹಿಡಿಯದೆ, ಎಲ್ಲ ಧರ್ಮಗಳ ಮೂಲ ಸೂತ್ರಗಳನ್ನು ಹೇಳಬಹುದ
ಎಂದು ನಾನು ಪ್ರಶ್ನಿಸಿದ್ದುಂಟು. ಅಥವಾ ಒಂದೊಂದು ಧರ್ಮವನ
ಎತ್ತಿ ಹಿಡಿಯದೆ ಸರ್ವ ಧರ್ಮಗಳಿಗೂ ಅನ್ವಯವಾಗುವಂತೆ ಧಾರ್ಮಿ
ಒಲವನ್ನು ಬೆಳೆಸುವ ವಿಶಾಲ ದೃಷ್ಟಿಯ ಆಧ್ಯಾತ್ಮಿಕತೆಯನ್ನು ಹೇ
ಬೆಳೆಸಬಹುದು-ಅವರವರ ಧರ್ಮಾನುಸಾರ ಪಾರಮಾರ್ಥಿಕ ಸಾಧ
ಯನ್ನು ಹೇಗೆ ಮುಂದರಿಸಬಹುದು ಎಂಬುದನ್ನಾದರೂ ಸೂಚಿಸಬಹುದ
ಎಂದು ನಾನು ಕೇಳಿದರೆ ಯಾರ ತಲೆಗೂ ಹೋಗುವುದಿಲ್ಲ. ನಿಷ್ಪ
ಪಾತ ಬುದ್ಧಿಯಿಂದ ಅನ್ಯಧರ್ಮಗಳ ನಿಂದೆ, ದೂಷಣೆ ಬಾರದಂತೆ ಅಧ್ಯಾತ್ಮಿ
ಬೋಧನೆಯನ್ನು ನೀಡುವ ಶಕ್ತಿ ಯಾರಿಗಿದೆ ಎಂಬುದಾಗಿ ಅವರು ಆಕ್ಷೇಪವೆತ್ತ

ತ್ತಾರೆ. ಮರುಕ್ಷಣದಲ್ಲೇ ಅವರು ಹೀಗೂ ಸ್ವರ ಕೂಡಿಸುತ್ತಾರೆ. "ಧಾರ್ಮಿಕ
ಕ್ಷಣ ನೀಡಿ ಆಗಬೇಕಾದ್ದಾದರೂ ಏನು? ಧರ್ಮದಿಂದ ಪ್ರಯೋಜನವೇ
ದೆ?" ಅಂದರೆ ಸತ್ಯವಾಗಿ ಹೇಳುತ್ತೇನೆ, ಸಿಲ್ವರ್–ಇಂತಹ ಭಾರತದ ಪ್ರಮುಖ
ಮುಖಂಡರನ್ನು ಕಂಡು, ಅವರ ಮಾತನ್ನು ಕೇಳಿದಾಗ ನಾನು ಧರ್ಮದ
ನೆಲೆಮನೆಯಾದ ಭಾರತದಲ್ಲಿ, ಹಿಂದಿನ ಧರ್ಮದೇವತೆಗಳಂತಿದ್ದ ಋಷಿ
ಪುಂಗವರ ವಂಶಜರ ಕೂಡೆ ಮಾತನಾಡುತ್ತಿದ್ದೇನೆ ಎಂಬ ಅರಿವಾಗಲೀ, ಪ್ರಜ್ಞೆ
ಯಾಗಲೀ ನನಗೆ ಬರುವುದೇ ಇಲ್ಲ.

ಹೀಗೆ ಧಾರ್ಮಿಕ ಹಾಗೂ ನೈತಿಕ ತರಬೇತಿಯೇ ಮಕ್ಕಳಿಗೆ ಸಿಗದಿರುವ
ಕಾರಣದಿಂದ ಅವರೆಲ್ಲರೂ ಕೇವಲ ಮೃಗ ಸ್ವಭಾವವನ್ನು ಬಳಸಿಕೊಳ್ಳುತ್ತಾ
ಮನಸ್ಸಿನ ನಿಯಂತ್ರಣವೇ ಇಲ್ಲದವರಾಗಿ ಉಳಿದು ಬಿಡುತ್ತಾರೆ—ಇದರಿಂದ
ಅಧ್ಯಯನದ ಮೇಲೂ ಅಭಿರುಚಿಯಿಲ್ಲದಾಗುವುದು ಸಹಜವಾಗಿದೆ. ಮಾನ
ವನು ವಿಕಾಸದ ಪಥದಲ್ಲಿ ಮುಂದೆ ಸಾಗಬೇಕೇಕೆ, ಒಳ್ಳೆಯವನಾಗಬೇಕೇಕೆ,
ಎಂಬುದಕ್ಕೆ ಸರಿಯಾದ ಉತ್ತರವನ್ನು ನೀತಿ ಮತ್ತು ಧರ್ಮವು ಕೊಟ್ಟಂತೆ
ಇನ್ನ್ಯಾವುದೂ ಕೊಡುವಂತಿಲ್ಲ.

ಅದಕ್ಕೆ ಸರಿಯಾಗಿಯೇ ಅಂದರೆ ಪೂರಕವಾಗಿಯೆಂಬಂತೆ ಹಲವಾರು
ದೇಶಗಳಂತೆಯೇ ಭಾರತ ದೇಶದ ವಿದ್ಯಾರ್ಥಿಗಳೂ ಸಿನೆಮಾದ ಬೆನ್ನು ಹಿಡಿ
ದಿರುತ್ತಾರೆ. ಸಿನೆಮಾ ಎಂಬ ವಿಧಾನವು ನಿಜವಾಗಿ ನಿರಪರಾಧಿಯಾಗಿದೆ.
ಅದರಲ್ಲೇನಿದೆ? ಅದು ಕೇವಲ ಸ್ವರದಿಂದ ಕೂಡಿದ ಭಾವಚಿತ್ರಗಳ ಪಡಿನೆರಳು.
ಆದರೆ ಅದು ಇಂದು ಲೈಂಗಿಕ ಪ್ರಚೋದನೆ ಮಾಡಿ ಹಣ ಗಳಿಸುವ ಲಾಭ
ಬಡಕರ ಕೈವಶವಾಗಿರುತ್ತದಾದ್ದರಿಂದ, ಬಹಳ ಅಪಾಯಕಾರಿಯಾಗಿದೆ.
ಇಂದು ಎಲ್ಲಾ ಕಡೆಗಳಲ್ಲೂ ಸಮಾಜವನ್ನು ಕೆಡಿಸುವ ಪ್ರಧಾನ ಶಕ್ತಿಯೆಂದರೆ
ಚಲಚ್ಚಿತ್ರವೇ ಆಗಿದೆ.

ಇಂದು ಕೇವಲ ಹೆಣ್ಣು ಗಂಡಿನ ಅನುರಾಗವನ್ನು ಪ್ರತಿಬಿಂಬಿಸುವ
ಹಾಗೂ ಭೋಗ ಜೀವನವನ್ನು ಎತ್ತಿ ಹಿಡಿಯುವ ಒಂದು ಸಂಕೇತವಾಗಿದೆ ಈ
ಚಲಚ್ಚಿತ್ರ. ವಿದ್ಯಾರ್ಥಿಗಳು ಇವುಗಳನ್ನು ನೋಡಿ ಮನಸ್ಸನ್ನು ರಂಜಿಸುವುದ
ರಲ್ಲಿ ನಿರತರಾಗಿದ್ದಂತೆ ಇನ್ನ್ಯಾವುದರಲ್ಲೂ ನಿರತರಾಗುವುದಿಲ್ಲ. ಸಿನೆಮಾ ನಟ
ನಟಿಯರ ಜೀವನದ ಅಶ್ಲೀಲ ರಹಸ್ಯಗಳನ್ನು ತಿಳಿಯುವುದರಲ್ಲಿ ಅವರು
ತೋರುವ ಕುತೂಹಲವನ್ನು ಪ್ರಪಂಚದಲ್ಲಿ ತಿಳಿಯಲೇಬೇಕಾದ ವಿಸ್ಮಯ
ಕಾರಕ ವಿಷಯಗಳನ್ನು ತಿಳಿಯುವುದರಲ್ಲಿ ಪ್ರಕಟಿಸುವುದಿಲ್ಲ.

ನೀನೇ ತಿಳಿದಿರುವಂತೆ ಮನಸ್ಸನ್ನು ವಿಕಾರಗೊಳಿಸಿ, ಹಲವಾರು ಅಸಹ
ವಾದ, ಅನವಶ್ಯವಾದ ಆಸೆಗಳನ್ನು ಎಬ್ಬಿಸಿಹಾಕಿ, ಮನಸ್ಸು ಸದಾ ಅತೃಪ್ತಿ
ಅಶಾಂತಿಗಳಿಂದ ಬೇಯುವಂತೆ ಮಾಡುವುದೇ ಇಂದಿನ ಸಿನೆಮಾಗಳ ಸ್ವಭಾವ
ನಮ್ಮ ಹೊಲಿವುಡ್‌ನ ಚಿತ್ರಗಳಂತೂ ಈ ದಿಸೆಯಲ್ಲಿ ಎತ್ತಿದ ಕೈಗಳಾಗಿವೆ
ಇಂತಹ ಮಾನಸಿಕ ಪ್ರಕ್ಷುಬ್ಧತೆಯಿರುವ ಸ್ಥಿತಿಯಲ್ಲಿ ಅಧ್ಯಯನಕ್ಕೆ ಬೇಕಾದ
ಬೌದ್ಧಿಕ, ಮಾನಸಿಕ ಮತ್ತು ದೈಹಿಕ ಸ್ಥಿತಿಯಿರುವುದಿಲ್ಲ ಎಂದುದು ಸ್ಪಷ್ಟ.

ಇಂತಹ ಅಶಾಂತಿ ಅತೃಪ್ತಿಗಳಿಂದ ಬಳಲುವ ವಿದ್ಯಾರ್ಥಿಗಳ ಗುಂಪು
ಗಳೇ ದೇಶದಲ್ಲಿ ಹಲವಾರು ಸಮಸ್ಯೆಗಳನ್ನು ಉಂಟುಮಾಡುವ ಬೃಹತ್
ಕೂಟಗಳಾಗುತ್ತವೆ. ಅಂದರೆ ಯಾವುದೋ ಕೆಲವು ಕ್ಷುಲ್ಲಕ ಕಾರಣಗಳಿಗಾಗಿ,
ಅವರು ಮುಷ್ಕರ ಹೂಡುತ್ತಾರೆ; ಇತರ ವಿದ್ಯಾರ್ಥಿ ಸಮೂಹಗಳನ್ನೂ
ಇದೇ ರೀತಿ ಸಂಘಟಿಸುತ್ತಾರೆ; ಆಗ ಕಾನೂನನ್ನೇ ಅವರು ತಮ್ಮ ಕೈವಶ
ಮಾಡಿಕೊಂಡಂತಿರುತ್ತಾರೆ; ಹಿಂಸಾಚಾರ ಮಾಡುತ್ತಾರೆ, ಕಲ್ಲು ತೂರುತ್ತಾರೆ,
ಲೂಟಿ ಮಾಡುತ್ತಾರೆ, ಸಾರ್ವಜನಿಕ ಸೊತ್ತುಗಳಿಗೆ ಬೆಂಕಿ ಕೊಡುತ್ತಾರೆ,
ಸಾರ್ವಜನಿಕ ಜೀವನವನ್ನೇ ಸ್ಥಗಿತಗೊಳಿಸುತ್ತಾರೆ.

ನಿಜ ಹೇಳಬೇಕೆಂದರೆ, ಈಗ ಬೆಂಗಳೂರು ನಗರದಲ್ಲಿ ಅಂತಹ ಒಂದು
ಕೋಲಾಹಲ ನಡೆಯುತ್ತಿದೆ. ಸಾವಿರಾರು ವಿದ್ಯಾರ್ಥಿಗಳು ಮುಷ್ಕರ ಹೂಡಿ
ಏನೇನೋ ಕೇಳಿಕೆಗಳನ್ನು ಮಂಡಿಸುತ್ತಾ, ಮತಪ್ರದರ್ಶನ ಮಾಡುತ್ತಾ,
ಸಾರ್ವಜನಿಕ ಸೊತ್ತುಗಳನ್ನೂ, ಕಟ್ಟಡಗಳನ್ನೂ ನಾಶಪಡಿಸುತ್ತಾ, ಅರಾಜ
ಕತೆಯನ್ನು ತಂದಿರುತ್ತಾರಂತೆ. ಅವರ ಕೇಳಿಕೆಗಳಲ್ಲಿ ಕೆಲವು ನ್ಯಾಯವಾದ
ಅಂಶಗಳೂ ಇರಬಹುದೆನ್ನು. ಆದರೆ ಈ ವಿಧಾನ ಸರಿಯೇ ಎಂಬುದು ನನ್ನ
ಪ್ರಶ್ನೆ. ಟ್ರೇಡ್ ಯೂನಿಯನ್‌ಗಳ ಸುಸಂಘಟಿತ ಮಜೂರರಂತೆ, ವಿದ್ಯಾ
ರ್ಥಿಗಳೂ ಇಂತಹ ಸ್ಥಿತಿಗಿಳಿಯುವುದು ಯೋಗ್ಯವೆಂದು ಹೇಳಬಹುದೇ?

ನಾನು ಈಗ ಬೆಂಗಳೂರಿನಲ್ಲಿರಬೇಕಾಗಿತ್ತಲ್ಲ? ಈ ಸುದ್ದಿ ತಿಳಿದುದರಿಂ
ದರಿಂದಲೇ ನಾನು ಅಲ್ಲಿಗೆ ಹೋಗಲಾಗಲಿಲ್ಲ. ಅಂದರೆ ನನ್ನ ಗೆಳೆಯ ಜಯ
ನಾಥರೇ ನನ್ನನ್ನು ಇಲ್ಲಿ ತಡೆಹಾಕಿದರು. ಆದುದರಿಂದ ಇಲ್ಲೇ ಉಳಿದೆ.

ಅವರ ಭಾವನೆಂಟ ಹುಡುಗನೊಬ್ಬನೂ ಬೆಂಗಳೂರಿನ ಈ ಮುಷ್ಕರದಲ್ಲಿ
ಭಾಗವಹಿಸಿ, ಹಿಂಸಾಚಾರದಲ್ಲಿ ತೊಡಗಿದಾಗ ಲಾಠಿಪೆಟ್ಟಿಗೆ ಗುರಿಯಾಗಿ ತಲೆ
ಜಜ್ಜಿಕೊಂಡು ಆಸ್ಪತ್ರೆಯಲ್ಲಿದ್ದಾನಂತೆ. ನಿನ್ನೆ ತಾನೇ ಜೀವ ಕೈಯಲ್ಲಿ ಹಿಡಿ

ದುಕೊಂಡು ಜಯನಾಥರು ಇಲ್ಲಿಗೆ ಬಂದು ತಲಪಿ, ತಮ್ಮ ಭಯಾನಕ ಅನುಭವ ವನ್ನು ತಿಳಿಸಿದರು.

ಇಂತಹ ಸ್ಥಿತಿಯಲ್ಲಿ ಅಧ್ಯಯನವು ಅಪೇಕ್ಷಿತ ಮಟ್ಟಕ್ಕೆ ಹೇಗೆ ತಾನೇ ಬರಬೇಕು ನನಗರಿಯುವುದಿಲ್ಲ.

ಇಂತಹ ಎಷ್ಟೋ ದುರ್ಘಟನೆಗೆ ಹಲವಾರು ಪ್ರಾಧ್ಯಾಪಕರೂ, ಕೆಲ ವೊಂದು ಪಕ್ಷಗಳ ಮುಖ್ಯವಾಗಿ ಕಮ್ಯುನಿಸ್ಟ್ ಪಕ್ಷದ ಧುರೀಣರೂ ಕಾರಣ ವಾಗುವುದಿದೆ. ಸಿನೆಮಾಗಳು ಅದಕ್ಕೆ ಮೂಲಭೂತವಾದ ಅತೃಪ್ತಿ, ಅಶಾಂತಿ ಗಳನ್ನೊದಗಿಸುವ ರಾಕ್ಷಸೀ ಶಕ್ತಿಗಳು.

ಭಾರತ ದೇಶದಲ್ಲಿ ಹೊರದೇಶಗಳಿಂದ ತರಿಸಲೇ ಬೇಕಾಗುವ ಬೃಹತ್ ಯಂತ್ರಸ್ಥಾವರಗಳನ್ನು ತರಿಸಲು ಧನವಿಲ್ಲದೆ ದೊಡ್ಡ ಪೇಚಾಟವಾಗುವುದಿದೆ. ಎಷ್ಟೋ ಸಲ ಅಂಥ ಆವಶ್ಯಕತೆಗಳನ್ನು ಬಹಳ ಮುಂದೆ ಹಾಕಬೇಕಾಗುವುದಿದೆ. ಅಂದರೆ ವಿದೇಶ ವಿನಿಮಯದ ಕೊರತೆಯು ಇಲ್ಲಿ ತೀವ್ರವಾಗಿರುವುದು. ಆದರೆ, ಸಿಲ್ವರ್, ಆಶ್ಚರ್ಯವೆಂದರೆ, ಭಾರತದ ಸಂಸ್ಕೃತಿಗೇ ಅಪಚಾರವಾಗುವ ವಿದೇಶದ, ಮುಖ್ಯವಾಗಿ ನಮ್ಮ ಹೋಲಿವುಡ್‌ನ ಚಿತ್ರಗಳನ್ನು ಭಾರತದ ಚಿತ್ರ ಮಂದಿರಗಳಿಗೆ ಸಾವಿರ ಸಂಖ್ಯೆಯಲ್ಲಿ ಒದಗಿಸಲು ವಿದೇಶ ವಿನಿಮಯದ ಕೊರತೆ ಬಾಧಿಸುತ್ತಲೇ ಇಲ್ಲ. ಹೇಗಿದೆ ಈ ವಿಡಂಬನೆ!

ಇಂತಹ ಸಂದರ್ಭಗಳಲ್ಲಿ ಕಾಲೇಜು ವಿದ್ಯಾರ್ಥಿಗಳನ್ನು ಸಿನೆಮಾ ನೋಡ ಲು ಅದರಲ್ಲೂ ಇಂಗ್ಲಿಷ್ ಸಿನೆಮಾಗಳನ್ನು ನೋಡಲು ಪ್ರೋತ್ಸಾಹಿಸುವ ಪ್ರಾಧ್ಯಾಪಕರೇ ಭಾರತದಲ್ಲಿ ಬಹಳ ಮಂದಿ ಇದ್ದಾರೆಂದರೆ ಭಾರತೀಯರಿಗೇ ಆಶ್ಚರ್ಯವಾಗಬಹುದು; ಆದರೆ ಅದು ಸತ್ಯ.

ಮನೋನಿಯಂತ್ರಣ ಮತ್ತು ಧರ್ಮ ಸಾಧನೆಯೆಂಬುದು ಭಾರತದ ಸಂಸ್ಕೃತಿಯ ತಿರುಳಾಗಿದೆ, ನಿಜ. ಆದರೆ ಭಾರತದ ವಿದ್ಯಾ ಮಂದಿರಗ ಳಿಂದ ಹೊರಬರುವ ನವ ತರುಣ ತರುಣಿಯರಿಂದು ಮನೋನಿಯಂತ್ರಣಕ್ಕೆ ಹರದಾರಿ ದೂರದಲ್ಲಿ ನಡೆಯುತ್ತಿದ್ದಾರೆ. ತಮ್ಮ ದೇಶದ ಭವ್ಯ ಸಂಸ್ಕೃತಿ ಯಲ್ಲಿ ಬೇರು ಬಿಟ್ಟಿರಬೇಕಾದ ಅವರ ಮನಸ್ಸು ಕೇವಲ ಕ್ಷುಲ್ಲಕವಾದ ಐಂದ್ರಿ ಕವಾದ ವಿಷಯಗಳಲ್ಲಿ ತೊಡಗಿದ್ದು, ವಿದ್ಯಾರ್ಥಿಯಲ್ಲಿರಬೇಕಾದ ವಿದ್ಯಾರ್ಜ ನೆಯ ಕಳಕಳಿಯೂ ಇಲ್ಲವಾಗಿ ಕೇವಲ ಭೋಗಾರ್ಜನೆಯ ಸ್ಥಿತಿ ಕಂಡಾಗ ಯಾರಿಗೆ ತಾನೇ ದುಃಖವಾಗದು?

ಪಾಶ್ಚಾತ್ಯರಾದ ನಮ್ಮ ಸಂಸ್ಕೃತಿ ಒಂದು ತರವಾಗಿದೆ. ನಮ್ಮ ವಿದ್ಯಾರ್ಥಿಗಳು, ನಮ್ಮ ಸಂಸ್ಕೃತಿಯ ಚೌಕಟ್ಟನ್ನು ಬಹಳವಾಗಿ ಅತಿಕ್ರಮಿಸಿ ಹೋಗುತ್ತಿದ್ದಾರೆನ್ನಬರುವುದಿಲ್ಲ. ಏಕೆಂದರೆ ನಮ್ಮ ಸಾಮಾಜಿಕ ರೀತಿ ನೀತಿಯೇ ಹಾಗಿದೆ. ಆದ್ದರಿಂದ ಅವರು ಭೌತಿಕ ವಿಲಾಸವಾದಕ್ಕೇನೇ ಬಂದರೂ, ಅವರ ಮಾನಸಿಕ ಸ್ಥಿತಿಯಲ್ಲಿ ಬಹಳ ದೊಡ್ಡ ಅಲ್ಲೋಲಕಲ್ಲೋಲವಾಗಿ ಅವರ ಅಧ್ಯಯನದ ಅಭಿರುಚಿ ಕೆಡುವುದಿಲ್ಲ. ಆದರೆ ಇಲ್ಲಿಯ ಪರಿಸ್ಥಿತಿ ಹಾಗಿಲ್ಲ. ಭಾರತದ ವಿದ್ಯಾರ್ಥಿಗಳಲ್ಲಿ ಬಹು ಸಂಖ್ಯಾಕರಲ್ಲಿ ಇಂದು ಕಾಣುವ ಸ್ಥಿತಿಯು ಇಲ್ಲಿಯ ಸಂಸ್ಕೃತಿಯನ್ನು ಬಹಳವಾಗಿ ಅತಿಕ್ರಮಿಸಿದಂತೆಯೇ ಆಗುವುದು. ಅಂತಹ ಅತಿಕ್ರಮಣದಿಂದಾಗಿ ಉಂಟಾಗುವ ಮಾನಸಿಕ ಕ್ಷೋಭೆ ದೊಡ್ಡದು. ಅದು ಕಟ್ಟೆಯೊಡೆದ ಅಣೆಕಟ್ಟೆನ ನೀರಿನಂತೆ ಹುಚ್ಚು ಹೊಳೆಯಾಗಿ ಸಿಕ್ಕಿ ಸಿಕ್ಕಿದಲ್ಲಿ ಹರಿಯತೊಡಗುವುದು. ಅಂದರೆ ಆಗ ಅಧ್ಯಯನಕ್ಕೆ ಬೇಕಾದ ಜಿಜ್ಞಾಸೆಯ ಸ್ಥಿತಿಯೇ ಉಳಿಯುವಂತಿಲ್ಲ, ಆದುದರಿಂದ ಇಲ್ಲಿಯ ಇಂದಿನ ಶೈಕ್ಷಣಿಕ ಅವನತಿ, ಹಾಗೂ ಕೆಳತರಗತಿಯ ಮಟ್ಟವನ್ನು ಈ ಎಲ್ಲಾ ಬೆಳಕುಗಳಲ್ಲಿ ವೀಕ್ಷಿಸಬೇಕು. ಆಗ ನಮಗೆ ಅದರ ಕಾರಣವು ಹೆಚ್ಚಾಗಿ ಅರ್ಥವಾಗುವುದು.

ಸಿಲ್ವರ್, ವಿದ್ಯಾಭ್ಯಾಸದ ಕುರಿತಾಗಿ ನಾನು ಬರೆದುದು ಬಹಳ ಹೆಚ್ಚಾಯಿತು, ಅಲ್ಲವೇ? ಮೇಲಾಗಿ ಇದು ಎಲ್ಲರಿಗೂ ರುಚಿಸುವ ವಿಷಯವಲ್ಲವಾಗಿ ನಿನಗೂ ಜಿಗುಪ್ಸೆ ಬರತೊಡಗಿದರೆ ಏನೇನೂ ಆಶ್ಚರ್ಯವಿಲ್ಲ. ಆದರೆ ಶೈಕ್ಷಣಿಕ ಕ್ಷೇತ್ರದಲ್ಲಿರುವ ಇನ್ನೊಂದು ದೊಡ್ಡ ಸಮಸ್ಯೆಯನ್ನು ನಿನ್ನ ಮುಂದಿಟ್ಟು ಬಿಡಲೇ? ಈಗಾಗಲೇ ಔದಾಸೀನ್ಯ ನಿನ್ನನ್ನು ಬಾಧಿಸುತ್ತಿದೆಯಾದರೆ, ಒಂದು ಕಪ್ ಕಾಫಿ ಕುಡಿದು ಮರಳಿ ಬಂದು ಕುಳಿತಿರು. ಮುಂದಿನ ಸಲದಲ್ಲಿ ಇನ್ನೂ ಸ್ವಾರಸ್ಯದ ವಿಷಯಗಳಿಗೆ ದಾಟಿ ಬಿಡುತ್ತೇನೆ ಎಂದು ನಿನಗೆ ಈ ಮೂಲಕ ಕೊಡುವ ಆಶ್ವಾಸನೆಯನ್ನೂ ನೀನು ಮೆಲುಕು ಹಾಕಬಹುದು. ಅಲ್ಲವೇ?

ಗೆಳೆಯಾ, ಇಲ್ಲಿಯ ಭಾಷೆಯ ಗೊಂದಲಗಳ ಕುರಿತಾಗಿ ಹಿಂದೆಯೇ ಬರೆದಿದ್ದೇನೆ. ಅಲ್ಲದೆ ಇಲ್ಲಿಯ ವಿದ್ಯಾರ್ಥಿಗಳು ಎರಡು ಮೂರು ಭಾಷೆಗಳನ್ನು ಕಲಿಯಬೇಕಾಗುವ ಸಮಸ್ಯೆಯ ಕುರಿತಾಗಿಯೂ ಬರೆದಿದ್ದೇನೆ. ಈ ಸಮಸ್ಯೆಗಳ ಫಲರೂಪವಾಗಿ, ಶಿಕ್ಷಣ ಮಾಧ್ಯಮದ ಒಂದು ಸಮಸ್ಯೆಯು

ಉದ್ಭವವಾಗುವುದು. ಹೈಸ್ಕೂಲುಗಳಲ್ಲಿ ಮತ್ತು ಕಾಲೇಜುಗಳಲ್ಲಿ ಯಾವ ಭಾಷಾ ಮಾಧ್ಯಮದಲ್ಲಿ ಶಿಕ್ಷಣ ಕೊಡಬೇಕೆನ್ನುವುದು ಇಲ್ಲಿ ಬಹಳ ದೊಡ್ಡ ದೊಡ್ಡ ಶಿಕ್ಷಣ ತಜ್ಞರ ತಲೆ ತಿನ್ನುವ ಸಮಸ್ಯೆಯಾಗಿದೆ.

ಹೈಸ್ಕೂಲುಗಳಲ್ಲೂ ಇಂಗ್ಲಿಷ್ ಮಾಧ್ಯಮವೇ ಇರಬೇಕೆಂಬ ಅಭಿಪ್ರಾಯ ಪಡುವವರು ಧಾರಾಳಮಂದಿ ಇದ್ದಾರೆ. ಇಂದಿಗೂ ಭಾರತದ ಹಲವಾರು ಕಡೆಗಳಲ್ಲಿ ಇಂಗ್ಲಿಷ್ ಮಾಧ್ಯಮದ ಹೈಸ್ಕೂಲುಗಳೂ ಧಾರಾಳ ಇವೆ. ಆದರೆ ಪ್ರಾಂತ್ಯಗಳ ರಾಜಕೀಯ ಧುರೀಣರು ಹಾಗೂ ಸಚಿವರುಗಳು, ಮನೆ ಮಾಡಿನಲ್ಲಿ ನಿಂತು ಪ್ರಾಂತ್ಯ ಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕು ಎಂದು ಬೊಬ್ಬಿಡುತ್ತಾರೆ. ಇದಲ್ಲವಾದರೆ, ಪರಕೀಯ ಭಾಷೆಯಲ್ಲಿ ಅವರು ಅತಿ ಪರಿಣಾಮಕಾರಿಯಾಗಿ ಶಿಕ್ಷಣ ಪಡೆಯಲು ಸಾಧ್ಯವಿಲ್ಲ ಎಂಬುದು ಅವರ ವಾದ. ಆದರೆ ಬಹಳ ತಮಾಷೆಯ ಮಾತೆಂದರೆ, ಕೆಲವು ಪ್ರಾಂತ್ಯಗಳ ಸಚಿವರುಗಳೆಲ್ಲ ತಮ್ಮ ಮಕ್ಕಳನ್ನು ಇಂಗ್ಲಿಷ್ ಮಾಧ್ಯಮದಲ್ಲೇ ಶಿಕ್ಷಣ ನೀಡುತ್ತಿರುವ ಕ್ರೈಸ್ತ ಮಿಶನರಿ ಶಾಲೆಗಳಿಗೇ ಕಳುಹಿಸುತ್ತಾರೆ. ಶಿಕ್ಷಣ ಸಚಿವರುಗಳೂ ಹೀಗೆಯೇ ಮಾಡಿ, ತಾವು ಸಾರ್ವಜನಿಕವಾಗಿ ಹೇಳುವ ಮಾತು ಯಥಾರ್ಥವಾದುದಲ್ಲ; ತಮ್ಮ ಮಕ್ಕಳಿಗೆ ಅದು ಅನ್ವಯವಾಗುವುದೂ ಇಲ್ಲ ಎಂಬಭಿಪ್ರಾಯವನ್ನು ಉಂಟುಮಾಡುತ್ತಾರೆ.

ಕಾಲೇಜು ತರಗತಿಗಳ ಸಮಸ್ಯೆಯಂತೂ ಬಹಳ ಗಡುತರದ್ದಾಗಿದೆ. ಈ ತನಕ ಹೆಚ್ಚಿನ ಕಾಲೇಜುಗಳಲ್ಲೂ ಶಿಕ್ಷಣ ಮಾಧ್ಯಮವು ಇಂಗ್ಲಿಷೇ ಆಗಿದೆ. ಇದರ ವಿರುದ್ಧವಾಗಿ ಎರಡು ಪ್ರಾಮುಖ್ಯವಾದ ವಾದಗಳು ಮುಂಡಿಸಲ್ಪಟ್ಟಿವೆ. ಒಂದನೆಯದಾಗಿ, ಅನ್ಯ ಭಾಷೆಯಲ್ಲಿ ಯಾವುದೇ ಒಂದು ವಿಷಯವನ್ನು ಸಂಗ್ರಹಿಸುವಲ್ಲಿ ವ್ಯಕ್ತಿಯ ಚೈತನ್ಯವು ನಷ್ಟವಾಗುವುದು ಎಂಬ ವಾದ. ಅಂದರೆ ವಿಷಯದ ಅಧ್ಯಯನ ಮಾಡುವುದರ ಜತೆಗೆ, ಆ ವಿಷಯವನ್ನು ನಿರೂಪಿಸುವ ಭಾಷೆಯ ಕಡೆಗೂ ಲಕ್ಷ್ಯ ಕೊಡಬೇಕಾಗುತ್ತದೆ-ಇದರಿಂದಾಗಿ ಜ್ಞಾನ ಸಂಪಾದನೆಯೂ ನಿಧಾನವಾಗುವುದು ಎಂಬುದು ತಾತ್ಪರ್ಯ. ಈ ಮಾತಿನಲ್ಲಿ ಹುರುಳಿಲ್ಲವೆನ್ನಬರುವುದಿಲ್ಲ.

ಇಂಗ್ಲಿಷ್ ಭಾಷೆಯು ಭಾರತದ ಬಹು ಸಂಖ್ಯಾಕ ಜನತೆಗೆ ತಿಳಿದಿಲ್ಲ—ಆದುದರಿಂದ ಅಂತಹ ಇಂಗ್ಲಿಷ್ ಭಾಷೆಯಲ್ಲೇ ವಿದ್ಯಾರ್ಥಿಗಳು ತಮ್ಮ ಭಾವನೆ

ಯನ್ನು ವ್ಯಕ್ತಪಡಿಸಲು, ಹಾಗೂ ಎಲ್ಲ ವ್ಯವಹಾರ ಸಾಗಿಸಲು ಕಲಿತ
ಅವರು ಜನ ಸಾಮಾನ್ಯರ ಕೂಡೆ ಯಾವುದೇ ಸ್ನೇಹ ಸಹಾನುಭೂತಿಯುಳ್ಳ
ರಾಗುವುದಿಲ್ಲ ಹಾಗೂ ಜನತೆಯ ನಿಜವಾದ ಪ್ರತಿನಿಧಿಗಳಾಗಲೂ ಅವ
ಅರ್ಹರಾಗುವುದಿಲ್ಲ ಎಂಬುದು ಎರಡನೆಯ ವಾದ. ಮಾತ್ರವಲ್ಲ, ಇಂಗ್ಲಿಷ
ಭಾಷೆಯಿಂದ ಆಂಗ್ಲರ ಹಾಗೂ ಪಾಶ್ಚಾತ್ಯರ ನಾಗರಿಕತೆಯೇ ವ್ಯಕ್ತಿಯಲ್ಲಿ ಮೈ
ಗೂಡುವುದು ಹೊರತಾಗಿ ಭಾರತೀಯ ಸಂಸ್ಕೃತಿಯು ಮೈಗೂಡುವುದಿ
ಎಂಬುದೊಂದು ಪ್ರಬಲ ವಿಚಾರ ಸರಣಿ. ಈ ಎಲ್ಲಾ ವಿಚಾರಗಳಲ್ಲೂ ಬಹ
ಅರ್ಥವಿದೆ, ಇಲ್ಲವೆನ್ನಲು ಬರುವುದಿಲ್ಲ.

ಆದರೆ ಇನ್ನೊಂದು ಬದಿಯಿಂದ ಆಲೋಚಿಸಿದಾಗ ಈ ವಿಚಾರ ಸರ
ಯನ್ನೊಪ್ಪಬೇಕೇ ಯಾ ಬೇಡವೇ ಎಂಬ ಸಂಶಯವು ಬರುವುದು ಸಹಜವ
ಆಗಿದೆ. ಇಂದೀಗ ಇತರ ಹಿಂದಿನ ಅಗ್ರಗಣ್ಯ ಭಾಷೆಗಳೆಲ್ಲವನ್ನೂ ಹಿಂ
ಹಾಕಿ ಇಂಗ್ಲಿಷು ನಾಗಾಲೋಟದಿಂದ ಮುಂದೆ ಸಾಗುತ್ತಿದೆ. ಇಂದು ಅಂ
ರ್ರಾಷ್ಟ್ರೀಯ ರಾಜಕೀಯದ ಬಹಳ ದೊಡ್ಡ ನಾಟಕಗಳೆಲ್ಲ ಈ ಭಾಷೆಯಲ್ಲಿ ನಡ
ಯುತ್ತಿವೆ. ಅಂತರ್ರಾಷ್ಟ್ರೀಯ ಕಾನೂನು, ವಿಜ್ಞಾನ, ವೈದ್ಯಕೀಯ, ತತ್ತ್ವ
ಶಾಸ್ತ್ರ ಮೊದಲಾದ ಪ್ರತಿ ವಿಭಾಗಗಳಲ್ಲೂ ಇಂಗ್ಲಿಷೇ ಇಂದು ಪ್ರಾಮುಖ್ಯ ಸ್ಥಾನ
ದಲ್ಲಿದೆ. ಈ ಭಾಷೆ ತಿಳಿದವರಿಗೆ ಜಗತ್ತಿನಲ್ಲಿ ವಿವಿಧ ವಿಷಯಗಳಲ್ಲಿ ಇಂದು
ಪ್ರಚಂಡ ವೇಗದಿಂದ ನಡೆಯುತ್ತಿರುವ ಪ್ರಗತಿಗಳನ್ನು ಕಂಡುಕೊಳ್ಳಲು ಬಹಳ
ಸುಲಭವಾಗಬಹುದು.

ಬೇರೆ ಯಾವ ಭಾಷೆಯಲ್ಲಿ ಉಚ್ಚ ಶಿಕ್ಷಣವನ್ನು ಮಾಡಿದಾಗಲೂ
ವಿದ್ಯಾರ್ಥಿಯ ಅಧ್ಯಯನ ಹಾಗೂ ಆ ದಿಸೆಯಲ್ಲಾದ ಪ್ರಗತಿಯ ಮಟ್ಟಗಳಲ್ಲಿ
ಬಹಳ ಅಭ್ಯಂತರವಿರುವುದು. ಇಂಗ್ಲಿಷಿನಲ್ಲಿ ಆ ಶಿಕ್ಷಣವು ದೊರೆತಾಗ ಮಾತ್ರ
ವೇ ಈ ಅಂತರ ಉಳಿಯದಂತೆ ಮಾಡಲು ಸಾಧ್ಯವಿದೆ. ಇತರ ಭಾಷೆಗಳನ್ನು
ಮಾಧ್ಯಮವನ್ನಾಗಿ ಇಟ್ಟುಕೊಂಡಾಗ ಆಧುನಿಕ ವೈಜ್ಞಾನಿಕ ಪ್ರಗತಿ ಹಾಗೂ
ಸಿದ್ಧಾಂತಗಳ ಕುರಿತಾಗಿ ಇಂಗ್ಲಿಷ್ ಭಾಷೆಯಲ್ಲಿರುವ ಹಲವಾರು ಗ್ರಂಥಗಳನ್ನು
ಆಯಾ ಭಾಷೆಗಳಲ್ಲಿ ಭಾಷಾಂತರಿಸಿದಾಗ ಮಾತ್ರವೇ ಫಲ ದೊರೆಯುವುದು.
ಅಂದರೆ ಆ ಗ್ರಂಥಗಳನ್ನು ಭಾಷಾಂತರಿಸುವಷ್ಟು ಕಾಲಕ್ಕೆ ಆತನ ತಿಳುವಳಿಕೆ
ಹಿಂದೆ ಇರಲೇ ಬೇಕು.

ಇಷ್ಟೇ ಅಲ್ಲ, ಮಿತ್ರಾ. ಅಂತರ್ರಾಷ್ಟ್ರೀಯ ಸಂಪರ್ಕವನ್ನು ವಿವಿಧ

ಕ್ಷೇತ್ರಗಳಲ್ಲಿ ಇಟ್ಟುಕೊಳ್ಳುವ ಬಗ್ಗೂ ಆಂಗ್ಲ ಭಾಷೆಯಲ್ಲಿ ಸರಿಯಾಗಿ ವ್ಯವಹರಿಸುವ ಜ್ಞಾನವಿದ್ದರೇನೇ ಸುಲಭ. ಅಂತಹ ಜ್ಞಾನವು, ಶಿಕ್ಷಣದ ಮಾಧ್ಯಮವಾಗಿ ಇಂಗ್ಲಿಷ್ ಇದ್ದಾಗ ಮಾತ್ರವೇ ಬರುವುದು ಹೊರತಾಗಿ ಅನ್ಯಥಾ ಇಲ್ಲ. ಆ ದೃಷ್ಟಿಯಿಂದ ಇಂಗ್ಲಿಷನ್ನೇ ಶಿಕ್ಷಣ ಮಾಧ್ಯಮವನ್ನಾಗಿ ಕಾಲೇಜುಗಳಲ್ಲಿ ಇಟ್ಟುಕೊಳ್ಳುವುದು ಸೂಕ್ತವಾಗಿದೆ. ಇದು ನಮ್ಮ ಭಾಷೆ ಎಂಬ ಅಭಿಮಾನದಿಂದ ಹೀಗೆ ನಾನು ಬರೆಯುತ್ತಿದ್ದೇನೆಯೇ ಎಂಬುದಾಗಿ ನನ್ನನ್ನೇ ನಾನು ಪ್ರಶ್ನಿಸುತ್ತಿದ್ದೇನೆ. ಆದರೆ ಅಂತಹ ಕುರುಡು ದುರಭಿಮಾನ ನನಗಿದ್ದಂತೆ ನನಗನ್ನಿಸುವುದಿಲ್ಲ. ಇಂದು ಭಾರತದ ಯಾವುದೇ ಭಾಷೆಗೂ ಅದೇ ರೀತಿಯ ಅಂತರ್‍ರಾಷ್ಟ್ರೀಯ ಸ್ಥಾನ ಬಂದರೂ ನಾನು ಆ ಭಾಷೆಯ ಪರವಾಗಿ ಈ ವಾದವನ್ನು ಮಂಡಿಸುತ್ತಿದ್ದೆ ಎಂದು ನಾನು ಭಾವಿಸುತ್ತಿದ್ದೇನೆ. ಅದಿರಲಿ, ಗೆಳೆಯಾ.

ಹಿಂದಿಯನ್ನೇ ರಾಷ್ಟ್ರಭಾಷೆಯಾಗಿ ಮಾಡುವುದರ ಜತೆಗೆ ಕಾಲೇಜುಗಳ ಶಿಕ್ಷಣ ಮಾಧ್ಯಮದ ಭಾಷೆಯನ್ನಾಗಿಯೂ ಸ್ವೀಕರಿಸಬೇಕೆಂಬ ಕೂಗು ಹಿಂದೀ ಮಾತನಾಡುವ ಭಾರತದ ಪ್ರದೇಶಗಳಿಂದ ಬರುತ್ತಿದೆ. ಹಾಗಿದ್ದರೆ ಹಿಂದಿಯನ್ನೇ ಮಾಧ್ಯವನ್ನಾಗಿಮಾಡಬಾರದೇಕೆ ಎಂಬ ವಿಚಾರಸರಣಿ ಕಾಲೋಚಿತವಾಗಿದೆ.

ಆದರೆ ಹಿಂದಿಯನ್ನೇ ಶಿಕ್ಷಣ ಮಾಧ್ಯಮವನ್ನಾಗಿ ಇಟ್ಟಾಗ, ಈಗಾಗಲೇ ಹೇಳಿದ ಸಮಸ್ಯೆಗಳೆಲ್ಲ ಉದ್ಭವವಾಗುವವು—ಅಲ್ಲದೆ ಹಿಂದಿ ಭಾಷೆಯು ಕಾಲೇಜಿನ ಶಿಕ್ಷಣ ಮಾಧ್ಯಮವಾಗಲು ಬೇಕಾದ ಪೂರ್ತಿ ಶಬ್ದಸಂಪತ್ತಿಯನ್ನು ಇನ್ನೂ ಪಡೆದುಕೊಂಡಿಲ್ಲ. ಆದ್ದರಿಂದ ಅದನ್ನಿಂದು ಒಡನೆಯೇ ಸ್ವೀಕರಿಸಿದರೆ, ಶಿಕ್ಷಣದ ಮಟ್ಟವು ತತ್‌ಕ್ಷಣ ಇನ್ನೂ ಕೆಳಗಿಳಿಯುವುದು ನಿಶ್ಚಯ.

ಆದರೆ, ಹಿಂದಿಯ ಪರವಾಗಿ ಮಾತನಾಡಲೂ ನನಗೆ ತಿಳಿದಿದೆ. ಹೇಗೆ ಗೊತ್ತೇ? ಇಂದು ಹಿಂದಿಯು ಪರಿಪುಷ್ಟವಾಗಿಲ್ಲದಿರಬಹುದು. ಆದರೆ ಅದು ಎಂದೆಂದೂ ಹಾಗೆಯೇ ಇರಬೇಕಾದ ಆವಶ್ಯಕತೆಯಿದೆಯೇ? ಅದನ್ನು ಬಳಸಿದಂತೆಯೇ ಅದು ಹೆಚ್ಚು ಹೆಚ್ಚಾಗಿ ಸಮೃದ್ಧವಾಗುವುದು.

ಭಾರತದಲ್ಲಿ ಹೆಚ್ಚು ಕಡಿಮೆ ೨೦ ಕೋಟಿ ಜನರು ಬಳಸುವ ಭಾಷೆಯಾಗಿದೆ, ಹಿಂದಿ. ಮಾತ್ರವಲ್ಲ ಈ ರಾಷ್ಟ್ರದ ಎಲ್ಲಾ ಪ್ರಾಂತ್ಯಗಳ ಸಾಮಾನ್ಯ ಎಲ್ಲಾ ಭಾಗಗಳಲ್ಲೂ ಹಿಂದಿ ಮಾತನಾಡುವ ಜನರು ಹಾಗೂ ಹಿಂದೀ ತಿಳಿ

ಯುವ ಜನರು ಬಹಳ ಮುಂದಿ ಇದ್ದೇ ಇರುತ್ತಾರೆ. ಹಾಗಿರುತ್ತಾ ಭಾರ
ಉಳಿದ ಜನತೆಯು ಅದನ್ನು ಕಲಿತುಕೊಳ್ಳುವುದೇನೂ ಕಷ್ಟದ ವಿಚಾರವ
ಈ ಭಾಷೆಯು ಮುಂದೆ ಅಂತರ್ರಾಷ್ಟ್ರೀಯ ಪ್ರಾಮುಖ್ಯತೆಯುಳ್ಳ ಭಾಷೆಯ
ಯೇ ತೀರುವುದು. ಹಾಗಿರಲು ಹಿಂದಿಯನ್ನು ಕಾಲೇಜಿನ ಶಿಕ್ಷಣ ಮಾಧ್ಯ
ವಾಗಿ ಮಾಡಬಾರದೇಕೆ?

ಇದಕ್ಕೂ ತೀವ್ರವಾದ ವಿರೋಧವು ಹಿಂದಿಯೇತರ ಪ್ರದೇಶಗಳಲ್ಲಿ ಇ
ಇದೆ. ಅವರ ವಿಚಾರ ಪ್ರಣಾಲಿ ಹೀಗಿದೆ. ಹಿಂದಿಯನ್ನು ಶಿಕ್ಷಣ ಮಾಧ್ಯ
ವಾಗಿ ಮಾಡಿದಾಗ ಉತ್ತರ ಭಾರತದ ಹಿಂದಿ ಪ್ರದೇಶಗಳ ವಿದ್ಯಾರ್ಥಿಗ
ಬಹಳ ಅನುಕೂಲದ ಪರಿಸ್ಥಿತಿಯಲ್ಲಿ ನಿಲ್ಲುವರು—ಏಕೆಂದರೆ ಅವರು ಹಿಂ
ಹೊರತಾಗಿ, ಇಂಗ್ಲಿಷನ್ನು ಮಾತ್ರವೇ ಕಲಿತರೆ ಸಾಕಾಗುವುದು. ಆದರೆ ಹಿ
ದಿಯೇತರ ಪ್ರದೇಶಗಳವರು ತಮ್ಮ ಮಾತೃಭಾಷೆ, ಹಿಂದಿ, ಇಂಗ್ಲಿಷು ಹೀ
ಮೂರು ಭಾಷೆಗಳನ್ನೂ ಅಧ್ಯಯನ ಮಾಡಬೇಕಾಗುವುದು. ಇದರಿಂದ ಅಖಿ
ಭಾರತೀಯ ಮಟ್ಟದಲ್ಲಿ ನಾವು ಹಿಂದೆ ಉಳಿಯುವೆವು ಎಂಬುದವರ ವಾ

"ನಮ್ಮ ಮಟ್ಟಿಗೆ ಹಿಂದಿ, ಇಂಗ್ಲಿಷು ಸಮಾನವೇ–ಎರಡೂ ನಮ
ಮಟ್ಟಿಗೆ ಪರಕೀಯ ಭಾಷೆಯೇ ಸರಿ! ಹಾಗಿರಲು ಅಂತರ್ರಾಷ್ಟ್ರೀಯ ಸಂಪರ್ಕ
ವನ್ನು ನಮಗೆ ನೀಡಬಲ್ಲ ಇಂಗ್ಲಿಷನ್ನು ನಾವು ಸ್ವೀಕರಿಸುವ ಬದಲು ಹಿಂದಿ
ನ್ನೇತಕ್ಕೆ ಶಿಕ್ಷಣ ಮಾಧ್ಯಮವನ್ನಾಗಿ ಇಟ್ಟುಕೊಳ್ಳಬೇಕು?" ಎಂಬುದವ
ವಾದ.

ಅಲ್ಲದೆ ಹಿಂದಿಯೇತರ ಪ್ರಾಂತ್ಯಗಳ ಕೆಲವು ಉಗ್ರಗಾಮಿಗಳು ಹೀ
ಹೇಳುವುದಿದೆ. "ನಮಗೆ ನಮ್ಮ ಪ್ರಾಂತ್ಯಭಾಷೆಯೇ ನಮ್ಮ ಶಿಕ್ಷಣ ಮಾಧ
ಮವಾಗಬೇಕು. ಹಿಂದಿ, ಇಂಗ್ಲಿಷ್ ಎರಡೂ ನಮಗೆ ಬೇಡ."

ಈ ಮಾತಿನಲ್ಲಿಯೂ ಹುರುಳಿದೆಯಲ್ಲವೇ? ಏತಕ್ಕೆಂದರೆ ಹಿಂದಿ ಮಾ
ನಾಡುವ ಪ್ರಾಂತ್ಯಗಳ ಜನರಿಗೆ ತಮ್ಮ ಮಾತೃಭಾಷೆಯಾದ ಹಿಂದಿಯಲ್ಲಿಯೆ
ಕಾಲೇಜು ಶಿಕ್ಷಣ ಸಿಗುವುದಾದರೆ, ತಮಗೆ ತಮ್ಮ ಮಾತೃಭಾಷೆಯಲ್ಲೇ ಏ
ಶಿಕ್ಷಣ ಸಿಗಬಾರದು? ತಂತಮ್ಮ ಮಾತೃಭಾಷೆಯಲ್ಲೇ ಕಲಿತುದರಿಂದ ವಿಷ
ಸಂಗ್ರಹಣಕ್ಕೆ ಬಹಳ ಸುಲಭ ಎಂಬ ಮಾತು ಒಪ್ಪತಕ್ಕದ್ದೇ ಆಗಿದೆ. ಮಾ
ವಲ್ಲ ಕಾಲೇಜಿನ ಶಿಕ್ಷಣ ಮಾಧ್ಯಮವಾಗಿ ಮಾಡಿದ್ದರಿಂದ ಹಿಂದಿಯ ಜತೆಯಲ್ಲಿ
ಅವರ ಭಾಷೆಗಳೂ ಪರಿಪುಷ್ಟವಾಗಿ ಬೆಳೆಯುವವು. ಹೇಗೆ ಅಲ್ಲವೆನ್ನ
ಸಿಲ್ವರ್?

ಆದರೆ ಸಮಸ್ಯೆ ಹಲವಾರು ಇಲ್ಲಿಯೂ ಮುಂದೆ ಬರುತ್ತವೆ. ಮೊದ
ಾಗಿ ಈ ಪ್ರಾಂತೀಯ ಭಾಷೆಗಳನ್ನು ಕಾಲೇಜು ಶಿಕ್ಷಣ ಮಾಧ್ಯಮವನ್ನಾಗಿ
ಾಡಲು ಬೇಕಾದ ಶಬ್ದ ಸಂಪತ್ತಿಯಿಲ್ಲ-ಅಂದರೆ ಮುಖ್ಯವಾಗಿ ವೈಜ್ಞಾನಿಕ
ಷಯಗಳಿಗೆ ಬೇಕಾದ ಶಬ್ದಗಳ ತೀವ್ರ ಕೊರತೆಯಿದೆ. ಅಲ್ಲದೆ ಇದಕ್ಕೆ ಬೇ
ಾದ ಉಚ್ಚತರಗತಿಯ ವೈಜ್ಞಾನಿಕ ಹಾಗೂ ಆಯಾಯಾ ಶಾಸ್ತ್ರಕ್ಕೆ ಸಂಬಂಧ
ಟ್ಟ ಮೂಲ ಗ್ರಂಥಗಳಾಗಲೀ ಅಥವಾ ಅನುವಾದಿತ ಗ್ರಂಥಗಳಾಗಲೀ
ಚನೆಯಾಗಿಲ್ಲ. ಹಾಗಿರುವಾಗ ಈಗ ಒಂದೇ ಸವನೆ ಈ ಹೆಜ್ಜೆ ತೆಗೆದುಬಿಟ್ಟರೆ
ಕ್ಷಣದ ಮಟ್ಟ ಕೆಳಗಿಳಿಯಲಾರದೆ? ಈಗಾಗಲೇ ಶಿಕ್ಷಣದ ಮಟ್ಟವು ಶೋಚ
ೀಯವಾಗಿರಲು ಮುಂದೆ ಪರಿಸ್ಥಿತಿ ಹೇಗಾದೀತು?

ಆದರೆ ಅದಕ್ಕೆ ಉತ್ತರವು ತಟಕ್ಕನೇ ಅವರ ಬಾಯಿಯಿಂದ ಬರುವುದು.
ಒಮ್ಮೆ ಶಿಕ್ಷಣದ ಮಟ್ಟವು ಕೆಳಗಿಳಿದಂತೆ ಕಾಣಬಹುದು. ಆದರೆ ನಿಜವಾಗಿ
ೆಳಗಿಳಿಯುವುದಿಲ್ಲ. ತಂತಮ್ಮ ಮಾತೃಭಾಷೆಯಲ್ಲಿ ನಮ್ಮ ವಿದ್ಯಾರ್ಥಿಗಳು
ಿಷಯಗಳನ್ನು ಚೆನ್ನಾಗಿ ಸಂಗ್ರಹಿಸಿಕೊಳ್ಳಬಲ್ಲರು. ಇಂಗ್ಲಿಷ್ ಮಾತನಾಡಲು
ಅವರಿಗೆ ಬಾರದೆ ಇರಬಹುದು. ಆದನ್ನೇ ನೋಡಿ ನೀವು ಶಿಕ್ಷಣದ ಮಟ್ಟ ಕೆಳ
ಗಿಳಿದಿದೆ ಎಂದು ಹೇಳಬಹುದು-ಆದರೆ ಇಂಗ್ಲಿಷ್ ಮಾತನಾಡುವುದೊಂದೇ
ಶಿಕ್ಷಣದ ಉಚ್ಚತೆಯ ಲಕ್ಷಣವೇ? ನಮಗೆ ಇಂಗ್ಲಿಷ್ ಭಾಷೆಯೂ ಬೇಡ—
ಹಿಂದಿ ಮೊದಲೇ ಬೇಡ.

ಬೇಕಾದ ಶಬ್ದ ಸಂಪತ್ತಿ ಹಾಗೂ ಗ್ರಂಥಗಳ ಸಂಗ್ರಹವಿದ್ದಿದ್ದರೆ "ನಮ್ಮ
ಶಿಕ್ಷಣದ ಮಟ್ಟ ಕೆಳಗಿಳಿಯಲಾರದು" ಎಂಬ ಅವರ ವಾದವನ್ನು ಒಪ್ಪಬಹುದಾ
ಗಿತ್ತು. ಆದರೆ ಹಾಗಿಲ್ಲವಾಗಿ ಒಪ್ಪುವುದು ಕಷ್ಟವಾಗಿ ಪರಿಣಮಿಸಿದೆ.

ಆದರೆ ಗೆಳೆಯಾ, ಭಾರತದಲ್ಲಿ ಹದಿನಾಲ್ಕು ರಾಷ್ಟ್ರೀಯ ಭಾಷೆಗಳಿವೆ.
ಆಯಾಯಾ ಪ್ರಾಂತ್ಯಗಳಲ್ಲಿ ಆಯಾ ಭಾಷೆಗಳನ್ನೇ ಕಾಲೇಜಿನ ಶಿಕ್ಷಣ ಮಾಧ್ಯ
ಮವನ್ನಾಗಿ ಮಾಡಿದರೆ ಅಖಿಲ ಭಾರತೀಯ ಸಂಪರ್ಕವು ಇವರಿಗೆ ಸಿಗುವು
ದಾದರೂ ಹೇಗೆ? ಭಾರತದ ಭಾವನಾತ್ಮಕ ಐಕ್ಯತೆಯನ್ನು ಇಟ್ಟುಕೊಳ್ಳುವು
ದಾದರೂ ಹೇಗೆ? ಮಾತ್ರವಲ್ಲ, ಕೇಂದ್ರ ಸರಕಾರದ ನೌಕರರನ್ನು ಹಾಗೂ
ಅಧಿಕಾರಿಗಳನ್ನು ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯಕ್ಕೆ ವರ್ಗಾಯಿಸಿ,
ಈ ರಾಷ್ಟ್ರೀಯ ಸಂಪರ್ಕವುಳಿಯುವಂತೆ ಮಾಡುವುದಾದರೂ ಹೇಗೆ? ಇದ
ಕ್ಕೆಲ್ಲಾ ಉತ್ತರವೇ ಇಲ್ಲ.

ಅಲ್ಲದೆ ಕೇಂದ್ರ ಸರಕಾರದಿಂದ ನಡೆಸಲ್ಪಡುವ ಪಬ್ಲಿಕ್ ಸರ್ವಿಸ್ ಕ
ಶನ್‌ನ ಪರೀಕ್ಷೆಗಳಿವೆ. (Union Public Service commissio
ಕೇಂದ್ರ ಸರಕಾರ, ಹಾಗೂ ಪ್ರಾಂತ್ಯ ಸರಕಾರಗಳ ಅಧಿಕಾರಿ ವರ್ಗಗಳ
ಬೇಕಾದ ಆಯ್ಕೆ ಮಾಡುವುದೇ ಈ ಪರೀಕ್ಷೆಯ ಆಧಾರದಲ್ಲಿ. ಈ ತನಕ
ಪರೀಕ್ಷೆಗಳೆಲ್ಲಾ ಇಂಗ್ಲಿಷಿನಲ್ಲೇ ನಡೆಯುತ್ತಿವೆ. ಮುಂದೆ ಕಾಲೇಜುಗಳ
ಪ್ರಾಂತ್ಯ ಭಾಷೆಗಳೇ ಶಿಕ್ಷಣ ಮಾಧ್ಯಮವಾದಾಗ, ಈ ಅಖಿಲ ಭಾರತೀ
ಮಟ್ಟದ ಪರೀಕ್ಷೆಗಳನ್ನು ಹೇಗೆ ನಡೆಸಬೇಕು? ಆಯಾಯಾ ಪ್ರಾಂತ್ಯ ಭಾಷೆ
ಗಳಲ್ಲೇ ನಡೆಸಿದಾಗ, ಈಗಿನ ರಾಷ್ಟ್ರೀಯ ಐಕ್ಯತೆಯಾದರೂ ಉಳಿದೀತೇ
ಭಾವನಾತ್ಮಕ ಸಂಯೋಜನೆ ಸಾಗೀತೇ? ಆಡಳಿತಕ್ಕೆ ಸುಲಭವಾದೀತೇ?

ನೋಡು ಗೆಳೆಯ, ಈಗಲೇ ಭಾರತದ ನೆಲದಡಿಯಲ್ಲಿ ಭೂಕಂಪವಾಗು
ಸದ್ದು ಕೇಳುತ್ತಿದೆ. ಇನ್ನು ಒಂದೆರಡು ವರ್ಷಗಳಲ್ಲಿ ಈ ಕುರಿತಾಗಿ ದೊಡ್ಡ
ಗೊಂದಲಮಯ ವಾತಾವರಣವು ಭಾರತದಲ್ಲಿ ಉಂಟಾದರೆ ಆಶ್ಚರ್ಯವಿಲ್ಲ
ಆಗ ಇಂತಹ ಸಮಸ್ಯೆಗಳಿಗೆ ಏನಾದರೊಂದು ಉತ್ತರ ಕಂಡು ಹಿಡಿಯಲ್ಪ
ಟ್ಟೀತು ಎಂದು ಭಾವಿಸಿಕೊಳ್ಳೋಣ—ಆದರೆ ಆ ಪರಿಹಾರವು ರಾಷ್ಟ್ರೀಯ ಅಭಿ
ವೃದ್ಧಿಯ ಹಿತದೃಷ್ಟಿಯಲ್ಲಿದ್ದೀತು ಎಂಬುದಾಗಿ ಭಾವಿಸಿಕೊಳ್ಳಲು ಆಸ್ಪದ
ವಿಲ್ಲ. ಅದರ ಬದಲಿಗೆ ಅದು ಹಲವಾರು ಪ್ರಾಂತ್ಯಗಳ ಉಗ್ರವಾದಿಗಳನ್ನು
ಮೆಚ್ಚಿಸುವಷ್ಟೇ ಉದ್ದೇಶದಿಂದ ಕೂಡಿರಬಹುದು. ಆದುದರಿಂದ ಆ ನಿರ್ಣ
ಯಗಳಿಂದ ರಾಷ್ಟ್ರಕ್ಕೆ ಹಿತವಾದೀತು ಎಂದು ಭಾವಿಸಿಕೊಳ್ಳಲು ಎಡೆಯಿಲ್ಲ.

ಇಂದು ನೋಡು, ನನ್ನ ಎಷ್ಟೋ ಗೆಳೆಯರು ಮದ್ರಾಸಿನಲ್ಲಿದ್ದಾರೆ
ಅವರೆಲ್ಲ ತಮಿಳೇ ಕಾಲೇಜಿನ ಶಿಕ್ಷಣ ಮಾಧ್ಯಮವಾಗಬೇಕೆನ್ನುವವರು
ಸರಕಾರೀ ಭಾಷೆಯೂ ತಮಿಳೇ ಆಗಬೇಕು-ವ್ಯವಹಾರವೆಲ್ಲ ತಮಿಳಿನಲ್ಲೆ
ಸಾಗಬೇಕು ಎಂದವರ ತತ್ವ. "ಎಲ್ಲಾ ಪ್ರಾಂತ್ಯಗಳಲ್ಲೂ ಶಿಕ್ಷಣ ತಮಿಳಿನಲ್ಲೆ
ಸಾಗಬೇಕೇ?" ಎಂದು ನಾನು ಕೆಲವರ ಕೂಡೆ ವಿನೋದವಾಗಿ ಕೇಳಿದ್ದುಂಟು
ಆಗ ಅವರು ಸ್ವಲ್ಪ ನಕ್ಕು "ಹಾಗೇನಲ್ಲ-ಆ ರೀತಿ ಮಾಡಲು ಎಲ್ಲಿ ಸಾಧ್ಯ
ವುಂಟು? ನಮ್ಮ ಪ್ರಾಂತ್ಯದಲ್ಲಿ ಹಾಗೆ ಮಾಡಿಕೊಳ್ಳುತ್ತೇವೆ!" ಎನ್ನುತ್ತಾರೆ
ಅವರು.

ಅವರು ನನ್ನ ಕೂಡೆ ಮಾತನಾಡುವುದು ಇಂಗ್ಲಿಷ್ ಭಾಷೆಯಲ್ಲೇ ಎಂಬುದನ್ನು ನೀನು ನೆನಪಿಟ್ಟುಕೊಳ್ಳಬೇಕು. "ಎಲ್ಲಾ ವ್ಯವಹಾರ ತಮಿಳಿನಲ್ಲೇ ಸಾಗಬೇಕು!" ಎಂಬುದಾಗಿ ಗಟ್ಟಿಯಾಗಿ ಅವರು ಇಂಗ್ಲಿಷ್ ಭಾಷೆಯಲ್ಲೇ ಹೇಳಿ ಬಿಡುತ್ತಾರೆ.

ನಾನು ಅಷ್ಟಕ್ಕೇ ಬಿಡದೆ "ಆಗಲಿ, ನೀವು ಹಾಗೆ ಮಾಡಿದಿರಿ–ಆಗ ಅನ್ಯ ಪ್ರಾಂತ್ಯಗಳವರು ತಮ್ಮ ಭಾಷೆಯಲ್ಲೇ ಎಲ್ಲಾ ವ್ಯವಹಾರ ಸಾಗಿಸುತ್ತಾರೆ. ಹಾಗಾದರೆ ಪರಿಸ್ಥಿತಿ ಹೇಗೆ ನಿಲ್ಲಬಹುದು?" ಎಂದು ನಾನು ಕೇಳುವುದುಂಟು. "ಹೇಗೂ ಇಲ್ಲ . ಅದರಲ್ಲೇನು?" ಎಂದವರು ಆ ಸಂದರ್ಭ ಹೇಳುತ್ತಾರೆ.

ಒಂದು ದಿನ ಅವರಲ್ಲಿ ಕೆಲವರು ಒಟ್ಟು ಸೇರಿ ಆಂಧ್ರ ದೇಶದ (ತೆಲುಗು ಮಾತನಾಡುವ ಪ್ರಾಂತ್ಯ) ಅನಂತಪುರ ಜಿಲ್ಲೆಗೆ ಒಂದು ಹೊಸ ವ್ಯಾಪಾರ ಪ್ರಾರಂಭಿಸುವುದಕ್ಕಾಗಿ ಹೋಗಬೇಕಾಗಿ ಬಂತು. ಅವರು ಮರಳಿದ ಮೇಲೆ "ಆಂಧ್ರದಲ್ಲಿ ಏನೇನು ಅನುಭವವಾಯಿತು?" ಎಂದು ಕೇಳಿದೆ. ಆಗ ಕಹಿ ಭಾವ ವ್ಯಕ್ತಪಡಿಸುವ ಮುಖವರ್ಚಸ್ಸಿನಿಂದ ಅವರು ಹೇಳುತ್ತಾರೆ "ಇಂಗ್ಲೆಂಡು ಅಥವಾ ಯುರೋಪಿನ ಇತರ ರಾಷ್ಟ್ರಗಳಿಗಾದರೂ ಹೋಗಿಬಿಡಬಹುದು—ಆದರೆ ಆಂಧ್ರಕ್ಕೆ ಹೋಗುವುದು ಕಷ್ಟ!" ನಾನು ಒಡನೆಯೇ ಕೇಳಿದೆ "ಯಾಕೆ?" ಎಂಬುದಾಗಿ.

ಅದಕ್ಕವರು ಬಹಳ ಭಾವಾವೇಶದಿಂದ ಹೇಳಿದರು. ಎಲ್ಲರೂ ಮಾತನಾಡುವುದೇ ತೆಲುಗಂತೆ. ತಮಿಳಿನಲ್ಲಿ ಮಾತನಾಡುವುದೇ ಇಲ್ಲವಂತೆ—ಇಂಗ್ಲಿಷನ್ನೂ ಮಾತನಾಡುವುದಿಲ್ಲವಂತೆ. ಎಲ್ಲಿ ಹೋದರೂ ಬೋರ್ಡುಗಳೂ, ಹೆಸರುಗಳೂ ಎಲ್ಲಾ ತೆಲುಗಿನಲ್ಲೇ ಬರೆದಿವೆಯಂತೆ. ಬಸ್ಸಿನಲ್ಲಿಯೂ ಹಾಗಂತೆ. ಸಿಟಿಬಸ್ಸು ಅಥವಾ ಇತರ ಬಸ್ಸುಗಳನ್ನು ಹತ್ತಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಲು ಅವರಿಗೆ ಅತಿ ಕಷ್ಟವಾಯಿತಂತೆ. ಬಸ್ಸುಗಳಲ್ಲಿಯೂ ಅದು ಎಲ್ಲಿಗೆ ಹೋಗುವುದೆಂಬ ಗುರಿಯನ್ನು ಇಂಗ್ಲಿಷಿನಲ್ಲಿ ಬರೆದಿರಲಿಲ್ಲವಂತೆ. ಅವರು ಆಂಧ್ರದವರನ್ನು ಬಹಳವಾಗಿ ಶಪಿಸಿದರು. ನಾನು ನಸು ನಕ್ಕು ಕೇಳಿದೆ. "ಗೆಳೆಯರೇ, ನೀವೇಕೆ ನೊಂದುಕೊಳ್ಳುತ್ತೀರಿ? ಅವರೆಲ್ಲ ನಿಮ್ಮ ಅನುಯಾಯಿಗಳೆಂದು ನನ್ನ ಅಭಿಪ್ರಾಯ. ಅವರು ನಿಮ್ಮ ತತ್ವವನ್ನೇ ಅನುಸರಿಸುತ್ತಾರಲ್ಲ?" "ಹೇಗೆ? ಹೇಗೆ?" ಎಂಬುದಾಗಿ ಒಂದೇ ಸವನೆ

ನಾಲ್ಕೈದು ಜನರು ಪ್ರಶ್ನಿಸಿದರು. ಆಗ ನಾನು ಸಾವಧಾನವಾಗಿ ಹೇಳಿದೆ. "ಇಂಗ್ಲಿಷ್ ನಮಗೆ ಬೇಡ--ಹಿಂದಿ ಮೊದಲೇ ಬೇಡ. ನಮ್ಮ ಭಾಷೆಯೇ ನಮ್ಮ ಎಲ್ಲಾ ವ್ಯವಹಾರಗಳಿಗೆ ಬಳಸಲ್ಪಡಬೇಕು, ಇದೇ ನಿಮ್ಮ ತತ್ವವಲ್ಲವೇ?" "ಹೌದು ಏನಾಯಿತು?" ಎಂದವರು ಕೇಳಿದರು. ನಾನಂದೆ "ಏನೂ ಇಲ್ಲ. ಅದೇ ಉತ್ತಮ ತತ್ವವನ್ನು ತಪ್ಪದೆ ಅನೂಚಾನವಾಗಿ ಅವರೂ ಪಾಲಿಸುತ್ತಾರೆ. ಅವರು ನಿಮ್ಮ ಅನುಯಾಯಿಗಳಲ್ಲವೇ?"

ಕೂಡಲೇ ಅವರೆಲ್ಲಾ ತಲೆಕೆಳಗು ಹಾಕಿ ಮದ್ರಾಸಿನ ಬೀಡಾ ತಿನ್ನಲು ಮೊದಲು ಮಾಡಿದರು. ನಂತರ ನನ್ನ ಕೂಡೆ ತಮಿಳೇ ಎಲ್ಲ ವ್ಯವಹಾರಗಳಿಗೆ ಬಳಸಲ್ಪಡಬೇಕು ಎಂಬುದಾಗಿ ಅವರು ವಾದಿಸಲೇ ಇಲ್ಲ.

ಅಲ್ಲ, ನಿಜವಾಗಿ ಹೇಳುತ್ತೇನೆ, ಸಿಲ್ವಂ. ಅವರು ಆಂಧ್ರದಲ್ಲಿ ಆದ ಅನುಭವ ಹೇಳಿದರಲ್ಲಾ? ಅವರ ತತ್ವವನ್ನು ಅನುಸರಿಸಿದರೆ, ಮುಂದೆ ಭಾರತದಾದ್ಯಂತ ಎಲ್ಲರೂ ಇದೇ ಕಹಿ ಅನುಭವವನ್ನು ಪಡೆಯದಿರಲು ಸಾಧ್ಯವೇ ಇಲ್ಲ. ಆಗ ಭಾರತದ ಒಂದು ಪ್ರಾಂತ್ಯದಿಂದ ಇನ್ನೊಂದು ಪ್ರಾಂತ್ಯದೊಳಗೆ ಸಂಚರಿಸುವುದು ಆಗದ ಮಾತಾಗಿ ಪರಿಣಮಿಸೀತು. ಭಾರತದ ಇಂದಿನ ಲಘು ಐಕ್ಯತೆಯೂ ಮಣ್ಣುಪಾಲಾದೀತು.

ನಿಜವಾಗಿ ಹೇಳುವುದಿದ್ದರೆ, ಯುರೋಪಿನ ವಿವಿಧ ದೇಶಗಳ ಮೂಲಕ ಹಾದುಹೋದರೆ ಎಷ್ಟು ಕಷ್ಟವಾಗಬಹುದೋ, ಅದಕ್ಕಿಂತ ಹೆಚ್ಚಿನ ಕಷ್ಟವಾದೀತು-ಭಾರತದ ವಿವಿಧ ಪ್ರಾಂತ್ಯಗಳ ಮೂಲಕ ಹಾದುಹೋಗುವುದು-ಈಗ ಅಲ್ಲ-ಮುಂದೆ ಈ ರೀತಿಯ ಪ್ರಾಂತೀಯ ಅಭಿಮಾನದ ತತ್ವ ಬಳಸಲ್ಪಟ್ಟರೆ! ಕಾಲೇಜಿನ ಶಿಕ್ಷಣ ಮಾಧ್ಯಮವು ಪ್ರಾಂತೀಯ ಭಾಷೆಯೇ ಆಗಬೇಕು ಎಂಬುದಾಗಿ ಮುಂದೆ ತೀರ್ಮಾನವಾಗಿ, ಎಲ್ಲಾ ವಿಶ್ವವಿದ್ಯಾಲಯಗಳೂ ಈ ನಿಯಮವನ್ನನುಸರಿಸಿದರೆ ಇಂತಹ ಬಿಕ್ಕಟ್ಟಿನ ಪರಿಸ್ಥಿತಿ ಖಂಡಿತ ಬಂದೀತು, ಗೆಳೆಯಾ!

ಹಾಗಾದರೆ ಶಿಕ್ಷಣ ಮಾಧ್ಯಮವನ್ನಾಗಿ ಯಾವುದನ್ನಿಟ್ಟುಕೊಳ್ಳಬೇಕು? ಇದೀಗ ಬಹಳ ಜಟಿಲವಾದ ಪ್ರಶ್ನೆ.

ಮುಂದಿನ ಅಂತರ್ರಾಷ್ಟ್ರೀಯ ದೃಷ್ಟಿಯಲ್ಲಿ, ಇಂಗ್ಲಿಷನ್ನೇ ಮಾಧ್ಯಮವನ್ನಾಗಿ ಮುಂದರಿಸಬೇಕಾದೀತು. ಅದು ಸಾಧ್ಯವೇ ಇಲ್ಲವಾದರೆ, ಬೇಡವೇ ಬೇಡವಾದರೆ, ಹಿಂದಿಯನ್ನೇ ಎಲ್ಲಾ ಪ್ರಾಂತ್ಯಗಳಲ್ಲೂ ಶಿಕ್ಷಣ ಮಾಧ್ಯಮವನ್ನಾಗಿ ಇಡಬೇಕಾದೀತು. ಆಗ ಇಂಗ್ಲಿಷನ್ನೂ, ಕಲಿಯಲೇ ಬೇಕಾದ ಒಂದು

ಡ್ಡಾಯ ಭಾಷೆಯಾಗಿ ಇಟ್ಟುಕೊಳ್ಳಬಹುದೋ ಏನೋ. ಪ್ರಾಂತೀಯ ಭಾಷೆಯನ್ನಂತೂ ಬಿಡುವುದು ಆಗದ ಮಾತು.

ಆಗ ಹಿಂದೀ ಪ್ರದೇಶಗಳವರಿಗೆ ತಮ್ಮ ಪ್ರಾಂತೀಯ ಭಾಷೆಯೇ ಹಿಂದಿ ಯಾದ್ದರಿಂದ ಒಂದು ಹೆಚ್ಚಿನ ಸವಲತ್ತು ಸಿಗಲೂ ಬಹುದು. ಅದಕ್ಕಾಗಿ, ಅವರು ದಕ್ಷಿಣ ದೇಶದ ಯಾವುದಾದರೊಂದು ಭಾಷೆಯನ್ನೂ ಕಡ್ಡಾಯವಾಗಿ ಕಲಿಯಲೇ ಬೇಕು ಎಂದೂ ನಿಯಮಿಸಬಹುದು. ಇಷ್ಟಾಗಿ ಬಿಟ್ಟರೆ ಶಿಕ್ಷಣದ ಎಲ್ಲಾ ಸಮಸ್ಯೆ ಪರಿಹಾರವಾದೀತು ಎಂಬರ್ಥವಲ್ಲ–ಆದರೆ ಪರಿಹಾರ ಅಷ್ಟರ ಮಟ್ಟಿಗೆ ಸಮೀಪವಾದೀತು ಎಂಬರ್ಥ! ಅಷ್ಟೆ.

ಆದರೆ ಈ ಬಾಯಿಬಡಕನ ಮಾತು ಗಾಳಿಯಲ್ಲಿ ಇಂಗಿಹೋಗಬಹುದು, ಕೇಳುವವರಾರು? ಹಿಂದೆ ನಾನು ಹೇಳಿದ ರೀತಿಯಲ್ಲಿ ದಾಸ ಪಂಥದವರು ಎನ್ನಿಸಿಕೊಳ್ಳುವ ದಾಸಯ್ಯರೆಂಬ ಹೆಸರಿನ ಗೌರವಸ್ಥ ಭಿಕ್ಷುಕರು, ಇಲ್ಲಿ ಮೈಸೂರು ಪ್ರಾಂತ್ಯದಲ್ಲಿ ಹೇಳುವ ಒಂದು ಗಾದೆಯಿದೆ. "ಊದುವ ಶಂಖ ಊದಿ ಬಿಡುತ್ತೇನೆ" ಎಂಬುದಾಗಿ. ಶಂಖ ಎಂದರೆ ಸಮುದ್ರದ ಪ್ರಾಣಿಯ ಚಿಪ್ಪು. ನಿನಗೆ ತಿಳಿದಿರಬಹುದು—ಅದಕ್ಕೆ ನಾವು Conch ಎನ್ನುತ್ತೇವೆ. ಇದನ್ನು ಶಬ್ದ ಹೊರಡಿಸುವ ಒಂದು ಸಾಧನವಾಗಿ ಇಲ್ಲಿ ಬಳಸಲಾಗುವುದು. ಈ ದಾಸಯ್ಯರು ಈ ಶಂಖವನ್ನೂದಿ ತಮ್ಮ ಬರವನ್ನು ಗೊತ್ತು ಮಾಡಿ ಭಿಕ್ಷೆ ಬೇಡುತ್ತಾರೆ. ನಾನು ನಿನ್ನ ಪ್ರೇಮ ಭಿಕ್ಷೆ ಬೇಡಲು ಈ ಶಂಖವನ್ನಷ್ಟು ಊದಿಬಿಟ್ಟೆ ಎಂದು ಭಾವಿಸಿಕೊಳ್ಳುತ್ತೇನೆ. ನಿನ್ನ ಭಿಕ್ಷೆಯಂತೂ ಸಿಕ್ಕೀತು ನನ್ನು. ಆದರೆ, ಭಾರತದಲ್ಲಿರುವ ಜಾಗೃತಿ–ಹೊಸ ದಿವ್ಯ ಜೀವನ ಎಂಬಂತಹ ಉತ್ಕೃಷ್ಟ ಭಿಕ್ಷೆಯು ನನಗೆ, ಇಂತಹ ಒಬ್ಬ ಪರದೇಶಿಗೆ ಸಿಕ್ಕೀತೆ ಸಿಲ್ವರ್? ಇಲ್ಲವೇ ಇಲ್ಲ.

ಏಕೆಂದರೆ ನಾನಿನ್ನೂ ಯಾವ ಕಾರ್ಯಕ್ಕೂ ತೊಡಗಿಲ್ಲ. ಭಾರತದ ನನ್ನ ಅಧ್ಯಯನವೇ ಮುಗಿದಿಲ್ಲ–-ಬಾಯಿಬಡಕನಂತೆ ನನ್ನ ಗೆಳೆಯರ ಕೂಡೆ ಮಾತನಾಡುವುದಷ್ಟೇ ನನ್ನ ಈಗಿನ ಕಾರ್ಯ! ಮತ್ತೆ ಇದೆಯಲ್ಲಾ, ನಿನಗೆ ನೂರುದ್ದ ಓಲೆ ಬರೆದು ಕೈದಣಿಸಿಕೊಳ್ಳುವುದು!

ಇರಲಿ, ಸಿಲ್ವರ್, ಹೀಗೆ ಪತ್ರ ಬರೆಬರೆದು ನಿನ್ನನ್ನು ನಾನು ಪೂರ್ತಿ ಪರಿವರ್ತನೆ ಮಾಡಿ ಬಿಟ್ಟು ನೀನೂ ಈ ಪವಿತ್ರವಾದ ಸನಾತನ ಭೂಮಿಯ ಒಬ್ಬ ಪ್ರೇಮಿಯೂ, ಸೇವಕನೂ ಆಗುವಂತೆ ಮಾಡಿ, ನಿನ್ನನ್ನು ನನ್ನ ಬಳಿಗೆ

ಕರೆಸಿ ಬಿಡುತ್ತೇನೆ. ಆಗ ನಾವಿಬ್ಬರೂ ಜಯನಾಥರಂತಹ ಪ್ರಾಣ ಸ್ನೇಹಿತ
ರನ್ನು ಕೂಡಿಕೊಂಡು, ಈ ವಿಶಾಲವಾದ ನಾಡಿನಲ್ಲಿ ಸಮೃದ್ಧವಾದ ಸೇವೆಯನ್ನು
ಸಲ್ಲಿಸಬಹುದು. ಅಲ್ಲವೇ?

ಗೆಳೆಯಾ, ನೋಡು, ಈ ಪತ್ರದಲ್ಲಿ ಭಾರತದ ಶಿಕ್ಷಣ ಸಮಸ್ಯೆಯು ಕು
ತಾಗಿ ಬರೆದು ಮುಗಿಸಿಬಿಟ್ಟೆ. ಅದು ಪೂರ್ಣವಾಗಿದೆ ಅನ್ನಲಾರೆ. ಆದರೆ ಸತ್ಯ
ನುಡಿಯುವುದಿದ್ದರೆ ಬರೆಬರೆದು, ನನಗೇ ಸಾಕಾಗಿ ಹೋಯಿತು. ಒಂದನ್ನೇ
ಬರೆಯುತ್ತಾ ಹೋದರೆ, ಉಳಿದ ವಿಷಯಗಳನ್ನು ಹೇಗೆ ಬರೆಯಲಿ? ಅದಕ್ಕಾಗಿ
ಇಲ್ಲಿಗೇ ಆ ವಿಷಯಕ್ಕೆ ಪೂರ್ಣ ವಿರಾಮ ಹಾಕಿಬಿಡುತ್ತೇನೆ, ಆಗದೇ ಸಿಲ್ವ

ಮುಂದಿನ ಪತ್ರದಲ್ಲಿ ಏನು ಬರೆಯುತ್ತೇನೋ ನಾನಿನ್ನೂ ನಿಶ್ಚಯಿಸಿಲ್ಲ
ನೋಡೋಣ, ಆಗ ತಲೆಯಲ್ಲಿ ಯಾವುದು ಮಿಂಚುವುದೋ ಅದನ್ನೇ ಬರೆದು
ಬಿಡುತ್ತೇನೆ.

ಗೆಳೆಯಾ, ನಿನ್ನ ಮುದ್ದು ಮಗು ಕೇನ್ನಿಗೆ ನನ್ನ ಶುಭಾಶಯ ತಿಳಿಸು
ವೆಯಾ?

ಇತಿ, ನಿನ್ನ ಆಪ್ತಮಿತ್ರ
**ಜೋನ್ ಓರ್‌ಮನ್.**

[ಮುಂದುವರಿಯುವುದು]

